ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೧೫

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣಂ

(ಕನ್ನಡ ಅನುವಾದ ಸಹಿತ)

ದ್ವಿತೀಯಖಂಡೇ

ಭಾಗ ೪



ಅನುವಾದಕ :

ಆಸ್ಥಾನ ಮಹಾವಿದ್ವಾನ್ ಸಂಕೀಘಟ್ಟಂ ವೆಂಕಟಾಚಾರ್ಯಃ

ವಿಶ್ರಾಂತ ಸಾಹಿತ್ಯ ಪ್ರಾಧ್ಯಾಪಕ, ಮೈ. ಸಂ. ಕಾಲೇಜು.



ಶ್ರೀ ಶಾರದಾ ಪ್ರೆಸ್, ಮೈಸೂರು.

೧೯೫೨

ಅಧ್ಯಾಯದ ಸಾರಾಂಶವನ್ನು ಕೊಟ್ಟಿಲ್ಲ ಈ ಸಂಪುಟಕ್ಕೆ ಎರಡನೆಯ ಖಂಡವು ಮುಗಿದಿರುವುದರಿಂದ ವಿಗ್ರಹ ನಿರ್ಮ್ಮಾಣ ದೇವತಾರ್ಚನೆಯೇ ಮೊದಲಾದ ಪ್ರಧಾನಾಂಶವನ್ನು ಹೇಳುವ ಭಾಗವನ್ನು ಮುಂದಿನ ಸಂಪುಟಕ್ಕೆ ಸೇರಿಸಲಾಗಿಧೆ.

ಇಂತಹ ಗಂಭೀರ ವಿಷಯಗಳನ್ನೊಳಗೊಂಡಿರುವ ಭಾರತೀಯ ಸಂಸ್ಕೃತಿಗೆ ಮೂಲಭೂತಗಳಾದ ಗ್ರಂಥಗಳನ್ನು ಕನ್ನಡಭಾಷೆಗೆ ಪರಿವೃತ್ತಿಗೊಳಿಸಿ ಪ್ರಕಾಶಪಡಿಸುತ್ತಿರುವ ದಯಾಶಾಲಿಗಳೂ, ವದಾನ್ಯರೂ ಆದ ಆಳುವ ಮಹಾಸ್ವಾಮಿಯವರಾದ **ಶ್ರೀಮಜ್ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ. ಸಿ. ಬಿ., ಜಿ. ಸಿ. ಎಸ್. ಐ.,** ಮಹಾಪ್ರಭುಗಳಿಗೆ ಭಗವಂತನು ಅನನ್ಯಸಾಧಾರಣವಾದ ಆಯುರಾರೋಗ್ಯ ಐಶ್ವರ್ಯಾದಿಗಳನ್ನೂ, ಸತ್ಸಂತಾನಗಳನ್ನೂ ಅನುಗ್ರಹಿಸಿ ಕಾಪಾಡುತ್ತಿರಲೆಂದು ಅನನ್ಯಮನಸ್ಕನಾಗಿ ಪ್ರಾರ್ಥಿಸುತ್ತೇನೆ.

ತಾ॥ 25—6—52.

ಅನುವಾದಕ,
ಮಹಾವಿದ್ವಾನ್,
**ಸಂಕೀಘಟ್ಟಂ ವೆಂಕಟಾಚಾರ್ಯ.**



# ವಿ ಷ ಯಾ ನು ಕ್ರ ಮ ಣಿ ಕೆ



|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಷಡ್ತ್ರಿಂಶತ್ತ್ಯುತ್ತರಶತತಮೋಽಧ್ಯಾಯಃ

|| ಪುಷ್ಕರ ಉವಾಚ ||

**ಸಂಹಿತಾಂ ವೈಷ್ಣವೀಂ ಜಪ್ತ್ವಾ ವಿಷ್ಣುಂ ಪ್ರೀಣಾತಿ ಮಾನವಃ |**
**ಸರ್ವಕಾಮಮವಾಪ್ನೋತಿ ತಥಾ ಹುತ್ವಾ ಚ ಭಾರ್ಗವ || ೧ ||**

**ಸ್ಕಂದಸ್ಯ ಸಂಹಿತಾಂ ಜಪ್ತ್ವಾ ಸ್ಕಂದಾತ್ಕಾಮಾನುಪಾಶ್ನುತೇ |**
**ಆಸ್ಯದಘ್ನೇ ಜಲೇ ತಿಷ್ಠನ್ನಘೇನಾಕೀರ್ಣಮಾನಸಃ || ೨ ||**

**ತ್ರಿಃಸಪ್ತಕೃತ್ವೋ ಜಪ್ತ್ವಾ ಚ ಸರ್ವಾನ್ ಕಾಮಾನುಪಾಶ್ನುತೇ |**
**ತಥಾ ಚ ಸಂಹಿತಾಂ ಪೈತ್ರ್ಯಂ ತತ್ಪ್ರಸಾದಮುಪಾಶ್ನುತೇ || ೩ ||**

---

### ನೂರ ಇಪ್ಪತ್ತಾರನೆಯ ಅಧ್ಯಾಯ.

೧–೩. ವಿಷ್ಣುಸಂಹಿತೆಯನ್ನು ಜಪಿಸಿದವನು ಮಹಾವಿಷ್ಣುವನ್ನು ಸಂತೋಷ ಪಡಿಸುತ್ತಾನೆ. ಅದರಿಂದ ಹೋಮಮಾಡಿದವನೂ ಸಹ ಎಲ್ಲಾ ಇಷ್ಟಾರ್ಥಗಳನ್ನೂ ಹೊಂದುತ್ತಾನೆ. ಸ್ಕಂದಸಂಹಿತೆಯನ್ನು ಜಪಿಸಿದವನು ಸ್ಕಂದನಿಂದ ತನ್ನ ಇಷ್ಟಾರ್ಥಗಳನ್ನು ಹೊಂದುತ್ತಾನೆ. ಪಾಪಗಳಿಂದ ಮನೋದೋಷ ಹೊಂದಿರುವವನು ಬಾಯಿನವರಿಗೂ ಬರುವ ಆಳವಾದ ನೀರಿನಲ್ಲಿ ನಿಂತು ಇಪ್ಪತ್ತೊಂದುಸಲ ಜಪಿಸಿದುದೇ ಆದರೆ ಎಲ್ಲಾ ಮನೋರಥಗಳನ್ನೂ ಹೊಂದುತ್ತಾನೆ. ಹಾಗೆಯೇ ಪಿತೃಸಂಹಿತೆಯನ್ನು ಜಪಿಸಿದವನು ಪಿತೃಗಳ ಅನುಗ್ರಹವನ್ನು ಹೊಂದುತ್ತಾನೆ.

ಗುರುಗೋಬ್ರಾಹ್ಮಣಾದೀನಾಮುಕ್ತ್ವಾ ನಾಮಪ್ರಿಯಂ ನರಃ |
ಸೋಪವಾಸೋ ಜಪೇತ್ತೋಯೇತ್ವಿದಂ ವಿಷ್ಣುರ್ವಿಚಕ್ರಮೇ || ೪ ||

ಸದಾಗಾವಶ್ಚ ಶುಚಯಃ ಪ್ರಯಾಜ್ಯಯಜನೇ ಜಪೇತ್ |
ಅಮೇಧ್ಯದರ್ಶನೇ ಜಾಪಃ ಪಂಥಾಅಮೇ ದಿವಃ || ೫ ||

ಏತದಿಂದ್ರಸ್ತವಾಮೀತಿ ಸರ್ವಪಾಪಹರಂ ಜಪೇತ್ |
ಶುಕ್ರಂತೇSನ್ಯದ್ಯಜತಂ ಜಪ್ತ್ವಾಸ್ತೇಯಾದ್ವಿಮುಚ್ಯತೇ || ೬ ||

ಚಕ್ರಾನಿತಿ ತಥಾ ಜಪ್ತ್ವಾ ಪಾರಯಾಯೀ ವಿಮುಚ್ಯತೇ |
ಸಹಸ್ರಃ ಸೋಮಮಿತ್ಯೇತಜ್ಜಪ್ತ್ವಾ ಮುಚ್ಯೇತ್ಪ್ರತಿಗ್ರಹಾತ್ || ೭ ||

ಯತ್ತತ್ಸೋಮ ಇಂದ್ರ ಇತಿ ಹಿಂಸಾದೋಷವಿನಾಶನಂ |
ಅಗ್ನೇರ್ಭಯಾತ್ಪ್ರಮುಚ್ಯೇತ ಅಗ್ನಿಸ್ತಿಗ್ಮೇತಿ ವೈ ಜಪನ್ || ೮ ||

---

೪-೬. ಗುರು ಮತ್ತು ಗೋಬ್ರಾಹ್ಮಣಾದಿಗಳು ಇವರುಗಳ ಹೆಸರನ್ನು ಪ್ರೀತಿಯಿಂದ ಉಚ್ಚರಿಸಿ ಉಪವಾಸದಿಂದಿದ್ದು ನೀರಿನಲ್ಲಿನಿಂತು ಇದಂವಿಷ್ಣುರ್ವಿಚಕ್ರಮೇ ಎಂಬ ಮಂತ್ರವನ್ನು ಜಪಿಸಬೇಕು. ಸದಾಗಾವಶ್ಚ ಶುಚಯಃ ಎಂಬ ಮಂತ್ರವನ್ನು ಪ್ರಯಾಜ್ಯಯಾಜನವೆಂಬ ಕರ್ಮದಲ್ಲಿ ಜಪಿಸಬೇಕು. ಅಮೇಧ್ಯದರ್ಶನ ಉಂಟಾದಲ್ಲಿ ಪಂಥಾ ಅಮೇ ದಿವಃ ಎಂಬ ಮಂತ್ರವನ್ನು ಜಪಿಸಬೇಕು. ಏತದಿಂದ್ರಸ್ತವಾಮಿ ಎಂಬ ಮಂತ್ರವು ಸರ್ವಪಾಪಗಳಿಗೂ ನಾಶಕವಾಗುತ್ತದೆ. ಶುಕ್ರಂತೆ ಅನ್ಯದ್ಯಜತಂ ಎಂಬ ಮಂತ್ರವನ್ನು ಜಪಿಸಿದಲ್ಲಿ ಅವನು ಚೌರ್ಯದಿಂದ ಮುಕ್ತನಾಗುತ್ತಾನೆ.

೭-೮. ಚಕ್ರಾ ಎಂಬ ಸೂಕ್ತವನ್ನು ಸಮುದ್ರದ ಕೊನೆ ಹೋಗಿರುವವನು ಜಪಿಸಿದಲ್ಲಿ ಅಪಾಯದಿಂದ ಪಾರಾಗುತ್ತಾನೆ. ಸಹಸ್ರಃ ಸೋಮಂ ಎಂಬ ಮಂತ್ರವನ್ನು ಜಪಿಸಿದಲ್ಲಿ ದುಷ್ಟರ ಆಗ್ರಹದಿಂದ ಉಂಟಾಗುವ ದೋಷಗಳು ನಾಶವಾಗುತ್ತವೆ. ಯತ್ತತ್ಸೋಮ ಇಂದ್ರ ಎಂಬ ಮಂತ್ರವನ್ನು ಜಪಿಸಿದಲ್ಲಿ ಹಿಂಸೆಯಿಂದ ಉಂಟಾದ ದೋಷವು ನಾಶವಾಗುತ್ತದೆ. ಅಗ್ನಿಸ್ತಿಗ್ಮೇ ಎಂಬ ಮಂತ್ರವನ್ನು ಜಪಿಸಿದಲ್ಲಿ ಅಗ್ನಿಯಿಂದ ಉಂಟಾಗುವ ಭಯದಿಂದ ಪಾರಾಗುತ್ತಾನೆ. ಪರಿತೋಷಿಂಚತಾಂ ಎಂಬ ಮಂತ್ರವು ಸರ್ವಪಾಪಗಳಿಗೂ ನಾಶಕವಾಗುತ್ತದೆ.

**ಸರ್ವಪಾಪಹರಂ ಜ್ಞೇಯಂ ಪರಿತೋಷಿಂಚತಾಮಿತಿ ।**
**ಪರ್ವಾಸುಸೋಮೇತಿ ಜಪೇತ್ ಜೀವಿತುಂ ತು ಸುಕರ್ಮಣಾ　　॥ ೯ ॥**

**ಅವಿಕ್ರೇಯಂ ಚ ವಿಕ್ರೇಯಂ ಜಪೇತ್ ಘೃತವತೀತ್ಯಿತಿ ।**
**ಅಪ್ಯಾನೋ ದೇವಸವಿತೋ ಜ್ಞೇಯಂ ದುಃಸ್ವಪ್ನನಾಶನಂ　　॥ ೧೦ ॥**

**ತ್ರಾತಾರಮಿಂದ್ರಮಿತ್ಯೇವ ಮಹಿತ್ರೀಣಾಮವೋಸ್ತ್ವಿತಿ ।**
**ಉದುತ್ತಮಂ ವರುಣಪಾಶೇತ್ಯಾಯುಷ್ಯಾಣಿ ಜಪೇತ್ಸದಾ　　॥ ೧೧ ॥**

**ಶುಕ್ರಚಂದ್ರೇತಿ ಜಪ್ಯೇನ ಪೂತೋ ಭವತಿ ಮಾನವಃ ।**
**ಶುದ್ಧಾಶುದ್ಧೀಯಮೇತಚ್ಚ ತಂ ವಚೋ ಸೂಕ್ತಮೇವ ಚ　　॥ ೧೨ ॥**

**ನ್ಯಗ್ರೋಧಶೃಂಗಮಾದಾಯ ಶರಮೂಲಂ ತಥೈವ ಚ ।**
**ತ್ರಿವೃತಂ ತು ಮಣಿಂ ಕೃತ್ವಾ ಜುಹುಯಾಚ್ಚ ಸಹಸ್ರಶಃ　　॥ ೧೩ ॥**

---

೯-೧೧. ಒಳ್ಳೆಯ ಕೆಲಸದಿಂದಲೇ ಜೀವಿಸಬೇಕೆಂಬ ಆಶೆ ಇರುವವನು ಪರ್ವಾಸುಸೋಮ ಎಂಬ ಮಂತ್ರವನ್ನು ಜಪಿಸಬೇಕು. ಘೃತವತೀ ಎಂಬ ಮಂತ್ರವನ್ನು ಜಪಿಸಿದಲ್ಲಿ ವಿಕ್ರಯಕ್ಕೆ ಅನರ್ಹವಾದ ವಸ್ತುವಿನ ವಿಕ್ರದಿಂದುಂಟಾದ ದೋಷವು ನಾಶವಾಗುತ್ತದೆ. ಅಪ್ಯಾನೋ ದೇವಸಹಿತಃ ಎಂಬ ಮಂತ್ರವು ದುಃಸ್ವಪ್ನನಾಶಕವಾಗುತ್ತದೆ. ತ್ರಾತಾರಮಿಂದ್ರಂ ಎಂಬ ಮಂತ್ರವೂ ಮಹೀತ್ರೀಣಾಮವೋಸ್ತ್ವಿತಿ ಎಂಬ ಮಂತ್ರವೂ ಉದುತ್ತಮಂ ವರುಣಪಾಶಂ ಎಂಬ ಮಂತ್ರವೂ ಸಹ ಆಯುಃಕಾರಗಳಾದುದರಿಂದ ಇವುಗಳನ್ನು ಯಾವಾಗಲೂ ಜಪಿಸುತ್ತಿರಬೇಕು.

೧೨-೧೩ ಶುಕ್ರ ಚಂದ್ರ ಎಂಬ ಮಂತ್ರದ ಜಪದಿಂದ ಮನುಷ್ಯನು ಪವಿತ್ರನಾಗುತ್ತಾನೆ ಶುದ್ಧಾಶುದ್ಧೀಯಂ ಎಂಬ ಮಂತ್ರವೂ ತಂವಚೋ ಸೂಕ್ತವೂ ಸಹ ಹೀಗೆಯೇ ಪವಿತ್ರಕರವಾಗುತ್ತವೆ. ಆಲದ ಕೊನೆಯ ತುದಿಯ ಭಾಗವನ್ನೂ ಶರ ಎಂಬ ಹುಲ್ಲಿನ ಬೇರನ್ನೂ ಸಹ ತಂದು ಅವುಗಳನ್ನು ಮೂರಾಗಿ ಆವರ್ತಿಸಿ ಮಣಿಯನ್ನು ಮಾಡಿ ಸಾವಿರಬಾರಿ ಹೋಮಮಾಡಬೇಕು.

ಬೋಧ್ಯಾಸಿರಿತಿ ಮಂತ್ರೇಣ ಘೃತಂ ರಾಮ ಯಥಾವಿಧಿ ।
ಅಭ್ಯಜ್ಯ ಘೃತಶೇಷೇಣ ಮೇಖಲಾಬಂಧ ಇಷ್ಯತೇ ॥ ೧೪ ॥

ಸ್ತ್ರೀಣಾಂ ಯಾಸಾಂ ತು ಗರ್ಭಾಣಿ ಪತಂತಿ ಭೃಗುಸತ್ತಮ ।
ಪಾಣೌಜಾತಸ್ಯ ಬಾಲಸ್ಯ ಬಧ್ನೀಯಾತ್ತದನಂತರಂ ॥ ೧೫ ॥

ಗೋರ್ವೈ ಸರೂಪವತ್ಸಾಯಾಃ ಶುಕ್ಲಾಯಾ ಜುಹುಯಾದ್ ಘೃತಂ ।
ಉಗ್ರಪ್ರಿಯಾ ತು ಶರಣಂ ಮಂತ್ರೇಣಾನೇನ ಮಂತ್ರವಿತ್ ॥ ೧೬ ॥

ರಕ್ಷಸಾ ಮುಚ್ಯತೇ ಜಂತುಃ ಮಣಿಂ ಶಿರಸಿ ಧಾರಯೇತ್ ।
ಕೌತ್ಸ್ಯಂ ಘೃತಂ ತು ಪ್ರಾಶ್ನೀಯಾನ್ನಿತ್ಯಮೇವ ವಿಚಕ್ಷಣಃ ॥ ೧೭ ॥

ವಿಶ್ವಾಪೃತನ್ನಿತಿ ಮಂತ್ರೇಣ ವ್ಯಾಧಿಭಿರ್ವಿಪ್ರಮುಚ್ಯತೇ ।
ಚರ್ಷಣೀವೃತಮೇತೇನ ಘೃತಂ ಹುತ್ವಾ ಯಥಾವಿಧಿ ॥ ೧೮ ॥

೧೪–೧೬. ಬೋಧ್ಯಾಸಿಃ ಎಂಬ ಮಂತ್ರದಿಂದ ಆ ಮಣಿಯನ್ನು ಆಜ್ಯದಲ್ಲಿ ನೆನಸಿ ಆ ಆಜ್ಯದಿಂದ ಮೇಲೆ ಹೇಳಿದಂತೆ ಹೋಮಮಾಡಿ ಉಳಿದ ಆಜ್ಯದಲ್ಲಿ ನೆನೆದಿರುವ ಆ ಮಣಿಯಿಂದ ನಡುವಿಗೆ ಹಗ್ಗವನ್ನಾಗಿ ಮಾಡಿ ಯಾವ ಸ್ತ್ರೀಯರಿಗೆ ಗರ್ಭವು ಅಕಾಲದಲ್ಲಿ ನಾಶವಾಗುತ್ತಿರುವುವೋ ಆ ಸ್ತ್ರೀಯರು ಅದನ್ನು ಸೊಂಟದಲ್ಲಿ ಕಟ್ಟಿಕೊಳ್ಳಬೇಕು. ಅಂತಹ ಗರ್ಭಿಣಿಯರಿಗೆ ಶಿಶುವು ಆದ ಮೇಲೆ ಆ ಹಗ್ಗವನ್ನು ಶಿಶುವಿನ ಕೈಯ್ಯಲ್ಲಿ ಕಟ್ಟಬೇಕು. ಅನಂತರ ತನ್ನಂತೆಯೇ ಕರುವನ್ನು ಹಾಕಿರುವ ಬಿಳಿಯ ಹಸುವಿನ ಆಜ್ಯದಿಂದ ಹೋಮಮಾಡಬೇಕು. ಉಗ್ರಪ್ರಿಯಾತು ಶರಣಂ ಎಂಬ ಮಂತ್ರದಿಂದ ಆ ಹಗ್ಗವನ್ನೇ ಮಣಿಯನ್ನಾಗಿ ಮಾಡಿ ಶಿಶುವಿನ ತಲೆಯಲ್ಲಿ ಧರಿಸಬೇಕು. ಈ ವಿಧಾನದಿಂದ ಆ ಶಿಶುವಿಗೆ ರಾಕ್ಷಸ ಬಾಧೆಯುಂಟಾಗುವುದಿಲ್ಲ.

೧೭–೧೮. ಕೌತ್ಸ್ಯ ಸೂಕ್ತದಿಂದ ಅಭಿಮಂತ್ರಿಸಿದ ಆಜ್ಯವನ್ನು ವಿಶ್ವಾಪೃತನ್ ಎಂಬ ಮಂತ್ರದಿಂದ ಸೇವಿಸಿದುದೇ ಆದರೆ ಅಂತಹ ಪಂಡಿತನು ವ್ಯಾಧಿಯಿಂದ ಮುಕ್ತನಾಗುತ್ತಾನೆ. ಚರ್ಷಣೀವೃತಂ ಎಂಬ ಮಂತ್ರದಿಂದ ಯಥಾವಿಧಿಯಾಗಿ ಆಜ್ಯಹೋಮಮಾಡಿ ಶತಾಯಾರಿ ಎಂಬ ಮಣಿಯನ್ನು ಕಟ್ಟಿಕೊಂಡವನು ಸರ್ಪಗಳ ಭಯದಿಂದ ಪಾರಾಗುತ್ತಾನೆ.

ತತಾಯೋರಿಮಣಿಂ ಬದ್ಧ್ವಾ ನ ಸರ್ಪೈಃ ಪರಿಭೂಯತೇ ।
ಸಮುತ್ಯಾಯಂತೀತಿ ಜಪೇನ್ನಮ್ರಿಯೇತ ಪಿಪಾಸಯಾ ॥ ೧೯ ॥

ಇಷ್ಟ್ಯಾಹೋತ್ರಿತಯಂ ಜಪ್ತ್ವಾ ಸಲಿಲೇ ನಾಪ್ನುಯಾದ್ಭಯಂ ।
ತ್ವಮೋಮಾ ಓಷಧೀತ್ಯೇತಜ್ಜಪ್ತ್ವಾ ವ್ಯಾಧಿಂ ನ ಚಾಪ್ನುಯಾತ್ ॥ ೨೦ ॥

ಯತ್ತೇಪಯಾಂಸಿಪೂರ್ವೇಣ ಗ್ರಾಸಂ ವೈ ಪ್ರಕ್ಷಿಪೇನ್ಮುಖೇ ।
ನಿಗಿರೇದುತ್ತರೇಣೈತನ್ನಿತ್ಯಮಾರೋಗ್ಯಮಾಪ್ನುಯಾತ್ ॥ ೨೧ ॥

ದೇವವ್ರತೇನ ಹುತ್ವಾಜ್ಯಮುಚ್ಛೇಷೇಣ ವಿಚಕ್ಷಣಃ ।
ಖದಿರೀರಕಮಭ್ಯಜ್ಯ ದಂಡಹಸ್ತಗತೇನ ತು ॥ ೨೨ ॥

ಸ್ವಸ್ತಿಮಾಂಸ್ತೇನ ಭವತಿ ಯತ್ರ ಕ್ವಚನ ಗಚ್ಛತಿ ।
ಪಥಿ ದೇವವ್ರತಂ ಜಪ್ತ್ವಾ ಭಯೇಭ್ಯೋ ವಿಪ್ರಮುಚ್ಯತೇ ॥ ೨೩ ॥

೧೯–೨೧. ಸುಮುತ್ಯಾಯಂತಿ ಎಂಬ ಮಂತ್ರವನ್ನು ಜಪಿಸುವವನು ಬಾಯಾರಿಕೆಯಿಂದ ಸಾಯುವುದಿಲ್ಲ. ಇಷ್ಟ್ಯಾಹೋ ಎಂಬ ಮೂರು ಮಂತ್ರಗಳನ್ನು ಜಪಿಸಿದವನು ನೀರಿನಿಂದ ವಿಪತ್ತನ್ನು ಹೊಂದುವುದಿಲ್ಲ. ತ್ವಮೋಮಾ ಓಷಧೀ ಎಂಬ ಮಂತ್ರವನ್ನು ಜಪಿಸುವವನು ವ್ಯಾಧಿಯನ್ನು ಹೊಂದುವುದೇ ಇಲ್ಲ. ಯತ್ತೇಪಯಾಂಸಿ ಎಂಬ ಮಂತ್ರದ ಪೂರ್ವಾರ್ಧದಿಂದ ಬಾಯಿಯಲ್ಲಿ ಗ್ರಾಸವನ್ನು ಹಾಕಿಕೊಳ್ಳಬೇಕು. ಈ ಮಂತ್ರದ ಉತ್ತರಾರ್ಧದಿಂದ ಆ ಗ್ರಾಸವನ್ನು ನುಂಗಬೇಕು. ಹೀಗೆ ಮಾಡುವವನು ನಿತ್ಯವೂ ಆರೋಗ್ಯದಿಂದಿರುತ್ತಾನೆ.

೨೨–೨೩. ದೇವವ್ರತೇನ ಎಂಬ ಮಂತ್ರದಿಂದ ಆಜ್ಯವನ್ನು ಹೋಮಮಾಡಿ ಉಳಿದ ಆಜ್ಯದಿಂದ ಕಣಗಿಲೆಯ ಕೋಲನ್ನು ನೆನಸಿ ಆ ಕೋಲನ್ನು ಕೈಯಿನಲ್ಲಿ ಹಿಡಿದು ನಡೆದರೆ ಅವನು ಎಲ್ಲಿ ಹೋದರೂ ಕ್ಷೇಮದಿಂದ ಬರುತ್ತಾನೆ. ಮಾರ್ಗದಲ್ಲಿರುವಾಗಲೂ ದೇವವ್ರತ ಮಂತ್ರವನ್ನು ಜಪಿಸಿದುದೇ ಆದರೆ ಅವನು ಎಲ್ಲಾ ಭಯದಿಂದಲೂ ಪಾರಾಗುತ್ತಾನೆ.

ಯದಿಂದ್ರೋ ಅನಯತ್ವೇತಿ ಹುತಂ ಸೌಭಾಗ್ಯವರ್ಧನಂ ।
ಭದ್ರಾನ್ನೋ ಅಗ್ನಿರಿತಿ ಚ ದಂತಕಾಷ್ಠಂ ಚ ಭಕ್ಷಯೇತ್ ॥ ೨೪ ॥

ಸಂವತ್ಸರಮನಿಷ್ಠೀವನ್ ಮಧ್ವಾಜ್ಯಸಹಿತಂ ಸದಾ ।
ಸೌಭಾಗ್ಯಂ ಮಹದಾಪ್ನೋತಿ ಯತ್ರ ಕ್ವಚನ ಗಚ್ಛತಿ ॥ ೨೫ ॥

ಭಗೋ ನ ಚಿತ್ರೆ ಏತೇನ ನೇತ್ರಯೋರಂಜನಂ ಸ್ಮೃತಂ ।
ಸೌಭಾಗ್ಯವರ್ಧನಂ ರಾಮ ನಾತ್ರ ಕಾರ್ಯಾ ವಿಚಾರಣಾ ॥ ೨೬ ॥

ಜಪೆನ್ನಿಂದ್ರೇತಿವರ್ಗಂ ಚ ತಥಾ ಸೌಭಾಗ್ಯಮಾಪ್ನುಯಾತ್ ।
ಕರಿಪ್ರಿಯೋ ದಿವಃ ಕವಿಃ ಕಾಮ್ಯಾಂ ಸಂಶ್ರಾವಯೇತ್ ಸ್ತ್ರಿಯಂ ॥ ೨೭ ॥

ಸಾ ತಂ ಕಾಮಯತೇ ರಾಮ ನಾತ್ರ ಕಾರ್ಯಾ ವಿಚಾರಣಾ ।
ರಥಂತರಂ ವಾಮದೇವ್ಯಂ ಬ್ರಹ್ಮವರ್ಚಸವರ್ಧನಂ ॥ ೨೮ ॥

---

೨೫–೨೬. ಯದಿಂದ್ರೋ ಅನಯತು ಎಂಬ ಮಂತ್ರದಿಂದ ಮಾಡಿದ ಹೋಮವು ಸೌಭಾಗ್ಯವನ್ನು ಹೆಚ್ಚಿಸುತ್ತದೆ ಭದ್ರಾನ್ನೋಅಗ್ನಿಃ ಎಂಬ ಮಂತ್ರದಿಂದ ದಂತಧಾವನಕಾಲದಲ್ಲಿ ಕಾಷ್ಠವನ್ನು ಉಪಯೋಗಿಸಬೇಕು. ಮಧು, ಆಜ್ಯ ಮೊದಲಾದ ಸ್ನಿಗ್ಧವಸ್ತುಗಳನ್ನು ಭುಂಜಿಸಿ ಸಂವತ್ಸರದವರಿಗೂ ಉಗುಳದೆ ನಿಯಮ ದಿಂದಿರುವವನು ಸೌಭಾಗ್ಯಶಾಲಿಯಾಗುತ್ತಾನೆ. ಎಲ್ಲಿ ಸಂಚರಿಸಿದರೂ ಹಾಗೆಯೇ ಇರುತ್ತಾನೆ. ಭಗೋನ ಚಿತ್ರ ಎಂಬ ಮಂತ್ರದಿಂದ ಕಣ್ಣಿಗೆ ಅಂಜನವನ್ನು ಹಾಕಿ ಕೊಳ್ಳಬೇಕು. ಇದು ಬಹಳ ಮಟ್ಟಿಗೂ ಭಾಗ್ಯವನ್ನು ಹೆಚ್ಚಿಸುತ್ತದೆ. ಈ ವಿಷಯ ದಲ್ಲಿ ಸಂದೇಹವಿಲ್ಲ.

೨೭–೨೮. ಇಂದ್ರ ಎಂಬ ವರ್ಗವನ್ನು ಜಪಿಸುವವನೂ ಸಹ ಸೌಭಾಗ್ಯ ಶಾಲಿಯಾಗುತ್ತಾನೆ. ಕರಿಪ್ರಿಯೋ ದಿವಃ ಕವಿಃ ಎಂಬ ಮಂತ್ರವನ್ನು ತಾನು ಕಾಮಿಸಿರುವ ಸ್ತ್ರೀಗೆ ಕೇಳಿಸುವಂತೆ ಉಚ್ಚರಿಸಬೇಕು. ಈ ಮಂತ್ರವನ್ನು ಕೇಳಿದ ಅವಳು ಅವನನ್ನು ಮೋಹಿಸಿ ಬರುತ್ತಾಳೆ. ಇದರಲ್ಲಿ ಸಂದೇಹವಿಲ್ಲ. ರಥಂತರ ಸಾಮವೂ ವಾಮ ದೇವ್ಯಸಾಮವೂ ಸಹ ಬ್ರಹ್ಮವರ್ಚಸ್ಸಿಗೆ ಅಭಿವೃದ್ಧಿಯನ್ನುಂಟು ಮಾಡುತ್ತವೆ

ಯಶಸಾ ಮೇತಿ ಜುಹುಯಾತ್ಪುಷ್ಪೇಣ ತು ಪ್ರಿಯಂಗುಕಂ ।
ಯಶಸಾ ಯೋಗಮಾಪ್ನೋತಿ ಕರ್ಮಣಾನೇನ ಮಾನವಃ　　॥ ೨೯ ॥

ಪ್ರಾಶಯೇದ್ಬಾಲಕಂ ನಿತ್ಯಂ ವಚಾಚೂರ್ಣಂ ಘೃತಾಪ್ಲುತಂ ।
ಇಂದ್ರಮಿದ್ರಾಥಿನಂ ಜಪ್ತ್ವಾ ಭವೇಚ್ಛ್ರುತಿಧರಸ್ತ್ವಸೌ　　॥ ೩೦ ॥

ಹುತ್ವಾ ರಥಂತರಂ ಜಪ್ತ್ವಾ ಪುತ್ರಮಾಪ್ನೋತ್ಯಸಂಶಯಂ ।
ಗೀರ್ವಾಣಃ ಪಾಹಿ ಸತತಂ ಜಪ್ತಂ ಸ್ಯಾದಘತಾರಕಂ ।　　॥ ೩೧ ॥

ಮಯಿ ಶ್ರೀರಿತಿ ಮಂತ್ರೇಣ ಜಪ್ತವ್ಯಂ ಶ್ರೀವಿವರ್ಧನಂ ।
ದಾನಾವಿಶತಿ ದೇವೋಽಪಿ ಮಂತ್ರೇಣಾನೇನ ಧರ್ಮವಿತ್　　॥ ೩೨ ॥

ಕ್ರೀತ್ವಾ ಘೃತಂ ತು ಪುಷ್ಪೇಣ ಸುಷುಮಾಣೀತ್ಯತಃ ಪಿಬೇತ್ ।
ಅಲಕ್ಷ್ಮೀನಾಶನಂ ಕರ್ಮ ಮಯ್ಯೈತತ್ತೇ ಪ್ರಕೀರ್ತಿತಂ　　॥ ೩೩ ॥

---

೨೯-೩೦. ಯಶಸಾ ಮೆ ಎಂಬ ಮಂತ್ರದಿಂದ ಹೂವಿನೊಡನೆ ತರಗಣಿಯನ್ನು ಹೋಮಿಸಬೇಕು. ಈ ವಿಧಾನದಿಂದ ಮನುಷ್ಯನು ಯಶಸ್ಸಿನಿಂದ ಶೋಭಿಸುತ್ತಾನೆ. ಇಂದ್ರಮಿದ್ರಾಥಿನಂ ಎಂಬ ಮಂತ್ರವನ್ನು ಜಪಿಸಿ ಬಜೆಯ ಚೂರ್ಣವನ್ನು ತುಪ್ಪದಿಂದ ಕಲಸಿ ನಿತ್ಯವೂ ಬಾಲಕನಿಗೆ ತಿನ್ನಿಸಿದಲ್ಲಿ ಆ ಬಾಲಕನು ಬಹುಮಟ್ಟಿಗೂ ಧಾರಣಶಕ್ತಿಯನ್ನು ಅಥವಾ ವೇದಧಾರಣವನ್ನು ಹೊಂದುತ್ತಾನೆ. ರಥಂತರಸಾಮವನ್ನು ಜಪಿಸಿ ಹೋಮವನ್ನು ಮಾಡಿದಲ್ಲಿ ಅವನು ನಿಸ್ಸಂಶಯವಾಗಿಯೂ ಪುತ್ರನನ್ನು ಹೊಂದುತ್ತಾನೆ.

೩೧-೩೩. ಗೀರ್ವಾಣಃ ಪಾಹಿ ಸತತಂ ಎಂಬ ಮಂತ್ರದ ಜಪವು ಪಾಪನಾಶಕವಾಗುತ್ತದೆ. ಮಯಿಶ್ರೀ ಎಂಬ ಮಂತ್ರವೂ ಸಹ ಜಪದಿಂದ ಐಶ್ವರ್ಯವನ್ನು ಹೆಚ್ಚಿಸುತ್ತದೆ. ದಾನಾವಿಶತಿ ದೇವೋಪಿ ಎಂಬ ಮಂತ್ರದಿಂದ ಧರ್ಮಜ್ಞನಾದವನು ಆಜ್ಯವನ್ನು ಕೊಂಡು ಪುಷ್ಪೇಣ ಸುಷಮಾಣಿ ಎಂಬ ಮಂತ್ರದಿಂದ ಪಾನಮಾಡಬೇಕು ನಾನು ನಿನಗೆ ಹೇಳಿರುವ ಈ ವಿಧಾನವು ಬಹಳ ಮಟ್ಟಿಗೂ ಅಮಂಗಲವನ್ನು ಹೋಗಲಾಡಿಸತಕ್ಕದ್ದಾಗಿದೆ.

ಪುಷ್ಪೇಣ ಸರ್ಷಪಾನ್ ಗೌರಾಂಚೂರ್ಣಯಿತ್ವಾ ವಿಚಕ್ಷಣಃ ।
ಇಂದ್ರೇಹಿಮತ್ಸ್ಯಂ ಧರ್ಮೇತಿ ಕುರ್ಯಾದುತ್ಸಾದನಂ ಬುಧಃ ॥ ೩೪ ॥

ಘೃತಸ್ನಾನಂ ಬುಧಃ ಕೃತ್ವಾ ಸರ್ಷಪಾನ್ ಜುಹುಯಾತ್ತತಃ ।
ಅದ್ಯೇತ್ಯಿಡಾವಿಂದ್ರಿಯೇತಿ ಮಂತ್ರೇಣಾನೇನ ಮಂತ್ರಿತಂ ॥ ೩೫ ॥

ಪುಷ್ಟಿದಂ ಕರ್ಮ ಕಥಿತಂ ಮಯೈತತ್ತವ ಭಾರ್ಗವ ।
ಮಿಶ್ರಾನ್ ವ್ರೀಹಿಯವಾನಗ್ನೌ ಹುತ್ವಾ ಭೃಗುಕುಲೋದ್ಭವ ॥ ೩೬ ॥

ಮುನೀಶೋ ಧಾಮ ಏತೇನ ಧಾನ್ಯಭಾಗೀ ಭವೇತ್ಸದಾ ।
ಮಧ್ವಾಜ್ಯದಧಿಮಿಶ್ರಾಣಿ ತಿಲಾನಿ ಚ ಜುಹೋತಿ ಯಃ ॥ ೩೭ ॥

ಸಾಷ್ಟಂ ಸಹಸ್ರಂ ಧರ್ಮಜ್ಞ ಶ್ರಾವಯನ್ತೀಹಮಾನವಾಃ ।
ಮಾಸೋಪವಾಸೀ ಲಭತೇ ಕನಕಂ ಬಹು ಭಾರ್ಗವ ॥ ೩೮ ॥

---

೩೪–೩೫. ಬಿಳಿಯ ಸಾಸವೆಯನ್ನು ಪುಡಿಮಾಡಿ ಇಂದ್ರೇಹಿ ಮತ್ಸ್ಯಂಧರ್ಮ ಎಂಬ ಮಂತ್ರದಿಂದ ಹೂವಿನಿಂದ ಆ ಚೂರ್ಣವನ್ನು ಮೈಗೆ ಉಜ್ಜಿಕೊಳ್ಳಬೇಕು. ಅನಂತರ ಆಜ್ಯದಿಂದ ಸ್ನಾನಮಾಡಿ ಅದ್ಯೇತ್ಯಿಡಾವಿಂದ್ರಿಯಾ ಎಂಬ ಮಂತ್ರದಿಂದ ಅಭಿಮಂತ್ರಿಸಿ ಸಾಸವೆಯನ್ನು ಹೋಮಮಾಡಬೇಕು. ಈಗ ನಾನು ಹೇಳಿರುವ ಕರ್ಮವು ಬಹು ಮಟ್ಟಿಗೂ ಪುಷ್ಟಿಕರವಾದುದು.

೩೬–೩೮ ಭತ್ತ ಮತ್ತು ಯವೆ ಇವುಗಳನ್ನು ಮಿಶ್ರಮಾಡಿ ಮುನೀಶೋಧಾಮ ಎಂಬ ಮಂತ್ರದಿಂದ ಹೋಮಮಾಡಿದವನು ಧಾನ್ಯಗಳಿಗೆ ಭಾಗಿಯಾಗುತ್ತಾನೆ. ಯಾವನು ಜೇನು, ಆಜ್ಯ, ಮೊಸರು ಇವುಗಳಿಂದ ಕೂಡಿದ ಎಳ್ಳನ್ನು ಶ್ರಾವಯನ್ತೀಹ ಮಾನವಾಃ ಎಂಬ ಮಂತ್ರದಿಂದ ಸಾವಿರದ ಎಂಟುಸಲ ಹೋಮಮಾಡುತ್ತಾನೆಯೋ ಅವನು ಒಂದು ತಿಂಗಳು ಉಪವಾಸವಿದ್ದು ಈಪ್ರಯೋಗವನ್ನು ನಡೆಸಿದಲ್ಲಿ ಬಹಳ ವಾಗಿ ಚಿನ್ನವನ್ನು ಹೊಂದುತ್ತಾನೆ.

ಗವ್ಯೇಷುಣೇತಿ ಚ ದ್ವಾಭ್ಯಾಂ ಯಸ್ತು ಸಂವತ್ಸರಂ ನರಃ ।
ನ್ಯಗ್ರೋಧಜಪನಿಷ್ಕ್ರೇವಂ ಭಕ್ಷಯೇದ್ದಂತಧಾವನಂ ॥ ೩೯ ॥

ಸಹಸ್ರಸಂಖ್ಯಂ ಸಧನಂ ಲಭತೇ ನಾತ್ರ ಸಂಶಯಃ ।
ಭದ್ರೋ ನ ಅಗ್ನ ಇತ್ಯೇತತ್ತಥಾ ಹುತ್ವಾ ಸಹಸ್ರಶಃ ॥ ೪೦ ॥

ಔದುಂಬರೇಧ್ಮಹೋಮೇನ ಮಂತ್ರೇಣಾನೇನ ಗಾಂ ಲಭೇತ್ ।
ಹುತ್ವಾ ವ್ರೀಹಿಯವಾನಗ್ನೌ ಧಾನ್ಯಮಾಪ್ನೋತಿ ಮಾನವಃ ॥ ೪೧ ॥

ಏವಾಸಿವೀರೇಯುರಿತಿ ದ್ವಾದಶಾಹಮುಪೋಷಿತಃ ।
ಸರ್ಪಿಷಾತ್ವಯುತಂ ಹುತ್ವಾ ಗ್ರಾಮಮಾಪ್ನೋತಿ ಮಾನವಃ ॥ ೪೨ ॥

ವೈರೂಪ್ಯಮಾಪ್ನುವನ್ನಿತ್ಯಂ ಪ್ರಯುಂಜಾನಃ ಶ್ರಿಯಂ ಲಭೇತ್ ।
ಶ್ರಾನ್ತ್ಯಾಷ್ಟಕಂ ಪ್ರಯುಂಜಾನಃ ಸರ್ವಾನ್ ಕಾಮಾನವಾಪ್ನುಯಾತ್ ॥

---

೩೯-೪೦. ಗವ್ಯೇಷುಣಾ ಎಂಬ ಎರಡು ಮಂತ್ರಗಳಿಂದ ಯಾವನು ಸಂವತ್ಸರದ ವರಿಗೂ ಆಲದ ಬಿಳಲಿನ ಹಾಲಿನಲ್ಲಿ ದಂತಧಾವನಮಾಡುತ್ತಾನೆಯೋ ಅವನು ಸಾವಿರ ಸಂಖ್ಯೆಯುಳ್ಳ ಧನವನ್ನು ಹೊಂದುತ್ತಾನೆ. ಇದರಲ್ಲಿ ಸಂಶಯವಿಲ್ಲ. ಭದ್ರೋನ ಅಗ್ನ ಎಂಬ ಮಂತ್ರದಿಂದ ಒಂದು ಸಾವಿರಸಲ ಅತ್ತಿಯ ಸಮಿತ್ತನ್ನು ಯಾವನು ಹೋಮಮಾಡುತ್ತಾನೆಯೋ ಅವನು ಗೋವನ್ನು ಹೊಂದುತ್ತಾನೆ.

೪೧-೪೨. ಭತ್ತ ಮತ್ತು ಯವೆ ಇವುಗಳನ್ನು ಅಗ್ನಿಯಲ್ಲಿ ಹೋಮಮಾಡಿದವನು ಧಾನ್ಯವನ್ನು ಹೊಂದುತ್ತಾನೆ. (ಇದು ಹಿಂದೆಯೂ ಹೇಳಲ್ಪಟ್ಟಿದೆ) ಹನ್ನೆರಡು ದಿವಸಗಳು ಉಪವಾಸವಿದ್ದು ಏವಾಸಿ ವೀರೇಯುಃ ಎಂಬ ಮಂತ್ರದಿಂದ ಆಜ್ಯದಿಂದ ಹತ್ತುಸಾವಿರ ಹೋಮಮಾಡಿದವನು ಗ್ರಾಮವನ್ನು ಹೊಂದುತ್ತಾನೆ. ಅಂಗವೈರೂಪ್ಯವನ್ನು ಹೊಂದಿರುವವನು ಈ ವಿಧಾನವನ್ನು ನಿತ್ಯವೂ ಅನುಸರಿಸಿದಲ್ಲಿ ಸಂಪತ್ತನ್ನು ಹೊಂದುತ್ತಾನೆ.

೪೩-೪೫. ಶ್ರಾನ್ತ್ಯಾಷ್ಟಕವನ್ನು ಪ್ರಯೋಗಿಸುವವನು ಎಲ್ಲಾ ಮನೋರಥಗಳನ್ನೂ ಹೊಂದುತ್ತಾನೆ. ಯಾವನು ಗವ್ಯೇಷುಣಾ ಎಂಬ ಮಂತ್ರದಿಂದ ಸಾಯಂಕಾಲದಲ್ಲಿಯೂ ಸಹ ಚಟುವಟಿಕೆಯಿಂದಿದ್ದು ಗೋವುಗಳನ್ನು ಪೂಜಿಸುತ್ತಾನೆಯೋ

ಗವ್ಯೇಷುಣೇತಿ ಯೋ ನಿತ್ಯಂ ಸಾಯಂ ಪ್ರಾತರತಂದ್ರಿತಃ ।
ಉಪಸ್ಥಾನಂ ಗವಾಂ ಕುರ್ಯಾತ್ತಸ್ಯಸ್ಯುಸ್ತಾಃ ಸದಾ ಗೃಹೇ ॥ ೪೪ ॥

ಅಗ್ನೇವಿವಸ್ವದುಷಸಾ ಮಂತ್ರೇಣಾನೇನ ಮಂತ್ರವಿತ್ ।
ಭಾಜನಸ್ಯೋಪನೀತಸ್ಯ ಯಸ್ತ್ವಗ್ರಂ ಜುಹುಯಾತ್ಸದಾ ॥ ೪೫ ॥

ಉತ್ತರೇಣ ಬಲಿಂ ದತ್ವಾ ಸರ್ವಾನ್ ಕಾಮಾನವಾಪ್ನುಯಾತ್ ।
ಕ್ಷೀರೈಕವೃಕ್ಷಮಾಸಾದ್ಯ ಮಣಿಭದ್ರಾಯ ಮಾನವಃ ॥ ೪೬ ॥

ಅಷ್ಟರಾತ್ರೋಷಿತಃ ಪೂಜಾಂ ಕೃತ್ವಾ ದದ್ಯಾತ್ತತೋ ಬಲಿಂ ।
ಸುಸಂಸ್ಕೃತೇನ ಮಾಂಸೇನ ಕೃಷ್ಣಪಕ್ಷಂ ಕ್ಷಪೇದ್ಬುಧಃ ॥ ೪೭ ॥

ಏಷಸ್ಯತೇತಿ ಮಧುಮನ್ನಿಂದ್ರ ಏತೇನ ಭಾರ್ಗವ ।
ಸುವರ್ಣಮಾಪ್ನೋತಿ ನರೋ ಯಾವದಿಚ್ಛತಿ ಶತ್ರುಹನ್ ॥ ೪೮ ॥

ಶುಕ್ಲಪಕ್ಷಚತುರ್ದಶ್ಯಾಂ ತ್ರಿರಾತ್ರೋಪೋಷಿತೋ ನರಃ ।
ಮೌನಂ ಮಾಸಂ ಪಾಯಸಂ ಚ ರತ್ನತ್ರಯಸಮನ್ವಿತಂ ॥ ೪೯ ॥

---

ಆ ಗೋವುಗಳು ಅವನ ಮನೆಯಲ್ಲಿ ಯಾವಾಗಲೂ ಇರುತ್ತವೆ. ಅಗ್ನೇ ವಿವಸ್ವದುಷಸಾ ಎಂಬ ಮಂತ್ರದಿಂದ ಸಮೀಪಕ್ಕೆ ತರಲ್ಪಟ್ಟ ಪಾತ್ರದಿಂದ ಮೊದಲು ಅಗ್ರಹೋಮವನ್ನು ಮಾಡಿ ಅನಂತರ ಮಂತ್ರದ ಉತ್ತರಭಾಗದಿಂದ ಬಲಿಹರಣವನ್ನೂ ಮಾಡುತ್ತಾನೆಯೋ ಅವನು ಎಲ್ಲಾ ಮನೋರಥಗಳನ್ನೂ ಹೊಂದುತ್ತಾನೆ.

೪೬–೪೮. ಹಾಲಿರುವ ಆಲವೇ ಮೊದಲಾದ ಮರದ ಸಮೀಪಕ್ಕೆ ಹೋಗಿ ಎಂಟು ರಾತ್ರಿ ಉಪವಾಸವಿದ್ದು ಮಣಿಭದ್ರನೆಂಬ ಯಕ್ಷನಿಗೆ ಪೂಜೆ ಮಾಡಿ ಸಂಸ್ಕೃತವಾದ ಮಾಂಸದಿಂದ ಬಲಿಯನ್ನರ್ಪಿಸಬೇಕು. ಏಷಸ್ಯತೇತಿ ಮಧುಮರ್ಣ ಎಂಬ ಮಂತ್ರವೇ ಬಲಿಪ್ರದಾನದಲ್ಲಿ ಪ್ರಯೋಗಿಸತಕ್ಕದ್ದು. ಈ ರೀತಿ ಕೃಷ್ಣಪಕ್ಷವನ್ನು ಅಲ್ಲಿಯೇ ಕಳದಲ್ಲಿ ಅವನು ತನಗೆ ಇಚ್ಛೆ ಇದ್ದಷ್ಟು ಸುವರ್ಣವನ್ನು ಹೊಂದುತ್ತಾನೆ.

೪೯–೫೧. ಮೂರು ರಾತ್ರಿ ಉಪವಾಸಮಾಡಿ ಶುಕ್ಲಪಕ್ಷದ ಚತುರ್ದಶಿಯಲ್ಲಿ ಮೂರು ರತ್ನಗಳಿಂದ ಕೂಡಿದ ಪಾಯಸವನ್ನು ಸಪ್ತಧೇನವೋದುದುಹುಃ ಎಂಬ

**ಸಪ್ತಧೇನವೋ ಮುಮುಹುರ್ಮಂತ್ರೇಣಾನೇನ ಮಂತ್ರವಿತ್ ।**
**ಕೃಷ್ಣಪಕ್ಷಚತುರ್ದಶ್ಯಾಂ ತ್ರಿರಾತ್ರೋಪೋಷಿತಸ್ತಥಾ ॥ ೫೦ ॥**

**ಮತ್ಸ್ಯಾನುಪಹರೇದ್ರಾತ್ರಾವಾಸುರೀಮಾಪ್ನುಯಾಚ್ಛ್ರಿಯಂ ।**
**ಬಲಯುಕ್ತಶ್ಚ ಭವತಿ ದೀಪ್ತತೇಜಾಸ್ತಥೈವ ಚ ॥ ೫೧ ॥**

**ಧಾನಾವಂತಂ ಕರಂಭಿಣಂ ಮಂತ್ರೇಣಾನೇನ ಪಾಯಸಂ ।**
**ಹುತ್ವಾ ದಿಗಷ್ಟಕೇ ದದ್ಯಾದ್ದಿಕ್ಪಾಲಾನಾಂ ತತೋ ಬಲಿಂ ॥ ೫೨ ॥**

**ವಾಸ್ತುದೋಷಹರಂ ಕರ್ಮ ಮಯೈತತ್ಪರಿಕೀರ್ತಿತಂ ।**
**ರಾಜಾ ಸಮಾಚರೇತ್ಸ್ನಾನಂ ಪುಷ್ಯೇಣ ಶ್ರವಣೇನ ಚ ॥ ೫೩ ॥**

**ಅಪ್ರಾತೃವ್ಯ ಇತಿ ಸದಾ ರಹಸ್ಯಂ ಸ್ನಾನಮಾಚರೇತ್ ।**
**ಸ್ವೇಚ್ಛಾಪತಿತಜೀವಂತೀ ಗವಾಂ ಶೃಂಗಸಮುದ್ಭವೈಃ ॥ ೫೪ ॥**

---

ಮಂತ್ರದಿಂದ ಹೋಮಮಾಡಬೇಕು. ನಂತರ ಒಂದು ತಿಂಗಳು ಮೌನದಿಂದರಬೇಕು. ಹಾಗೆಯೇ ಕೃಷ್ಣಪಕ್ಷದಲ್ಲಿ ಮೂರು ರಾತ್ರಿ ಉಪವಾಸಮಾಡಿ ಚತುರ್ದಶಿಯಲ್ಲಿ ರಾತ್ರಿಯಲ್ಲಿ ಮೀನುಗಳನ್ನು ಹೋಮದಿಂದ ಸಮರ್ಪಿಸಿದಲ್ಲಿ ಅವನು ಆಸುರಸಂಪತ್ತನ್ನು ಹೊಂದುತ್ತಾನೆ. ಬಲಶಾಲಿಯಾಗಿಯೂ ಆಗುತ್ತಾನೆ ದೇದೀಪ್ಯಮಾನವಾದ ತೇಜಸ್ಸನ್ನೂ ಸಹ ಹೊಂದುತ್ತಾನೆ.

೫೨-೫೩. ಧಾನಾವಂತಂ ಕರಂಭಿಣಂ ಎಂಬ ಮಂತ್ರದಿಂದ ಪಾಯಸವನ್ನು ಹೋಮಮಾಡಿ ಎಂಟು ದಿಕ್ಕುಗಳಲ್ಲಿಯೂ ದಿಕ್ಪಾಲಕರಿಗೆ ಬಲಿಯನ್ನು ಅರ್ಪಿಸಬೇಕು. ಈ ವಿಧಾನವು ವಾಸ್ತುದೋಷಗಳಿಗೆ ಬಹುಮಟ್ಟಿಗೂ ನಿವಾರಕವಾಗುತ್ತದೆ. ರಾಜನಾದವನು ಪುಷ್ಯ ಮತ್ತು ಶ್ರವಣ ನಕ್ಷತ್ರದಲ್ಲಿ ಅಪ್ರಾತೃವ್ಯ ಎಂಬ ಮಂತ್ರದಿಂದ ಯಾವಾಗಲೂ ರಹಸ್ಯವಾಗಿ ಸ್ನಾನಮಾಡಬೇಕು

೫೪-೫೬. ತಾನಾಗಿಯೇ ಹಳ್ಳದಲ್ಲಿ ಬಿದ್ದು ಬದುಕಿರುವ ಗೋವಿನ ಕೊಂಬಿನಿಂದ ಕೆಸರಿನಿಂದ ಮೇಲಕ್ಕೆ ಎತ್ತಲ್ಪಟ್ಟ ಕಾಶವೆಂಬ ಹುಲ್ಲುಗಳನ್ನು ಮಧು, ಆಜ್ಯ,

ಕಾಶ್ಮೈರ್ಮಧ್ವಾಜ್ಯಸಂಪೂರ್ಣೈರ್ಮಧುಕ್ಷೀರಯುತೈಸ್ತಥಾ ।
ನಿಃಸಪತ್ನಮವಾಪ್ನೋತಿ ರಾಜ್ಯಂ ನಿರ್ಗತಕಂಟಕಂ ॥ ೫೫ ॥

ಘೃತಾಕ್ತಂ ತು ಯವದ್ರೋಣಂ ವಾತ ಆವತ ಭೇಷಜಂ ।
ಅನೇನ ಹುತ್ವಾ ವಿಧಿವತ್ಸರ್ವಾನ್ ದೋಷಾನ್ ವ್ಯಪೋಹತಿ ॥ ೫೬ ॥

ಪ್ರಾದೇವೋ ದಾಸ ಏತೇನ ಕೃಷ್ಣಾನ್ ಹುತ್ವಾ ತಥಾ ತಿಲಾನ್ ।
ಕೃತ್ವಾ ಕರ್ಮಾಣಿ ತೀರ್ಥಾದೌ ಸ್ತೈನ್ಯಾತ್ ಕ್ಷಿಪ್ರಂ ವಿಮುಚ್ಯತೇ ॥ ೫೭ ॥

ಅಭಿತ್ವಾಪೂರ್ವಪೀತಂ ಯೇ ವಷಟ್ಕಾರಸಮನ್ವಿತಂ ।
ಬಾಧಕೇಧ್ಮಸಹಸ್ರಂ ತು ಹುತಂ ಯುದ್ಧೇ ಜಯಪ್ರದಂ ॥ ೫೮ ॥

ಹಸ್ತ್ಯಶ್ವಪುರುಷಾನ್ ಕುರ್ಯಾತ್ ಬುಧಃ ಪಿಷ್ಟಮಯಾನ್ ಶುಭಾನ್ ।
ಪರಕೀಯಾನಥೋದ್ದಿಶ್ಯ ಪ್ರಧಾನಪುರುಷಾಂಸ್ತಥಾ ॥ ೫೯ ॥

---

ಕ್ಷೀರ ಇವುಗಳೊಡನೆ ಹೋಮಮಾಡಿದವನು ಯಾವ ಶತ್ರುಗಳೂ ಇಲ್ಲದ ರಾಜ್ಯವನ್ನು ಹೊಂದುತ್ತಾನೆ. ಕ್ಷುದ್ರ ಬಾಧೆ ಇಲ್ಲದೆಯೂ ಆ ರಾಜ್ಯವನ್ನು ರಕ್ಷಿಸುತ್ತಾನೆ. ಆಜ್ಯದಿಂದ ಕೂಡಿದ ಒಂದು ಕೊಳಗ ಯವಧಾನ್ಯವನ್ನು ವಾತ ಆವತ ಭೇಷಜಂ ಎಂಬ ಮಂತ್ರದಿಂದ ಯಥಾವಿಧಿಯಾಗಿ ಹೋಮಮಾಡಿದಲ್ಲಿ ಎಲ್ಲಾ ದೋಷಗಳನ್ನೂ ಹೋಗಲಾಡಿಸಿಕೊಳ್ಳುತ್ತಾನೆ.

೫೭–೫೮. ಪ್ರಾದೇವೋ ದಾಸಃ ಎಂಬ ಈ ಮಂತ್ರದಿಂದ ಕರಿಯ ಎಳ್ಳನ್ನು ಹೋಮಮಾಡಬೇಕು. ತೀರ್ಥಪ್ರದೇಶದಲ್ಲಿ ಅಥವಾ ಕ್ಷೇತ್ರಾದಿಗಳಲ್ಲಿ ಈ ಕರ್ಮವನ್ನು ನೆರವೇರಿಸಿದವನು ಚೌರ್ಯದ್ವೇಷದಿಂದ ಒಡನೆಯೇ ಮುಕ್ತನಾಗುತ್ತಾನೆ. ಅಭಿತ್ವಾ ಪೂರ್ವಪೀತಯೇ ಎಂಬ ಮಂತ್ರದಿಂದ ವಷಟ್ಕಾರದೊಡನೆ ಬನ್ನಿಯ ಸಾವಿರ ಸಮಿತ್ತುಗಳನ್ನು ಹೋಮ ಮಾಡಿದಲ್ಲಿ ಯುದ್ಧದಲ್ಲಿ ಜಯವು ಲಭಿಸುತ್ತದೆ.

೫೯–೬೦. ಶತ್ರುಪಕ್ಷದ ಪ್ರಧಾನಪುರುಷರಿಂದ ಬಾಧೆಯನ್ನು ಅನುಭವಿಸುತ್ತಿರುವವನು ಅವರನ್ನು ಉದ್ದೇಶಿಸಿ ಆನೆ, ಕುದುರೆ, ಮನುಷ್ಯ ಇವರ ಪ್ರತಿಕೃತಿಯನ್ನು ಹಿಟ್ಟನಿಂದ ಮಾಡಬೇಕು. ಸರಿಯಾದ ಅನ್ನ ಹಿಟ್ಟು ಇವನ್ನು ಪಾಕ

ಸ್ತ್ವೆಸ್ತ್ರೈಣ್ಯಪಿಷ್ಟಪಚೆನೇ ಕ್ಷುರೇಣೋತ್ಕೃತ್ಯ ಭಾಗಶಃ ।
ಅಭಿತ್ವಾ ಶೂರ ನೋ ನುಮೋ ಮಂತ್ರೇಣಾನೇನ ಮಂತ್ರವಿತ್ || ೬೦ ||

ಕೃತ್ವಾ ಸರ್ಷಪತೈಲಾಕ್ತಾನ್ ಕ್ರೋಧೇನ ಜುಹುಯಾತ್ತತಃ ।
ಏತತ್ಕೃತ್ವಾ ಬುಧಃ ಕರ್ಮ ಸಂಗ್ರಾಮೇ ಜಯಮಾಪ್ನುಯಾತ್ || ೬೧ ||

ಆಷಾಢ್ಯಾಂ ಪೌರ್ಣಮಾಸ್ಯಾಂ ತು ಸೋಪವಾಸೋ ವಿಚಕ್ಷಣಃ ।
ಸಾಯಂ ಧಾನ್ಯಾನಿ ವಸ್ತ್ರಾಣಿ ಸಸ್ಯಾನಿ ತೋಲಯೇದ್ಬುಧಃ || ೬೨ ||

ಇಧ್ಮಮಿದ್ದೇವತಾಮನ್ನೇ ಮಂತ್ರೇಣಾ ಮಂತ್ರಯೇತ್ತು ತಾಂ ।
ಪೂಜಿತಾಂ ವಾಸಯೇದ್ರಾತ್ರೌ ದೇಶೇ ಪರಮಪೂಜಿತೇ || ೬೩ ||

ದೇಶಾನಾಂ ಭೂಮಿಪಾಲಾನಾಂ ತಥಾ ದೇವಚತುಷ್ಪದಾಂ ।
ಮೃನ್ಮಯಾನಾಂ ತು ಕರ್ತವ್ಯಂ ತಥಾ ರಾತ್ರ್ಯಧಿವಾಸನಂ || ೬೪ ||

---

ಮಾಡಲು ಅರ್ಹವಾದ ಬಾಂಡ್ಲಿಯಲ್ಲಿ ಸಣ್ಣ ಚೂರಿಯಿಂದ ಆ ಬೊಂಬೆಗಳನ್ನು ಭಾಗಭಾಗವಾಗಿ ಕತ್ತರಿಸಿ ಅಭಿತ್ವಾ ಶೂರ ನೋ ನುಮೋ ಎಂಬ ಮಂತ್ರದಿಂದ ಹಾಕಬೇಕು.

೬೧-೬೩. ಅನಂತರ ಆ ಭಾಗಗಳನ್ನು ಸಾಸವೆಯ ಎಣ್ಣೆಯಿಂದ ನೆನೆಸಿ ಕೋಪದಿಂದ ಹೋಮಮಾಡಬೇಕು. ಹೀಗೆ ಮಾಡಿದಲ್ಲಿ ಅವನು ಯುದ್ಧದಲ್ಲಿ ಜಯಶಾಲಿಯಾಗುತ್ತಾನೆ ಆಷಾಢ ಶುದ್ಧ ಪೂರ್ಣಿಮೆಯ ದಿನ ಉಪವಾಸವಿದ್ದು ಸಾಯಂಕಾಲದಲ್ಲಿ ಧಾನ್ಯ, ವಸ್ತ್ರ, ಸಸ್ಯ ಇವುಗಳನ್ನು ತೂಕಮಾಡಿ ಇಡಬೇಕು. ಇಧ್ಮಮಿದ್ದೇವತಾಮನ್ನೇ ಎಂಬ ಮಂತ್ರದಿಂದ ಅವನ್ನು ಅಭಿಮಂತ್ರಿಸಿ ಪೂಜಿಸಿ ಪವಿತ್ರವಾದ ಸ್ಥಳದಲ್ಲಿ ಆ ರಾತ್ರಿ ಎಲ್ಲಾ ಹಾಗೆಯೇ ಇಟ್ಟಿರಬೇಕು.

೬೪-೬೫ ದೇಶಗಳನ್ನೂ ದೊರೆಗಳನ್ನೂ ದೇವತೆಗಳನ್ನೂ ನಾಲ್ಕು ಪಾದಗಳುಳ್ಳ ಹಸು ಮೊದಲಾದ ಪ್ರಾಣಿಗಳನ್ನೂ ಸಹ ಮಣ್ಣಿನಲ್ಲಿ ಮಾಡಿ ಅದರ ಸಮೀಪದಲ್ಲಿಟ್ಟು ಆರಾತ್ರಿ ಹಾಗೆಯೇ ಇಟ್ಟಿರಬೇಕು. ಮಾರನೇದಿನ ಅವನ್ನು ತೂಕಮಾಡಿ

ತುಲಿತಾನಾಂ ದ್ವಿತೀಯೇಽಹ್ನಿ ತತ್ರ ವೃದ್ಧಿ ಪ್ರವರ್ಧನೇ ।
ಹೀನಸ್ಯ ಕ್ಷಯಮಾದೇಶ್ಯಂ ಸಮಸ್ಯ ಸಮತಾ ತಥಾ ॥ ೬೫ ॥

ಗೋವ್ರತಂ ತು ಬುಧಃ ಕುರ್ಯಾದಾದೌ ಮಾಸಚತುಷ್ಟಯಂ ।
ತತಸ್ತ್ವರಣ್ಯಂ ಪ್ರವಿಶೇತ್ತತ್ರ ಕುರ್ಯಾಜ್ಜಪಂ ಶುಭಂ ॥ ೬೬ ॥

ತಪಃ ಸದೃಶಮಾಸಾದ್ಯ ಜಾಪ್ತ್ಯೇವ್ಯತದಿತಿ ವೈ ಸದಾ ।
ಸಹಸ್ರಕೃತ್ವಸ್ತು ಜಪೇತ್ಸಪ್ತರಾತ್ರ ತ್ರಯೇ ಗತೇ ॥ ೬೭ ॥

ಮನಸಾ ಕಾಂಕ್ಷಿತಾನ್ ಕಾಮಾನ್ ಧ್ರುವಮಾಪ್ನೋತಿ ಮಾನವಃ ।
ಅಂತರಿಕ್ಷೇಣ ವಾ ಯಾತಿ ರೂಪಾನ್ಯತ್ವಂ ಕರೋತಿ ವಾ ॥ ೬೮ ॥

ಅದೃಶ್ಯತ್ವಮವಾಪ್ನೋತಿ ದೈತ್ಯತ್ವಮಥವಾ ಪುನಃ ।
ತಂ ತಂ ಕಾಮಮವಾಪ್ನೋತಿ ಯಂ ಯಂ ವಾ ಮನಸೇಚ್ಛತಿ ॥ ೬೯ ॥

---

ಹೆಚ್ಚಾಗಿದ್ದದ್ದು ಹೆಚ್ಚುತ್ತದೆ ಎಂದೂ ಕಡಿಮೆಯಾದದ್ದು ಕಡಿಮೆಯಾಗುತ್ತದೆಂದೂ ಸಮವಾಗಿದ್ದದ್ದು ಹೆಚ್ಚುಕಡಿಮೆ ಇಲ್ಲದೆ ಸಮನಾಗಿಯೇ ಇರುತ್ತದೆ ಎಂದೂ ತಿಳಿಯಬೇಕು.

೬೬–೬೭. ಮೊದಲನೆಯ ನಾಲ್ಕು ತಿಂಗಳಲ್ಲಿ ಗೋವ್ರತವನ್ನು ಮಾಡಬೇಕು ಅನಂತರ ಅರಣ್ಯಕ್ಕೆ ಹೋಗಿ ಶುಭವಾದ ಜಪವನ್ನು ಕೈಗೊಳ್ಳಬೇಕು. ತನ್ನ ಶಕ್ತಿಗೆ ಸದೃಶವಾದ ತಪಸ್ಸನ್ನು ಆಶ್ರಯಿಸಿ ಜಾಪ್ತ್ಯೇವ್ಯತತ್ ಎಂಬ ಮಂತ್ರವನ್ನು ಯಾವಾಗಲೂ ಜಪಿಸುತ್ತಿರಬೇಕು. ಸಾವಿರಸಲ ಜಪಿಸಿದನಂತರ ಇಪ್ಪತ್ತೊಂದು ರಾತ್ರಿ ಕಳೆದ ಮೇಲೆ ಅವನು ಮನೋರಥಗಳೆಲ್ಲವನ್ನೂ ನಿಯತವಾಗಿಯೂ ಹೊಂದಿಯೇ ಹೊಂದುತ್ತಾನೆ.

೬೮–೭೦. ಅಂತರಿಕ್ಷದಲ್ಲಿಯೂ ಸಂಚರಿಸಲು ಶಕ್ತನಾಗುತ್ತಾನೆ. ರೂಪಾಂತರ ಹೊಂದುವುದಕ್ಕೂ ಸಮರ್ಥನಾಗುತ್ತಾನೆ. ಅದೃಶ್ಯನೂ ಆಗುತ್ತಾನೆ. ದೈತ್ಯನಂತೆ ಸಮರ್ಥನೂ ಆಗುತ್ತಾನೆ. ಯಾವಯಾವ ಮನೋರಥಗಳು ಇವನ ಮನಸ್ಸಿನಲ್ಲಿ

**ಸಾಮ್ನಸ್ತು ದೇವತಾಂ ಜ್ಞಾತ್ವಾ ತೇನ ಸಾಮ್ನಾ ತು ದೇವತಾಂ ।**
**ಆರಾಧಯೇತ್ಸುಪ್ರಸನ್ನಾ ಸಾವರ್ಗಾ ಸ್ಯಾತ್ಸಂಶಯಂ ವಿನಾ ॥ ೨೦ ॥**

**ಅಮೂಷು ಪೂರ್ವಂ ತು ಸದಾ ಮಂತ್ರಮಾವರ್ತಯೇಚ್ಛುಚಿಃ ।**
**ಚಂದನೇನಾನುಲಿಪ್ತಾಂಗೋ ಜಾತಿಪುಷ್ಪಧರಸ್ತಥಾ ॥ ೨೧ ॥**

**ಶ್ವೇತೋಷ್ಣೀಷಃ ಶ್ವೇತವಾಸಾಃ ಸರ್ವಾನ್ ಕಾಮಾನವಾಪ್ನುಯಾತ್ ।**
**ಏವಂ ದುದುಹಕೇತ್ಯೇತತ್ಸೋಪವಾಸಸ್ತು ಯೋ ಜಪೇತ್ ॥ ೨೨ ॥**

**ಅಕ್ಷತೈಃ ಸುಮನೋಭಿಶ್ಚ ತಥಾ ವಾ ಗೌರಸರ್ಷಪೈಃ ।**
**ಅವಕೀರ್ಯ ಶುಭಂ ದೇಶಂ ತ್ವೇಕಾಕೀ ಪ್ರಸ್ವಪೇನ್ನಿಶಿ ॥ ೨೩ ॥**

**ವಾಗ್ಯತಸ್ತು ತಥಾ ಸ್ವಪ್ನೇ ಪಶ್ಯತೀತಿ ಶುಭಂ ಶುಭಂ ।**
**ಯಥಾವತ್ ಭೃಗುಶಾರ್ದೂಲ ಭವಿಷ್ಯದ್ಭೂತಮೇವ ವಾ ॥ ೨೪ ॥**

---

ಉಂಟಾಗುತ್ತವೆಯೋ ಅದೆಲ್ಲವನ್ನೂ ಹೊಂದುತ್ತಾನೆ. ಆಯಾಯ ಸಾಮಕ್ಕೆ ಯಾವ ದೇವತೆ ಎಂಬುದನ್ನು ತಿಳಿದು ಆ ದೇವತೆಯನ್ನು ಆ ಸಾಮದಿಂದ ಪೂಜಿಸಿದುದೇ ಆದರೆ ಆ ದೇವತೆಯು ಪ್ರಸನ್ನವಾಗಿ ಫಲಪ್ರದವಾಗುತ್ತದೆ. ಇದರಲ್ಲಿ ಸಂಶಯವಿಲ್ಲ.

೨೧–೨೩ ಈ ರೀತಿಯಾದ ಸಾಮಾರಾಧನೆಗಳಲ್ಲಿ ಮೊದಲು ಶುಚಿಯಾಗಿದ್ದು ಆ ಮಂತ್ರವನ್ನು ಆವರ್ತಿಮಾಡಬೇಕು. ಆ ಕಾಲದಲ್ಲಿ ಚಂದನಲೇಪನವನ್ನು ಹೊಂದಿಯೂ, ಜಾಜಿ ಹೂವಿನ ಮಾಲಿಕೆಯನ್ನು ಧರಿಸಿಯೂ, ಶುಭ್ರವಾದ ರುಮಾಲು ಮತ್ತು ವಸ್ತ್ರಗಳನ್ನೂ ಧರಿಸಿಯೂ ಇರಬೇಕು. ಹೀಗೆ ಮಾಡಿದಲ್ಲಿ ಅಪೇಕ್ಷಿತವಾದ ಎಲ್ಲಾ ಫಲವನ್ನೂ ಹೊಂದುತ್ತಾನೆ. ಹೀಗೆಯೇ ದುದುಹಕ ಎಂಬ ಮಂತ್ರವನ್ನೂ ಉಪವಾಸದಿಂದಿದ್ದು ಜಪಿಸಬೇಕು. ಆ ಕಾಲದಲ್ಲಿ ಅಕ್ಷತೆಗಳಿಂದಲೂ ಹೂವುಗಳಿಂದಲೂ, ಬಿಳಿಯ ಸಾಸವೆಯಿಂದಲೂ ಶುಚಿಯಾದ ಪ್ರದೇಶದಲ್ಲಿ ಎರಚಿ ಏಕಾಕಿಯಾಗಿಯೇ ರಾತ್ರಿಯಲ್ಲಿ ಮಲಗಬೇಕು.

೨೪–೨೫. ಮೌನದಿಂದ ಹೀಗೆ ಮಲಗಿದವನು ಭೂತಗಳಾದ ಹಾಗೂ ಭವಿಷ್ಯಗಳಾದ ಶುಭಪರಂಪರೆಯನ್ನು ಸ್ವಪ್ನದಲ್ಲಿ ಯಥಾವಸ್ಥಿತವಾಗಿಯೇ ನೋಡುತ್ತಾನೆ. ಭಾರುಂಡ, ವಾಮದೇವ್ಯ, ರಥಂತರ, ಬೃಹದ್ರಥ, ಇವುಗಳು ಸರ್ವಪಾಪ

ಭಾರುಂಡಂ ವಾಮದೇವ್ಯಂ ಚ ರಥಂತರಬೃಹದ್ರೃಥಾ ।
ಸರ್ವಪಾಪಪ್ರಶಮನಾಃ ಕಥಿತಾಃ ಸಂಶಯಂ ವಿನಾ ॥ ೭೫ ॥

ಸಾಮ್ನಾಂ ವಿಧಿಸ್ತೇ ಕಥಿತೋ ನೃವೀರ
ಸಂಕ್ಷೇಪತಃ ಕರ್ಮಕರೋ ಮಯೈಷಃ ।
ಅಥರ್ವಣಂ ವಚ್ಮಿ ನಿಬೋಧ ತನ್ಮೇ
ಚೇತಃ ಸಮಾಧಾಯ ಮಹಾನುಭಾವ ॥ ೭೬ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ಸಾಮವಿಧಾನಂ ನಾಮ ಷಡ್ವಿಂಶತ್ಯುತ್ತರಶತತಮೋಽಧ್ಯಾಯಃ

---

ನಾಶಕಗಳೆಂದು ಹೇಳಲ್ಪಟ್ಟಿವೆ. ಇದರಲ್ಲಿ ಸಂದೇಹವಿಲ್ಲ. ಎಲೈ ನರವೀರನೇ ಕರ್ಮಾಂಗವಾದ ಸಾಮಮಂತ್ರಗಳ ವಿಧಿಯನ್ನು ನಿನಗೆ ಸಂಕ್ಷೇಪವಾಗಿ ಹೇಳಿರುವೆನು. ಇನ್ನು ಆಥರ್ವಣ ವಿಧಿಯನ್ನು ಹೇಳುತ್ತೇನೆ. ಉಪದೇಶಕ್ಕೆ ಯೋಗ್ಯತೆಯನ್ನು ತರುವ ಮಹಾನುಭಾವತ್ವವನ್ನು ಹೊಂದಿರುವ ನೀನು ಸಾವಧಾನದಿಂದ ಇದನ್ನೂ ಕೇಳಿ ನನ್ನಿಂದ ತಿಳಿದುಕೋ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದ ಮಾರ್ಕಂಡೇಯ ಸಂವಾದದಲ್ಲಿ
ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ
ಸಾಮವಿಧಾನ ಕಥನವೆಂಬ ನೂರ ಇಪ್ಪತ್ತಾರನೆಯ
ಅಧ್ಯಾಯವು ಮುಗಿದಿದೆ.

## ನೂರ ಇಪ್ಪತ್ತಾರನೆಯ ಅಧ್ಯಾಯದ ಸಾರಾಂಶ.

ಈ ಅಧ್ಯಾಯದಲ್ಲಿ ಸಾಮವೇದದ ಮಂತ್ರಗಳಿಂದ ಮಾಡಬಹುದಾದ ಶಾನ್ತಿಕ ಪೌಷ್ಟಿಕ ಕರ್ಮಗಳನ್ನು ಆಯಾಯ ಮಂತ್ರಗಳ ವಿನಿಯೋಗ ಕ್ರಮದಿಂದ ನಿರೂಪಿಸಿರುವರು.

|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

### ಸಪ್ತವಿಂಶತ್ಯುತ್ತರಶತತಮೋಽಧ್ಯಾಯಃ

|| ಪುಷ್ಕರ ಉವಾಚ ||

ಶಾಂತಾತೀತಂ ಗಣಂ ಹುತ್ವಾ ಶಾಂತಿಮಾಪ್ನೋತಿ ಮಾನವಃ |
ಭೈಷಜ್ಯಂ ಚ ಗಣಂ ಹುತ್ವಾ ಸರ್ವಾನ್ ರೋಗಾನ್ವ್ಯಪೋಹತಿ || ೧ ||

ತ್ರಿಷಸ್ತ್ರೀಯಂ ಗಣಂ ಹುತ್ವಾ ಸರ್ವಪಾಪೈಃ ಪ್ರಮುಚ್ಯತೇ |
ಕ್ವಚಿನ್ನಾಪ್ನೋತಿ ಚ ಭಯಂ ಹುತ್ವಾ ಚೈವಾಭಯಂ ಗಣಂ || ೨ ||

ನ ಕ್ವಚಿಜ್ಜಾಯತೇ ರಾಮ ಗಣಂ ಹುತ್ವಾ ಪರಾಜಯಃ |
ಆಯುಷ್ಯಂ ಚ ಗಣಂ ಹುತ್ವಾ ಚಾಪಮೃತ್ಯೂನ್ವ್ಯಪೋಹತಿ || ೩ ||

---

### ನೂರಇಪ್ಪತ್ತೇಳನೆಯ ಅಧ್ಯಾಯವು.

೧–೩. ಶಾಂತಾತೀತವೆಂಬ ಗಣಗಳನ್ನು ಕುರಿತು ಹೋಮಮಾಡಿದವನು ಶಾಂತಿಯನ್ನು ಹೊಂದುತ್ತಾನೆ. ಭೈಷಜ್ಯವೆಂಬ ಗಣಗಳನ್ನು ಕುರಿತು ಹೋಮಿಸಿದವನು ಎಲ್ಲಾ ರೋಗಗಳನ್ನೂ ಹೋಗಲಾಡಿಸಿಕೊಳ್ಳುತ್ತಾನೆ. ತ್ರಿಷಸ್ತ್ರೀಯವೆಂಬ ಗಣಗಳನ್ನು ಉದ್ದೇಶಿಸಿ ಹೋಮಮಾಡಿದವನು ಎಲ್ಲಾ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದುತ್ತಾನೆ. ಅಭಯಗಣವನ್ನು ಕುರಿತು ಹೋಮಿಸಿದವನು ಎಲ್ಲಿಯೂ ಭಯವನ್ನು ಹೊಂದುವುದಿಲ್ಲ. ಈ ಗಣಗಳನ್ನು ಕುರಿತು ಹೋಮಮಾಡಿದವನಿಗೆ ಎಲ್ಲಿಯೂ ಪರಾಜಯವೆಂಬುದೇ ಉಂಟಾಗುವುದಿಲ್ಲ. ಆಯುಷ್ಯವೆಂಬ ಗಣವನ್ನು ಉದ್ದೇಶಿಸಿ ಹೋಮಿಸಿದವನು ಅಪಮೃತ್ಯುಗಳೆಲ್ಲವನ್ನೂ ಹೋಗಲಾಡಿಸಿಕೊಳ್ಳುತ್ತಾನೆ.

ಏತೇ ದಶಗಣಾಶ್ಚೈವ ಹೋತವ್ಯಾಃ ಸ್ಯುರ್ಯಥಾಕ್ರಮಂ ।
ಅಷ್ಟಾದಶಸು ಧರ್ಮಜ್ಞ ದಶಶಾಂತಿಷು ಭಾರ್ಗವ ॥ ೪ ॥

ವೈಷ್ಣವೀ ಚ ತಥಾ ಚೈಂದ್ರೀ ಬ್ರಾಹ್ಮೀ ರೌದ್ರೀ ತಥೈವ ಚ ।
ವಾಯವ್ಯಾ ವಾರುಣೀ ಚೈವ ಕೌಬೇರೀ ಭಾರ್ಗವೀ ತಥಾ ॥ ೫ ॥

ಪ್ರಾಜಾಪತ್ಯಾ ತಥಾ ತ್ವಾಷ್ಟ್ರೀ ಕೌಮಾರೀ ವಹ್ನಿದೇವತಾ ।
ಮಾರುದ್ಗಣೀ ಚ ಗಾಂಧಾರೀ ಶಾಂತಿರ್ನ್ಯೈರುದತೀ ತಥಾ ॥ ೬ ॥

ಶಾಂತಿರಾಂಗಿರಸೀ ಯಾಮ್ಯಾ ಪಾರ್ಥಿವೀ ಚ ಭೃಗೂತ್ತಮ ।
ಏತಾಸ್ತು ಶಾಂತಯಃ ಪ್ರೋಕ್ತಾಃ ಸರ್ವಕರ್ಮಹಿತಾಃ ಸದಾ ॥ ೭ ॥

ಯಸ್ಮಾತ್ವಮ್ಮೃತ್ಯುರಿತೀತ್ಯೇತಜ್ಜಪ್ತ್ವಂ ಮೃತ್ಯುವಿನಾಶನಂ ।
ಹುತ್ವಾ ಚ ಮಾತೃನಾಮಾನಿ ಕಾಮಾನೇವಮವಾಪ್ನುಯಾತ್ ॥ ೮ ॥

ಸುಪರ್ಣಸ್ತ್ವೇತಿ ಹುತ್ವಾ ಚ ಭುಜಗೈರ್ನೈವ ಬಾಧ್ಯತೇ ।
ಯಸ್ಯೇದಂ ಭೂಮಿಮಿತಿ ಚ ಭೂಮಿಕಾಮೋ ಜಪೇತ್ಸದಾ ॥ ೯ ॥

ಪೃಥಿವ್ಯಾಮುತ್ತಮೋಽಸೀತಿ ಹುತಂ ಶ್ರೈಷ್ಠ್ಯಪ್ರದಂ ಸದಾ ।
ಔದುಂಬರಂ ಯೋ ನ ಇತಿ ತಥಾ ವೀರ್ಯವಿವರ್ಧನಂ ॥ ೧೦ ॥

---

೪–೭. ಹದಿನೆಂಟು ಶಾಂತಿಗಳಲ್ಲಿ ಈ ಹತ್ತು ಗಣಗಳು ಮಾತ್ರವೇ ಕ್ರಮವಾಗಿ ಹೋಮಮಾಡಲ್ಪಡತಕ್ಕವು. ವೈಷ್ಣವೀ, ಐಂದ್ರೀ, ಬ್ರಾಹ್ಮೀ, ರೌದ್ರೀ, ವಾಯವ್ಯಾ, ವಾರುಣೀ, ಕೌಬೇರೀ, ಇಲ್ಲಿ ಗಣಗಳ ಸಂಖ್ಯೆಯನ್ನೂ ಪೂರ್ತಿಯಾಗಿ ಪರಿಗಣಿಸಿಲ್ಲ. ಇದನ್ನು 132 ನೆಯ ಅಧ್ಯಾಯದಲ್ಲಿ ಎಲ್ಲವನ್ನೂ ನಿರ್ದೇಶ ಮಾಡಿರುವರು.

೮–೧೦. ಯಸ್ಮಾತ್ವ ಮೃತ್ಯುಃ ಎಂಬ ಮಂತ್ರವನ್ನು ಜಪಿಸಿದುದೇ ಆದರೆ ಮೃತ್ಯುಭಯದಿಂದ ಪಾರಾಗುತ್ತಾನೆ. ಅಷ್ಟಮಾತೃಕೆಗಳ ಹೆಸರಿನಿಂದ ಹೋಮಮಾಡಿದವನು ತನ್ನ ಮನೋರಥಗಳನ್ನು ಹೊಂದುತ್ತಾನೆ. ಸುಪರ್ಣಸ್ತು ಎಂಬ ಮಂತ್ರದಿಂದ ಹೋಮಿಸಿದವನು ಸರ್ಪಗಳ ಬಾಧೆಯಿಂದ ಪಾರಾಗುತ್ತಾನೆ. ಯಸ್ಯೇದಂ ಭೂಮಿಂ ಎಂಬ ಮಂತ್ರವನ್ನು ಭೂಮಿಯನ್ನು ಅಪೇಕ್ಷಿಸುವವನು ಯಾವಾಗಲೂ ಜಪಿಸಬೇಕು. ಪೃಥಿವ್ಯಾಮುತ್ತಮೋಽಸಿ ಎಂಬ ಮಂತ್ರದಿಂದ ಮಾಡುವ ಹೋಮವು ಯಾವಾಗಲೂ ಶ್ರೇಷ್ಠತೆಯನ್ನು ಉಂಟುಮಾಡುತ್ತದೆ. ಔದುಂಬರಂ ಯೋನಃ ಎಂಬ ಮಂತ್ರವು ವೀರ್ಯವರ್ಧಕವೆಂದು ಹೇಳಲ್ಪಟ್ಟಿದೆ.

ಇಂದ್ರೇಣದತ್ತಮಿತ್ಯೇತತ್ಸರ್ವಬಾಧಾವಿನಾಶನಂ ।
ಹಿರಣ್ಯವರ್ಣ ಇತಿ ಚ ಸ್ನಾನಂ ಪಾಪಹರಂ ಭವೇತ್ ॥ ೧೧ ॥

ಅಸಿತಸ್ಯೇತಿ ಸರ್ವಾಣಿ ವಿಷಘ್ನಾನಿ ಭೃಗೂತ್ತಮ ।
ಸಾರಸ್ವತೀತಿ ಮಂತ್ರಾಂಶ್ಚ ವಿಷಘ್ನಾನ್ನಿರ್ದಿಶೇದ್ಬುಧಃ ॥ ೧೨ ॥

ಶರಭಾದೀನಿ ಸರ್ವಾಣಿ ಪಿಶಾಚಕ್ಷಪಣಾನಿ ಚ ।
ಯಮಸ್ಯ ಲೋಕಾದಿತ್ಯೇತದ್ದುಃಸ್ವಪ್ನಶಮನಂ ಪರಂ ॥ ೧೩ ॥

ಅಗ್ನೇರ್ವಇತಿ ಚಾಪ್ಯೇತತ್ಕಥಿತಂ ಮನ್ಯುನಾಶನಂ ।
ಊರ್ಧ್ವೋರ್ಧ್ವೋ ಭವತಿ ವಿಜ್ಞೇಯಃ ಕೃತ್ವಾ ಸ್ಥಾನಕರಃ ಪರಃ ॥ ೧೪ ॥

ಇಂದ್ರಂ ವಯಂ ವಣಿಜಮಿತಿ ಪಣ್ಯಲಾಭಕರಂ ಪರಂ ।
ಕಾಮೋ ಮೇ ರಾಜ್ಞೀತಿ ಹುತಂ ಸ್ತ್ರೀಣಾಂ ಸೌಭಾಗ್ಯವರ್ಧನಂ ॥ ೧೫ ॥

---

೧೧–೧೨. ಇಂದ್ರೇಣ ದತ್ತಂ ಎಂಬ ಮಂತ್ರವು ಎಲ್ಲಾ ವಿಧವಾದ ಪೀಡೆಗಳಿಗೂ ನಾಶಕವಾಗುತ್ತದೆ ಹಿರಣ್ಯವರ್ಣಃ ಎಂಬ ಮಂತ್ರದಿಂದ ಸ್ನಾನಮಾಡಿದಲ್ಲಿ ಪಾಪನಾಶವುಂಟಾಗುತ್ತದೆ ಅಸಿತಸ್ಯ ಎಂಬ ಎಲ್ಲಾ ಮಂತ್ರಗಳೂ ವಿಷನಾಶಕಗಳಾಗುತ್ತವೆ. ಸಾರಸ್ವತೀ ಎಂಬ ಮಂತ್ರಗಳನ್ನೂ ಸಹ ವಿಷನಾಶಕ್ಕಾಗಿ ಪಂಡಿತನಾದವನು ಯಾವಾಗಲೂ ಉಪಯೋಗಿಸುತ್ತಿರಬೇಕು. ಶರಭಾದಿ ಮಂತ್ರಗಳು ಪಿಶಾಚಬಾಧೆಗೆ ನಾಶಕಗಳಾಗುತ್ತವೆ.

೧೩–೧೫. ಯಮಸ್ಯ ಲೋಕಾತ್ ಎಂಬ ಮಂತ್ರವು ದುಃಸ್ವಪ್ನನಾಶಕವೆಂದು ಹೇಳಲ್ಪಟ್ಟಿದೆ. ಅಗ್ನೇರ್ವಃ ಎಂಬ ಮಂತ್ರವು ಶೋಕನಾಶಕವೆಂದೂ ಹೇಳಲ್ಪಟ್ಟಿದೆ. ಉರ್ಧ್ವೋರ್ಧ್ವೋಭವತಿ ಎಂಬ ಮಂತ್ರವು ಉತ್ತಮಸ್ಥಾನಪ್ರಾಪ್ತಿಗೆ ಸಾಧಕವಾಗುತ್ತದೆ. ಇಂದ್ರಂ ವಯಂ ವಣಿಜಂ ಎಂಬ ಮಂತ್ರವು ವ್ಯಾಪಾರದಲ್ಲಿ ಬಹುಮಟ್ಟಿಗೂ ಲಾಭಕರವೆಂದು ಹೇಳಲ್ಪಟ್ಟಿದೆ. ಕಾಮೋ ಮೇ ರಾಜ್ಞಿ ಎಂಬ ಮಂತ್ರದಿಂದ ಮಾಡಿದ ಹೋಮವು ಸ್ತ್ರೀಯರಿಗೆ ಸೌಭಾಗ್ಯವರ್ಧಕವೆಂದು ಹೇಳಲಾಗಿದೆ.

ಭದ್ರಾಯಕರ್ಣಮಿತ್ಯೇತತ್ಕರ್ಣಪ್ರಸ್ಯಂದನೇ ಜಪೇತ್ ।
ಭದ್ರಾ ಸಾಕ್ಷಿವಧೇ ಜಾತಾ ಕರ್ಣಪ್ರಸ್ಯಂದನೇ ತಥಾ ॥ ೧೬ ॥

ತುಭ್ಯಮೇವಾಜಿರಿತಿ ಆಯುಷ್ಯಂ ತು ಹುತಂ ಭವೇತ್ ।
ಆಯಾತುಪಿತಮಿತ್ಯೇತನ್ಮಿತ್ರಲಬ್ಧಿಕರಂ ಹುತಂ ॥ ೧೭ ॥

ಆಶಾಸಾನಮಿದಂಜನಾ ಮಿಶ್ರಧಾನ್ಯೇನ ಹೋಮಯೇತ್ ।
ಆಧಿಪತ್ಯಮವಾಪ್ನೋತಿ ಸರ್ವತ್ರ ಮನುಜೋತ್ತಮ ॥ ೧೮ ॥

ಅಗ್ನಿರೀಶೇಭಿರಿತ್ಯೇತದ್ಗವಾಂ ವೃದ್ಧಿಕರಂ ಪರಂ ।
ದ್ವಾದಶಾಹಂ ತು ಜುಹುಯಾತ್ಪರಾಕೇಣ ವಿಶೇಷತಃ ॥ ೧೯ ॥

ಶಾತೋ ಹವಿರಿತೀತ್ಯೇತತ್ ಗ್ರಾಮಸ್ವಾಸ್ಥ್ಯಕರಂ ಭವೇತ್ ।
ತಸ್ಮಾದ್ಗ್ರಾಮಾನ್ಮೃದಾ ಕೃತ್ವಾ ವೇದಿಸಾಮ್ಯಂ ಸಮಶ್ನುತೇ ॥ ೨೦ ॥

ವಿಧಾಯಸ್ವೇತಿ ಸರ್ವಾಣಿ ರಾಷ್ಟ್ರಸ್ವೀಕರಣಾನಿ ತು ।
ತ್ರಿಭ್ಯೋ ಭದ್ರೇಭ್ಯ ಇತ್ಯೇತದ್ವಾಸ್ತೋಷ್ಪತಮುದಾಹೃತಂ ॥ ೨೧ ॥

೧೬–೧೮ ಭದ್ರಾಯಕರ್ಣಂ ಎಂಬ ಮಂತ್ರವನ್ನು ಕಿವಿಯಿಂದ ಸ್ರವಿಸುವ ವ್ಯಾಧಿನಿವೃತ್ತಿಗಾಗಿ ಜಪಿಸಬೇಕು. ಭದ್ರಸಾಕ್ಷಿವಧೇ ಜಾತಾ ಎಂಬ ಮಂತ್ರವೂ ಅದೇ ಕಾರ್ಯದಲ್ಲಿ ವಿನಿಯೋಗಿಸಲಾಗುವುದು. ತುಭ್ಯಮೇವಾಜಿಃ ಎಂಬ ಮಂತ್ರದ ಹೋಮವು ಆಯುಷ್ಯಪ್ರದವಾದದ್ದು. ಆಯಾತುಪಿತಂ ಎಂಬ ಮಂತ್ರದ ಹೋಮವು ಮಿತ್ರಲಾಭಕ್ಕೆ ಕಾರಣವಾಗುವುದು. ಆಶಾಸಾನ ಮಿದಂ ಜನಾಃ ಎಂಬ ಮಂತ್ರದಿಂದ ಮಿಶ್ರಧಾನ್ಯವನ್ನು ಹೋಮಿಸಬೇಕು. ಹೀಗೆ ಮಾಡಿದವನು ಎಲ್ಲಾ ದೇಶಗಳಲ್ಲಿಯೂ ಆಧಿಪತ್ಯವನ್ನು ಹೊಂದುತ್ತಾನೆ.

೧೯–೨೧. ಅಗ್ನಿರೀಶೇಭಿಃ ಎಂಬ ಮಂತ್ರವು ಗೋವುಗಳಿಗೆ ಅಭಿವೃದ್ಧಿಪ್ರದ. ಶಾತೋಹವಿಃ ಎಂಬ ಮಂತ್ರದಿಂದ ಪರಾಕವೆಂಬ ತಪಸ್ಸಿನಲ್ಲಿದ್ದು ಹನ್ನೆರಡುದಿನ ಹೋಮಮಾಡಬೇಕು. ಇದು ಗ್ರಾಮದ ಸ್ವಸ್ಥತಿಗೆ ಕಾರಣವಾಗುತ್ತದೆ, ಅದೇ ಮಂತ್ರದಿಂದ ಮಣ್ಣಿನಲ್ಲಿ ಗ್ರಾಮವನ್ನು ಮಾಡಿದಲ್ಲಿ ವೇದಿನಿರ್ಮಾಣದಿಂದ ಉಂಟಾ

ಧ್ರುವಂಧ್ರುವೇಣೇತಿ ಹುತಂ ಸ್ಥಾನಲಾಭಕರಂ ಭವೇತ್ ।
ಅಚ್ಯುತಾಪ್ರೋಸ್ತಥಾ ರಾಮ ಕಥಿತಂ ಸ್ಥಾನಲಾಭದಂ ॥ ೨೨ ॥

ಪಯೋದೇವೇಷ್ವಿತಿ ಹುತಂ ರಾಯಸ್ಪೋಷಕರಂ ಪರಂ ।
ಯುನಕ್ತಸೀರೇತಿ ಶುನಾ ಕೃಷಿಲಾಭಕರಂ ಭವೇತ್ ॥ ೨೩ ॥

ಅಯಂತೇ ಯೋನಿರಿತ್ಯೇತತ್ಪುತ್ರಲಾಭಕರಂ ಭವೇತ್ ।
ಶುನೇ ವತ್ಸಾ ತಥಾಹ್ಯೇತದ್ಗವಾಂ ವೃದ್ಧಿಕರಂ ಹುತಂ ॥ ೨೪ ॥

1.......... ಮೇತಿ ಕಥಿತಂ ಸರ್ವತ್ರ ಶ್ರೈಷ್ಠ್ಯಕಾರಕಂ ।
ಯುದಗ್ನ ಇತಿ ಚಾಪ್ಯೇತದ್ಬಂಧನಾನ್ಮೋಕ್ಷಕಾರಕಂ ॥ ೨೫ ॥

ಯೋನಸ್ವ ಇತಿ ಚಾಪ್ಯೇತಚ್ಛತ್ರುನಾಶಕರಂ ಪರಂ ।
ಸಪನ್ನಹನ್ನಿತಿ ತಥಾ ನಾತ್ರ ಕಾರ್ಯಾ ವಿಚಾರಣಾ ॥ ೨೬ ॥

---

ಗುವ ಪುಣ್ಯವು ಲಭಿಸುತ್ತದೆ. ವಿಧಾಯಸ್ವ ಎಂಬ ಎಲ್ಲಾ ಮಂತ್ರಗಳೂ ರಾಷ್ಟ್ರ ಸ್ವೀಕಾರದಲ್ಲಿ ಸಾಧನಗಳಾಗುತ್ತವೆ ತ್ರಿಭ್ಯೋ ಭದ್ರೇಭ್ಯಃ ಎಂಬ ಮಂತ್ರವು ಗೃಹಸಂಬಂಧಿಯಾದ ಕಾರ್ಯಗಳಲ್ಲಿ ವಿನಿಯೋಗಿಸಲ್ಪಡತಕ್ಕದ್ದು.

೨೨–೨೪. ಧ್ರುವಂ ಧ್ರುವೇಣ ಎಂಬ ಮಂತ್ರದ ಹೋಮವು ಸ್ಥಾನಲಾಭಕ್ಕೆ ಸಾಧನವಾಗುತ್ತದೆ. ಅಚ್ಯುತಾಪೋಃ ಎಂಬ ಮಂತ್ರವೂ ಸಹ ಹಾಗೆಯೇ ಸ್ಥಾನ ಲಾಭಕ್ಕೆ ಕಾರಣವಾಗುತ್ತದೆ. ಪಯೋದೇವೇಷು ಎಂಬ ಮಂತ್ರದ ಹೋಮವು ಬಹುಮಟ್ಟಿಗೂ ದ್ರವ್ಯವೃದ್ಧಿಗೆ ಕಾರಣವಾಗುತ್ತದೆ. ಯುನಕ್ತಸೀರಾ ಎಂಬ ಮಂತ್ರವು ನಾಯಿನಿಂದ ಕೃಷಿಯಲ್ಲಿ ಹೊಂದಬಹುದಾದ ಲಾಭಕ್ಕೆ ಸಾಧನವಾಗುತ್ತದೆ ಅಯಂ ತೇ ಯೋನಿಃ ಎಂಬ ಮಂತ್ರವು ಪುತ್ರಲಾಭಕ್ಕೆ ಸಾಧನವಾಗುತ್ತದೆ. ಶುನೇ ವತ್ಸಾ ಎಂಬ ಮಂತ್ರವು ಹೋಮದಿಂದ ಗೋವುಗಳ ವೃದ್ಧಿಗೆ ಕಾರಣವಾಗುತ್ತದೆ.

೨೫–೨೬. ಯುದಗ್ನ ಎಂಬ ಮಂತ್ರವು ಬಂಧನದಲ್ಲಿರುವವನಿಗೆ ಬಂಧ ವಿಮುಕ್ತಿಗೆ ಕಾರಣವಾಗುತ್ತದೆ ಯೋನಸ್ವ ಎಂಬ ಮಂತ್ರವು ಶತ್ರುನಾಶಕ್ಕೆ ಸಾಧಕವಾಗುತ್ತದೆ. ಇದರಲ್ಲಿ ವಿಚಾರ ಮಾಡಬೇಕಾದುದಿಲ್ಲ.

---

1 ಇಲ್ಲಿ ಮೂಲಪುಸ್ತಕದಲ್ಲಿ ಗ್ರಂಥಪಾತವಿದೆ.

(1ತ್ವಮುತ್ವಮುಮಿತೀತ್ಯೇತದ್ಯಶಸೋ ವರ್ಧನಂ ಪರಂ ।
ಯಥಾ ವೃಷಿಮತೀತ್ಯೇತತ್ ಸ್ತ್ರೀಣಾಂ ಸೌಭಾಗ್ಯವರ್ಧನಂ ॥ ೨೭ ॥

ಆನೋಅಗ್ನ ಇತ್ಯೇತಚ್ಚ ಕಥಿತಂ ಪತಿಲಾಭದಂ ।
ಯೇನವೇಹೇತಿ ಮಾಂ ಚೈವ ಗರ್ಭಲಾಭಕರಂ ಭವೇತ್ ॥ ೨೮ ॥

ಇಮಂತಪಸ್ವಿನ್ನಿತಿ ತಥಾ ಭವೇತ್ಸೌಭಾಗ್ಯವರ್ಧನಂ ।
ಯತ್ಪೃಥಿವ್ಯಾಮನಾವೃತ್ತಂ ಹುತಮೇತದ್ಯಥಾವಿಧಿ ॥ ೨೯ ॥

ಕೃತ್ವಾತುಶಂಸನಂ ಜ್ಞೇಯಂ ನಾತ್ರ ಕಾರ್ಯಾ ವಿಚಾರಣಾ ।
॥ ೩೦ ॥

ಶಿವಂಶಿವಾಭಿರಿತ್ಯೇತದ್ಭವೇತ್ ಶ್ರೇಯಸ್ಕರಂ ಪರಂ ।
ದೂತ್ಯಾದೂಷಣಮಿತ್ಯೇತತ್ ಕೃತ್ಯಾ ದೂಷಣಮುಚ್ಯತೇ ॥ ೩೧ ॥

---

೨೭-೩೦. ತ್ವಮುತ್ವಮುಮಿತಿ ಎಂಬ ಮಂತ್ರವು ಯಶಸ್ಸಿನ ಅಭಿವೃದ್ಧಿಗೆ ಕಾರಣವಾಗುತ್ತದೆ. ಯಥಾವೃಷಿಮತೀ ಎಂಬ ಮಂತ್ರವು ಸ್ತ್ರೀಯರ ಸೌಭಾಗ್ಯಾಭಿವೃದ್ಧಿಗೆ ಸಾಧಕವಾಗುತ್ತದೆ. ಆನೋ ಅಗ್ನೆ ಎಂಬ ಮಂತ್ರವು ಪತಿಲಾಭಕ್ಕೆ ಸಾಧಕವಾಗುತ್ತದೆ ಎಂದು ಹೇಳಲಾಗಿದೆ. ಯೇನವೇಹೇತಿಮಾಂ ಎಂಬ ಮಂತ್ರವು ಗರ್ಭಲಾಭಕ್ಕೆ ಕಾರಣವಾಗುತ್ತದೆ. ಇಮಂ ತಪಸ್ವಿ ಎಂಬ ಮಂತ್ರ ಸಹ ಸೌಭಾಗ್ಯಪ್ರದವಾಗುತ್ತದೆ. ಇಷ್ಟವಸ್ತುವಿಷಯದಲ್ಲಿ ಸ್ತೋತ್ರಮಾಡಿ ಯತ್ಪೃಥಿವ್ಯಾಮನಾವೃತ್ತಂ ಎಂಬ ಮಂತ್ರದಿಂದ ಯಥಾವಿಧಿಯಾಗಿ ಹೋಮಮಾಡಿದಲ್ಲಿ ಇದೂ ಸೌಭಾಗ್ಯಪ್ರದವಾಗುತ್ತದೆ. ಈ ವಿಷಯದಲ್ಲಿ ವಿಚಾರಮಾಡಬೇಕಾದುದಿಲ್ಲ.

೩೧-೩೨. ಶಿವಂ ಶಿವಾಭಿಃ ಎಂಬ ಮಂತ್ರವು ಬಹಳ ಮಟ್ಟಿಗೂ ಶ್ರೇಯಸ್ಕರವಾದುದು. ದೂತ್ಯಾ ದೂಷಣಂ ಎಂಬ ಮಂತ್ರವು ಮಾಟಕೂಟಗಳಿಗೆ ಪ್ರತೀಕಾರವೆಂದು ಹೇಳಲ್ಪಟ್ಟಿದೆ. ಬೃಹಸ್ಪತಿಃ ಪರಿಪಾತು ಎಂಬ ಮಂತ್ರವೂ, ಮನೋವಿವಿನ್ನ

---

1 ಈ ಗ್ರಂಥಭಾಗವು ಕುಂಡಲಿಯಲ್ಲಿ ಸೇರಿದೆ. ಗ್ರಂಥಪಾತವೂ ಇದೆ.

ಬೃಹಸ್ಪತಿಃ ಪರಿಪಾತು ಪಥಿ ಸ್ವಸ್ತ್ಯಯನಂ ಭವೇತ್ ।
ಮನೋವಿವಿನ್ನಭಯದಂ ಪಥಿ ಸ್ವಸ್ತ್ಯಯನಂ ಭವೇತ್ ॥ ೩೨ ॥

ಅಯನ್ನೋ ಅಗ್ನಿರಧ್ಯಕ್ಷೋ ಭವೇದಗ್ನಿಪ್ರಸಾದತಃ ।
ಸಂವತ್ಸರಂ ತು ಶಿರಸಾ ಧಾರಯೇದ್ಯೋ ಹುತಾಶನಂ ॥ ೩೩ ॥

ಮಂತ್ರಮೇತಜ್ಜಪೇನ್ನಿತ್ಯಂ ಆಗ್ನೇಯಾಶಾಮುಖಸ್ಥಿತಃ ।
ಅನಗ್ನಿಜ್ವಲನಂ ಕುರ್ಯಾದ್ರಾಮ ಸಂವತ್ಸರೇ ಗತೇ ॥ ೩೪ ॥

ದೂತ್ಯಾ ದೂತಿರಸೀತ್ಯೇತಜ್ಜಪೇನ್ಮಂತ್ರಮನುತ್ತಮಂ ।
ಕುರ್ಯಾತ್ಪ್ರತಿಸರಾಬಂಧಂ ಸರ್ವದೋಷನಿಬರ್ಹಣಂ ॥ ೩೫ ॥

ಪ್ರಾಣಸೂಕ್ತಂ ಚ ಕಥಿತಂ ತಥಾ ಪ್ರಾಣವಿವರ್ಧನಂ ।
ಮುಂಚಾಮಿತ್ವೇತಿ ಕಥಿತಮಪಮೃತ್ಯುವಿಮೋಕ್ಷಣಂ ॥ ೩೬ ॥

---

ಭಯದಂ ಎಂಬ ಮಂತ್ರವೂ ಸಹ ಮಾರ್ಗದಲ್ಲಿರುವವನಿಗೆ ಸ್ವಸ್ತ್ಯಯನ ರೂಪವಾಗಿದೆ. ಅಯನ್ನೋ ಅಗ್ನಿಃ ಎಂಬ ಮಂತ್ರದಿಂದ ಅಗ್ನಿಯ ಅನುಗ್ರಹಹೊಂದಿದವನು ಅಧ್ಯಕ್ಷನಾಗುತ್ತಾನೆ.

೩೩–೩೫. ಯಾವನು ಅಗ್ನಿಯ ಅನುಗ್ರಹವನ್ನು ಹೊಂದಿ ತಲೆಯ ಮೇಲೆಯೇ ಅಗ್ನಿಯನ್ನು ಧರಿಸಿ, ಆಗ್ನೇಯದಿಕ್ಕಿಗೆ ಅಭಿಮುಖನಾಗಿ ನಿಂತು, ನಿತ್ಯವೂ ಈ ಮಂತ್ರವನ್ನು ಜಪಿಸುತ್ತಾನೆಯೋ ಒಂದು ವರ್ಷ ಅವನು ಹೀಗೆ ಜಪಿಸಿದಲ್ಲಿ ಅಗ್ನಿ ಇಲ್ಲದೆಯೇ ಜ್ವಾಲೆಯನ್ನು ಹೊರಗೆಡಹಲು ಸಮರ್ಥನಾಗುತ್ತಾನೆ. ದೂತ್ಯಾದೂತಿರಸಿ ಎಂಬ ಮಂತ್ರವನ್ನು ಕಂಕಣಬಂಧದೊಡನೆ ಜಪಿಸಬೇಕು. ಇದು ಸರ್ವದೋಷನಾಶಕವಾದ ಉತ್ತಮವಾದ ಮಂತ್ರ.

೩೬–೩೭. ಪ್ರಾಣಸೂಕ್ತವೂ ಸಹ ಪ್ರಾಣವೃದ್ಧಿಗೆ ಕಾರಣವೆಂದು ಹೇಳಲ್ಪಟ್ಟಿದೆ. ಮುಂಚಾಮಿತ್ವಾ ಎಂಬ ಮಂತ್ರವೂ ಸಹ ಅಪಮೃತ್ಯುನಾಶಕವೆಂದು ಹೇಳಲ್ಪಟ್ಟಿದೆ. ಅಥರ್ವ ಶಿರಸ್ಸನ್ನು ಅಧ್ಯಯನಮಾಡಿದವನು ಸಮಸ್ತ ಪಾಪ

**ಅಥರ್ವಶಿರಸೋऽಧ್ಯೇತಾ ಸರ್ವಪಾಪೈಃ ಪ್ರಮುಚ್ಯತೇ ।**
**ಪರಮಂ ಪಾವನಂ ತದ್ಧಿ ಸರ್ವಕಲ್ಮಷನಾಶನಂ ॥ ೩೭ ॥**

**ಏವಮೇತೇ ಶುಭಾ ಮಂತ್ರಾಃ ಪ್ರತಿವೇದಂ ಮಯಾ ತವ ।**
**ಸಮಾಸಾತ್ಕಥಿತಾ ರಾಮ ಸಮುದ್ಧೃತ್ಯ ಪ್ರಧಾನತಃ ॥ ೩೮ ॥**

**ಏಕೈಕಸ್ಯ ಚ ಮಂತ್ರಸ್ಯ ವಿನಿಯೋಗಾಃ ಸಹಸ್ರಶಃ ।**
**ಕಥಿತಾ ಭೃಗುಶಾರ್ದೂಲ ಪುರಾಣೈಃ ಸುಮಹಾತ್ಮಭಿಃ ॥ ೩೯ ॥**

**ನ ತೇ ಶಕ್ಯಾ ಮಹಾಭಾಗ ವಕ್ತುಂ ವರ್ಷಶತೈರಪಿ ।**
**ಪ್ರಾಧಾನ್ಯೇನ ತು ಮಂತ್ರಾಣಾಂ ಕಿಂಚಿತ್ಕರ್ಮ ತವೇರಿತಂ ॥ ೪೦ ॥**

**ಹೋಮೋ ಯತ್ರ ನ ನಿರ್ದಿಷ್ಟಂ ಮಯಾ ದ್ರವ್ಯಂ ಪುರಾ ತವ ।**
**ಹವೀಂಷಿ ತತ್ರ ವಕ್ಷ್ಯಾಮಿ ತಾನಿ ಮೇ ಗದತಃ ಶೃಣು ॥ ೪೧ ॥**

---

ಗಳಿದಲೂ ಮುಕ್ತನಾಗುತ್ತಾನೆ. ಸರ್ವಪಾಪನಾಶಕವಾದ ಆ ಮಂತ್ರವು ಪರಮ ಪಾವನವೆಂದು ಹೇಳಲಾಗಿದೆ.

೩೮–೩೯. ಎಲ್ಲಾ ವೇದಗಳಲ್ಲಿಯೂ ಇರುವ ಶುಭಕರವಾದ ಈ ಮಂತ್ರಗಳನ್ನು ನಿನಗೆ ಸಂಕ್ಷೇಪವಾಗಿ ಈ ರೀತಿ ಹೇಳಿರುವೆನು. ಅದರಲ್ಲೂ ಮುಖ್ಯ ಮುಖ್ಯವಾದವುಗಳನ್ನೇ ಎತ್ತಿ ಹೇಳಿರುವೆನು. ಈ ಮಂತ್ರಗಳಲ್ಲಿ ಒಂದೊಂದಕ್ಕೂ ವಿನಿಯೋಗಕ್ರಮವು ಸಾವಿರಾರು ವಿಧವಾಗಿರುತ್ತದೆ. ಪುರಾತನರಾದ ಮಹಾತ್ಮರು ಎಲ್ಲವನ್ನೂ ವಿಸ್ತಾರವಾಗಿ ಹೇಳಿರುವರು.

೪೦–೪೧. ಎಲೈ ಮಹಾತ್ಮನೇ ಅವೆಲ್ಲವನ್ನೂ ಹೇಳಲು ನೂರುವರ್ಷವಾದರೂ ಸಾಧ್ಯವಿಲ್ಲ. ಮುಖ್ಯವಾದದ್ದನ್ನು ಮಾತ್ರ ಗಮನಿಸಿ ಕೆಲವು ಕರ್ಮಗಳನ್ನು ಮಾತ್ರ ನಿನಗೆ ಹೇಳಿರುವೆನು. ಹಿಂದೆ ನಾನು ಹೇಳಿರುವ ಕರ್ಮಗಳಲ್ಲಿ ಹೋಮಕ್ಕೆ ಸಾಧನವಾದ ದ್ರವ್ಯವನ್ನು ಎಲ್ಲಿ ಹೇಳಿರುವುದಿಲ್ಲವೋ ಆ ಹವಿಸ್ಸುಗಳನ್ನು ಈಗ ಹೇಳುತ್ತೇನೆ. ಅವನ್ನೂ ನನ್ನಿಂದ ಕೇಳಿ ತಿಳಿದುಕೋ.

ವೃಕ್ಷಾಣಾಂ ಯಜ್ಞಿಯಾನಾಂ ತು ಸಮಿಧಃ ಪ್ರಥಮಂ ಹವಿಃ ।
ಆಜ್ಯಂ ಚ ವ್ರೀಹಯಶ್ಚೈವ ತಥಾ ವೈ ಗೌರಸರ್ಷಪಾಃ ॥ ೪೨ ॥

ಅಕ್ಷತಾನಿ ತಿಲಾಶ್ಚೈವ ದಧಿ ಕ್ಷೀರಂ ಚ ಭಾರ್ಗವ ।
ದರ್ಭಾಸ್ತಥೈವ ದೂರ್ವಾಶ್ಚ ಬಿಲ್ವಾನಿ ಕಮಲಾನಿ ಚ ॥ ೪೩ ॥

ಶಾಂತಿಪುಷ್ಟಿಕರಾಣ್ಯಾಹುಃ ದ್ರವ್ಯಾಣ್ಯೇತಾನಿ ಭಾರ್ಗವ ।
ತೈಲೇಂಧನಾನಿ ಧರ್ಮಜ್ಞ ರಾಜಿಕಾಂ ರುಧಿರಂ ವಿಷಂ ॥ ೪೪ ॥

ಸಮಿಧಃ ಕಂಟಕೋಪೇತಾಃ ಅಭಿಚಾರೇಷು ಯೋಜಯೇತ್ ।
ಆರ್ಷಂ ವೈ ದೈವತಂ ಛಂದಸ್ತ್ವವಿಜ್ಞಾಯ ಭೃಗೂತ್ತಮ ॥ ೪೫ ॥

ಮಂತ್ರಸ್ಯ ತೇನ ಮಂತ್ರೇಣ ಜಪ್ಯಹೋಮೌ ನ ಕಾರಯೇತ್ ।
ಛಂದಸಿ ಬ್ರಾಹ್ಮಣೇ ಸೂಕ್ತೇ ಯದವ್ಯಕ್ತಂ ಪ್ರದೃಶ್ಯತೇ ॥ ೪೬ ॥

---

೪೨–೪೪ ಯಜ್ಞಾರ್ಹವಾದ ಪಲಾಶವೇ ಮೊದಲಾದ ಮರಗಳ ಸಮಿತ್ತುಗಳು ಮುಖ್ಯವಾದ ಹೋಮದ್ರವ್ಯಗಳು ಬಿಳಿಯ ಸಾಸವೆ, ಅಕ್ಷತೆ, ಎಳ್ಳು, ಮೊಸರು, ಹಾಲು, ದರ್ಭೆಗಳು. ಗರಿಕೆಗಳು, ಬಿಲ್ವಪತ್ರ, ಕಮಲ ಇವುಗಳು ಶಾಂತಿಪ್ರದಗಳೆಂದೂ, ಪುಷ್ಟಿಕರಗಳೆಂದೂ ಹೇಳಲ್ಪಟ್ಟಿವೆ. ತೈಲ, ಸೌದೆ, ಕರಿಯ ಸಾಸವೆ, ರಕ್ತ, ವಿಷ, ಮುಳ್ಳಿನ ಮರದ ಸಮಿತ್ತುಗಳು ಇವುಗಳನ್ನು ಅಭಿಚಾರಕರ್ಮಗಳಲ್ಲಿ ಉಪಯೋಗಿಸಬೇಕು.

೪೫–೪೬. ಮಂತ್ರಗಳ ಜಪವನ್ನಾಗಲಿ, ಆ ಮಂತ್ರದಿಂದ ಹೋಮವನ್ನಾಗಲಿ ಮಾಡುವಾಗ ಆಯಾಯ ಮಂತ್ರದ ಋಷಿ, ದೇವತೆ, ಛಂದಸ್ಸು ಇವನ್ನು ತಿಳಿಯದೆ ಜಪಹೋಮಾದಿಗಳನ್ನು ಮಾಡಕೂಡದು. ಛಂದಸ್ಸು ಬ್ರಾಹ್ಮಣದ ಸೂಕ್ತಗಳಲ್ಲಿ ವ್ಯಕ್ತವಾಗಿ ತೋರದಿದ್ದಲ್ಲಿ ಪಂಡಿತರಲ್ಲಿ ವಿಚಾರಮಾಡಿ ನಿಶ್ಚಯಮಾಡಿಕೊಂಡು ಆ ಮಂತ್ರವನ್ನು ಆಯಾಯ ಕರ್ಮಗಳಲ್ಲಿ ವಿನಿಯೋಗಿಸಬೇಕು.

ವಿದ್ವದ್ಭಿಃ ಸಹ ನಿಶ್ಚಿತ್ಯ ತದ್ಯಜ್ಞಮವತಾರಯೇತ್ ।
ಸಂಭಾರಾ ಯೇ ಯಥಾ ಯತ್ರ ಯಾನಿ ದ್ರವ್ಯಾಣಿ ಯೋ ವಿಧಿಃ ॥ ೪೭ ॥

ಶಾಖಾಂ ಪ್ರತಿ ತಥಾ ತತ್ರ ತತ್ಪ್ರಮಾಣಮಿತಿ ಸ್ಥಿತಿಃ ।
ಯಃ ಸ್ವಸೂತ್ರಮತಿಕ್ರಮ್ಯ ಪರಸೂತ್ರೇಣ ವರ್ತತೇ ॥ ೪೮ ॥

ಅಪ್ರಮಾಣಮೃಷಿಂ ಕೃತ್ವಾ ಸೋಽಪ್ಯಧರ್ಮೇಣ ಯುಜ್ಯತೇ ।
ತಸ್ಮಾತ್ಸರ್ವಪ್ರಯತ್ನೇನ ಸ್ವಸೂತ್ರಂ ನ ವಿಲಂಘಯೇತ್ ॥ ೪೯ ॥

ಪ್ರಾಕ್ತಂತ್ರೋತ್ತರತಂತ್ರೇ ದ್ವೇ ಸ್ವಶಾಖಾಪ್ರತ್ಯಯಾ ದ್ವಿಜ ।
ಸರ್ವಕರ್ಮಸು ಕರ್ತವ್ಯೇ ಮಧ್ಯೇ ಕರ್ಮ ವಿಧೀಯತೇ ॥ ೫೦ ॥

ಆಥರ್ವಣೋಽಯಂ ಕಥಿತೋ ವಿಧಿಸ್ತೇ
ಸಂಕ್ಷೇಪತೋ ಭಾರ್ಗವವಂಶಮುಖ್ಯ ।

---

೪೭–೪೯. ಯಾವ ಯಾವ ಕರ್ಮಗಳಲ್ಲಿ ಯಾವ ಯಾವ ವಸ್ತುಗಳು ಬೇಕಾಗುತ್ತವೆ ಅವು ಹೇಗಿರಬೇಕು? ಅವಕ್ಕೆ ಬೇಕಾಗುವ ದ್ರವ್ಯಗಳಾವುವು? ಅವನ್ನು ನಡೆಸುವ ವಿಧಿಯು ಎಂತಹುದು ಎಂಬ ವಿಷಯಗಳಲ್ಲಿ ಆಯಾಯ ಶಾಖೆಗಳೇ ಪ್ರಮಾಣ. ಆದುದರಿಂದ ಈ ವಿಚಾರಗಳಲ್ಲಿ ಆಯಾಯ ಶಾಖೆಗಳಲ್ಲಿ ಉಕ್ತವಾಗಿರುವ ಕ್ರಮವನ್ನೇ ಅನುಸರಿಸಬೇಕು ಯಾವನು ಸ್ವಸೂತ್ರವನ್ನು ಬಿಟ್ಟು ಪರಸೂತ್ರವನ್ನು ಸ್ವೀಕರಿಸಿ ಅದರಂತೆ ಆಚರಿಸುವನೋ ಅವನು ಆ ಋಷಿಯನ್ನು ಅಪ್ರಾಮಾಣಿಕನನ್ನಾಗಿ ಮಾಡಿದುದರಿಂದ ಅಧರ್ಮವನ್ನೇ ಹೊಂದುತ್ತಾನೆ. ಆದುದರಿಂದ ಸರ್ವ ಪ್ರಯತ್ನದಿಂದಲೂ ಸ್ವಸೂತ್ರವನ್ನು ಅತಿಕ್ರಮಿಸಿ ಯಾವ ಕರ್ಮವನ್ನೂ ಮಾಡಬಾರದು.

೫೦–೫೧. ಎಲ್ಲಾ ಕರ್ಮಗಳ ಪೂರ್ವೋತ್ತರ ಕೃತ್ಯಗಳು ಸ್ವಶಾಖೆಯಂತೆಯೇ ನಡೆಯುತ್ತವೆ. ಅದರ ಮಧ್ಯದಲ್ಲಿ ನಡೆಯುವ ಈ ಕರ್ಮವೂ ಸಹ ಸ್ವಶಾಖೆಯಂತೆಯೇ ನಡೆಯತಕ್ಕದ್ದಾಗಿದೆ. ಎಲೈ ಭಾರ್ಗವ ವಂಶಶ್ರೇಷ್ಠನೇ ಆಥರ್ವಣದ

ಅತಃ ಪರಂ ಕಿಂ ಕಥಯಾಮಿ ತುಭ್ಯಂ
ತನ್ಮೇ ವದಸ್ವಾಯತಲೋಹಿತಾಕ್ಷ || ೫೧ ||

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ಆಥರ್ವವಿಧಿಕಥನಂ ನಾಮ
ಸಪ್ತವಿಂಶತ್ಯುತ್ತರಶತತಮೋಽಧ್ಯಾಯಃ

---

ಈ ವಿಧಾನಗಳೆಲ್ಲವನ್ನೂ ಸಂಕ್ಷೇಪದಿಂದ ನಿನಗೆ ಹೇಳಿರುವೆನು. ಇದಕ್ಕೆ ಮೇಲೆ ಇನ್ನೇನನ್ನು ನಾನು ಹೇಳಬೇಕು. ಕೇಳು ಅದನ್ನೂ ಹೇಳುತ್ತೇನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ
ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನ
ದಲ್ಲಿ ಅಥರ್ವವಿಧಿಕಥನವೆಂಬ ನೂರ ಇಪ್ಪತ್ತೇಳನೆಯ
ಅಧ್ಯಾಯವು ಮುಗಿದಿದೆ.



## ನೂರ ಇಪ್ಪತ್ತೇಳನೆಯ ಅಧ್ಯಾಯದ ಸಾರಾಂಶ.

---

ಈ ಅಧ್ಯಾಯದಲ್ಲಿಯೂ ಅಥರ್ವವೇದಮಂತ್ರಗಳಿಂದ ಮಾಡಬಹುದಾದ ಜಪಾದಿಗಳನ್ನೂ ಇಷ್ಟಪ್ರಾಪ್ತಿಗೂ ಅನಿಷ್ಟ ನಿವೃತ್ತಿಗೂ ಸಾಧಕಗಳಾದ ಕೆಲವು ಕಾಮ್ಯಕರ್ಮಗಳನ್ನೂ ನಿರೂಪಿಸಲಾಗಿದೆ.

|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಅಷ್ಟವಿಂಶತ್ಯುತ್ತರಶತತಮೋಽಧ್ಯಾಯಃ

**|| ರಾಮ ಉವಾಚ ||**

**ಏಕಂ ಮಂತ್ರಂ ಸಮಾಚಕ್ಷ್ವ ದೇವ ಲಕ್ಷ್ಮೀವಿವರ್ಧನಂ ।**
**ಪ್ರತಿವೇದಂ ಜಗನ್ನಾಥ ಯೊದೋಗಣ ನೃಪಾತ್ಮಜ**

**|| ಪುಷ್ಕರ ಉವಾಚ ||**

**ಶ್ರೀಸೂಕ್ತಂ ಪ್ರತಿವೇದಂ ಚ ಜ್ಞೇಯಂ ಲಕ್ಷ್ಮೀವಿವರ್ಧನಂ ।**
**ಅಸ್ಮಿನ್‌ಲೋಕೇ ಪರೇ ವಾಪಿ ಯಥಾಕಾಮಂ ದ್ವಿಜಸ್ಯ ತು**

---

### ನೂರ ಇಪ್ಪತ್ತೆಂಟನೇ ಅಧ್ಯಾಯ.

೧. ಭಾರ್ಗವನು ಪುನಃ ಪ್ರಶ್ನೆಮಾಡುತ್ತಾನೆ. ವರುಣಪುತ್ರನಾ ಜಗತ್ಪ್ರಭುವೇ, ಎಲ್ಲಾ ವೇದಗಳಲ್ಲಿಯೂ ಐಶ್ವರ್ಯಾಭಿವೃದ್ಧಿಗೆ ಸಾಧನವಾದ ಒಂದು ಮುಖ್ಯವಾದ ಮಂತ್ರವಾವುದು ಎಂಬುದನ್ನು ದಯವಿಟ್ಟು ಹೇಳ ಎಂದು ಪ್ರಶ್ನೆಮಾಡಲು ಅದಕ್ಕೆ ಉತ್ತರವಾಗಿ ಪುಷ್ಕರನು ಹೇಳುತ್ತಾನೆ.

೨-೩. ಪ್ರತಿವೇದದಲ್ಲಿಯೂ ಶ್ರೀಸೂಕ್ತವು ಲಕ್ಷ್ಮಿಯವೃದ್ಧಿಗೆ ಕಾರಣ ತಿಳಿಯಬೇಕು. ದ್ವಿಜನಾದವನು ತನ್ನ ಇಚ್ಛೆಬಂದಂತೆ ಇಹಲೋಕದ ಪರಲೋಕದ ಫಲಕ್ಕಾಗಿ ಇದನ್ನು ಆಶ್ರಯಿಸಬಹುದು. ಪುನಃ ಭಾರ್ಗವ

|| ರಾಮ ಉವಾಚ ||

ಪ್ರತಿವೇದಂ ಸಮಾಚಕ್ಷ್ವ ಶ್ರೀಸೂಕ್ತಂ ಪುಷ್ಟಿವರ್ಧನಂ |
ಶ್ರೀಸೂಕ್ತಸ್ಯ ತಥಾ ಕರ್ಮ ಸರ್ವಧರ್ಮಭೃತಾಂ ವರ || ೩ ||

|| ಪುಷ್ಕರ ಉವಾಚ ||

ಹಿರಣ್ಯವರ್ಣಾಂ ಹರಿಣೀಮೃಚಃ ಪಂಚದಶ ದ್ವಿಜ |
ಶ್ರೀಸೂಕ್ತಂ ಕಥಿತಂ ಪುಣ್ಯಮೃಗ್ವೇದೇ ಪುಷ್ಟಿವರ್ಧನಂ || ೪ ||

ರಥೇ ಅಕ್ಷೇಷು ವಾಜೇತಿ ಚತಸ್ರಸ್ತು ತಥಾ ಋಚಃ |
ಶ್ರೀಸೂಕ್ತಂ ತು ಯಜುರ್ವೇದೇ ಕಥಿತಂ ಪುಷ್ಟಿವರ್ಧನಂ || ೫ ||

ಶ್ರಾವಂತೀಯಂ ತಥಾಮಾಸಂ ಸಾಮವೇದೇ ಪ್ರಕೀರ್ತಿತಂ |
ಶ್ರಿಯಂ ದಾತುರ್ಮಯಿ ದೇಹಿ ಪ್ರೋಕ್ತಮಾಥರ್ವಣೇ ತಥಾ || ೬ ||

ಶ್ರೀಸೂಕ್ತಂ ಯೋ ಜಪೇದ್ಭಕ್ತ್ಯಾ ತಸ್ಯಾಲಕ್ಷ್ಮೀರ್ವಿನಶ್ಯತಿ |
ಜುಹುಯಾದ್ಯಶ್ಚ ಧರ್ಮಜ್ಞ ಹವಿಷ್ಯೇಣ ವಿಶೇಷತಃ || ೭ ||

---

ಧರ್ಮಜ್ಞನೇ, ಅಂತಹ ಪುಷ್ಟಿಕರವಾದ ಶ್ರೀಸೂಕ್ತವನ್ನು ಎಲ್ಲಾ ವೇದಗಳಲ್ಲಿ ಯಾವುದು ಎಂಬುದನ್ನು ಹೇಳು ಅದಕ್ಕೆ ಅನುಬಂಧಿಸಿರುವ ಕರ್ಮಗಳನ್ನೂ ಸಹ ಹೇಳು ಎಂದು ಪ್ರಶ್ನೆ ಮಾಡಲು ಪುಷ್ಕರನು ಹೇಳುತ್ತಾನೆ

೪-೬. ಹಿರಣ್ಯವರ್ಣಾಂ ಹರಿಣೀಂ ಎಂಬ ಹದಿನೈದು ಋಕ್ಕುಗಳು ಋಗ್ವೇದ ದಲ್ಲಿ ಹೇಳಿರುವ ಶ್ರೀಸೂಕ್ತ, ರಥೇ ಅಕ್ಷೇಷು ವಾಜೇ ಎಂಬ ನಾಲ್ಕು ಋಕ್ಕುಗಳೂ ಸಹ ಯಜುರ್ವೇದದಲ್ಲಿ ಹೇಳಿರುವ ಪುಷ್ಟಿವರ್ಧಕವಾದ ಶ್ರೀಸೂಕ್ತ. ಶ್ರಾಯಂತೀಯಂ ಎಂಬುದೂ ಮಾಸಂ ಎಂಬುದೂ ಸಹ ಸಾಮವೇದಕ್ಕೆ ಅನುಬಂಧಿಸಿರುವ ಶ್ರೀಸೂಕ್ತ. ಶ್ರಿಯಂ ದಾತುರ್ಮಯಿ ದೇಹಿ ಎಂಬ ಮಂತ್ರವು ಆಥರ್ವಣವಾದ ಶ್ರೀಸೂಕ್ತ.

೭-೯. ಶ್ರೀಸೂಕ್ತವನ್ನು ಯಾವನು ಭಕ್ತಿಯಿಂದ ಜಪಿಸುತ್ತಾನೆಯೋ ಅವನ ಅಶುಭವೆಲ್ಲವೂ ನಾಶವಾಗುತ್ತದೆ. ಯಾವನು ಹವೀರೂಪವಾದ ದ್ರವ್ಯದಿಂದ ಆ ಸೂಕ್ತದಿಂದ ಹೋಮಿಸುತ್ತಾನೆಯೋ ಅವನಿಗೂ ಕೂಡ ವಿಶೇಷವಾದ ಅಶುಭ

ಶ್ರೀಸೂಕ್ತೇನ ತು ಪದ್ಮಾನಾಂ ಘೃತಾಕ್ತಾನಾಂ ಭೃಗೂತ್ತಮ ।
ಅಯುತಂ ಹೋಮಯೇದ್ಯಸ್ತು ವಹ್ನೌ ಭಕ್ತಿಯುತೋ ನರಃ ॥ ೮ ॥

ಪದ್ಮಹಸ್ತಾ ಚ ಯಾ ಲಕ್ಷ್ಮೀಸ್ತಂ ನರಂ ತೂಪತಿಷ್ಠತಿ ।
ದಶಾಯುತಂ ತು ಪದ್ಮಾನಾಂ ಜುಹುಯಾದ್ಯಸ್ತಥಾ ಜಲೇ ॥ ೯ ॥

ನಾಪೈತಿ ತತ್ಕುಲಾಲ್ಲಕ್ಷ್ಮೀಃ ವಿಷ್ಣೋಃ ವಕ್ಷೋಗತಾ ಯಥಾ ।
ಘೃತಾಕ್ತಾನಾಂ ತು ಬಿಲ್ವಾನಾಂ ಹುತ್ವಾ ರಾಮಾಯುತಂ ತಥಾ ॥ ೧೦ ॥

ಬಹುವಿತ್ತಮವಾಪ್ನೋತಿ ಸರ್ಯೋವನ್ಮನಸೇಚ್ಛತಿ ।
ಬಿಲ್ವಾನಾಂ ಲಕ್ಷಹೋಮೇನ ಕುಲೇ ಲಕ್ಷ್ಮೀಮವಾಪ್ನುತೇ ॥ ೧೧ ॥

ಪದ್ಮಾನಾಮಥ ಬಿಲ್ವಾನಾಂ ಕೋಟಿಹೋಮಂ ಸಮಾಚರೇತ್ ।
ಶ್ರದ್ದಧಾನಃ ಸಮಾಪ್ನೋತಿ ದೇವೇಂದ್ರತ್ವಮಪಿ ಧ್ರುವಂ ॥ ೧೨ ॥

---

ನಾಶ ಉಂಟಾಗುತ್ತದೆ. ಆಜ್ಯದಿಂದ ನೆನಸಿದ ಹತ್ತುಸಾವಿರ ಪದ್ಮಗಳನ್ನು ಈಸೂಕ್ತದಿಂದ ಅಗ್ನಿಯಲ್ಲಿ ಭಕ್ತಿಯಿಂದ ಹೋಮಮಾಡಿದುದೇ ಆದರೆ ಪದ್ಮಹಸ್ತೆಯಾದ ಲಕ್ಷ್ಮಿಯೇ ಅವನಲ್ಲಿ ಸನ್ನಿಹಿತಳಾಗುತ್ತಾಳೆ ಹಾಗೆಯೇ ಅಂತಹ ಪದ್ಮಗಳ ಲಕ್ಷವನ್ನು ಜಲದಲ್ಲಿ ಯಾವನು ಹೋಮಮಾಡುತ್ತಾನೆಯೋ ಅಂತಹವನ ಕುಲದಲ್ಲಿ ವಿಷ್ಣುವಿನ ವಕ್ಷಸ್ಥಲದಲ್ಲಿರುವಂತೆ ಲಕ್ಷ್ಮಿಯು ಯಾವಾಗಲೂ ಸನ್ನಿಹಿತಳಾಗಿಯೇ ಇರುತ್ತಾಳೆ.

೧೦-೧೨ ಹಾಗೆಯೇ ಆಜ್ಯದಿಂದ ನೆನಸಲ್ಪಟ್ಟ ಹತ್ತುಸಾವಿರ ಬಿಲ್ವಗಳನ್ನು ಹೋಮಮಾಡಿದುದೇ ಆದರೆ ಅವನು ಮನಸ್ಸಿನಲ್ಲಿ ಅಪೇಕ್ಷಿಸುವಷ್ಟು ದ್ರವ್ಯವನ್ನು ಹೊಂದುತ್ತಾನೆ. ಅಂತಹ ಬಿಲ್ವಗಳ ಲಕ್ಷಹೋಮದಿಂದ ತನ್ನ ವಂಶದಲ್ಲಿಯೇ ಲಕ್ಷ್ಮಿಯನ್ನು ಸ್ಥಿರಗೊಳಿಸುತ್ತಾನೆ. ಶ್ರದ್ಧೆಯಿಂದ ಪದ್ಮ ಮತ್ತು ಬಿಲ್ವಗಳ ಕೋಟಿ ಹೋಮಮಾಡಿದವನು ದೇವೇಂದ್ರನ ಸ್ಥಾನವನ್ನಾದರೂ ಹೊಂದಲು ಅರ್ಹನಾಗುತ್ತಾನೆ. ಇದು ನಿಶ್ಚಯ.

ಸಂಪೂಜ್ಯ ದೇವೀಂ ವರದಾಂ ಯಥಾವ-
ತ್ಪದ್ಮೈಃ ಸಿತೈರ್ವಾ ಕುಸುಮೈಸ್ತಥಾನ್ಯೈಃ ।
ಕ್ಷೀರೇಣ ಧೂಪೈಃ ಪರಮಾನ್ನಭಕ್ಷೈ
ರ್ಲಕ್ಷ್ಮೀಮವಾಪ್ನೋತಿ ವಿಧಾನತಶ್ಚ ॥ ೧೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ಶ್ರೀಸೂಕ್ತಮಾಹಾತ್ಮ್ಯಕಥನಂ
ನಾಮಾಷ್ಟಾವಿಂಶತ್ಯುತ್ತರಶತತಮೋಽಧ್ಯಾಯಃ

---

೧೩. ವರಪ್ರದಳಾದ ಆ ಲಕ್ಷ್ಮೀದೇವಿಯನ್ನು ಪದ್ಮಗಳಿಂದಾಗಲಿ, ಬಿಳುಪಾಗಿರುವ ಬೇರೆ ಹೂವುಗಳಿಂದಾಗಲಿ ಪೂಜಿಸಿ ಹಾಲು, ಪರಮಾನ್ನ, ಭಕ್ಷ್ಯ ಮೊದಲಾದವುಗಳಿಂದ ನೈವೇದ್ಯವನ್ನು ಅರ್ಪಿಸಿ, ಧೂಪದೀಪಾದಿಗಳಿಂದ ಪೂಜಿಸಿದಲ್ಲಿ ಈ ವಿಧಾನದಿಂದ ಹೆಚ್ಚಾದ ಸಂಪತ್ತನ್ನು ಹೊಂದುತ್ತಾನೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ
ಸಂವಾದದಲ್ಲಿ ಭಾರ್ಗವನನ್ನು ಕುರಿತು ಪುಷ್ಕರನು ಹೇಳಿದ ಉಪಖ್ಯಾನ
ದಲ್ಲಿ ಶ್ರೀಸೂಕ್ತಮಾಹಾತ್ಮ್ಯಕಥನವೆಂಬ ನೂರ ಇಪ್ಪತ್ತೆಂಟನೆಯ
ಅಧ್ಯಾಯವು ಮುಗಿದಿದೆ.

## ನೂರ ಇಪ್ಪತ್ತೆಂಟನೆಯ ಅಧ್ಯಾಯದ ಸಾರಾಂಶ.

ಈ ಅಧ್ಯಾಯದಲ್ಲಿ ಮಂತ್ರಗಳಲ್ಲಿ ಮುಖ್ಯವಾದ ಶ್ರೀಸೂಕ್ತ ಭಾಗವನ್ನು ನಾಲ್ಕು ವೇದಗಳಲ್ಲಿಯೂ ನಿರೂಪಿಸಿ ಇದರಿಂದ ಮಾಡಬಹುದಾದ ಜಪ ಹೋಮಾದಿಗಳನ್ನು ಫಲಸಿದ್ಧಿಗೆ ತಕ್ಕಂತೆ ನಿರೂಪಿಸಿರುತ್ತಾರೆ.

|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಏಕೋನತ್ರಿಂಶದುತ್ತರಶತತಮೋಽಧ್ಯಾಯಃ

|| ರಾಮ ಉವಾಚ ||

ಏಕಂ ಮಂತ್ರಂ ಸಮಾಚಕ್ಷ್ವ ಸರ್ವಕರ್ಮಕರಂ ಶಿವಂ |
ಐಹಿಕಂ ಸರ್ವಧರ್ಮಜ್ಞ ಪಾರಲೌಕಿಕಮೇವ ವಾ || ೧ ||

|| ಪುಷ್ಕರ ಉವಾಚ ||

ಪ್ರತಿವೇದಂ ಮಹಾಭಾಗ ಯತ್ಪ್ರೋಕ್ತಂ ಪೌರುಷಂ ಸ್ಮೃತಂ |
ಸರ್ವಕರ್ಮಕರಂ ಜ್ಞೇಯಂ ಪವಿತ್ರಂ ಮಧುಸೂದನಂ || ೨ ||

ಏಕೈಕಯಾ ಋಚಾ ರಾಮ ಸ್ನಾತೋ ದತ್ವಾ ಜಲಾಂಜಲೀನ್ |
ಪೌರುಷೇಣ ಚ ಸೂಕ್ತೇನ ಮುಚ್ಯತೇ ಸರ್ವಕಿಲ್ಬಿಷೈಃ || ೩ ||

---

### ನೂರ ಇಪ್ಪತ್ತೊಂಭತ್ತನೇ ಅಧ್ಯಾಯ.

೧. ಭಾರ್ಗವನು ಪುನಃ ಪ್ರಶ್ನೆಮಾಡುತ್ತಾನೆ ಎಲೈ ಧರ್ಮಜ್ಞನೇ, ಐಹಿಕವಾದ ಮತ್ತು ಆಮುಷ್ಮಿಕವಾದ ಸರ್ವಕರ್ಮಗಳಿಗೂ ಉಪಯುಕ್ತವಾದ ಮತ್ತು ಮಂಗಳಕರವಾದ ಒಂದು ಮಂತ್ರವನ್ನು ಹೇಳು. ಎಲ್ಲಾ ಕರ್ಮಗಳಿಗೂ ಉಪಯುಕ್ತವಾದ ಒಂದೇ ಒಂದು ಮಂತ್ರವಾವುದು. ಎಂದು ತಾತ್ಪರ್ಯ. ಇದಕ್ಕೆ ಉತ್ತರವಾಗಿ ಪುಷ್ಕರನು ಹೇಳುತ್ತಾನೆ.

೨-೩. ಎಲೈ ಪುಣ್ಯಶಾಲಿಯೇ, ಪ್ರತಿಯೊಂದು ವೇದದಲ್ಲಿಯೂ ಮಹಾವಿಷ್ಣುವಿನ ವಿಷಯಕವಾದ ಪುರುಷಸೂಕ್ತವೆಂದು ಯಾವುದು ಪ್ರಸಿದ್ಧವಾಗಿದೆಯೋ ಅದೇ ಪವಿತ್ರವಾದುದು. ಸರ್ವಕರ್ಮಗಳಿಗೂ ಉಪಯುಕ್ತವಾದುದು ಎಂದು ತಿಳಿಯಬೇಕು. ಆ ಪುರುಷಸೂಕ್ತದ ಒಂದೊಂದು ಋಕ್ಕಿನಿಂದಲೂ ಸ್ನಾನಮಾಡಿ ಜಲಾಂಜಲಿಯನ್ನು ಅರ್ಪಿಸಿದುದೇ ಆದರೆ ಸರ್ವಪಾಪದಿಂದಲೂ ಬಿಡುಗಡೆ ಹೊಂದುತ್ತಾನೆ.

**ಅಂತರ್ಜಲಗತೋ ಜಪ್ತ್ವಾ ತಥಾ ಸೂಕ್ತಂ ಚ ಪೌರುಷಂ |**
**ಸರ್ವಕಲ್ಮಷನಿರ್ಮುಕ್ತೋ ಯಥೇಷ್ಟಾಂ ಲಭತೇ ಗತಿಂ || ೪ ||**

**ಏಕೈಕಯಾ ಋಚಾ ಸ್ನಾತಃ ಪುಷ್ಪಂ ಪುಷ್ಪಂ ನಿವೇದಯೇತ್ |**
**ಪುರುಷಾಯ ಜಲೇ ರಾಮ ಸರ್ವಪಾಪೈರ್ವಿಮುಚ್ಯತೇ || ೫ ||**

**ಏಕೈಕಯಾ ಋಚಾ ರಾಮ ಸ್ನಾತಃ ದತ್ವಾ ಫಲಂ ಫಲಂ |**
**ಸರ್ವಾನ್ ಕಾಮಾನವಾಪ್ನೋತಿ ಯಾನ್ಕಾಂಕ್ಷಿನ್ಮನಸೇಚ್ಛತಿ || ೬ ||**

**ಪೌರುಷೇಣ ಚ ಸೂಕ್ತೇನ ಪ್ರಾಣಾಯಾಮೋ ಮಹಾಫಲಃ |**
**ಜಪಹೋಮೌ ತಥಾ ರಾಮ ಸರ್ವಕಲ್ಮಷನಾಶನೌ || ೭ ||**

**ಸುರಾಪೋ ಬ್ರಹ್ಮಹಾ ಸ್ತೇನಃ ತಥೈವ ಗುರುತಲ್ಪಗಃ |**
**ಪಾಪೇಭ್ಯೋ ವಿಪ್ರಮುಚ್ಯೇತ ಜಪ್ತ್ವಾ ಸೂಕ್ತಂ ತು ಪೌರುಷಂ || ೮ ||**

---

೪–೬. ನೀರಿನ ಮಧ್ಯದಲ್ಲಿ ನಿಂತು ಪುರುಷ ಸೂಕ್ತವನ್ನು ಜಪಿಸಿದಲ್ಲಿ ಅವನು ಸರ್ವ ಪಾಪಗಳಿಂದಲೂ ಮುಕ್ತನಾಗಿ ತನಗೆ ಇಷ್ಟವಾದ ಗತಿಯನ್ನು ಹೊಂದುತ್ತಾನೆ. ಅದರ ಒಂದೊಂದು ಋಕ್ಕಿನಿಂದಲೂ ಸ್ನಾನಮಾಡಿ ಜಲದಲ್ಲಿಯೇ ನಿಂತು ಒಂದೊಂದು ಪುಷ್ಪವನ್ನು ಪರಮಪುರುಷನಿಗೆ ಅರ್ಪಿಸಿದುದೇ ಆದರೆ ಅವನು ಸಕಲ ಪಾಪಗಳಿಂದಲೂ ಮುಕ್ತನಾಗುತ್ತಾನೆ. ಹಾಗೆಯೇ ಒಂದೊಂದು ಋಕ್ಕಿನಿಂದಲೂ ಸ್ನಾನಮಾಡಿ ಒಂದೊಂದು ಫಲವನ್ನು ಅರ್ಪಿಸಿದಲ್ಲಿ ತನ್ನ ಮನಸ್ಸಿಗೆ ಇಷ್ಟವಾದ ಯಾವ ಮನೋರಥವನ್ನಾದರೂ ಹೊಂದುತ್ತಾನೆ.

೭–೧೦. ಪುರುಷಸೂಕ್ತದಿಂದ ಮಾಡುವ ಪ್ರಾಣಾಯಾಮವೂ ಮಹಾಫಲವಾಗಿ ಪರಿಣಮಿಸುತ್ತದೆ. ಹಾಗೆಯೇ ಜಪಹೋಮಗಳೂ ಸಹ ಸರ್ವಪಾಪನಾಶಕವಾಗುತ್ತವೆ. ಸುರಾಪಾನಮಾಡಿದವನೇ ಆಗಲಿ ಬ್ರಹ್ಮಹತ್ಯೆಯನ್ನೂ ಮಾಡಿದವನಾಗಲಿ ಗುರುತಲ್ಪಗಮನ ಮಾಡಿದವನಾಗಲೀ ಈ ಪುರುಷಸೂಕ್ತವನ್ನು ಜಪಿಸಿದಲ್ಲಿ ಅವನೂ ಸಹ ಪಾಪಗಳಿಂದ ಮುಕ್ತನಾಗುತ್ತಾನೆ. ಇಂತಹ ಪಾಪಮಾಡಿದವನು ಮೊದಲು ಕೃಚ್ಛ್ರವನ್ನಾಚರಿಸಿ ಶುದ್ಧನಾಗಿ ಮಧ್ಯಾಹ್ನದ ವೇಳೆಗೆ ನದಿಯ ಜಲವನ್ನು ಹೊಂದಿ ಅಲ್ಲಿ ಸ್ನಾನಮಾಡಿ ನಿಯಮದೊಡನೆ ಈ ಸೂಕ್ತವನ್ನು ಜಪಿಸಬೇಕು.

ಕೃಚ್ಛ್ರೈರ್ವಿಶೋಧಿತಃ ಪೂರ್ವಂ ಮಧ್ಯಾಹ್ನೇ ಸಲಿಲಾಪಗಃ ।
ಸ್ನಾತಸ್ತು ಪೌರುಷಂ ಸೂಕ್ತಂ ಜಪೇನ್ನಿತ್ಯಮತಂದ್ರಿತಃ ॥ ೯ ॥

ಸಂವತ್ಸರೇಣ ದೇವೇಶಂ ವಾಸುದೇವಂ ಪ್ರಪಶ್ಯತಿ ।
ಸ್ವಯಮೇವ ಮಹಾಭಾಗ ಶಾಕಮೂಲಫಲಾಶನಃ ॥ ೧೦ ॥

ತಸ್ಮಾತ್ಕಾಮಾನವಾಪ್ನೋತಿ ಯದ್ರಾಮ ಮನಸೇಚ್ಛತಿ ।
ಶ್ರಿಯಮಗ್ರ್ಯಾಂ ತಥಾ ರೂಪಂ ಜೀವಿತಂ ದೀರ್ಘಮೇವ ಚ ॥ ೧೧ ॥

ಅಣಿಮಾಂ ಲಘಿಮಾಂ ಪ್ರಾಪ್ತಿಂ ಮಹಿಮಾಂ ಚ ಭೃಗೂತ್ತಮ ।
ಈಶಿತ್ವಂ ಚ ವಶಿತ್ವಂ ಚ ಪ್ರಕಾಮ್ಯಂ ಚ ಭೃಗೂತ್ತಮ ॥ ೧೨ ॥

ಯತ್ರ ಕಾಮಾವಸಾಯಿತ್ವಂ ತಸ್ಮಾತ್ಪ್ರಾಪ್ನೋತಿ ಮಾನವ ।
ದುರವಾಪಮಥಾನ್ಯದ್ವಾ ಯತ್ಕಿಂಚಿನ್ಮನಸೇಚ್ಛತಿ ॥ ೧೩ ॥

ಅಕಾಮಃ ಪೌರುಷಂ ಸೂಕ್ತಂ ಜಪ್ತ್ವಾ ನಿತ್ಯಮತಂದ್ರಿತಃ ।
ತತ್ರಯಾತಿ ಮಹಾಭಾಗ ಯದ್ವಿಷ್ಣೋಃ ಪರಮಂ ಪದಂ ॥ ೧೪ ॥

---

ಹೀಗೆಮಾಡುವವನು ಒಂದು ವರ್ಷದಲ್ಲಿ ದೇವಾಧೀಶನಾದ ಆ ವಾಸುದೇವನನ್ನು ತಾನೇ ನೋಡುತ್ತಾನೆ ಈ ವ್ರತಮಾಡುವಕಾಲದಲ್ಲಿ ಗೆಡ್ಡೆಗೆಣಸುಗಳು ಶಾಕ ಮತ್ತು ಫಲಗಳು ಇವನ್ನೇ ಆಹಾರವನ್ನಾಗಿ ಉಪಯೋಗಿಸಬೇಕು. ಈ ರೀತಿ ವಾಸು ದೇವನನ್ನು ಸಾಕ್ಷಾತ್ಕರಿಸಿದವನು ಅವನಿಂದಲೇ ತನ್ನ ಮನೋರಥಗಳನ್ನೆಲ್ಲಾ ಹೊಂದುತ್ತಾನೆ.

೧೧-೧೨. ಉತ್ಕೃಷ್ಟವಾದ ಸಂಪತ್ತನ್ನಾಗಲೀ ಹಾಗೆಯೇ ಸುರೂಪವನ್ನಾಗಲಿ ದೀರ್ಘಾಯುಷ್ಯವನ್ನಾಗಲಿ, ಅಣಿಮಾ, ಲಘಿಮಾ, ಪ್ರಾಪ್ತಿ, ಮಹಿಮಾ, ಈಶಿತ್ವ, ವಶಿತ್ವ, ಪ್ರಾಕಾಮ್ಯಗಳೆಂಬ ಸಿದ್ಧಿಗಳನ್ನಾಗಲಿ ಯಾವುದನ್ನು ತನ್ನ ಮನಸ್ಸು ಆಶೆ ಪಡುವುದೋ ಅಂತಹ ಪುರುಷಾರ್ಥವನ್ನು ಆ ವಾಸುದೇವನಿಂದಲೇ ಹೊಂದುತ್ತಾನೆ.

೧೩-೧೪. ಹೊಂದಲು ಅಸಾಧ್ಯವಾದ ಬೇರೆ ಯಾವ ಇಷ್ಟವನ್ನು ಅಪೇಕ್ಷಿಸಿದರೂ ಸಹ ಅಂತಹ ಮನೋರಥವನ್ನೂ ಹೊಂದುತ್ತಾನೆ ಐಹಿಕವಾದ ಪುರಷಾರ್ಥ ದಲ್ಲಿ ಆಶೆ ಇಡದೆ ನಿಷ್ಕಾಮನಾಗಿ ಈ ಪುರುಷ ಸೂಕ್ತವನ್ನು ನಿತ್ಯವೂ ನಿಯಮದಿಂದ ಜಪಿಸಿದುದೇ ಆದರೆ ಮಹಾವಿಷ್ಣುವಿನ ಪದವನ್ನೇ ಹೊಂದುತ್ತಾನೆ. ಈ ಪುರುಷ

ಮಾಂಗಲ್ಯಮೇತತ್ಪರಮಂ ಪವಿತ್ರಂ
ಸಂಸಾರದುಃಖೌಘವಿನಾಶಕಾರೀ ।
ಸುಖಪ್ರದಂ ಧರ್ಮವಿಧಂ ನರಾಣಾಂ
ಮನೋರಮಾಪ್ತಿಕರಂ ಪ್ರದಿಷ್ಟಂ ॥ ೧೫ ॥

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ಪುರುಷಸೂಕ್ತಮಾಹಾತ್ಮ್ಯವರ್ಣನಂ ನಾಮ ಏಕೋನತ್ರಿಂಶದುತ್ತರಶತತಮೋಽಧ್ಯಾಯಃ**

---

ಸೂಕ್ತವು ಮಂಗಲಕರವಾಗಿಯೂ, ಪರಮಪವಿತ್ರವಾಗಿಯೂ, ಸಂಸಾರದುಃಖಕ್ಕೆ ನಾಶಕವಾಗಿಯೂ, ಸುಖಪ್ರದವಾಗಿಯೂ ಸಕಲ ಮನೋರಥಗಳ ಸಿದ್ಧಿಗೂ ಕಾರಣವಾಗಿಯೂ ಇರುವ ಉತ್ತಮೋತ್ತಮ ಧರ್ಮಮಾರ್ಗವೆಂದು ತಿಳಿ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ ಪುರುಷಸೂಕ್ತ ಮಾಹಾತ್ಮ್ಯವರ್ಣನವೆಂಬ ನೂರ ಇಪ್ಪತ್ತೊಂಭತ್ತನೆಯ ಅಧ್ಯಾಯವು ಮುಗಿದಿದೆ.



## ನೂರ ಇಪ್ಪತ್ತೊಂಭತ್ತನೆಯ ಅಧ್ಯಾಯದ ಸಾರಾಂಶ.



ಈ ಅಧ್ಯಾಯದಲ್ಲಿ ಇಹಲೋಕದ ಮತ್ತು ಪರಲೋಕದ ಸುಖಕ್ಕೆ ಕಾರಣವಾದ ಪುರುಷಸೂಕ್ತವೇ ಉತ್ತಮೋತ್ತಮ ಮಂತ್ರವೆಂದು ಹೇಳಿ ಅದರ ಅನುಷ್ಠಾನ ವಿಧಿಯನ್ನೂ ಆಯಾಯ ಅಧಿಕಾರಿಗೆ ತಕ್ಕಂತೆ ನಿರೂಪಿಸಲಾಗಿದೆ.

|| ಓಂ ||

—: ಶ್ರೀ ಹಯಗ್ರೀವಾಯ ನಮಃ : —

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ತ್ರಿಂಶದುತ್ತರಶತತಮೋಽಧ್ಯಾಯಃ

|| ರಾಮ ಉವಾಚ ||

**ಪುರಾ ಧರ್ಮಾಣಿ ಪ್ರೋಕ್ತಾನಿ ಬ್ರಹ್ಮಚಾರಿಗೃಹಸ್ಥಯೋಃ |**
**ಕರ್ಮಾಣ್ಯುಕ್ತಾನಿ ಚ ಬ್ರೂಹಿ ಶಿಷ್ಟಮಪ್ಯಾಶ್ರಮದ್ವಯಂ || ೧ ||**

**ಗೃಹಸ್ಥಧರ್ಮಾನಾಶ್ರಿತ್ಯ ಕಾಮ್ಯಾನಿ ಸುರಸತ್ತಮ |**
**ಕರ್ಮಾಣಿ ತಾನಿ ಮೇ ಬ್ರೂಹಿ ಶಿಷ್ಟಾನ್ಯಪ್ಯಾಶ್ರಮದ್ವಯೇ || ೨ ||**

|| ಪುಷ್ಕರ ಉವಾಚ ||

**ಸುಖಂ ಗೃಹಾಶ್ರಮೇ ಸ್ಥಿತ್ವಾ ವಿಧಿವತ್ ಸ್ನಾತಕೋ ದ್ವಿಜಃ |**
**ವನೇ ವಸೇತ್ತು ನಿಯತೋ ಯಥಾವದ್ವಿಜಿತೇಂದ್ರಿಯಃ || ೩ ||**

---

### ನೂರ ಮೂವತ್ತನೆಯ ಅಧ್ಯಾಯ.

೧-೨. ಎಲೈ ಸುರಶ್ರೇಷ್ಠನೇ, ಮೊದಲು ಬ್ರಹ್ಮಚರ್ಯ ಗಾರ್ಹಸ್ಥ್ಯಗಳಿಗೆ ಅನುಬಂಧಿಸಿದ ಧರ್ಮಗಳನ್ನು ಹೇಳಿರುವೆ. ಉಳಿದ ಎರಡು ಆಶ್ರಮಗಳ ಕರ್ಮಗಳಾವುವು ಎಂಬುದನ್ನೂ ಹೇಳಬೇಕು. ಮತ್ತು ಗೃಹಸ್ಥನಾಗಿರುವವನು ಮಾಡಬಹುದಾದ ಕಾಮ್ಯಕರ್ಮಗಳಾವುವು. ಉಳಿದ ಎರಡು (ವಾನಪ್ರಸ್ಥ ಭಿಕ್ಷು) ಆಶ್ರಮಗಳ ಅಂತಹ ಕರ್ಮಗಳಾವುವು.

೩-೪. ಯಥಾವಿಧಿಯಾಗಿ ಸ್ನಾತಕನಾದ ದ್ವಿಜನು ಸುಖದಿಂದ ಗೃಹಸ್ಥಾಶ್ರಮವನ್ನು ಅನುಭವಿಸಿ ಅನಂತರ ಜಿತೇಂದ್ರಿಯನಾಗಿ ವನದಲ್ಲಿ ವಾಸಿಸಬೇಕು.

---

**ಮೂಲದಲ್ಲಿ ೨-೩ನೆಯ ಶ್ಲೋಕಗಳು ಪ್ರಕ್ಷಿಪ್ತವೆಂದು ಕುಂಡಲಿಯಲ್ಲಿ ಸೇರಿಸಲಾಗಿದೆ.**

**ಗೃಹಸ್ಥಸ್ತು ಯದಾ ಪಶ್ಯೇದ್ವಲೀಃಪಲಿತಮಾತ್ಮನಃ ।**
**ಅಪತ್ಯಸ್ಯೈವ ಚಾಪತ್ಯಂ ತದಾರಣ್ಯಂ ಸಮಾಶ್ರಯೇತ್ ॥ ೪ ॥**

**ಸಂತ್ಯಜ್ಯ ಗ್ರಾಮ್ಯಮಾಹಾರಂ ಸರ್ವಂ ಚೈವ ಪರಿಚ್ಛದಂ ।**
**ಪುತ್ರೇಷು ಭಾರ್ಯಾಂ ನಿಕ್ಷಿಪ್ಯ ವನಂ ಗಚ್ಛೇತ್ಸಹೈವ ವಾ ॥ ೫ ॥**

**ಅಗ್ನಿಹೋತ್ರಂ ಸಮಾದಾಯ ಗೃಹ್ಯಂ ವಾಗ್ನಿಪರಿಚ್ಛದಂ ।**
**ಗ್ರಾಮಾದರಣ್ಯಂ ನಿಃಸೃತ್ಯ ನಿವಸೇದ್ದ್ವಿಜಿತೇಂದ್ರಿಯಃ ॥ ೬ ॥**

**ಮುನ್ಯನ್ನೈರ್ವಿವಿಧೈರ್ಮೇಧ್ಯೈಃ ಶಾಕಮೂಲಫಲೇನ ವಾ ।**
**ಸರ್ವಾನೇವ ಮಹಾಯಜ್ಞಾನ್ನಿರ್ವಪೇದ್ವಿಧಿಪೂರ್ವಕಂ ॥ ೭ ॥**

---

ವಾನಪ್ರಸ್ಥನಾಗಬೇಕೆಂದು ತಾತ್ಪರ್ಯ. ಗೃಹಸ್ಥಧರ್ಮದಲ್ಲಿರುವವನು ಯಾವಾಗ ತನಗೆ ನರೆಯುಂಟಾಗುವುದನ್ನು ಮುಖ ಮುಂತಾದ ಅವಯವಗಳಲ್ಲಿ ಸುಕ್ಕುಸುಕ್ಕಾದ ಚರ್ಮದ ಮಡಿಕೆಯನ್ನೂ ಸಹ ನೋಡುತ್ತಾನೆಯೋ ಅಂದರೆ ವಾರ್ಧಕ್ಯದ ಪ್ರಾರಂಭಾವಸ್ಥೆ ಎಂದು ತಾತ್ಪರ್ಯ ಮತ್ತು ಮಕ್ಕಳ ಮಕ್ಕಳನ್ನೂ ಸಹ ನೋಡುತ್ತಾನೆಯೋ ಆಗ ಅರಣ್ಯವನ್ನು ಆಶ್ರಯಿಸಿ ವಾನಪ್ರಸ್ಥನಾಗಬೇಕು.

೫–೬. ಗ್ರಾಮದಲ್ಲಿ ತಾನು ಸೇವಿಸುತ್ತಿದ್ದ ಆಹಾರವನ್ನೂ ಅಲ್ಲಿದ್ದ ತನ್ನ ಪರಿವಾರವನ್ನೂ ಬಿಟ್ಟು ಪತ್ನಿಯನ್ನು ಪುತ್ರರ ವಶದಲ್ಲಿಟ್ಟು ಅಥವಾ ಪತ್ನಿಯೊಡನೆಯಾಗಲಿ ವನವನ್ನು ಹೊಂದಬೇಕು. ಅಗ್ನಿ ಹೋತ್ರದಿಂದಾಗಲಿ ಅಥವಾ ಸಪರಿಕರವಾದ ಗೃಹ್ಯಾಗ್ನಿಯನ್ನು ಹೊಂದಿಯಾಗಲಿ ಗ್ರಾಮದಿಂದ ಹೊರಟು ಅರಣ್ಯವನ್ನು ಹೊಂದಿ ಅಲ್ಲಿ ಜಿತೇಂದ್ರಿಯನಾಗಿ ವಾಸಿಸಬೇಕು. ಪತ್ನೀಸಹಿತನಾಗಿ ವಾನಪ್ರಸ್ಥನಾಗುವ ಸಂಭವದಲ್ಲಿ ಶ್ರೌತಾಗ್ನಿ ಅಥವಾ ಗೃಹ್ಯಾಗ್ನಿಯನ್ನು ಹೊಂದಿ ಹೊರಡಬೇಕೆಂದು ತಾತ್ಪರ್ಯ.

೭–೮. ಋಷಿಗಳಿಗೆ ಅರ್ಹವಾದ ಪರಿಶುದ್ಧವಾದ ಆಹಾರದಿಂದಾಗಲಿ ಶಾಕ ಫಲ ಮೂಲ, ಮುಂತಾದವುಗಳಿಂದಲೇ ಆಗಲಿ ಎಲ್ಲಾ ಮಹಾ ಯಜ್ಞಗಳನ್ನೂ ಅಲ್ಲಿಯೇ ಯಥಾವಿಧಿಯಾಗಿ ನಡೆಸುತ್ತಿರಬೇಕು. ಕೃಷ್ಣಾಜಿನವನ್ನಾಗಲಿ ನಾರು

ವಸೀತ ಚರ್ಮ ಚೀರಂ ವಾ ಸಾಯಂ ಸ್ನಾಯಾತ್ಪ್ರಗೇ ತಥಾ ।
ಜಟಾಶ್ಚ ಬಿಭೃಯಾನ್ನಿತ್ಯಂ ಶ್ಮಶ್ರುಲೋಮನಖಾಂಸ್ತಥಾ ॥ ೮ ॥

ಯದ್ಭಕ್ಷ್ಯಂ ಸ್ಯಾತ್ತತೋ ದದ್ಯಾದ್ಬಲಿಂ ಭಿಕ್ಷಾಂ ಚ ಶಕ್ತಿತಃ
ಸಮೂಲಫಲಭಿಕ್ಷಾಭಿರರ್ಚಯೇದಾಶ್ರಮಾಗತಾನ್ ॥ ೯ ॥

ಸ್ವಾಧ್ಯಾಯನಿತ್ಯಯುಕ್ತಃ ಸ್ಯಾದ್ದಾಂತೋ ಮೈತ್ರಃ ಸಮಾಹಿತಃ ।
ದಾತಾ ನಿತ್ಯಮನಾದಾತಾ ಸರ್ವಭೂತಾನುಕಂಪಕಃ ॥ ೧೦ ॥

ವೈತಾನಿಕಂ ಚ ಜುಹುಯಾದಗ್ನಿಹೋತ್ರಂ ಯಥಾವಿಧಿ ।
ದರ್ಶಯನ್ಸ್ಕಂದಯನ್ ಪರ್ವಂ ಪೌರ್ಣಮಾಸೀಂ ಚ ಯೋಗತಃ ॥ ೧೧ ॥

ಋಕ್ಷೇಷ್ಟ್ಯಾಗ್ರಯಣಂ ಚೈವ ಚಾತುರ್ಮಾಸ್ಯಾನಿ ಚಾಹರೇತ್ ।
ಉತ್ತರಾಯಣಂ ಚಕ್ರಮಶೋ ದಕ್ಷಿಣಾಯನಮೇವ ಚ ॥ ೧೨ ॥

---

ಮಡಿಯನ್ನಾಗಲಿ ಉಡಬೇಕು. ಸಾಯಂಕಾಲದಲ್ಲಿಯೂ, ಪ್ರಾತಃಕಾಲದಲ್ಲಿಯೂ ಸ್ನಾನಮಾಡಬೇಕು. ಜಟೆಗಳನ್ನೂ, ಗಡ್ಡ, ಮೀಸೆ, ಉಗುರು, ಲೋಮ ಮೊದಲಾದವುಗಳನ್ನು ಛೇದಿಸದೆ ಯಾವಾಗಲೂ ಧರಿಸಿರಬೇಕು.

೯-೧೧. ಯಾವ ವಸ್ತುವು ಎಲ್ಲಿ ಎಷ್ಟುಮಟ್ಟಿಗೆ ಲಭಿಸುತ್ತದೆಯೋ ಆವಸ್ತುಗಳಿಂದಲೇ ಅಲ್ಲಿ ಬಲಿ ಭಿಕ್ಷಾ ಮೊದಲಾದವುಗಳನ್ನು ಕೊಡಬೇಕು ಆಶ್ರಮಕ್ಕೆ ಬಂದವರನ್ನು ಫಲ ಮೂಲಾದಿಗಳಿಂದ ಮಾಡಿದ ಭಿಕ್ಷೆಯಿಂದ ಪೂಜಿಸಬೇಕು. ನಿತ್ಯವೂ ವೇದಾಧ್ಯಯನ ತತ್ಪರನಾಗಿ ಶಾಂತಿ ದಾಂತ್ಯಾದಿಗಳಿಂದಲೂ ಮೈತ್ರಿಯಿಂದಲೂ ನಿರ್ವಿಕಾರಚಿತ್ತನಾಗಿರಬೇಕು. ನಿತ್ಯವೂ ದಾನಶೀಲನಾಗಿಯೂ ಪ್ರತಿಗ್ರಹ ವಿಮುಖನಾಗಿಯೂ ಸರ್ವಪ್ರಾಣಿಗಳಲ್ಲಿಯೂ ದಯೆಯುಳ್ಳವನಾಗಿಯೂ ಇರಬೇಕು. ಅಗ್ನಿಹೋತ್ರವೇ ಮೊದಲಾದ ಯಾಗೀಯ ಕರ್ಮಗಳನ್ನು ಯಥಾವಿಧಿಯಾಗಿ ಮಾಡಬೇಕು. ಪರ್ವಕಾಲಗಳಲ್ಲಿಯೂ, ಪೂರ್ಣಿಮೆಯಲ್ಲಿಯೂ ಯೋಗ ದಶೆಗೆ ತಕ್ಕಂತೆ ಕಾಯಕ್ಲೇಶ ಹೊಂದಿರಬೇಕು.

೧೨-೧೩. ಋಕ್ಷೇಷ್ಟಿ ಆಗ್ರಯಣ ಚಾತುರ್ಮಾಸ್ಯ ಮುಂತಾದುವನ್ನು ಕ್ರಮವಾಗಿ ನೆರವೇರಿಸಬೇಕು ಉತ್ತರಾಯಣದಲ್ಲಿಯೂ, ದಕ್ಷಿಣಾಯಣದಲ್ಲಿಯೂ ಸಹ

ವಾಸಂತೈಃ ಶಾರದೈರ್ಮೇಧ್ಯೈರ್ಮುನ್ಯನ್ನೈಃ ಸುಸಮಾಹೃತೈಃ ।
ಪುರೋಡಾಶಾಂಶ್ಚರೂಂಶ್ಚೈವ ವಿಧಿವನ್ನಿರ್ವಪೇತ್ಪೃಥಕ್ ॥ ೧೩ ॥

ದೇವತಾಭ್ಯಸ್ತು ತದ್ಧುತ್ವಾ ವನ್ಯಂ ಮೇಧ್ಯಂತರಂ ಹವಿಃ ।
ಶೇಷಮಾತ್ಮನಿ ಯುಂಜೀತ ಲವಣಂ ಚ ಸ್ವಯಂ ಕೃತಂ ॥ ೧೪ ॥

ಸ್ಥಲಜೋದಕಶಾಕಾನಿ ಪುಷ್ಪಮೂಲಫಲಾನಿ ಚ ।
ಮೇಧ್ಯವೃಕ್ಷೋದ್ಭವಾನ್ಯದ್ಯಾತ್ ಸ್ನೇಹಾಂಶ್ಚ ಫಲಸಂಯುತಾನ್ ॥ ೧೫ ॥

ವರ್ಜಯೇನ್ಮಧುಮಾಂಸಾನಿ ಭೌಮಾನಿ ಕವಕಾನಿ ಚ ।
ಭೂಸ್ತೃಣಂ ಶಿಗ್ರುಕಂ ಚೈವ ಭಲ್ಲಾತಕಫಲಾನಿ ಚ ॥ ೧೬ ॥

ತ್ಯಜೇದಾಶ್ವಯುಜೇ ಮಾಸಿ ಮುನ್ಯನ್ನಂ ಪೂರ್ವಸಂಚಿತಂ ।
ಜೀರ್ಣಾನಿ ಚೈವ ವಾಸಾಂಸಿ ಪುಷ್ಪಮೂಲಫಲಾನಿ ಚ ॥ ೧೭ ॥

---

ವಸಂತ ಮತ್ತು ಶರತ್ ಈ ಋತುಗಳಲ್ಲಿ ಉಂಟಾದ ಶುದ್ಧವಾದ ಋಷಿಗಳಿಗೆ ಅರ್ಹವಾದ ಆಹಾರ ಪದಾರ್ಥಗಳನ್ನು ಸರಿಯಾದ ರೀತಿಯಿಂದ ಶೇಖರಿಸಿ ಪುರೋಡಾಶ ಚರು ಮುಂತಾದವುಗಳನ್ನು ಮಾಡಿ ಆಯಾಯ ಕರ್ಮಕ್ಕೆ ತಕ್ಕಂತೆ ಬೇರೆ ಬೇರೆಯಾಗಿ ಯಥಾವಿಧಿಯಾಗಿ ಹೋಮಿಸಬೇಕು.

೧೪-೧೫ ವನದಲ್ಲಿ ಹುಟ್ಟಿದ ಪರಿಶುದ್ಧವಾದ ಆ ಹವಿಸ್ಸನ್ನು ದೇವತೆಗಳಿಗೆ ಹೋಮಮಾಡಿ ಉಳಿದದ್ದನ್ನು ತಾನಾಗಿ ಮಾಡಿಕೊಂಡಿರುವ ಉಪ್ಪನ್ನೂ ಸಹ ತನ್ನ ಆಹಾರಕ್ಕೆ ಉಪಯೋಗಿಸಿಕೊಳ್ಳಬೇಕು. ನೆಲದಲ್ಲಿಯೂ, ನೀರಿನಲ್ಲಿಯೂ ಬೆಳೆದ ಕಾಯಿಪಲ್ಯಗಳನ್ನೂ, ಶುದ್ಧವಾದ ಮರದಿಂದುಂಟಾದ ಫಲಪುಷ್ಪ ಗೆಡ್ಡೆ ಗೆಣಸುಗಳನ್ನೂ, ಜಿಡ್ಡಿನಿಂದ ಕೂಡಿದ ಫಲಗಳನ್ನೂ ಉಪಯೋಗಿಸಬೇಕು.

೧೬-೧೭. ಜೇನು, ಮಾಂಸ ಮೊದಲಾದುವನ್ನೂ, ಭೂಮಿಯಲ್ಲಿ ಹುಟ್ಟಿದ ನಾಯಿಕೊಡೆಯನ್ನೂ, ಕಾದಂಬೆ, ಹುಲ್ಲು, ನುಗ್ಗೆ ಮತ್ತು ಗೇರುಹಣ್ಣು ಇವನ್ನೂ ಉಪಯೋಗಿಸಬಾರದು ಮೊದಲು ಸಂಗ್ರಹಿಸಿಕೊಂಡಿದ್ದ ಮುನಿಗಳಿಗೆ ಅರ್ಹವಾದ ಧಾನ್ಯವೇ ಮೊದಲಾದ ಅನ್ನ ಸಾಮಗ್ರಿಗಳನ್ನು ಆಶ್ವಯುಜಮಾಸದಲ್ಲಿ ತ್ಯಜಿಸಬೇಕು. ಹಳೆಯ ಧಾನ್ಯವನ್ನು ತ್ಯಜಿಸಬೇಕೆಂದು ತಾತ್ಪರ್ಯ. ಜೀರ್ಣವಾದ ವಸ್ತ್ರಗಳನ್ನೂ ಸಹ ತ್ಯಜಿಸಬೇಕು.

ನ ಫಾಲಕೃಷ್ಟಮಶ್ನೀಯಾದುತ್ಸೃಷ್ಟಮಪಿ ಕೇನಚಿತ್ ।
ನ ಗ್ರಾಮಜಾತಮನ್ನಂ ಚ ಪುಷ್ಪಾಣಿ ಚ ಫಲಾನಿ ಚ ॥ ೧೮ ॥

ಅಗ್ನಿಪಕ್ವಾಶನೋ ವಾ ಸ್ಯಾತ್ಕಾಲಪಕ್ವಭುಗೇವ ವಾ ।
ಅಶ್ಮವಿದ್ಧೋ ಭವೇದ್ವಾಪಿ ದನ್ತೋಲೂಖಲಿಕಸ್ತಥಾ ॥ ೧೯ ॥

ಸದ್ಯಃ ಪ್ರಕ್ಷಾಲಿಕೋ ವಾ ಸ್ಯಾನ್ಮಾಸಸಂಚಯಿಕೋಽಪಿ ವಾ ।
ಷಣ್ಮಾಸನಿಚಯೋ ವಾ ಸ್ಯಾತ್ಸಮಾನಿ ಚ ಯ ಏವ ವಾ ॥ ೨೦ ॥

ನಕ್ತಂ ವಾನ್ನಂ ಸಮಶ್ನೀಯಾದ್ದಿವಾಚಾಹೃತ್ಯ ಶಕ್ತಿತಃ ।
ಚತುರ್ಥಕಾಲಿಕೋ ವಾ ಸ್ಯಾತ್ಸ್ಯಾದ್ವಾಚಾಷ್ಟಮಕಾಲಿಕಃ ॥ ೨೧ ॥

ಚಾಂದ್ರಾಯಣವಿಧಾನೈರ್ವಾ ಶುಕ್ಲೇ ಕೃಷ್ಣೇ ಚ ವರ್ತಯೇತ್ ।
ಪಕ್ಷಾಂತಯೋರ್ವಾಪ್ಯಶ್ನೀಯಾದ್ಯವಾಗೂಂ ಕ್ವಥಿತಾಂ ಸಕೃತ್ ॥ ೨೨ ॥

---

೧೮–೨೦. ನೇಗಿಲಿನಿಂದ ಉತ್ತು ಬೆಳೆದ ಧಾನ್ಯವನ್ನೇ ಆಗಲಿ ಮತ್ತೊಬ್ಬನಿಂದ ಬಿಸಾಡಲ್ಪಟ್ಟ ಧಾನ್ಯವನ್ನೇ ಆಗಲಿ ತಂದು ಭುಂಜಿಸಬಾರದು. ಗ್ರಾಮದಲ್ಲಿ ಬೆಳೆದ ಆಹಾರ ವಸ್ತುಗಳನ್ನೂ, ಫಲಪುಷ್ಪಾದಿಗಳನ್ನೂ ಭಕ್ಷಿಸಬಾರದು. ಅಗ್ನಿಯಿಂದ ಪಾಕಹೊಂದಿದ ಆಹಾರದಿಂದಾಗಲಿ, ಕಾಲಪಕ್ವವಾದ ಆಹಾರದಿಂದಾಗಲಿ, ಕಲ್ಲಿನ ಮೇಲಿಟ್ಟು ಪುಡಿ ಮಾಡಿದ ಆಹಾರದಿಂದಾಗಲಿ ಅಥವಾ ಹಲ್ಲಿನಿಂದ ಕಚ್ಚಿ ತಿನ್ನುವ ಆಹಾರದಿಂದಾಗಲಿ, ಆಯಾಯ ಕಾಲಕ್ಕೊದಗಿದ ಆಹಾರವನ್ನು ತೊಳೆದು ತಿನ್ನುವುದರಿಂದಾಗಲಿ ಅಥವಾ ಒಂದು ತಿಂಗಳಿಗೆ ಸಾಕಾಗುವ ಆಹಾರವನ್ನು ಶೇಖರಿಸಿ ಉಪಯೋಗಿಸುವುದರಿಂದಾಗಲಿ ಆರು ತಿಂಗಳ ಅಥವಾ ವರ್ಷದ ಆಹಾರ ಸಂಗ್ರಹದಿಂದಾಗಲಿ ಜೀವಿಸಬಹುದು

೨೧–೨೨. ಹಗಲಿನಲ್ಲೆಲ್ಲಾ ಯಥಾಶಕ್ತಿ ಆಹಾರವನ್ನು ಸಂಗ್ರಹಿಸಿ ರಾತ್ರಿಯಲ್ಲಿಯಾದರೂ ಭುಂಜಿಸಬಹುದು. ಅಥವಾ ಹಗಲಿನ ನಾಲ್ಕನೆಯ ಯಾಮದಲ್ಲಿಯಾಗಲಿ, ಎಂಟನೆಯ ಯಾಮದಲ್ಲಿಯಾಗಲಿ ಭುಂಜಿಸಬೇಕು. ಶುಕ್ಲಪಕ್ಷದಲ್ಲಿಯೂ. ಕೃಷ್ಣಪಕ್ಷದಲ್ಲಿಯೂ ಸಹ ಚಂದ್ರಾಯಣದ ವಿಧಾನ ಕ್ರಮವನ್ನು ಅನುಸರಿಸಬೇಕು. ಪ್ರತಿಯೊಂದು ಪಕ್ಷದ ಕೊನೆಯಲ್ಲಿ ಒಂದಾವರ್ತಿಯಾದರೂ ಕುದಿಸಿದ ಗಂಜಿಯನ್ನು ಸೇವಿಸಬೇಕು.

ಪುಷ್ಪಮೂಲಫಲೈರ್ವಾಪಿ ಕೇವಲೈರ್ವರ್ತಯೇತ್ಸದಾ ।
ಕಾಲಪಕ್ವೈಃ ಸ್ವಯಂ ಶೀರ್ಣೈಃ ವೈಖಾನಸಪಥಿ ಸ್ಥಿತಃ ॥ ೨೩ ॥

ಭೂಮೌ ವಿಪರಿವರ್ತೇತ ತಿಷ್ಠೇದ್ವಾ ಪ್ರಪದೈರ್ದಿನಂ ।
ಸ್ಥಾನಾಸನಾಭ್ಯಾಂ ವಿಹರೇತ್ಸವನೇಷೂಪಯನ್ನಪಃ ॥ ೨೪ ॥

ಗ್ರೀಷ್ಮೇ ಪಂಚತಪಾಸ್ತು ಸ್ಯಾದ್ವರ್ಷಾಸು ಅಸಾರಭಾಗ್ಭವೇತ್ ।
ಆರ್ದ್ರವಾಸಾಸ್ತು ಹೇಮಂತೇ ಕ್ರಮಶೋ ವರ್ಧಯಂಸ್ತಪಃ ॥ ೨೫ ॥

ಉಪಸ್ಪೃಶಂಸ್ತ್ರಿಷವಣಂ ಪಿತೄನ್ ದೇವಾಂಶ್ಚ ತರ್ಪಯೇತ್ ।
ತಪಶ್ಚರಂಶ್ಚೋಗ್ರತರಂ ಶೋಷಯೇದ್ದೇಹಮಾತ್ಮನಃ ॥ ೨೬ ॥

ಅಗ್ನೀನಾತ್ಮನಿ ವೈತಾನಾನ್ ಸಮಾರೋಪ್ಯ ಯಥಾವಿಧಿ ।
ಅನಗ್ನಿರನಿಕೇತಶ್ಚ ಮುನಿರ್ಮೂಲಫಲಾಶನಃ ॥ ೨೭ ॥

---

೨೩–೨೪. ಅಥವಾ ಹೂವುಗಳು ಗೆಡ್ಡೆಗೆಣಸುಗಳು, ಫಲಗಳು ಇವುಗಳಿಂದಲೇ ಯಾವಾಗಲೂ ದೇಹಯಾತ್ರೆಯನ್ನು ನಿರ್ವಹಿಸಬೇಕು. ತಾನಾಗಿಯೇ ಆಯಾಯ ಕಾಲದಲ್ಲಿ ಹಣ್ಣಾಗಿ ಕೆಳಗೆ ಬಿದ್ದ ಹಣ್ಣುಗಳಿಂದಲೇ ವೈಖಾನಸರ ರೀತಿಯನ್ನು ಅನುಸರಿಸಿ ಜೀವಿಸಬೇಕು ರಾತ್ರಿಯಲ್ಲಿ ಭೂಮಿಯ ಮೇಲೆಯೇ ಮಲಗಬೇಕು. ಹಗಲಿನಲ್ಲಿ ಪಾದಾಗ್ರದಿಂದ ನಿಂತೇ ಇರಬೇಕು. ಯಜ್ಞಾದಿಗಳಲ್ಲಿ ಮಹಾನದಿಯ ಜಲದಲ್ಲಿ ಸ್ನಾನಮಾಡಿ ಯೋಗಾರ್ಹವಾದ ಸ್ಥಾನ ಮತ್ತು ಆಸನಗಳಿಂದಲೇ ವಿಹರಿಸಬೇಕು.

೨೫–೨೬. ಗ್ರೀಷ್ಮಋತುವಿನಲ್ಲಿ ಪಂಚಾಗ್ನಿ ತಪಸ್ಸನ್ನು ಮಾಡಬೇಕು. ವರ್ಷಾಕಾಲದಲ್ಲಿ ಮಳೆಯಲ್ಲಿ ನಿಂತು ತಪಸ್ಸನ್ನು ನಡೆಸಬೇಕು. ಹಿಮಂತಋತುವಿನಲ್ಲಿ ಒದ್ದೆಯ ವಸ್ತ್ರವನ್ನುಟ್ಟು ಕ್ರಮವಾಗಿ ಕ್ಲೇಶಸಾಧ್ಯವಾದ ಈ ತಪಸ್ಸನ್ನು ಅಭಿವೃದ್ಧಿಗೊಳಿಸಬೇಕು. ಮೂರು ಕಾಲದ ಸ್ನಾನದಲ್ಲಿಯೂ ಆಚಮನಮಾಡಿ ದೇವತೆಗಳನ್ನೂ, ಪಿತೃಗಳನ್ನೂ ತರ್ಪಿಸಬೇಕು. ಈ ರೀತಿ ಉಗ್ರವಾದ ತಪಸ್ಸಿನಿಂದ ದೇಹಶೋಷಣೆಯನ್ನು ಹೊಂದಬೇಕು.

೨೭–೨೯. ಶ್ರೌತಾಗ್ನಿಗಳನ್ನು ಯಥಾವಿಧಿಯಾಗಿ ಆತ್ಮಸಮಾರೋಪಣೆ ಮಾಡಿಕೊಂಡು ನಿರಗ್ನಿಯಾಗಿಯೂ, ನಿಯತವಾದ ವಾಸಸ್ಥಾನವಿಲ್ಲದವನಾಗಿಯೂ, ಗೆಡ್ಡೆಗೆಣಸು, ಫಲಗಳು ಇವುಗಳ ಆಹಾರದಿಂದ ಮುನಿಗಳ ವೃತ್ತಿಯನ್ನು ಅನುಸರಿಸ

ಅಪ್ರಪನ್ನಃ ಸುಖಾರ್ಥೇಷು ಬ್ರಹ್ಮಚಾರೀ ಧರಾಶ್ರಯಃ ।
ಶರಣೇಷು ಸಮಶ್ಚೈವ ವೃಕ್ಷಮೂಲನಿಕೇತನಃ || ೧೮ ||

ತಾಪಸೇಷ್ವೇವ ವಿಪ್ರೇಷು ಯಾತ್ರಿಕಂ ಭೈಕ್ಷಮಾಹರೇತ್ ।
ಗೃಹಮೇಧ್ಯೇಷು ಚಾನ್ಯೇಷು ದ್ವಿಜೇಷು ವನವಾಸಿಷು || ೧೯ ||

ಗ್ರಾಮಾದಾಹೃತ್ಯ ನಾಶ್ನೀಯಾದಷ್ಟೌ ಗ್ರಾಸಾನ್ ವನೇ ವಸನ್
ವಿವಿಧಾಶ್ಚೋಪನಿಷದೋ ಹ್ಯಾತ್ಮಸಂಶುದ್ಧಯೇ ಶ್ರುತೀಃ || ೨೦ ||

ಋಷಿಭಿಃ ಬ್ರಾಹ್ಮಣೈಶ್ಚೈವ ಗೃಹಸ್ಥೈರೇವ ಸೇವಿತಾಃ ।
ವಿದ್ಯಾತಪೋಭಿವೃದ್ಧ್ಯರ್ಥಂ ಶರೀರಸ್ಯ ಚ ಶುದ್ಧಯೇ || ೨೧ ||

ಅಪರಾಜಿತಾಂ ವಾಸ್ಥಾಯ ವ್ರಜೇದ್ದಿಶಮಜಿಹ್ಮಗಃ ।
ಆನಿಪಾತಾಚ್ಛರೀರಸ್ಯ ಯುಕ್ತೋ ವಾರ್ಯನಿಲಾಶನಂ || ೨೨ ||

---

ಬೇಕು. ಸುಖಕಾರಣಗಳಿಗೆ ಅಧೀನನಾಗದೆ ಬ್ರಹ್ಮಚರ್ಯ ಹೊಂದಿ ಭೂಮಿಶಾಯಿಯಾಗಿರಬೇಕು. ಮರಗಳ ಕೆಳಭಾಗಗಳಿಗೂ, ಮನೆಗಳಿಗೂ ವ್ಯತ್ಯಾಸವಿಲ್ಲದಂತಹ ಸಾಮ್ಯಬುದ್ಧಿಯನ್ನು ಹೊಂದಿರಬೇಕು. ತಾಪಸರಲ್ಲಿ, ಅದರಲ್ಲೂ ಬ್ರಾಹ್ಮಣರಲ್ಲಿ ಮತ್ತು ವನವಾಸಿಗಳಾದ ಗೃಹಸ್ಥರಲ್ಲೂ ಶುದ್ಧರಾಗಿರುವ ಇತರ ದ್ವಿಜರಲ್ಲಿಯೂ ಸಂಚಾರ ಕಾಲದಲ್ಲಿ ಭಿಕ್ಷೆಯನ್ನು ಹೊಂದಬಹುದು.

೨೦-೨೧ ಗ್ರಾಮದಿಂದ ಆಹಾರ ಪದಾರ್ಥಗಳನ್ನು ತಂದು ಭುಂಜಿಸಬಾರದು. ಕಾಡಿನಲ್ಲಿಯೇ ಇದ್ದು ಅಲ್ಲಿರುವ ಆಹಾರವನ್ನೇ ಎಂಟು ಗ್ರಾಸ ಪರಿಮಾಣದಲ್ಲಿ ಭುಂಜಿಸಬೇಕು. ಆತ್ಮಶುದ್ಧಿಗಾಗಿಯೂ, ವಿದ್ಯಾ ಮತ್ತು ತಪಸ್ಸಿನ ವೃದ್ಧಿಗಾಗಿಯೂ, ಶರೀರ ಶುದ್ಧಿಗಾಗಿಯೂ ಕೂಡ ಋಷಿಗಳಿಂದಲೂ, ಬ್ರಾಹ್ಮಣೋತ್ತಮರಿಂದಲೂ, ಗೃಹಸ್ಥರಿಂದಲೂ ಸೇವಿಸಲ್ಪಡುವ ನಾನಾ ವಿಧವಾದ ಉಪನಿಷತ್ತುಗಳನ್ನೂ, ವೇದ ಭಾಗಗಳನ್ನೂ ಪಠಿಸುತ್ತಿರಬೇಕು.

೨೨-೨೩. ಅಥವಾ ಅಪರಾಜಿತಾ ಎಂಬ ಯೋಗಸಿದ್ಧಿಯನ್ನು ಹೊಂದಿ ಋಜುಗತಿಯಿಂದ ಒಂದೊಂದು ದಿಕ್ಕನ್ನು ಕುರಿತು ಹೊರಡಬೇಕು. ಶರೀರವು ಕೆಳಗೆ ಬೀಳುವವರಿಗೂ ನೀರು ವಾಯು ಇವುಗಳ ಭಕ್ಷಣೆಯಿಂದಿರಬೇಕು. ಈಗ ಹೇಳಿರುವ

ತ್ಯಕ್ತ್ವಾ ತನುಂ ಸಮ್ಯಗಥೋದಿತಸ್ಯ
ವಿಧೇರಥೈಕಸ್ಯ ವನೇ ನಿವಾಸೀ ।
ಪ್ರಾಪ್ನೋತಿ ಲೋಕಂ ಸಪಿತಾಮಹಸ್ಯ
ತ್ಯಕ್ತ್ವಾ ಭಯಂ ನಾತ್ರ ವಿಚಾರ್ಯಮಸ್ತಿ || ೩೩ ||

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ವಾನಪ್ರಸ್ಥಾಶ್ರಮಕಥನಂ ನಾಮ
ತ್ರಿಂಶದುತ್ತರಶತತಮೋಽಧ್ಯಾಯಃ

---

ಯಾವುದಾದರೊಂದು ವಿಧಿಯನ್ನಾಶ್ರಯಿಸಿ ವನದಲ್ಲಿಯೇ ಇದ್ದು ದೇಹವನು ಬಿಟ್ಟು ಹೊರಟವನು ಯಾವ ಭಯವೂ ಇಲ್ಲದೆ ಚತುರ್ಮುಖನ ಲೋಕವನ್ನೇ ಹೊಂದುತ್ತಾನೆ. ಈ ವಿಷಯದಲ್ಲಿ ವಿಚಾರಮಾಡಬೇಕಾದುದಿಲ್ಲ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ
ಸಂವಾದದಲ್ಲಿ ಭಾರ್ಗವನನ್ನು ಕುರಿತು ಪುಷ್ಕರನ ಉಪಾಖ್ಯಾನದಲ್ಲಿ
ವಾನಪ್ರಸ್ಥಾಶ್ರಮ ಕಥನವೆಂಬ ನೂರ ಮೂವತ್ತನೆಯ
ಅಧ್ಯಾಯ ಮುಗಿದಿದೆ.



## ನೂರ ಮೂವತ್ತನೆಯ ಅಧ್ಯಾಯದ ಸಾರಾಂಶ.

ಈ ಅಧ್ಯಾಯದಲ್ಲಿ ಗೃಹಸ್ಥಾಶ್ರಮಿಯಾಗಿದ್ದು ಪೌತ್ರರನ್ನು ನೋಡಿದ ಬಳಿಕ ವಾನಪ್ರಸ್ಥಾಶ್ರಮ ಹೊಂದಿ ಕಾಡಿನಲ್ಲಿ ವಾಸಿಸಬೇಕೆಂದೂ ಅಲ್ಲಿಯೇ ದೇಹವಿಯೋಗ ಹೊಂದಬೇಕೆಂದೂ ನಿರೂಪಿಸಲಾಗಿದೆ.

|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಏಕತ್ರಿಂಶದುತ್ತರಶತತಮೋಽಧ್ಯಾಯಃ

### || ಪುಷ್ಕರ ಉವಾಚ ||

**ವನೇಷು ಚ ವಿಹೃತ್ಯೈವಂ ತೃತೀಯಂ ಭಾಗಮಾಯುಷಃ ।**
**ಚತುರ್ಥಮಾಯುಷೋ ಭಾಗಂ ತ್ಯಕ್ತ್ವಾಸಂಗಃ ಪರಿವ್ರಜೇತ್ || ೧ ||**

**ಆಶ್ರಮಾದಾಶ್ರಮಂ ಗತ್ವಾ ಹುತಹೋಮೋ ಜಿತೇಂದ್ರಿಯಃ ।**
**ಭಿಕ್ಷಾಬಲಪರಿಶ್ರಾನ್ತಃ ಪ್ರವ್ರಜೇದ್ವ್ರತವರ್ಜಿತಃ || ೨ ||**

**ಋಣಾನಿ ತ್ರೀಣ್ಯಪಾಕೃತ್ಯ ಮನೋ ಮೋಕ್ಷೇ ನಿವೇಶಯೇತ್ ।**
**ಅನಪಾಕೃತ್ಯ ಚ ಋಣಂ ಮೋಕ್ಷಮಿಚ್ಛನ್ ವ್ರಜತ್ಯಧಃ || ೩ ||**

---

### ನೂರ ಮೂವತ್ತೊಂದನೇ ಅಧ್ಯಾಯ

೧-೨. ಈ ರೀತಿಯಾಗಿ ತನ್ನ ಆಯಸ್ಸಿನ ಮೂರನೆಯ ಭಾಗವನ್ನು ವಾನಪ್ರಸ್ಥಾಶ್ರಮದಿಂದ ಕಳೆದು, ಆಯಸ್ಸಿನ ನಾಲ್ಕನೆಯದಾದ ಕೊನೆಯ ಭಾಗದಲ್ಲಿ ಸರ್ವಸಂಗವನ್ನೂ ತ್ಯಜಿಸಿ ಪರಿವ್ರಾಜಕನಾಗಬೇಕು. ಕಾಡಿನಲ್ಲಿರುವ ಆಶ್ರಮಗಳಲ್ಲಿಯೇ ಯಾವುದಾದರೊಂದು ಆಶ್ರಮವನ್ನು ಹೊಂದಿ ಸನ್ಯಾಸಾಶ್ರಮಕ್ಕೆ ವಿಹಿತವಾಗಿರುವ ಹೋಮಾದಿಗಳನ್ನು ಮಾಡಿ ಜಿತೇಂದ್ರಿಯನಾಗಿ ಭಿಕ್ಷಾಟನದಿಂದಲೇ ಶ್ರಮಿಸುತ್ತಾ ಎಲ್ಲಾವ್ರತಗಳನ್ನೂ ಬಿಟ್ಟು ಸನ್ಯಾಸಿಯಾಗಬೇಕು.

೩-೪. ದೇವ, ಋಷಿ, ಪಿತೃ ಋಣಗಳೆಂಬ ಮೂರು ಋಣಗಳನ್ನೂ ತೀರಿಸಿ ನಂತರ ಮೋಕ್ಷಾಪೇಕ್ಷೆಯಿಂದ ನಾಲ್ಕನೆಯ ಸನ್ಯಾಸಾಶ್ರಮವನ್ನು ಸ್ವೀಕರಿಸಬೇಕು. ಈ ವಿಧವಾದ ಋಣತ್ರಯಗಳನ್ನು ಪರಿಹರಿಸದೆ ಮೋಕ್ಷವನ್ನು ಅಪೇಕ್ಷಿಸುವವನು

**ಅಧೀತ್ಯ ವಿಧಿವದ್ವೇದಾನ್ ಪುತ್ರಾಂಶ್ಚೋತ್ಪಾದ್ಯ ಧರ್ಮತಃ ।**
**ಇಷ್ಟ್ವಾ ಚ ಶಕ್ತಿತೋ ಯಜ್ಞೈಃ ಮನೋಮೋಕ್ಷೇ ನಿವೇಶಯೇತ್ ॥ ೪ ॥**

**ಅನಧೀತ್ಯ ದ್ವಿಜೋ ವೇದಾನ್ ಅನುತ್ಪಾದ್ಯ ತಥಾ ಸುತಾನ್ ।**
**ಅನಿಷ್ಟ್ವಾ ಚೈವ ಯಜ್ಞೈಶ್ಚ ಮೋಕ್ಷಮಿಚ್ಛನ್ ವ್ರಜತ್ಯಧಃ ॥ ೫ ॥**

**ಪ್ರಾಜಾಪತ್ಯಾಂ ನಿರೂಪ್ಯೇಷ್ಟಿಂ ಸರ್ವವೇದಾಂ ಸದಕ್ಷಿಣಾಂ ।**
**ಆತ್ಮನ್ಯಗ್ನೀನ್ ಸಮಾರೋಪ್ಯ ಪ್ರವ್ರಜತ್ಯಭಯಂ ಗೃಹೀ ॥ ೬ ॥**

**ತಸ್ಯ ತೇಜೋಮಯಾ ಲೋಕಾಃ ಭವಂತಿ ಬ್ರಹ್ಮವಾದಿನಃ ।**
**ಯಸ್ಮಾದಣ್ವಪಿ ಭೂತಾನಾಂ ದ್ವಿಜ ನೋತ್ಪದ್ಯತೇ ಭಯಂ ।**
**ತಸ್ಯ ದೇಹಾದ್ವಿಮುಕ್ತಸ್ಯ ಭಯಂ ನಾಸ್ತಿ ಕಥಂಚನ ॥ ೭ ॥**

---

ಅಧೋಗತಿಯನ್ನೇ ಹೊಂದುತ್ತಾನೆ. ಯಥಾವಿಧಿಯಾಗಿ ವೇದಾಧ್ಯಯನವನ್ನು ಬ್ರಹ್ಮಚರ್ಯಾಶ್ರಮದಲ್ಲಿ ನಡೆಸಿ ಅನಂತರ ಗೃಹಸ್ಥನಾಗಿ ಆಧರ್ಮಕ್ಕೆತಕ್ಕಂತೆ ಪುತ್ರರನ್ನು ಹೊಂದಿ, ಯಥಾಶಕ್ತಿ ಯಜ್ಞಯಾಗಾದಿಗಳನ್ನೂ ಮಾಡಿ ಅನಂತರ ಮೋಕ್ಷದಲ್ಲಿ ಮನಸ್ಸನ್ನಿಡಬೇಕು. (ಈ ಗ್ರಂಥಕಾರಮತದಲ್ಲಿ ಆಶ್ರಮಗಳಲ್ಲಿ ಕ್ರಮ ಪಕ್ಷವೇ ಅಭಿಮತವೆಂದು ತೋರುತ್ತದೆ.)

೫–೬. ದ್ವಿಜನಾದವನು ವೇದಾಧ್ಯಯನವನ್ನು ಮಾಡದೆಯೂ ಗೃಹಸ್ಥನಾಗಿದ್ದು ಪುತ್ರರನ್ನು ಹೊಂದದೆಯೂ, ಯಜ್ಞಯಾಗಾದಿಗಳನ್ನು ಮಾಡದೆಯೂ ಮೋಕ್ಷದಲ್ಲಿ ಆಶೆಪಟ್ಟು ಸನ್ಯಾಸಾಶ್ರಮವನ್ನು ಹೊಂದಿದಲ್ಲಿ ಅವನು ಪಾತಕಿಯಂತೆ ಅಧೋಗತಿಯನ್ನು ಹೊಂದುತ್ತಾನೆ. ಯಥಾವಿಧಿಯಾಗಿ ಈ ಮೋಕ್ಷಾಶ್ರಮವನ್ನು ಹೊಂದುವವನು ಸರ್ವ ವೇದಮಯವಾಗಿ ಪ್ರಾಜಾಪತ್ಯೇಷ್ಟಿಯನ್ನು ದಕ್ಷಿಣಾ ಸಾದ್ಗುಣ್ಯ ಪೂರ್ವಕವಾಗಿ ನೆರವೇರಿಸಿ ಅಗ್ನಿಗಳನ್ನು ಆತ್ಮನಲ್ಲಿ ಸಮಾರೋಪಮಾಡಿ ನಿರ್ಭಯನಾಗಿ ಸನ್ಯಾಸ ಹೊಂದಬೇಕು.

೭–೮. ಅಂತಹ ಬ್ರಹ್ಮವಾದಿಯಾದ ಯತಿಗೆ ತೇಜೋಮಯವಾದ ಲೋಕಗಳೇ ಲಭಿಸುತ್ತವೆ. ಏತಕ್ಕೆಂದರೆ ಅವನಿಂದ ಯಾವ ಭೂತಗಳಿಗೂ ಲೇಶಮಾತ್ರವೂ ಭಯಕ್ಕೆ ಕಾರಣವೇ ಇಲ್ಲ. ಆರೀತಿ ಯತಿಯಾಗಿದ್ದು ದೇಹವನ್ನು ಬಿಟ್ಟ ಎಹೊರಟ

ಆಗಾರಾದಭಿನಿಷ್ಕ್ರಾಂತಃ ಪವಿತ್ರೋಪಚಿತೋ ಮುನಿಃ ।
ಸಮುಪೋಢೇಷು ಕಾಮ್ಯೇಷು ನಿರಪೇಕ್ಷಃ ಪರಿವ್ರಜೇತ್ ॥ ೮ ॥

ಏವ ಏಕ ಚರೇನ್ನಿತ್ಯಂ ಸಿದ್ಧ್ಯರ್ಥಮಸಹಾಯವಾನ್ ।
ಸಿದ್ಧಿಮೇಕಸ್ಯ ತಾಂ ಪಶ್ಯನ್ನಜಹಾತಿ ನಹೀಯತೇ ॥ ೯ ॥

ಅನಗ್ನಿರನಿಕೇತಃ ಸ್ಯಾದ್ಗ್ರಾಮಮನ್ನಾರ್ಥಮಾಶ್ರಯೇತ್ ॥ ೧೦ ॥

ಉಪೇಕ್ಷಕೋಽಸಂಚಯಕೋ ಮುನಿರ್ಭಾವಸಮಾಹಿತಃ ।
ಕಪಾಲಂ ವೃಕ್ಷಮೂಲಾನಿ ಕುಚೈಲಮಸಹಾಯತಾ ।
ಮಮತಾ ನ್ಯೈವ ಸರ್ವಸ್ಮಿನ್ ಏತನ್ಮುಕ್ತಸ್ಯ ಲಕ್ಷಣಂ ॥ ೧೧ ॥

ನಾಭಿನಂದೇತ ಮರಣಂ ನಾಭಿನಂದೇತ ಜೀವಿತಂ ।
ಕಾಲಮೇವ ಪರೀಕ್ಷೇತ ನಿರ್ದೇಶಭೃತಕೋ ಯಥಾ ॥ ೧೨ ॥

---

ಆ ಚೇತನನಿಗೆ ಪುನಃ ಯಾವ ವಿಧದಿಂದಲೂ ಸಂಸಾರದ ಭಯವೇ ಇರುವುದಿಲ್ಲ. ಪರಿಶುದ್ಧವಾದ ಮುನಿಯ ವ್ರತದಲ್ಲಿರುವ ಆಯತಿಯು ಗೃಹಸ್ಥಾಶ್ರಮದಿಂದ ಹೊರಗೆ ಹೊರಟನಂತರ ಉತ್ಕಟವಾದ ಯಾವುದೊಂದು ಕಾಮ್ಯಫಲದಲ್ಲಿಯೂ ಆಶೆ ಇಡದೆ ಸನ್ಯಾಸಿಯಾಗಬೇಕು.

೯-೧೦. ಮೋಕ್ಷವೆಂಬ ತನ್ನ ಸಿದ್ಧಿಗಾಗಿ ಸಹಾಯವೆಲ್ಲವನ್ನೂ ಬಿಟ್ಟು ಏಕಾಕಿಯಾಗಿಯೇ ಇರಬೇಕು. ತನಗೆ ಬೇಕಾದ ಮೋಕ್ಷಸಿದ್ಧಿಯೊಂದನ್ನೇ ಗುರಿಯಿಟ್ಟು ಆ ಪ್ರಯತ್ನವನ್ನು ಬಿಡದೆಯೂ, ಮನೋದೌರ್ಬಲ್ಯ ಹೊಂದದೆಯೂ ಇರಬೇಕು. ಅಗ್ನಿರಹಿತನಾಗಿಯೂ ಮನೆಮಠವಿಲ್ಲದೆಯೂ ಇರಬೇಕು. ಅನ್ನಕ್ಕಾಗಿ ಗ್ರಾಮಕ್ಕೆ ಬಂದು ಭಿಕ್ಷಾರ್ಥಿಯಾಗಬೇಕು. ತನ್ನ ಸಿದ್ಧಿಯೊಂದು ಹೊರತು ಉಳಿದ ಎಲ್ಲಾ ವಿಷಯದಲ್ಲಿಯೂ ಉಪೇಕ್ಷೆಯಿಂದಲೂ, (ಉದಾಸೀನತೆ) ಅಸಂಗ್ರಹಶೀಲನಾಗಿಯೂ, ಮನನದಿಂದ ಕೂಡಿದವನಾಗಿಯೂ, ಶಾಂತಚಿತ್ತನಾಗಿಯೂ ಇರಬೇಕು.

೧೧-೧೩. ಭಿಕ್ಷಾಕಪಾಲ ಮರದಬುಡದಲ್ಲಿ ವಾಸ, ಜೀರ್ಣವಾದ ವಸ್ತ್ರ, ನಿಃಸಹಾಯತೆ ಎಲ್ಲಾ ಕಾರ್ಯಗಳಲ್ಲಿಯೂ ಅಥವಾ ಎಲ್ಲಾ ವಸ್ತುಗಳಲ್ಲಿಯೂ ಮಮತಾಬುದ್ಧಿ ಇಲ್ಲದಿರುವಿಕೆ ಇವೇ ಮೋಕ್ಷಾಶ್ರಮ ಹೊಂದಿದವನ ಲಕ್ಷಣ, ಮರಣವನ್ನು ಆಶಿಸಲೂ ಬಾರದು. ಬದುಕಿರಬೇಕೆಂದು ಆಶಿಸಲೂಬಾರದು. ನಿರ್ದೇಷಿ

**ದೃಷ್ಟಿಪೂತಂ ನ್ಯಸೇತ್ಪಾದಂ ವಸ್ತ್ರಪೂತಂ ಜಲಂ ಪಿಬೇತ್ ।**
**ಸತ್ಯಪೂತಾಂ ವದೇದ್ವಾಚಂ ಮನಃಪೂತಂ ಸಮಾಚರೇತ್ ॥ ೧೩ ॥**

**ಅತಿಜಡಾಂಸ್ತಿತಿಕ್ಷೇತ ನಾವಮನ್ಯೇತ ಕಂಚನ ॥ ೧೪ ॥**

**ನ ಚೈನಂ ಗೃಹಮಾಶ್ರಿತ್ಯ ವೈರಂ ಕುರ್ವೀತ ಕೇನಚಿತ್ ।**
**ಕ್ರುಧ್ಯಂತಂ ನ ಪ್ರತಿಕ್ರುಧ್ಯೇದಾಪೃಷ್ಟಃ ಕುಶಲಂ ವದೇತ್ ॥ ೧೫ ॥**

**ಸಪ್ತದ್ವಾರಾವಕೀರ್ಣಾಂ ಚ ನವಾಚಮನೃತಾಂ ವದೇತ್ ।**
**ಅಧ್ಯಾತ್ಮರತಿರಾಸೀನೋ ನಿರಪೇಕ್ಷೋ ನಿರಾಮಿಷಃ ॥ ೧೬ ॥**

ಯಾವ ಭೃತ್ಯನು ಸ್ವಾಮಿಯ ಅನುಗ್ರಹಕ್ಕಾಗಿ ಕಾಲವನ್ನು ನಿರೀಕ್ಷಿಸುವಂತೆ ತಾನೂ ಸ್ವಾಮಿಯಾದ ಪರಮಾತ್ಮನ ಅನುಗ್ರಹಕಾಲವನ್ನು ನಿರೀಕ್ಷಿಸುತ್ತಿರಬೇಕು. ನಡೆಯುವಾಗ ಕಣ್ಣಿನಿಂದ ನೋಡಿ ಯಾವ ಕ್ರಿಮಿಕೀಟಗಳೂ ಇಲ್ಲದ ಪವಿತ್ರವಾಗಿರುವ ಸ್ಥಳದಲ್ಲಿಯೇ ಕಾಲಿಡಬೇಕು. ಕ್ರಿಮಿಕೀಟಾದಿಗಳಿಲ್ಲದಂತೆ ವಸ್ತ್ರದಿಂದ ಶೋಧಿಸಿಯೇ ಜಲವನ್ನು ಪಾನಮಾಡಬೇಕು. ಅಸತ್ಯದೋಷವಿಲ್ಲದ ಸತ್ಯಾಂಶದಿಂದ ಶುದ್ಧವಾದ ಮಾತನ್ನೇ ಆಡಬೇಕು. ಮಾಡತಕ್ಕ ಕೆಲಸಗಳಲ್ಲಿ ಕಲ್ಮಷವಿಲ್ಲದ ಮನಃಶುದ್ಧಿಯಿಂದ ಕೂಡಿದ ಕಾರ್ಯವನ್ನೇ ಮಾಡಬೇಕು.

೧೪-೧೫. ಜಡಪ್ರಕೃತಿಗಳಾಗಿರುವವರ ವಿಷಯದಲ್ಲಿ ಕೋಪತಾಪವಿಲ್ಲದೆ ಸಹನೆಯಿಂದಿರಬೇಕು. ಯಾರನ್ನೂ ಅವಮಾನಪಡಿಸಬಾರದು. ಯಾರ ಮನೆಗೂ ಹೋಗಕೂಡದು. ಯಾವನೊಡನೆಯೂ ವೈರವನ್ನು ಸಾಧಿಸಬಾರದು. ತನ್ನಮೇಲೆ ಮತ್ತೊಬ್ಬನು ಕೋಪಿಸಿಕೊಂಡರೂ ತಾನು ಶಾಂತಿಯಿಂದಿರಬೇಕೇ ಹೊರತು ಪ್ರತಿಯಾಗಿ ಕೋಪಮಾಡಬಾರದು. ಮತ್ತೊಬ್ಬನು ತನ್ನನ್ನು ಪ್ರಶ್ನೆಮಾಡಿದಲ್ಲಿ ಕ್ಷೇಮವನ್ನು ಹೇಳಬೇಕು. (ಪ್ರಶ್ನೆ ಇಲ್ಲದೆ ಯಾರಿಗೂ ಯಾವ ವಿಷಯದಲ್ಲಿಯೂ ಪ್ರತ್ಯುತ್ತರ ಹೇಳಕೂಡದೆಂಬ ತಾತ್ಪರ್ಯವು ಇದರಿಂದ ಸೂಚಿತವಾಗುತ್ತದೆ.) ಏಳು ಸ್ಥಾನವಾದ ಇಂದ್ರಿಯದ್ವಾರಗಳಿಗೂ ಪ್ರತ್ಯಕ್ಷತೆಯನ್ನುಂಟುಮಾಡುವ ಅನೃತಭಾಷಣವನ್ನು ಯಾವಾಗಲೂ ಮಾಡಬಾರದು

೧೬-೧೭. ಕುಳಿತಿರುವಾಗಲೆಲ್ಲಾ ಆತ್ಮವಿಷಯಕವಾದ ತತ್ತ್ವದೃಷ್ಟಿಯಲ್ಲಿ ಪ್ರೀತಿಯುಳ್ಳವನಾಗಿಯೂ, ಇತರ ಯಾವ ಅಪೇಕ್ಷೆ ಇಲ್ಲದೆಯೂ, ಭೋಗ್ಯವಸ್ತು

ಆತ್ಮನೈವ ಸಹಾಯೇನ ತರೇದ್ದುರ್ಗತಿಮಾತ್ಮನಃ ॥ ೧೭ ॥

ನ ಚೋತ್ಪಾತನಿಮಿತ್ತಾಭ್ಯಾಂ ನ ನಕ್ಷತ್ರಾಂಗವಿದ್ಯಯಾ ।
ನಾನುಶಾಸನವಾದಾಭ್ಯಾಂ ಭಿಕ್ಷಾಂ ಲಿಪ್ಸೇತ ಕರ್ಹಿಚಿತ್ ॥ ೧೮ ॥

ನ ತಾಪಸೈಃ ಬ್ರಾಹ್ಮಣೈರ್ವಾ ನ ಯೋಗಿಭಿರಥಾಶ್ರಮೈಃ ।
ಆಕೀರ್ಣ್ಣೈಃ ಭಿಕ್ಷುಕೈರ್ವರ್ಣೈಃ ಅಗಾರಮುಪಸಂವ್ರಜೇತ್ ॥ ೧೯ ॥

ಕ್ಲೃಪ್ತಕೇಶನಖಶ್ಮಶ್ರುಃ ಪಾತ್ರೀ ದಂಡೀ ಕುಸುಂಭವಾನ್ ।
ವಿಚರೇನ್ನಿಯತೋ ನಿತ್ಯಂ ಸರ್ವಭೂತಾನ್ಯಪೀಡಯನ್ ॥ ೨೦ ॥

ಅತೈಜಸಾನಿ ಪಾತ್ರಾಣಿ ತಸ್ಯ ಸ್ಯುರ್ನಿರ್ವ್ರಣಾನಿ ಚ ।
ತೇಷಾಮದ್ಭಿಃ ಸ್ಮೃತಂ ಶೌಚಂ ಚಮಸಾನಾಮಿವಾಧ್ವರೇ ॥ ೨೧ ॥

---

ಗಳಲ್ಲಿ ಆಶೆ ಇಲ್ಲದೆಯೂ, ತನ್ನ ಆತ್ಮಮಾತ್ರದಿಂದಲೇ ಸಹಾಯಹೊಂದಿ (ಏಕಾಕಿಯಾಗಿದ್ದು) ತನ್ನ ದುರ್ಗತಿಯನ್ನು (ಸಂಸಾರವನ್ನು) ದಾಟಬೇಕು. ಗ್ರಹಗಳ ಉತ್ಪಾತವೇ ಮೊದಲಾದ ಅಶುಭ ಶಕುನಗಳನ್ನು ಹೇಳಿಯಾಗಲಿ, ಶುಭನಿಮಿತ್ತವನ್ನು ಹೇಳಿಯಾಗಲಿ, ಜ್ಯೋತಿಶ್ಶಾಸ್ತ್ರದ ಫಲಾಫಲಗಳನ್ನು ಹೇಳಿಯಾಗಲಿ, ಸುಳ್ಳುಸುಳ್ಳಾದ ಧ್ವನಿಗಳ ಮತ್ತು ಭಾಷಣಗಳ ಪ್ರಕಾಶನದಿಂದಾಗಲಿ ಎಲ್ಲಿಯೂ ಯಾವಾಗಲೂ ಭಿಕ್ಷೆಯನ್ನು ಅಪೇಕ್ಷಿಸಬಾರದು.

೧೯-೨೦. ತಾಪಸರಾದ ಬ್ರಾಹ್ಮಣರಿಂದಾಗಲಿ, ಯೋಗಿಗಳಿಂದಾಗಲಿ ಇತರ ಆಶ್ರಮಿಗಳಿಂದಾಗಲಿ, ಭಿಕ್ಷುಗಳಿಂದಾಗಲಿ ಇತರ ವರ್ಣದವರಿಂದಾಗಲಿ ಸುತ್ತುವರಿಯಲ್ಪಟ್ಟ ಮನೆ ಮಠಗಳಿಗೆ ಹೋಗಿ ಸೇರಬಾರದು. ಕೂದಲು, ಉಗುರುಗಳು, ಗಡ್ಡ, ಮೀಸೆಗಳು ಇವನ್ನು ಹಾಗೆಯೇ ವ್ಯಕ್ತವಡಿಸಿಕೊಂಡು ಭಿಕ್ಷಾಪಾತ್ರಧಾರಿಯಾಗಿಯೂ, ಕಾಷಾಯಧಾರಿಯಾಗಿಯೂ ಪ್ರಾಣಿಸಾಮಾನ್ಯವನ್ನು ಹಿಂಸಿಸದೆ ಶಾಂತಿಯಿಂದ ಕೂಡಿ ಸಂಚರಿಸುತ್ತಾ ಕಾಲಯಾಪನ ಮಾಡಬೇಕು.

೨೧-೨೨. ಯತಿಗಳಾದವರಿಗೆ ಲೋಹದ ಸಂಬಂಧವಿಲ್ಲದ ಪಾತ್ರೆಗಳಿರಬೇಕು ಒಡಕಾಗಿಯೂ ಇರಕೂಡದು, ಆ ಪಾತ್ರೆಗಳಿಗೆ ಚಮಸಗಳಿಂದು

**ಅಲಾಬುಂ ದಾರುಪಾತ್ರಂ ಚ ಮೃನ್ಮಯಂ ವೈದಲಂ ತಥಾ ।**
**ಏತಾನಿ ಯತಿಪಾತ್ರಾಣಿ ವಿಜ್ಞೇಯಾನಿ ಮನೀಷಿಭಿಃ ॥ ೨೨ ॥**

**ಸೌವರ್ಣಮಣಿಪಾತ್ರೇಷು ಕಾಂಸ್ಯರೌಪ್ಯಾಯಸೇಷು ಚ ।**
**ಭಿಕ್ಷಾಂ ದದ್ಯಾನ್ನಧರ್ಮಜ್ಞಾ ಗೃಹೀತಾ ನರಕಂ ವ್ರಜೇತ್ ॥ ೨೩ ॥**

**ಏಕಕಾಲಂ ಚರೇದ್ಭೈಕ್ಷ್ಯಂ ನ ಪ್ರಸಜ್ಯೇತ ವಿಸ್ತರೇ ।**
**ಭೈಕ್ಷ್ಯೇ ಪ್ರಸಕ್ತಸ್ಯ ಮತಿಃ ವಿಷಯೇಷ್ವಪಿ ಸಜ್ಜತೇ ॥ ೨೪ ॥**

**ವಿಧೂಮೇ ನ್ಯಸ್ತಮುಸಲೇ ವ್ಯಂಗಾರೇ ಭುಕ್ತವಜ್ಜನೇ ।**
**ವೃತ್ತೇ ಶರಾವಸಂಪಾತೇ ಭಿಕ್ಷಾಂ ನಿತ್ಯಂ ಯತಿಶ್ಚರೇತ್ ॥ ೨೫ ॥**

**ಅಲಾಭೇ ನ ವಿಷಾದೀಸ್ಯಾತ್ ಲಾಭೇ ಚಾಪಿ ನ ಹರ್ಷಯೇತ್ ।**
**ಪ್ರಾಣಯಾತ್ರಿಕಮಾತ್ರಃ ಸ್ಯಾನ್ಮಾತ್ರಾಸಂಗಾದ್ವಿನಿರ್ಗತಃ ।**
**ಅಭಿಪೂಜಿತಲಾಭಸ್ತು ಯದಿ ಮುಕ್ತೋಽಪಿ ಬಧ್ಯತೇ ॥ ೨೬ ॥**

---

ಹೇಳಲ್ಪಡುವ ಯಜ್ಞಪಾತ್ರೆಗಳಂತೆ ಜಲದಿಂದ ಶುದ್ಧಿಯುಂಟಾಗುತ್ತದೆ. ಸೋರೆ ಬುರುಡೆ, ಮರದ ಪಾತ್ರೆ, ಬಿದಿರಿನ ಅಂಡೆ ಮೊದಲಾದುವೇ ಯತಿಯ ಪಾತ್ರೆಗಳೆಂದು ಪಂಡಿತರು ತಿಳಿಯಬೇಕು.

೨೩–೨೪. ಚಿನ್ನದ ಮತ್ತು ರತ್ನ ಖಚಿತವಾದ ಪಾತ್ರೆಗಳಲ್ಲಿಯೂ, ಕಂಚು ಮತ್ತು ಬೆಳ್ಳಿ, ಕಬ್ಬಿಣ ಇವುಗಳಿಂದ ಮಾಡಿದ ಪಾತ್ರೆಗಳಲ್ಲಿಯೂ, ಭಿಕ್ಷೆಯನ್ನು ನೀಡಬಾರದು ಅಂತಹ ಪಾತ್ರೆಗಳಲ್ಲಿ ಭಿಕ್ಷೆಯನ್ನು ಸ್ವೀಕರಿಸುವ ಯತಿಯು ನರಕಕ್ಕೆ ಹೋಗುತ್ತಾನೆ. ಒಂದೇ ಹೊತ್ತು ಭಿಕ್ಷೆಯನ್ನು ಮಾಡಬೇಕು. ಅದಕ್ಕಿಂತ ಹೆಚ್ಚಾದ ವಿಸ್ತಾರವನ್ನು ಆ ವಿಷಯದಲ್ಲಿ ಕೈಗೊಳ್ಳಬಾರದು. ಹೆಚ್ಚಾಗಿ ಭಿಕ್ಷೆಯಲ್ಲಿಯೇ ಹವ್ಯಾಸವನ್ನು ಹೊಂದಿದ ಯತಿಯ ಮನಸ್ಸು ವಿಷಯಸುಖದಲ್ಲಿಯೂ ಆಸಕ್ತವಾಗಬಹುದು.

೨೫–೨೬. ಅಡಿಗೆ ಎಲ್ಲವೂ ಆಗಿ ಹೊಗೆಯು ನಿಂತಿರುವ ಮತ್ತು ಒನಕೆಯ ಕೆಲಸವೆಲ್ಲವೂ ಮುಗಿದಿರುವ ಅಡಿಗೆ ಮಾಡಿದ ನಂತರ ಬೆಂಕಿಯೂ ಆರಿರುವ ಎಲ್ಲಾ ಜನಗಳಿಗೂ ಊಟ ಮುಗಿದಿರುವ ಮತ್ತು ಬಾಂಡ್ಲಿ ಮುಂತಾದ ಪಾತ್ರೆಗಳ ಉಪಯೋಗ ಮುಗಿದಿರುವ ಮನೆಯಲ್ಲಿಯೇ ಯತಿಯಾದವನು ಭಿಕ್ಷೆಮಾಡಬೇಕು.

ಅಲ್ಪಾನ್ನಾಭ್ಯವಹಾರೇಣ ರಹಃಸ್ಥಾನಾಸನೇನ ಚ ।
ಹ್ರಿಯಮಾಣಾನಿ ವಿಷಯೈಃ ಇಂದ್ರಿಯಾಣಿ ನಿವರ್ತಯೇತ್ ॥ ೨೭ ॥

ಇಂದ್ರಿಯಾಣಾಂ ನಿರೋಧೇನ ರಾಗದ್ವೇಷಭಯೇನ ಚ ।
ಅಹಿಂಸಯಾ ಚ ಭೂತಾನಾಮಮೃತತ್ವಾಯ ಕಲ್ಪತೇ ॥ ೨೮ ॥

ಅವೇಕ್ಷೇತ ಗತಿಂ ನೃಣಾಂ ಕರ್ಮದೋಷಸಮುದ್ಭವಾಂ ।
ನಿರಯೇ ಚೈವ ಪತನಂ ವ್ಯಾಧಿಭಿಶ್ಚೋಪಪೀಡನಂ ॥ ೨೯ ॥

ದೇಹಾನುಕ್ರಮಣಂ ಚಾಸ್ಮಾತ್ ಪುನರ್ಗರ್ಭೇ ಚ ಸಂಭವಂ ।
ಯೋನಿಕೋಟಿಸಹಸ್ರೇಷು ಸೃತೀಶ್ಚಾಸ್ಯಾಂತರಾತ್ಮನಃ ॥ ೩೦ ॥

---

ಭಿಕ್ಷೆಯು ಲಭಿಸದೆ ಇದ್ದಲ್ಲಿ ದುಃಖಪಡಬಾರದು ಲಭಿಸಿದಲ್ಲಿ ಸಂತೋಷಪಡಲೂ ಬಾರದು. ಅಲ್ಪವಾದ ಇತರರ ಸಂಗವನ್ನೂ ತ್ಯಣೀಕರಿಸಿ ಪ್ರಾಣಯಾತ್ರಾ ಮಾತ್ರ ದಲ್ಲಿಯೇ ಲಕ್ಷ್ಯವನ್ನಿಟ್ಟಿರಬೇಕು.

೨೭–೨೮. ಯತಿಯಾದವನು ಇತರರು ತನಗೆ ಮಾಡುವ ಪೂಜೆಯೇ ಲಾಭವೆಂದು ಆಶೆಪಟ್ಟಲ್ಲಿ ಅವನು ಮುಕ್ತಕಲ್ಪನಾಗಿದ್ದರೂ ಬದ್ಧನೇ ಆಗುತ್ತಾನೆ. ಅತ್ಯಲ್ಪವಾದ ಆಹಾರ ಸ್ವೀಕಾರದಿಂದಲೂ, ಇತರರಿಗೆ ತಿಳಿಯದಂತೆ ತನ್ನ ಸ್ಥಿತಿ ಮತ್ತು ಯೋಗಾಸನಾದಿಗಳನ್ನು ನಿರ್ವಹಿಸುವುದರಿಂದಲೂ, ಇತರ ಬಾಹ್ಯವಿಷಯ ಗಳಿಂದ ಅಪಹರಿಸಲ್ಪಡಬಹುದಾದ ತನ್ನ ಇಂದ್ರಿಯಗಳನ್ನು ಹಿಂದೆ ತಿರಿಗಿಸಿ ತನ್ನ ಅಧೀನದಲ್ಲಿ ಇಟ್ಟುಕೊಳ್ಳಬೇಕು. ಯತಿಯಾಗಿರುವವನು ತನ್ನ ಇಂದ್ರಿಯಗಳು ವಿಷಯಗಳಲ್ಲಿ ಸ್ವೇಚ್ಛೆಯಿಂದ ಪ್ರಸರಿಸದಂತೆ ಅವುಗಳನ್ನು ನಿಗ್ರಹಿಸುವುದರಿಂದಲೂ ರಾಗದ್ವೇಷಾದಿ ಮನೋದೋಷಗಳಿಂದ ಭಯಪಟ್ಟು ಅವಕ್ಕೆ ಆಶ್ರಯನಾಗದಿರುವುದ ರಿಂದಲೂ, ಎಲ್ಲಾ ಪ್ರಾಣಿಗಳ ವಿಷಯದಲ್ಲಿಯೂ, ಅಹಿಂಸಾವ್ರತದಿಂದ ಇರುವುದ ರಿಂದಲೂ ಅಮೃತವೆಂಬ ಮೋಕ್ಷಸಾಮ್ರಾಜ್ಯಕ್ಕೆ ಭಾಗಿಯಾಗುತ್ತಾನೆ.

೨೯–೩೦. ಸಂಸಾರಿಯಾಗಿರುವ ಜನಗಳಿಗೆ ವಿಚಿತ್ರಪ್ರವಾಹವುಳ್ಳ ಕರ್ಮದ ದೋಷದಿಂದ ಸಂಭವಿಸುವ ಗತಿಯನ್ನೂ ನಿರೀಕ್ಷಿಸುತ್ತಿರಬೇಕು. ಕರ್ಮಬಂಧಕ್ಕೆ ಸಿಕ್ಕಿರುವ ಸಂಸಾರಿಗಳ ದುಃಖದರ್ಶನದಿಂದ ಸಂಸಾರವೆಂಬುದು ಎಷ್ಟರಮಟ್ಟಿನ ದುಃಖಕ್ಕೆ ಕಾರಣವೆಂಬುದನ್ನು ಯಾವಾಗಲೂ ಮನಸ್ಸಿನಲ್ಲಿ ಭಾವಿಸುತ್ತಾ ಅದು ಬಹಳ

ಅಧರ್ಮಪ್ರಭವಂ ಚೈವ ಕರ್ಮಯೋಗಂ ಶರೀರಿಣಾಂ ।
ಧರ್ಮಾರ್ಥಪ್ರಭವಂ ಚೈವ ಸುಖಸಂಯೋಗಮಕ್ಷಯಂ ॥ ೩೦ ॥

ಸೂಕ್ಷ್ಮತಾಂ ಚಾನುವೀಕ್ಷೇತ ಯೋಗೇನ ಪರಮಾತ್ಮನಃ ।
ದೇಹೇಷು ಚೈವ ಪತಿತಮುತ್ತಮೇಷ್ವಧಮೇಷು ಚ ॥ ೩೧ ॥

ದೂಷಿತೋಽಪಿ ಚರೇದ್ಧರ್ಮಂ ಯತ್ರ ಯತ್ರಾಶ್ರಮೇ ರತಃ ।
ಸಮಃ ಸರ್ವೇಷು ಭೂತೇಷು ನ ಲಿಂಗಂ ಧರ್ಮಕಾರಣಂ ॥ ೩೨ ॥

...ಯುವೆಂಬ ಭಾವನೆಯನ್ನು ಮನಸ್ಸಿನಲ್ಲಿ ದೃಢಪಡಿಸಿಕೊಳ್ಳಬೇಕೆಂದು ತಾತ್ಪರ್ಯ. ...ಂಸಾರಿ ಜೀವನು ಕರ್ಮಗತಿಯಿಂದ ನರಕದಲ್ಲಿ ಬೀಳುವುದನ್ನೂ, ವ್ಯಾಧಿಗಳಿಗೆ ...ಡಾಗಿ ಪೀಡಿಸಲ್ಪಡುವುದನ್ನೂ ಈ ದೇಹದಿಂದ ಮತ್ತೊಂದು ದೇಹಕ್ಕೆ ಕರ್ಮಾನು...ಬಂಧದಿಂದ ಹೋಗಿ ಸೇರುವುದನ್ನೂ ಅದಕ್ಕಾಗಿ ಗರ್ಭವಾಸ ದುಃಖವನ್ನು ಅನುಭವಿಸು...ವುದನ್ನೂ ಅನೇಕ ಕೋಟಿ ಯೋನಿಗಳಲ್ಲಿ ಜನ್ಮಹೊಂದುವುದನ್ನೂ ಈ ವಿಧವಾದ ...ಕ್ಲೇಶಗಳಿಂದ ಆತ್ಮನಿಗೆ ಉಂಟಾಗುವ ದುಃಖಪರಂಪರೆಯನ್ನೂ ಯಾವಾಗಲೂ ...ಚಿಸುತ್ತಿರಬೇಕು.

೩೦ ೩೧ ಶರೀರವನ್ನು ಹೊಂದಿದ ಜೀವನಿಗೆ ಅಧರ್ಮಮೂಲಕವಾಗಿ ಉಂಟಾಗುವ ದುಃಖಕರವಾದ ಕರ್ಮಸಂಬಂಧವನ್ನೂ, ಧರ್ಮಾರ್ಥಗಳೆಂಬ ಪುರುಷಾರ್ಥದೃಷ್ಟಿಯಿಂದುಂಟಾದ ಶಾಶ್ವತವಾದ ಸುಖಸಂಬಂಧವನ್ನೂ ಪರಮಾತ್ಮನ ...ದೃಷ್ಟಿಯಿಂದ ಜೀವನು ಸೂಕ್ಷ್ಮನಾಗಿ ಉತ್ತಮವಾದ ಮತ್ತು ಅಧಮವಾದ ದೇಹಪರಂಪರೆಯಲ್ಲಿ ಅವನು ಬಾರಿಬಾರಿಗೂ ಬೀಳುತ್ತಿರುವುದನ್ನೂ ಸಹ ಯಾವಾಗಲೂ ನೋಡುತ್ತಿರಬೇಕು

೩೨-೩೪. ನಾಲ್ಕು ವಿಧವಾದ ಆಶ್ರಮಗಳಲ್ಲಿರುವವನೂ ಸಹ ಆಕಸ್ಮಿಕವಾದ ...ದೋಷದಿಂದ ತಾನು ದೂಷಿತನಾಗಿದ್ದರೂ ಆಯಾಯ ಆಶ್ರಮೋಚಿತವಾದ ಧರ್ಮವನ್ನು ಆಚರಿಸಲೇಬೇಕು. ಸರ್ವಪ್ರಾಣಿಗಳಲ್ಲಿಯೂ ಸಾಮ್ಯಬುದ್ಧಿಯನ್ನು ...ಂದಬೇಕು. ದಂಡಕಮಂಡಲುವೇ ಮೊದಲಾದ ತನ್ನ ಚಿಹ್ನೆಗಳೇ ಧರ್ಮಕ್ಕೆ ಕಾರಣವಾಗಲಾರವು. ಆಶ್ರಮೋಚಿತವಾದ ಧರ್ಮವನ್ನು ಆಚರಿಸದೆ ಕೇವಲ ...ಷದಿಂದ ಮೋಕ್ಷಸಾಧನೆಯೂ, ಧರ್ಮಸಾಧನೆಯೂ ಆಗುವುದಿಲ್ಲ.

ಫಲಂ ಕತಕವೃಕ್ಷಸ್ಯ ಯದ್ಯಪ್ಯಂಬುಪ್ರಸಾದಕಂ ।
ನ ನಾಮಗ್ರಹಣಾದೇವ ತಸ್ಯ ವಾರಿಪ್ರಸೀದತಿ ॥ ೩೪ ॥

ಸಂರಕ್ಷಣಾರ್ಥಂ ಜಂತೂನಾಂ ರಾತ್ರಾವಹನಿ ವಾ ಸದಾ ।
ಶರೀರಸ್ಯಾತ್ಯಯೇ ವಾಪಿ ಸಮೀಕ್ಷ್ಯ ವಸುಧಾಂ ಚರೇತ್ ॥ ೩೫ ॥

ಅಹೋರಾತ್ರ್ಯಾಯಾಜ್ಜಂತೂನ್ ಹಿನಸ್ತ್ಯಜ್ಞಾನತೋ ಯದಿ ।
ತೇಷಾಂ ಸ್ನಾತ್ವಾ ವಿಶುಧ್ಯರ್ಥಂ ಪ್ರಾಣಾಯಾಮಾನ್ ಷಡಾಚರೇತ್ ॥ ೩೬ ॥

ಪ್ರಾಣಾಯಾಮಾ ಬ್ರಾಹ್ಮಣಸ್ಯ ತ್ರಯೋಽಪಿ ವಿಧಿವತ್ಕೃತಾಃ ।
ವ್ಯಾಹೃತಿಪ್ರಣವೈರ್ಯುಕ್ತಾ ವಿಜ್ಞೇಯಂ ಪರಮಂ ತಪಃ ॥ ೩೭ ॥

ದಹ್ಯಂತೇ ಧ್ಮಾಯಮಾನಾನಾಂ ಧಾತೂನಾಂ ಹಿ ಯಥಾ ಮಲಾಃ ।
ತಥೇಂದ್ರಿಯಕೃತಾದೋಷಾಃ ದಹ್ಯಂತೇ ಪ್ರಾಣನಿಗ್ರಹಾತ್ ॥ ೩೮ ॥

(ಈ ವಿಷಯದಲ್ಲಿ ದೃಷ್ಟಾಂತವನ್ನೂ ಹೇಳುತ್ತಾರೆ) ಚಿಲ್ಲದ ಬೀಜವನ್ನು ಅರೆದು ನೀರಿನಲ್ಲಿ ಹಾಕಿದಲ್ಲಿ ಅದು ಆ ನೀರಿನಲ್ಲಿರುವ ದೋಷವನ್ನು ಹೋಗಲಾಡಿಸುತ್ತದೆ ಎಂಬುದು ನಿಜ. ಆದರೆ ಹಾಗೆ ಮಾಡದೆ ಆ ಚಿಲ್ಲದ ಬೀಜದ ಹೆಸರನ್ನು ಹೇಳಿದ ಮಾತ್ರದಿಂದ ನೀರು ಶುದ ವಾದೀತೆ.

೩೫-೩೬. ಇತರ ಎಲ್ಲಾ ಪ್ರಾಣಿಗಳ ರಕ್ಷಣ ದೃಷ್ಟಿಯಿಂದ ರಾತ್ರಿಯಲ್ಲಾಗಲಿ, ಹಗಲಿನಲ್ಲಾಗಲಿ ಯಾವಾಗಲೂ ಸಹ ಶರೀರನಾಶ ಉಂಟಾಗಬಹುದಾದ ಸಂದರ್ಭದಲ್ಲಿಯೂ ಸಹ ನೋಡಿಯೇ ಭೂವಿ-ಯಲ್ಲಿ ಸಂಚರಿಸಬೇಕು ಅಜ್ಞಾನದಿಂದ ರಾತ್ರಿಯಲ್ಲಾಗಲಿ, ಹಗಲಿನಲ್ಲಾಗಲಿ ಪ್ರಾಣಿಗಳಿಗೆ ಹಿಂಸೆಯನ್ನುಂಟುಮಾಡಿದಲ್ಲಿ ಆ ಪಾಪದ ಶೋಧನೆಗಾಗಿ ಸ್ನಾನಮಾಡಿ ಆರು ಪ್ರಾಣಾಯಾಮಗಳನ್ನು ಮಾಡಬೇಕು

೩೭-೩೮. ಬ್ರಾಹ್ಮಣನಾದವನಿಗೆ ವ್ಯಾಹೃತಿ ಪ್ರಣವ ಇವುಗಳೊಡನೆ ಯಥಾವಿಧಿಯಾಗಿ ಮಾಡಲ್ಪಟ್ಟ ಮೂರು ಪ್ರಾಣಾಯಾಮಗಳೂ ಸಹ ಮಹಾತಪಸ್ಸಾಗಿಯೇ ಪರಿಣಮಿಸುತ್ತವೆ ಎಂದು ತಿಳಿಯಬೇಕು. ಬೆಂಕಿಯಲ್ಲಿಟ್ಟು ತಿದಿಯಿಂದ ಅಗ್ನಿಯನ್ನು ಊದುವಾಗ ಅದರಲ್ಲಿಟ್ಟಿರುವ ಲೋಹಧಾತುಗಳಲ್ಲಿನ ಮಲವೆಲ್ಲವೂ ಭಸ್ಮವಾಗಿ ನಾಶವಾಗುವಂತೆ ಇಂದ್ರಿಯಗಳ ದೋಷಗಳೆಲ್ಲವೂ ಪ್ರಾಣಾಯಾಮದಿಂದ ನಾಶವಾಗುತ್ತವೆ.

ಪ್ರಾಣಾಯಾಮೈರ್ದಹೇದ್ದೋಷಾನ್ಧಾರಣಾಭಿಸ್ತು ಕಿಲ್ಬಿಷಾಂ ।
ಪ್ರತ್ಯಾಹಾರೇಣ ಸಂಸರ್ಗಾನ್ ಧ್ಯಾನೇನಾನೀಶ್ವರಾನ್ ಗುಣಾನ್ ॥ ೩೯ ॥

ಉಚ್ಚಾವಚೇಷು ಭೂತೇಷು ದುರ್ಜ್ಞೇಯಮಕೃತಾತ್ಮಭಿಃ ।
ಜ್ಞಾನಯೋಗೇನ ಸಂಪಶ್ಯೇದ್ಗತಿಮಸ್ಯಾಂತರಾತ್ಮನಃ ॥ ೪೦ ॥

ಸಮ್ಯಗ್ದರ್ಶನಸಂಪನ್ನಃ ಕರ್ಮಭಿರ್ನನಿಬಧ್ಯತೇ ।
ದರ್ಶನೇನ ವಿಹೀನಸ್ತು ಸಂಸಾರಂ ಪ್ರತಿಪದ್ಯತೇ ॥ ೪೧ ॥

ಅಹಿಂಸಯೇಂದ್ರಿಯಾಸಂಗೈಃ ವೈದ್ಯಕೈಶ್ಚೈವ ಕರ್ಮಭಿಃ ।
ತಪಸಶ್ಚರಣೈಶ್ಚೋಗ್ರೈಃ ಸಾಧಯಂತೀಹ ತತ್ಪದಂ ॥ ೪೨ ॥

ಅಸ್ಥಿಸ್ಥೂಣಂ ಸ್ನಾಯುಯುತಂ ಮಾಂಸಶೋಣಿತಲೇಪಿತಂ ।
ಚರ್ಮಾವನದ್ಧಂ ದುರ್ಗಂಧಿ ಪಾತ್ರಂ ಮೂತ್ರಪುರೀಷಯೋಃ ॥ ೪೩ ॥

---

೩೯–೪೦. ಪ್ರಾಣಾಯಾಮಗಳಿಂದ ಆ ಕಾಲದಲ್ಲಿ ಉಂಟಾದ ದೋಷಗಳನ್ನೂ ಧಾರಣೆಗಳಿಂದ ಅಂತಹ ದೋಷಕ್ಕೂ ಕಾರಣವಾದ ಪಾಪಗಳನ್ನೂ, ಪ್ರತ್ಯಾಹಾರದಿಂದ ಅಂತಹ ಪಾಪಗಳ ಸಂಸರ್ಗವನ್ನೂ, ಧ್ಯಾನದಿಂದ ಈಶ್ವರ ವಿರೋಧಿಗಳಾದ ಗುಣಗಳನ್ನೂ ನಾಶಪಡಿಸಿಕೊಳ್ಳಬೇಕು. ಕೀಳುಮೇಲುತನದಿಂದ ನಾನಾರೂಪಗಳಲ್ಲಿರುವ ಪ್ರಾಣಿಗಳಲ್ಲಿ ಇತರರಿಂದ ತಿಳಿಯಲಶಕ್ಯವಾದ ಕೃತಕೃತ್ಯರಾದ ಜ್ಞಾನಿಗಳಿಂದಲೇ ತಿಳಿಯಲು ಅರ್ಹವಾದ ಆತ್ಮನ ಗಮನಾಗಮನಾದಿ ವ್ಯಾಪಾರಗಳನ್ನು ಜ್ಞಾನಯೋಗದ ಮಹಿಮೆಯಿಂದ ಸಾಕ್ಷಾತ್ಕರಿಸಬೇಕು.

೪೧–೪೨. ಜ್ಞಾನಯೋಗದಿಂದ ಸರಿಯಾದ ಸಾಕ್ಷಾತ್ಕಾರ ಶಕ್ತಿಯನ್ನು ಹೊಂದಿದವನು ಕರ್ಮಬಂಧಕ್ಕೆ ಗುರಿಯಾಗುವುದಿಲ್ಲ. ಅಂತಹ ಸಾಕ್ಷಾತ್ಕಾರವಿಲ್ಲದವನು ಕರ್ಮಬಂಧದಿಂದ ಸಂಸಾರಿಯಾಗುತ್ತಾನೆ. ಅಂತಹ ಸ್ಥಾನವನ್ನು ಅಪೇಕ್ಷಿಸುವವರು ಅಹಿಂಸಾ ಧರ್ಮದಿಂದಲೂ ಇಂದ್ರಿಯಗಳ ವಿಜಯದಿಂದಲೂ ವೈದ್ಯಶಾಸ್ತ್ರೋಕ್ತವಾದ ಕೆಲವು ಯೋಗಸಾಧನೆಗಳಿಂದಲೂ ತೀವ್ರವಾದ ತಪಸ್ಸಿನಿಂದಲೂ ಅಂತಹ ಸ್ಥಾನವನ್ನು ಸಾಧಿಸುತ್ತಾರೆ

೪೩–೪೪. ಮೂಳೆಗಳೆಂಬ ಮುಂಡಿಗೆಯಿಂದ ಕೂಡಿ, ಸ್ನಾಯುವೆಂಬ ಧಾತುವಿನಿಂದಲೂ ಕೂಡಿ, ಮಾಂಸದಿಂದಲೂ, ರಕ್ತದಿಂದಲೂ ಲೇಪಿಸಲ್ಪಟ್ಟು ಚರ್ಮದಿಂದ ಹೊದಿಸಲ್ಪಟ್ಟಿರುವ ಮತ್ತು ದುರ್ಗಂಧದಿಂದ ಕೂಡಿ, ಮಲಮೂತ್ರ

**ಜರಾಶೋಕಸಮಾವಿಷ್ಟಂ ರೋಗಾಯತನಮಾತುರಂ ।**
**ರಜಸ್ವಲಮನಿತ್ಯಂ ಚ ಭೂತಾವಾಸಮಿದಂ ತ್ಯಜೇತ್ ॥ ೪೪ ॥**

**ನದೀಕೂಲೇ ಯಥಾ ವೃಕ್ಷೋ ವೃಕ್ಷೇ ವಾ ಶಕುನಿರ್ಯಥಾ ।**
**ತಥಾ ತ್ಯಜನ್ನಿಮಂ ದೇಹಂ ಕೃಚ್ಛ್ರಾದ್ಗ್ರಾಹಾದ್ವಿಮುಚ್ಯತೇ ॥ ೪೫ ॥**

**ಪ್ರಿಯೇಷು ಸ್ವೇಷು ಸುಕೃತಂ ಚಾಪ್ರಿಯೇಷು ಚ ದುಷ್ಕೃತಂ ।**
**ವಿಸೃಜ್ಯ ಧ್ಯಾನಯೋಗೇನ ಬ್ರಹ್ಮಾಭ್ಯೇತಿ ಸನಾತನಂ ॥ ೪೬ ॥**

**ಯದಾ ಭಾವೇನ ಭವತಿ ಸರ್ವಭಾವೇಷು ನಿಃಸ್ಪೃಹಃ ।**
**ತದಾ ಸುಖಮವಾಪ್ನೋತಿ ಪ್ರೇತ್ಯಚೇಹ ಚ ಶಾಶ್ವತಂ ॥ ೪೭ ॥**

ಗಳಿಗೆ ಆಧಾರವಾಗಿರುವ ಮತ್ತು ವಾರ್ಧಕ್ಯ ದುಃಖಗಳಿಂದ ಕೂಡಿಯೂ ರೋಗಗಳಿಗೆ ಸ್ಥಾನವಾಗಿಯೂ, ರೋಗಗ್ರಸ್ತವಾಗಿಯೂ, ಅಶುದ್ಧವಸ್ತುವಿನಿಂದ ಕೂಡಿ ಅನಿತ್ಯವಾಗಿಯೂ ಇರುವ ಈ ದೇಹವನ್ನು ಸರ್ವಪ್ರಕಾರದಿಂದಲೂ ತ್ಯಜಿಸಬೇಕು.

೪೫-೪೬. ನದಿಯ ದಡದಲ್ಲಿರುವ ಮರವು ಅದೇ ನದಿಯ ಅಭಿವೃದ್ಧಿಯಿಂದ ದಡವನ್ನೇ ಬಿಟ್ಟಿರುಳುವಂತೆಯೂ ಮರವನ್ನು ಆಶ್ರಯಿಸಿರುವ ಹಕ್ಕಿಯು ಆ ಮರವನ್ನು ಬಿಡುವಂತೆಯೂ ಸಹ ಪಂಚಭೂತಾತ್ಮಕವಾದ ಈ ದೇಹವನ್ನೇ ಆಶ್ರಯಿಸಿಕೊಂಡಿರುವ ಚೇತನನು ಜ್ಞಾನವಿಕಾಸದಿಂದ ದೋಷಗಳಿಂದ ದುಷ್ಟವಾದ ಈ ದೇಹವನ್ನು ತ್ಯಜಿಸಿದ್ದೇ ಆದರೆ ಅದೊಂದು ಮೊಸಳೆಯ ಬಾಯಿನಿಂದ ಹೊರಗೆ ಬಂದಂತೆಯೇ ಆಗುತ್ತದೆ. ಧ್ಯಾನ್ಯಯೋಗ ಹೊಂದಿದವನು ಬ್ರಹ್ಮಪ್ರಾಪ್ತಿಗೆ ವಿರೋಧಿಗಳಾದ ಸುಕೃತ ಮತ್ತು ದುಷ್ಕೃತ ಇವುಗಳನ್ನು ಇಷ್ಟರಲ್ಲಿಯೂ ದ್ವೇಷಿಗಳಲ್ಲಿಯೂ ಹಂಚಿಕೊಟ್ಟು ಅದೇ ಧ್ಯಾನ್ಯಯೋಗದ ಅಭಿವೃದ್ಧಿಯಿಂದ ಶಾಶ್ವತವಾದ ಪರಬ್ರಹ್ಮವನ್ನು ಹೊಂದುತ್ತಾನೆ

೪೭-೪೮. ಧ್ಯಾನದಲ್ಲಿ ನಿರತನಾದ ಯಾವವನು ಆತ್ಮಭಾವನೆಯಿಂದ ಕೂಡಿ ಪ್ರಾಪಂಚಿಕವಾದ ಎಲ್ಲಾ ಚೇತನಾಚೇತನ ವಸ್ತುಗಳಲ್ಲಿಯೂ, ಅಂತಹ ಆತ್ಮನ ವ್ಯಾಪ್ತಿಯನ್ನು ತಿಳಿಯುತ್ತಾನೆಯೋ. ದೇವಮನುಷ್ಯಾದಿ ವೈಷಮ್ಯವೆಲ್ಲವೂ ದೇಹಕ್ಕೆ ಸಂಬಂಧಪಟ್ಟಿರುವುದರಿಂದ ಸರ್ವವ್ಯಾಪಕವಾದ ಆತ್ಮವಸ್ತುವು ಯಾವ ವೈಷಮ್ಯವನ್ನೂ ಹೊಂದದೆ ಸಾಮ್ಯಹೊಂದಿರುವುದೆಂದು ತಿಳಿಯುತ್ತಾನೆಯೋ ಎಂದು

ಅನೇನ ವಿಧಿನಾ ಸರ್ವಾನ್ಕಾಮಾಂಸ್ತ್ಯಕ್ತ್ವಾ ಶನೈಃ ಶನೈಃ ।
ಸರ್ವದ್ವಂದ್ವೈರ್ವಿನಿಮುಕ್ತೈಃ ಬ್ರಹ್ಮಣ್ಯೇವಾವತಿಷ್ಠತೇ ॥ ೪೮ ॥

ಧ್ಯಾನಿಕಂ ಸರ್ವಮೇವೈತದ್ಯದೇತದತಿಶಾಬ್ದಿಕಂ ।
ನಹ್ಯಧ್ಯಾತ್ಮಕವಿಃ ಕಶ್ಚಿತ್ ಕ್ರಿಯಾಫಲಮುಪಾಶ್ನುತೇ ॥ ೪೯ ॥

ತಾತ್ಪರ್ಯ. ಅಥವಾ ಜ್ಞಾನಾಕಾರವನ್ನು ಹೊಂದಿರುವ ಎಲ್ಲಾ ಚೇತನರ ವಿಷಯದಲ್ಲಿಯೂ ಜ್ಞಾನಸ್ವರೂಪನಾದ ತಾನು ಸ್ವರೂಪದಲ್ಲಿ ಯಾವ ಭೇದವೂ ಇಲ್ಲದಿರುವುದರಿಂದ ಸಾಮ್ಯ ಬುದ್ಧಿಯುಳ್ಳವನಾಗುತ್ತಾನೆಯೋ, ಪರಮಾತ್ಮನಿಗೆ ಶರೀರವಾಗಿರುವ ಚಿತ್ಪದಾರ್ಥಗಳಿಗೆ ಶರೀರತ್ವವು ಸಮವಾಗಿರುವುದರಿಂದಲೂ, ಸ್ವರೂಪಸಾದೃಶ್ಯವಿರುವುದರಿಂದಲೂ ಈ ವಿಧವಾದ ಭಾವನೆಯು ಯೋಗದಶೆಯಲ್ಲಿ ಉಂಟಾಗುತ್ತದೆ. ಎಂದು ತಾತ್ಪರ್ಯ ಪರಸ್ಪರ ಭೇದಗಳೆಲ್ಲವೂ ಕರ್ಮಸಂಬಂಧದಿಂದುಂಟಾದ ಪ್ರಕೃತಿಗೆ ಸೇರಿದುವೇ ಹೊರತು ಆತ್ಮಸ್ವರೂಪಕ್ಕೆ ಸೇರಿದುದಲ್ಲವೆಂದು ಭಾವ. ಶುನಿಚೈವಶ್ವಪಾಕೇಚ ಪಂಡಿತಾಃ ಸಮದರ್ಶಿನಃ ಎಂಬ ಗೀತಾವಚನವೂ ಸಹ ಈ ವಿಧವಾದ ಯೋಗಾವಸ್ಥೆಯನ್ನೇ ವಿವರಿಸುತ್ತದೆ. ಇಂತಹ ಭಾವನೆಯನ್ನು ಹೊಂದಿದವನು ಈ ಲೋಕದಲ್ಲಿದ್ದರೂ ಅಥವಾ ದೇಹವನ್ನು ಬಿಟ್ಟು ಲೋಕಾಂತರ ಹೊಂದಿದರೂ ಸುಖಿಯಾಗಿಯೇ ಆಗುತ್ತಾನೆ. ಈ ವಿಧವಾದ ಜ್ಞಾನಯೋಗದ ಪರಿಪಾಕಾವಸ್ಥೆಯಿಂದ ಎಲ್ಲಾ ವಿಧವಾದ ಇಂದ್ರಿಯ ಭೋಗಗಳನ್ನೂ ಕ್ರಮಕ್ರಮವಾಗಿ ತ್ಯಜಿಸುತ್ತಾ ಶೀತೋಷ್ಣವೇ ಮೊದಲಾದ ಎಲ್ಲಾ ದ್ವಂದ್ವಗಳಿಗೂ ಅಧೀನನಾಗದೆ ಪರಬ್ರಹ್ಮದಲ್ಲಿಯೇ ಅಭಿಮುಖನಾಗಿ ಆನಂದಿಯಾಗಿ ಪರಿಣಮಿಸುತ್ತಾನೆ.

೪೯-೫೦. ಧ್ಯಾನಯೋಗದಲ್ಲಿ ನಿರತನಾದವನ ಈ ವಿಧವಾದ ವ್ಯಾಪಾರವೆಲ್ಲವೂ ಕೇವಲ ಧ್ಯಾನಾನುಭವಮಾತ್ರದಿಂದ ತಿಳಿಯತಕ್ಕದ್ದಾಗಿದೆ. ಇದು ಶಾಬ್ದಿಕರ ಯೋಗಕ್ಷೇಮಕ್ಕೆ ಸೇರಿದುದಲ್ಲ. ಅಂದರೆ ಧ್ಯಾನಾನುಭವ ಮಾತ್ರಕ್ಕೆ ಸೇರಿದ ವಿಚಾರಗಳೇ ಹೊರತು ಶಬ್ದ ಶಬ್ದಾರ್ಥಸಂಬಂಧವಾದ ವ್ಯಾಕರಣ ಉತ್ಪತ್ತಿಯಿಂದ ಯಾವ ಶಾಬ್ದಿಕನಿಂದಲೂ ಹೇಳಲು ಸಾಧ್ಯವಿಲ್ಲವೆಂದು ತಾತ್ಪರ್ಯ. ಅಧ್ಯಾತ್ಮದೃಷ್ಟಿಯಲ್ಲಿರುವ ಯೋಗಿಯು ಯಾವ ಕ್ರಿಯಾಫಲವನ್ನೂ ಅಪೇಕ್ಷಿಸುವುದಿಲ್ಲ. ಯಜ್ಞಾಧಿದೇವತೆಯಾದ ಅಂದರೆ ಯಜ್ಞದಲ್ಲಿ ಆರಾಧಿಸಲ್ಪಡುವ ಇಂದ್ರ, ಅಗ್ನಿ ಮೊದಲಾದ ದೇವತೆಗಳಿಗೂ ಅಂತರ್ಯಾಮಿರೂಪಿಯಾಗಿ ನಿಂತು ಆರಾಧಿಸಲ್ಪಡುವವನು ಸರ್ವಾಂತರ್ಯಾಮಿಯಾಗಿಯೂ, ಸರ್ವನಿಯಾಮಕನಾಗಿಯೂ ಇರುವ

ಅಧಿಯಜ್ಞಂ ಬ್ರಹ್ಮ ಜಪೇತ್ಸಾಧಿದೈವಿಕಮೇವ ಚ ।
ಆಧ್ಯಾತ್ಮಿಕಂ ಚ ಸತತಂ ವೇದಾಂತಾಭಿಹಿತಂ ಫಲಂ ॥ ೫೦ ॥

ಇದಂ ಶರಣಮಜ್ಞಾನಂ ಇದಂ ದೈವಂ ವಿಜಾನತಾಂ ।
ಇದಮನ್ವಿಚ್ಛತಾಂ ಸ್ವರ್ಗಂ ಇದಮಾನಂತ್ಯಮಿಚ್ಛತಾಂ ॥ ೫೧ ॥

ಅನೇನ ಕ್ರಮಯೋಗೇನ ಪರಿವ್ರಜತಿ ಯೋ ದ್ವಿಜಃ ।
ಸ ವಿಧೂಯೇಹ ಪಾಪ್ಮಾನಂ ಪರಂ ಬ್ರಹ್ಮಾಧಿಗಚ್ಛತಿ ॥ ೫೨ ॥

ಏಷ ಧರ್ಮೋಽನುಶಿಷ್ಟಸ್ತೇ ಯತೀನಾಂ ನಿಯತಾತ್ಮನಾಂ ।
ಏವಂ ಸನ್ಯಾಸಕಾನಾಂ ತು ಕರ್ಮಯೋಗಂ ನಿಬೋಧ ಮೇ ॥ ೫೩ ॥

ಪರಬ್ರಹ್ಮನೆಂದೇ ಹೇಳಬೇಕು. ಅಷ್ಟೈಶ್ವರ್ಯರೂ, ಅಧಿಕಾರಿಕಪುರುಷರೂ ಆದ ಇಂದ್ರ, ಪ್ರಜಾಪತಿ, ಪಶುಪತಿ ಪ್ರಭೃತಿಗಳನ್ನು ಉದ್ದೇಶಿಸಿ ಯಜ್ಞವಿಧಿಯಲ್ಲಿ ವಿಹಿತವಾಗಿರುವ ಆಯಾಯ ವ್ಯಾಪಾರಗಳೆಲ್ಲವೂ ಅವರಿಗೂ ಅಂತರ್ಯಾಮಿ ರೂಪದಿಂದ ಇರುವ ಪರಬ್ರಹ್ಮವಿಷಯಕವೆಂದೇ ತಿಳಿಯಬೇಕು. ಅಂತಹ ಯಜ್ಞಾಧಿ ದೇವತೆಯನ್ನು ಯಾವಾಗಲೂ ಜಪಿಸುತ್ತಿರಬೇಕು. ವೇದಾಂತಶಾಸ್ತ್ರದಲ್ಲಿ ಹೇಳಿರುವ ಆತ್ಮಸ್ವರೂಪವನ್ನೂ ಇಂದ್ರಾದಿದೇವತೆಗಳಿಗಿಂತಲೂ ವಿಲಕ್ಷಣವಾದ ಭೋಗ್ಯ ಭೋಗೋಪಕರಣಗಳನ್ನು ಹೊಂದಿರುವ ಪರಿಶುದ್ಧನಾದ ಮುಕ್ತಾತ್ಮನನ್ನೂ ಸಹ ಯಾವಾಗಲೂ ಅನುಸಂಧಾನ ಮಾಡುತ್ತಿರಬೇಕು.

೫೧–೫೨ ಈ ವಿಧಾನವೇ ಅಜ್ಞಾನಿಗಳಿಗೂ ರಕ್ಷಣಸ್ಥಾನ, ಮತ್ತು ತಿಳಿದಿರುವ ಜ್ಞಾನಿಗಳಿಗೂ ಇದೇ ಇಷ್ಟಪ್ರಾಪ್ತಿಗೆ ಸಾಧಕವಾದ ದೈವವು. ಇದೇ ಪ್ರಾಪ್ಯವಾದ ಸ್ಥಾನವನ್ನು ಹುಡುಕುವವರಿಗೆ ಸ್ವರ್ಗ. ಮತ್ತು ಇಷ್ಟವಸ್ತುವನ್ನು ಅಪೇಕ್ಷಿಸುವವರಿಗೂ ಸಹ ಇದೇ ಅನಂತವಾದ ಪುರುಷಾರ್ಥ ಸಾಧನ ಈ ರೀತಿಯಾದ ಕ್ರಮಕ್ರಮವಾಗಿ ಬಂದ ಆತ್ಮಾಭ್ಯಾಸದಿಂದ ಯಾವ ದ್ವಿಜನು ಸನ್ಯಾಸಿಯಾಗುತ್ತಾನೆಯೋ ಅವನು ಎಲ್ಲಾ ಪಾಪಗಳನ್ನೂ ಇಲ್ಲಿಯೇ ಬಿಟ್ಟು ಪರಬ್ರಹ್ಮನನ್ನು ಹೊಂದುತ್ತಾನೆ.

೫೩–೫೫ ಈ ರೀತಿ ಮನೋನಿಗ್ರಹವನ್ನು ಹೊಂದಿರುವ ಯತಿಗಳ ಧರ್ಮವನ್ನೂ ನಿನಗೆ ಹೇಳಿದ್ದಾಯಿತು. ಈ ರೀತಿ ಸನ್ಯಾಸಹೊಂದುವವರ ಕರ್ಮಯೋಗವನ್ನೂ ಹೇಳುತ್ತೇನೆ. ಕೇಳು ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ, ಯತಿ

ಬ್ರಹ್ಮಚಾರೀ ಗೃಹಸ್ಥಶ್ಚ ವಾನಪ್ರಸ್ಥೋ ಯತಿಸ್ತಥಾ ।
ಏತೇ ಗೃಹಸ್ಥಪ್ರಭವಾಃ ಚತ್ವಾರಃ ಪೃಥಗಾಶ್ರಮಾಃ ॥ ೩೪ ॥

ಸರ್ವೇಽಪಿ ಕ್ರಮಶಸ್ತ್ವೇತೇ ಯಥಾಶಾಸ್ತ್ರಂ ನಿಷೇವಿತಾಃ ।
ಯಥೋಕ್ತಕಾರಿಣಂ ವಿಪ್ರಂ ನಯಂತಿ ಪರಮಾಂ ಗತಿಂ ॥ ೩೫ ॥

ಸರ್ವೇಷಾಮೇವ ಚೈತೇಷಾಂ ವೇದಶ್ರುತಿವಿಧಾನತಃ ।
ಗೃಹಸ್ಥ ಉಚ್ಯತೇ ಶ್ರೇಷ್ಠಃ ಸತ್ರೀನೇತಾನ್ ಬಿಭರ್ತಿ ಹಿ ॥ ೩೬ ॥

ಯಥಾ ನದೀನದಾಃ ಸರ್ವೇ ಸಾಗರೇ ಯಾಂತಿ ಸಂಸ್ಥಿತಿಂ ।
ತಥೈವಾಶ್ರಮಿಣಃ ಸರ್ವೇ ಗೃಹಸ್ಥೇ ಯಾಂತಿ ಸಂಸ್ಥಿತಿಂ ॥ ೩೭ ॥

ಚತುರ್ಭಿರಪಿ ತತ್ವಜ್ಞೈಃ ನಿತ್ಯಮಾಶ್ರಮಿಭಿಃ ದ್ವಿಜೈಃ ।
ದಶಲಾಕ್ಷಣಿಕೋ ಧರ್ಮಃ ಸೇವಿತವ್ಯಃ ಪ್ರಯತ್ನತಃ ॥ ೩೮ ॥

ಧೃತಿಃ ಕ್ಷಮಾ ದಮೋಽಸ್ತೇಯಂ ಶೌಚಮಿಂದ್ರಿಯನಿಗ್ರಹಃ ।
ಧೀರ್ವಿದ್ಯಾ ಸತ್ಯಮಕ್ರೋಧೋ ದಶಕಂ ಧರ್ಮಲಕ್ಷಣಂ ॥ ೩೯ ॥

---

ಎಂಬ ಈ ನಾಲ್ಕು ಆಶ್ರಮಗಳೂ ಬೇರೆಬೇರೆಯಾದುವು. ಇವೆಲ್ಲಾ ಗೃಹಸ್ಥಾಶ್ರಮ ದಿಂದಲೇ ಉಂಟಾಗತಕ್ಕುವು. ಈ ನಾಲ್ಕು ಆಶ್ರಮಗಳೂ ಸಹ ಶಾಸ್ತ್ರಾನುಸಾರವಾಗಿ ಕ್ರಮದಿಂದ ಸೇವಿಸಲ್ಪಟ್ಟರೆ ಶಾಸ್ತ್ರವಶ್ಯನಾದ ಅಂತಹ ಬ್ರಾಹ್ಮಣನನ್ನು ಈ ಆಶ್ರಮ ಗಳು ಉತ್ತಮವಾದ ಗತಿಗೆ ಭಾಗಿಯನ್ನಾಗಿ ಮಾಡುತ್ತವೆ

೩೬-೩೮. ಈ ಎಲ್ಲಾ ಆಶ್ರಮಗಳಲ್ಲಿಯೂ ವೇದದಲ್ಲಿ ತಿಳಿಯಬರುವ ವಿಧಾನವನ್ನನುಸರಿಸಿ ಗೃಹಸ್ಥನೇ ಶ್ರೇಷ್ಠನೆಂದು ಹೇಳಲಾಗಿದೆ. ಆ ಗೃಹಸ್ಥನೇ ಉಳಿದ ಮೂರು ಆಶ್ರಮವನ್ನೂ ಭರಿಸತಕ್ಕವನು. ಎಲ್ಲಾ ನದನದಿಗಳೂ ಸಮುದ್ರವನ್ನು ಹೋಗಿ ಸೇರುವಂತೆ ಎಲ್ಲಾ ಆಶ್ರಮಗಳೂ ಗೃಹಸ್ಥನನ್ನೇ ಆಶ್ರಯಿಸಿ ಕೊಂಡಿವೆ. ಈ ನಾಲ್ಕು ಆಶ್ರಮಗಳಲ್ಲಿರುವ ತತ್ವಜ್ಞರಾದ ದ್ವಿಜರೂ ಸಹ ಈ ಹತ್ತು ವಿಧಲಕ್ಷಣಗಳುಳ್ಳ ವಿಶಿಷ್ಟಧರ್ಮವನ್ನು ಸೇವಿಸಲೇಬೇಕು. ಇದು ಅತ್ಯಾವಶ್ಯಕ.

೩೯-೬೧. ಧೈರ್ಯ, ಸಹನಶಕ್ತಿ ಅಂತರಿಂದ್ರಿಯನಿಗ್ರಹ, ಚೌರ್ಯವಿಲ್ಲ ದಿರುವಿಕೆ, (ಅನ್ಯಥಾ ಸಂತಮಾತ್ಮಾನಮನ್ಯಥಾ ಪ್ರತಿಪದ್ಯತೇ ಕಿಂ ತೇನ ನ ಕೃತಂ ಪಾಪಂ ಚೋರೇಣಾತ್ಮಾಪಹಾರಿಣಾ ಎಂಬ ರೀತಿಯಿಂದ ಆತ್ಮಾಪಹಾರ ರೂಪವಾದ

ದಶಚಿಹ್ನಾನಿ ಧರ್ಮಸ್ಯ ಯೇ ವಿಪ್ರಾಃ ಸಮಧೀಯತೇ ।
ಅಧೀತ್ಯಚಾನುವರ್ತಂತೇ ತೇ ಯಾಂತಿ ಪರಮಾಂ ಗತಿಂ ॥ ೬೦ ॥

ದಶಲಾಕ್ಷಣಿಕಂ ಧರ್ಮಮನುತಿಷ್ಠನ್ ಸಮಾಹಿತಃ ।
ವೇದಾಂತಂ ವಿಧಿವತ್ ಶ್ರುತ್ವಾ ಮನ್ಯೇಹಮನೃಣೋ ದ್ವಿಜಃ ॥ ೬೧ ॥

ಸನ್ನ್ಯಸ್ಯ ಸರ್ವಕರ್ಮಾಣಿ ಸರ್ವಾನ್ ದೋಷಾನುಪಾನುದೇತ್ ।
ನಿಯತೋ ಧರ್ಮಮಭ್ಯಸ್ಯ ಪುತ್ರೈಸ್ಸಹ ಸುಖಂ ವಸೇತ್ ॥ ೬೨ ॥

ಏವಂ ಸನ್ನ್ಯಸ್ಯ ಕರ್ಮಾಣಿ ಸ್ವಕಾರ್ಯೇ ಪರಮೋಽಸ್ಪೃಹಃ ।
ಸನ್ನ್ಯಾಸೇನಾಪಹೃತ್ಯೈನಃ ಪ್ರಾಪ್ನೋತಿ ಪರಮಾಂ ಗತಿಂ ।
ಏಷತೇಽಭಿತೋ ಧರ್ಮೋ ದ್ವಿಜಾತೀನಾಂ ಚತುರ್ವಿಧಃ ॥ ೬೩ ॥

---

ಚೌರ್ಯವಿಲ್ಲದಿರುವಿಕೆ ಎಂದು ತಾತ್ಪರ್ಯ.) ಶುಚಿತ್ವ ಬಾಹ್ಯೇಂದ್ರಿಯನಿಗ್ರಹ, ಜ್ಞಾನ, ವೇದಾಂತ ಪ್ರಸಿದ್ಧವಾದ ಉಪಾಸನಾಸ್ವರೂಪಜ್ಞಾನ, ಅಥವಾ ಋಗ್ವೇದಾದಿ ಅಪರವಿದ್ಯಾ, ಸತ್ಯಶೀಲತೆ, ಕೋಪವಿಲ್ಲದಿರವಿಕೆ, ಈ ಹತ್ತೂ ಧರ್ಮಲಕ್ಷಣ ಹತ್ತು ವಿಧವಾದ ಸ್ವರೂಪವುಳ್ಳ ಈ ವಿಶಿಷ್ಟಧರ್ಮವನ್ನು ಯಾವ ಬ್ರಾಹ್ಮಣರು ಅಭ್ಯಸಿಸುತ್ತಾರೆಯೋ ಅಭ್ಯಾಸಮಾಡಿಯೂ ಸಹ ಅನುಷ್ಠಾನದಲ್ಲಿಟ್ಟುಕೊಳ್ಳುತ್ತಾರೆಯೋ ಅಂತಹ ಬ್ರಾಹ್ಮಣೋತ್ತಮರು ಉತ್ತಮವಾದ ಗತಿಯನ್ನು ಹೊಂದುತ್ತಾರೆ. ಮನಃಶಾಂತಿಯಿಂದ ಕೂಡಿ ಈ ವಿಶಿಷ್ಟಧರ್ಮವನ್ನು ಬಳಕೆಯಲ್ಲಿ ತಂದುಕೊಂಡು ಯಥಾವಿಧಿಯಾಗಿ ವೇದಾಂತ ಶಾಸ್ತ್ರವನ್ನು ಶ್ರವಣಮಾಡಿ ಕೃತಕೃತ್ಯನಾದಲ್ಲಿ ಅಂತಹ ಬ್ರಾಹ್ಮಣನೇ ಋಣವಿಲ್ಲದವನೆಂದು ನಾನು ಭಾವಿಸುತ್ತೇನೆ.

೬೨-೬೪ ಈ ರೀತಿ ಕರ್ಮಸನ್ನ್ಯಾಸವನ್ನು ಹೊಂದಿ ಎಲ್ಲಾ ದೋಷಗಳನ್ನೂ ಹೋಗಲಾಡಿಸಿಕೊಳ್ಳಬೇಕು. (ಇಲ್ಲಿ ಕರ್ಮಸನ್ನ್ಯಾಸವೆಂದರೆ ಫಲಾಭಿಸಂಧಿಪೂರ್ವಕವಾದ ಕರ್ಮತ್ಯಾಗವೆಂದು ತಿಳಿಯಬೇಕು. ನಿಷ್ಕಾಮಕರ್ಮಾಚರಣವೆಂದು ತಾತ್ಪರ್ಯ. ಆದುದರಿಂದಲೇ ಫಲಸಂಬಂಧದಿಂದುಂಟಾದ ದೋಷಪರಿಹಾರವನ್ನೇ ಸರ್ವಾನ್ ದೋಷಾನ್ ಎಂಬ ಮುಂದಿನ ವಾಕ್ಯದಿಂದ ಹೇಳಿರುವರು. ಶಾಂತಚಿತ್ತನಾಗಿ ನಿಯಮದಿಂದಿದ್ದು ಮೇಲೆ ಹೇಳಿರುವ ದಶಲಕ್ಷಣ ಧರ್ಮಾಭ್ಯಾಸದಿಂದ ಪುತ್ರರೊಡನೆ ಸುಖದಿಂದ ವಾಸಮಾಡಬೇಕು. ಇದು ಗೃಹಸ್ಥಾಶ್ರಮಿಯ ಕರ್ತವ್ಯ. ಈ ರೀತಿ ಫಲಾಭಿಸಂಧಿಪೂರ್ವಕ ಕರ್ಮಸನ್ನ್ಯಾಸ ಹೊಂದಿದವನು ತನಗೆ ಅಭಿಮತ

ಸ್ವಲ್ಪೋಽಪಿ ಧರ್ಮಶ್ಚರಿತೋ ಯಥಾಯಂ
ಮಹಾಫಲಃ ಸ್ಯಾತ್ಸತತಂ ದ್ವಿಜಾನಾಂ ।
ತಸ್ಮಾತ್ಪ್ರಯತ್ನಾದಯಮೇವ ಕಾರ್ಯಃ
ಸರ್ವಂ ಸಮುತ್ಸೃಜ್ಯ ಮಹಾನುಭಾವಃ ॥ ೬೪ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ಚತುರಾಶ್ರಮವರ್ಣನಂ ನಾಮ
ಏಕತ್ರಿಶದ್ಯುತ್ತರಶತತಮೋಽಧ್ಯಾಯಃ

ಇದ ಪ್ರವೃತ್ತಿಯಲ್ಲಿ ಗುರಿಯಿಟ್ಟು ವಿಷಯಾಭಿಲಾಷೆಯನ್ನು ಸಂಪೂರ್ಣವಾಗಿ ತೊರೆದು ಸನ್ಯಾಸಾಶ್ರಮವನ್ನು ಹೊಂದಿ ಎಲ್ಲಾ ಪಾಪಗಳನ್ನೂ ಹೋಗಲಾಡಿಸಿ ಸ್ವಂತ ಉತ್ತಮವಾದ ಗತಿಯನ್ನು ಹೊಂದುತ್ತಾನೆ ಈ ರೀತಿ ದ್ವಿಜರಾದವರು ಆಚರಿಸಬೇಕಾದ ನಾಲ್ಕು ಆಶ್ರಮಧರ್ಮಗಳನ್ನೂ ಹೇಳಿರುತ್ತೇನೆ. ಈ ಧರ್ಮಾನುಷ್ಠಾನವು ಯಥಾಶಕ್ತಿ ಸ್ವಲ್ಪವಾಗಿ ನಡೆದರೂ ಅದು ದ್ವಿಜರಿಗೆ ಮಹಾಫಲಪ್ರದವಾಗುತ್ತದೆ. ಆದುದರಿಂದ ಈ ಮಹಾಧರ್ಮವನ್ನು ಇತರ ಧರ್ಮಗಳನ್ನು ತ್ಯಜಿಸಿ ಸಾದರದಿ ಅವಶ್ಯವಾಗಿ ಆಚರಿಸಬೇಕು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದ ಮಾರ್ಕಂಡೇಯ ಸಂವಾದದಲ್ಲಿ
ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ
ಚತುರ್ಥಾಶ್ರಮವರ್ಣನವೆಂಬ ನೂರ ಮೂವತ್ತೊಂದನೆಯ
ಅಧ್ಯಾಯವು ಮುಗಿದಿದೆ.



|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯ ಖಂಡೇ

---

### ದ್ವಾತ್ರಿಂಶದುತ್ತರಶತತಮೋಽಧ್ಯಾಯಃ

|| ರಾಮ ಉವಾಚ ||

ಅಷ್ಟಾದಶಭ್ಯಃ ಶಾಂತಿಭ್ಯಃ ಶಾಂತಯೋ ಯಾಃ ಸುರೋತ್ತಮ |
ಭಿದ್ಯಂತೇ ವಾ ನ ಭಿದ್ಯಂತೇ ತನ್ಮಮಾಚಕ್ಷ್ವ ಪೃಚ್ಛತಃ || ೧ ||

|| ಪುಷ್ಕರ ಉವಾಚ ||

ಅಮೃತಾ ಚಾಭಯಾ ಸೌಮ್ಯಾಃ ತಿಸ್ರೋಽನ್ಯಾಃ ಸಂತಿ ಭಾರ್ಗವ |
ಏಕಾಪಿ ತಾಸಾಂ ವಿಜ್ಞೇಯಾ ಸರ್ವಕರ್ಮಫಲಪ್ರದಾ || ೨ ||

ಸರ್ವೋತ್ಪಾತಪ್ರಶಮನೀ ಮಂಗಲ್ಯಾ ಸಿದ್ಧಿಕಾರಿಕಾ |
ಪೂರ್ವೋಕ್ತಾಃ ಕಥಿತೇಷ್ವೇವ ಕರ್ತವ್ಯಾ ಅದ್ಭುತೇಷು ಚ || ೩ ||

---

### ನೂರ ಮೂವತ್ತೆರಡನೇ ಅಧ್ಯಾಯ.

೧. ಪುನಃ ಭಾರ್ಗವನು ಮೇಲೆ ತಾವು ಹೇಳಿರುವ ಹದಿನೆಂಟುವಿಧವಾದ ಶಾಂತಿಗಳಿಗಿಂತ ಬೇರೆಯಾದ ಶಾಂತಿಗಳಿವೆಯೇ ಅಥವಾ ಇಲ್ಲವೇ ಎಂಬುದನ್ನು ಹೇಳಬೇಕು. ಎಂದು ಪ್ರಶ್ನೆಮಾಡಲಾಗಿ ಪುಷ್ಕರನು ಅದಕ್ಕೆ ಉತ್ತರವಾಗಿ ಹೇಳುತ್ತಾನೆ.

೨-೩. ಅಮೃತಾ, ಅಭಯಾ, ಸೌಮ್ಯಾ ಎಂಬ ಮೂರು ಶಾಂತಿಗಳೂ ಬೇರೆಯಾಗಿವೆ. ಇವುಗಳಲ್ಲಿ ಯಾವುದಾದರೊಂದನ್ನು ಮಾಡಿದರೂ ಎಲ್ಲಾ ಕರ್ಮಗಳೂ ಫಲಪ್ರದವಾಗುತ್ತವೆ. ಎಲ್ಲಾ ವಿಧವಾದ ಉತ್ಪಾತಗಳೂ ಶಮನ

|| ರಾಮ ಉವಾಚ ||

ಶಾಂತೀನಾಂ ಮೇ ಸಮಾಚಕ್ಷ್ವ ಸ್ವರೂಪಾಣಿ ಮಹಾಭುಜ |
ಪಿತಾಮಹಸಮೋ ಲೋಕೇ ಸರ್ವಜ್ಞೋಽಪಿ ಮತೋ ಮಮ || ೪ ||

|| ಪುಷ್ಕರ ಉವಾಚ ||

ಅಮೃತಾ ಶರ್ವದೈವತ್ಯಾ ಅಭಯಾ ಬ್ರಹ್ಮದೈವತಾ |
ಸೌಮ್ಯಾ ಚ ಸೋಮದೈವತ್ಯಾ ಕಥಿತಾ ಭೃಗುನಂದನ || ೫ ||

ಅನ್ಯಾಸಾಂ ದೇವತಾಜ್ಞಾನಂ ನಾಮ್ನೈವ ಕಥಿತಂ ತವ |
ಅಥರ್ವಣಾನಾಂ ಶಾಂತೀನಾಂ ನಿಬೋಧ ಗದತೋ ಮಮ || ೬ ||

ಅಮೃತಾ ಚಿತ್ರವರ್ಣಾಸ್ಯಾದಭಯಾ ತು ಶಶಿಪ್ರಭಾ |
ಸೌಮ್ಯಾ ಶುಕ್ಲೈವ ವಿಜ್ಞೇಯಾ ನೀಲಾ ಭವತಿ ವೈಷ್ಣವೀ || ೭ ||

---

ವಾಗುತ್ತ್ರವೆ   ಇದು ಮಂಗಳಪ್ರದವಾಗಿಯೂ, ಸಿದ್ಧಿಕಾರಿಯಾಗಿಯೂ ಇದೆ. ಹಿಂದೆ ಹೇಳಿರುವ ಶಾಂತಿಗಳನ್ನು ಅಲ್ಲಿ ಹೇಳಿರುವಂತೆ ಆಯಾಯ ಕರ್ಮಗಳಲ್ಲಿಯೂ ಆಶ್ಚರ್ಯಕರವಾದ ವಿಧಾನಗಳಲ್ಲಿಯೂ ಮಾಡಬೇಕು.

೪. ಪುನಃ ಭಾರ್ಗವನು ಎಲೈ ಮಹಾತ್ಮನೇ ಆ ಶಾಂತಿಗಳ ಸ್ವರೂಪ ವೆಂತಹುದು ಎಂಬುದನ್ನೂ ಸಹ ನನಗೆ ವಿಸ್ತಾರವಾಗಿ ಹೇಳು. ಸರ್ವಜ್ಞನಾದ ನಿನ್ನನ್ನು ಚತುರ್ಮುಖನಿಗೆ ಸಮಾನನೆಂದು ನಾನು ತಿಳಿದಿದ್ದೇನೆ. ಇದಕ್ಕೆ ಉತ್ತರ ವಾಗಿ ಪುಷ್ಕರನು ಹೇಳುತ್ತಾನೆ

೫-೬. ಅಮೃತಾ ಎಂಬುದು ರುದ್ರದೇವತಾಕವಾದುದು. ಅಭಯಾ ಎಂಬುದು ಬ್ರಹ್ಮದೇವತಾಕವಾದುದು ಸೌಮ್ಯಾ ಎಂಬುದು ಸೋಮದೇವತಾಕ ವಾದದ್ದು. ಈ ಶಾಂತಿಗಳಿಗೆ ದೇವತೆಗಳನ್ನು ಈರೀತಿ ನಿನಗೆ ಹೇಳಿರುವೆನು. ಹಿಂದೆ ನಾನು ಹೇಳಿರುವ ಇತರ ಶಾಂತಿಗಳಿಗೆ ಯಾವಯಾವ ದೇವತೆಗಳೆಂಬುದನ್ನು ಆಯಾಯ ಶಾಂತಿಯ ಹೆಸರುಗಳಿಂದಲೇ ನಿನಗೆ ಹೇಳಿದಂತಾಗಿದೆ. ಅಥರ್ವವೇದಕ್ಕೆ ಅನುಬಂಧಿಸಿರುವ ಶಾಂತಿಗಳನ್ನು ಹೇಳುತ್ತೇನೆ. ಅವನ್ನೂ ನನ್ನಿಂದ ತಿಳಿದುಕೊ.

೭-೮. ಅಮೃತಾ ಎಂಬುದು ಚಿತ್ರವರ್ಣಉಳ್ಳದ್ದು. ಅಭಯಾ ಎಂಬುದು ಚಂದ್ರನಂತೆ ಶುಭ್ರವಾದದ್ದು. ಸೌಮ್ಯ ಎಂಬುದೂ ಬಿಳುಪಾಗಿದೆ. ವೈಷ್ಣವೀ

ಬಾಲಾರ್ಕಸದೃಶಾ ರೌದ್ರೀ ಬ್ರಾಹ್ಮೀ ಶಂಖಸಮಪ್ರಭಾ ।
ರುಕ್ಮವರ್ಣಾ ತಥೈವೈಂದ್ರೀ ವಾಯವ್ಯಾ ಹರಿತಾ ಭವೇತ್ ॥ ೮ ॥

ಶುಕ್ಲಾ ಚ ವಾರುಣೀ ಜ್ಞೇಯಾ ಕೌಬೇರೀ ಪದ್ಮಸುಪ್ರಭಾ ।
ಭಾರ್ಗವೀ ಶುಕ್ಲವರ್ಣಾಸ್ಯಾತ್ಪ್ರಾಜಾಪತ್ಯಾ ಚ ಪೀತಿಕಾ ॥ ೯ ॥

ತ್ವಾಷ್ಟ್ರೀ ಶುಕ್ಲಾ ಚ ವಿಜ್ಞೇಯಾ ಕೌಮಾರೀ ತಾಮ್ರಸುಪ್ರಭಾ ।
ಆಗ್ನೇಯ್ಯಗ್ನಿಸವರ್ಣಾ ಸ್ಯಾತ್ ಶುಕ್ಲಾ ಮಾತಂಗಿನೀ ಭವೇತ್ ॥ ೧೦ ॥

ಪ್ರವಾಲಾಭಾ ಚ ಗಾಂಧರ್ವೀ ಕೃಷ್ಣಾ ವೈ ನೈಋತಾ ತಥಾ ।
ರೋಚನಾಭಾಚಾಂಗಿರಸೀ ಯಾಮ್ಯಾ ಕೃಷ್ಣಾ ತಥಾ ಭವೇತ್ ॥ ೧೧ ॥

ಪಾರ್ಥಿವೀ ಚ ಮಯೂರಾಭಾ ವರ್ಣತಃ ಕಥಿತಾಸ್ತವ ।
ಅತಃಪರಂ ಪ್ರವಕ್ಷ್ಯಾಮಿ ಸ್ಥಾನಾನ್ಯಾಸಾಂ ಯಥಾವಿಧಿ ॥ ೧೨ ॥

ಎಂಬುದು ನೀಲವರ್ಣಉಳ್ಳದ್ದಾಗಿದೆ. ರೌದ್ರೀ ಎಂಬುದು ಬಾಲಸೂರ್ಯನಿಗೆ ಸದೃಶವಾಗಿದೆ. ಬ್ರಾಹ್ಮೀ ಎಂಬುದು ಶಂಖದಂತೆ ಬಿಳುಪಾಗಿದೆ. ಐಂದ್ರೀ ಎಂಬುದು ಚಿನ್ನದ ಬಣ್ಣವುಳ್ಳದ್ದಾಗಿದೆ. ವಾಯವ್ಯಾ ಎಂಬುದು ಹಸುರಾಗಿದೆ.

೯-೧೧ ವಾರುಣೀ ಎಂಬುದು ಬಿಳುಪಾಗಿಯೂ, ಕೌಬೇರೀ ಎಂಬುದು ಪದ್ಮದಪ್ರಭೆಯಂತೆ ಪ್ರಭೆಯುಳ್ಳದ್ದಾಗಿಯೂ ಇವೆ ಎಂದು ತಿಳಿಯಬೇಕು. ಭಾರ್ಗವೀ ಎಂಬುದು ಬಿಳುಪಾಗಿಯೂ, ಪ್ರಾಜಾಪತ್ಯಾ ಎಂಬುದು ಹೊಂಬಣ್ಣವಾಗಿಯೂ ತ್ವಾಷ್ಟ್ರೀ ಎಂಬುದು ಬಿಳುಪಾಗಿಯೂ, ಕೌಮಾರೀ ಎಂಬುದು ತಾಮ್ರದಂತೆ ಕೆಂಪಾಗಿಯೂ ಆಗ್ನೇಯೀ ಎಂಬುದು ಅಗ್ನಿಯಂತೆಯೂ ಮಾತಂಗಿನೀ ಎಂಬುದು ಬಿಳುಪಾಗಿಯೂ, ಗಾಂಧರ್ವೀ ಎಂಬುದು ಹವಳದಂತೆ ಕೆಂಪಾಗಿಯೂ, ನೈಋತಾ ಎಂಬುದು ಕಪ್ಪಗೂ, ಆಂಗೀರಸೀ ಎಂಬುದು ಗೋರೋಚನದ ಬಣ್ಣ ಉಳ್ಳದ್ದಾಗಿಯೂ, ಯಾಮ್ಯಾ ಎಂಬುದು ಕಪ್ಪಾಗಿಯೂ ಇವೆ.

೧೨-೧೩. ಪಾರ್ಥಿವೀ ಎಂಬುದು ನವಿಲಿನಬಣ್ಣದಂತೆ ಬಣ್ಣಉಳ್ಳದ್ದಾಗಿದೆ. ಈರೀತಿ ಎಲ್ಲಾ ಶಾಂತಿಗಳವರ್ಣವನ್ನು ನಿನಗೆ ಹೇಳಿದ್ದಾಯಿತು. ಇನ್ನು ಮುಂದೆ

**ಅಮೃತಾ ಚಾ ಭಯಾ ಸೌಮ್ಯಾ ತಿಸ್ರಸ್ತು ಭೃಗುನಂದನ ।**
**ತಾಸಾಂ ಸರ್ವತ್ರ ಸಂಸ್ಥಾನಂ ಕಥಿತಂ ತು ಪುರಾತನೈಃ ॥ ೧೩ ॥**

**ಪ್ರಾಜಾಪತ್ಯಾ ತಥಾಗ್ನಾಯಿಾ ಯಾಮ್ಯಾ ವೈ ನೈಋತೀ ತಥಾ ।**
**ಕೌಬೇರೀ ಪಾರ್ಥಿವೀ ಚೇತಿ ಪೃಥಿವ್ಯಾಂ ಪರಿಕೀರ್ತಿತಾಃ ॥ ೧೪ ॥**

**ವಾಯವ್ಯಾ ಚೈವ ಕೌಮಾರೀ ವೈಷ್ಣವೀ ರುದ್ರದೇವತಾ ।**
**ಅಂತರಿಕ್ಷೇ ವಿನಿರ್ದಿಷ್ಟಾಃ ಶಾಂತಯೋ ದ್ವಿಜಸತ್ತಮ ॥ ೧೫ ॥**

**ಐಂದ್ರೀ ಮಾತಂಗಿನೀ ತ್ವಾಷ್ಟ್ರೀ ದಿವ್ಯಾ ಬ್ರಾಹ್ಮೀ ತಥೇರಿತಾ ।**
**ವಾರುಣೀ ಚೈವಗಾಂಧಾರೀ ಭಾರ್ಗವ್ಯಾಂಗಿರಸೀ ತಥಾ ॥ ೧೬ ॥**

**ಆದ್ಯಾಸ್ತು ಕಥಿತಾಸ್ತುಭ್ಯಂ ಕರ್ತವ್ಯಾಶ್ಚ ವಿಜಾನತಾ ।**
**ಯಥಾ ಸ್ವದೇಶಜಾತೇಷು ಚಾದ್ಭುತೇಷು ಯಥಾವಿಧಿ ॥ ೧೭ ॥**

---

ಇವುಗಳಿಗೆ ಶಾಸ್ತ್ರರೀತಿಯಿಂದ ಪ್ರಯೋಗಸ್ಥಾನಗಳನ್ನು ಹೇಳುತ್ತೇನೆ. ಅಮೃತಾ ಅಭಯಾ, ಸೌಮ್ಯಾ ಈ ಮೂರೂ ಎಲ್ಲಾ ಕಡೆಯಲ್ಲೂ ಸ್ಥಾನವನ್ನು ಹೊಂದಿವೆ ಎಂದು ಪ್ರಾಚೀನರಾದ ಜ್ಞಾನಿಗಳೇ ಹೇಳಿರುವರು

೧೪–೧೭ ಪ್ರಾಜಾಪತ್ಯಾ, ಅಗ್ನಾಯೀ, ಯಾಮ್ಯಾ, ನೈಋತೀ, ಕೌಬೇರೀ ಪಾರ್ಥಿವೀ ಇವು ಭೂಮಿಯಲ್ಲಿ ಸ್ಥಾನಹೊಂದಿರುವುವು ವಾಯವ್ಯಾ, ಕೌಮಾರೀ, ವೈಷ್ಣವೀ ರೌದ್ರೀ ಈ ಶಾಂತಿಗಳು ಅಂತರಿಕ್ಷದಲ್ಲಿ ಸ್ಥಾನಹೊಂದಿವೆ. ಐಂದ್ರೀ, ಮಾತಂಗಿನೀ, ತ್ವಾಷ್ಟ್ರೀ, ಬ್ರಾಹ್ಮೀ, ವಾರುಣೀ, ಗಾಂಧಾರೀ, ಭಾರ್ಗವೀ, ಅಂಗೀರಸೀ, ಇವುಗಳು ದ್ಯುಲೋಕದಲ್ಲಿ ಸ್ಥಾನಹೊಂದಿರುವುವು. ಮೊದಲನೆಯ ಮೂರನ್ನು ನಿನಗೆ ಹೇಳಿರುವೆನು, ಅವನ್ನು ತಿಳಿದುಕೊಂಡಿರುವ ನೀನು ಹಾಗೆಯೇ ಆಚರಿಸಬೇಕು. ತನ್ನ ದೇಶದಲ್ಲಿರುವವರ ವಿಷಯದಲ್ಲಿಯೂ ಆಶ್ಚರ್ಯಕರವಾದ ಕಾರ್ಯಗಳಲ್ಲಿಯೂ ಅವು ಆಚರಿಸಲ್ಪಡತಕ್ಕವುಗಳು.

ತದ್ದೈವತ್ಯಾಸ್ತಥಾ ಮಂತ್ರಾಃ ಸರ್ವಾಸಾಂ ಗರ್ಭ ಉಚ್ಯತೇ ।
ಮಣೀನಾಂ ಚ ತಥಾಗರ್ಭಾಃ ಸರ್ವಾಸಾಂ ಮಂತ್ರ ಉಚ್ಯತೇ ॥ ೧೮ ॥

ಮಣೀನಾಂ ಚ ತಥಾ ಮಂತ್ರಾಃ ಜ್ಞಾತವ್ಯಾ ಮಂತ್ರಲಿಂಗತಃ ।
ಸರ್ವಾಸಾಂ ಚೈವ ಶಾಂತೀನಾಂ ಹೋತವ್ಯಾಶ್ಚ ಗಣಾ ದಶ ॥ ೧೯ ॥

[1]ಶಾಂತ್ಯಾತೀತಂ ತು ಭೈಷಜ್ಯಂ [2]ತ್ರಿಸಪ್ತೀಯಂ ತಥೈವ ಚ ।
ಅಭಯಾ ಚ ತಥಾ ರಾಮ ತಥಾ ಚೈವಾಪರಾಜಿತಾ ॥ ೨೦ ॥

ಆಯುಷ್ಯಂ ಚ ಸ್ವಸ್ತ್ಯಯನಂ ಸರ್ವವರ್ಮಗಣಂ ತಥಾ ।
ವಾಸ್ತೋಷ್ಯತಂ ತಥಾ ರೌದ್ರಂ ಗಣಾಃ ಪ್ರೋಕ್ತಾಃ ತಥಾ ದಶ ॥ ೨೧ ॥

ಹೋಮಸ್ತಥೈಷಾಂ ಮಂತವ್ಯಃ ಸರ್ವಶಾಂತಿಷು ಭಾರ್ಗವ ।
ಪೃಥಕ್ಪ್ರಧಾನತಃ ಕಲ್ಪಾಸ್ತ್ರಿಸ್ರಃ ಪೂರ್ವಾಃ ಪ್ರಕೀರ್ತಿತಾಃ ॥ ೨೨ ॥

---

೧೮–೧೯. ಎಲ್ಲಾ ಶಾಂತಿಗಳಿಗೂ ಆಯಾಯ ದೇವತೆಯುಳ್ಳ ಮಂತ್ರವೇ ಗರ್ಭವೆಂದು ಹೇಳಲ್ಪಡುತ್ತವೆ. ಮಣಿಗಳಿಗೂ ಸಹ ಅಂತಹ ಗರ್ಭಗಳು ಮಂತ್ರಗಳಲ್ಲಿ ಹೇಳಲ್ಪಟ್ಟಿವೆ. ಮಂತ್ರದಲ್ಲಿರುವ ಲಿಂಗಗಳಿಗೆ ಅನುಸಾರವಾಗಿ ಆಯಾಯ ಮಂತ್ರಗಳು ಆಯಾಯ ಮಣಿಗಳಿಗೆ ಸಂಬಂಧಿಸುತ್ತವೆ ಎಂದು ತಿಳಿಯಬೇಕು. ಈ ವಿಧವಾದ ಎಲ್ಲಾ ಶಾಂತಿಗಳಲ್ಲಿಯೂ ಹತ್ತು ಗಣಗಳನ್ನುದ್ದೇಶಿಸಿ ಹೋಮ ಮಾಡಬೇಕು.

೨೦–೨೧. ಶಾಂತಾತೀತ, ಭೈಷಜ್ಯ, ತ್ರಿಸಪ್ತೀಯ, ಅಭಯಾ, ಅಪರಾಜಿತಾ, ಆಯುಷ್ಯ, ಸ್ವಸ್ತ್ಯಯನ, ಸರ್ವವರ್ಮಗಣ, ವಾಸ್ತೋಷ್ಪತ್ಯ, ರೌದ್ರ ಎಂಬ ಹತ್ತು ಗಣಗಳಿವೆ

೨೨–೨೩. ಎಲ್ಲಾ ಶಾಂತಿಗಳಲ್ಲಿಯೂ ಈ ಗಣಗಳಿಗೆ ಹೋಮವನ್ನು ಮಾಡಬೇಕು ಬೇರೆ ಬೇರೆಯಾಗಿರುವ ಆ ಮುಖ್ಯ ಕಲ್ಪಗಳುಮೂರನ್ನೂ ಹಿಂದೆ ಹೇಳಿರುವೆವು. ಪ್ರತಿಯೊಂದು ಗಣದ ಹೋಮಮಾಡುವಾಗಲೂ ಗೋದಾನ ಮಾಡಬೇಕು. ಅದೇ ದೇವತೆಯುಳ್ಳ ಮಂತ್ರಗಳನ್ನು ಗಣಗಳಿಗೂ, ಮಣಿಗಳಿಗೂ,

---

1 ಶಾಂತಾತೀತಂ ಎಂದು ಹಿಂದೆ ಪಾಠವಿದೆ. 2 ತ್ರಿಷಪ್ತೀಯಂ ಎಂದು ಹಿಂದೆ ಪಾಠವಿದೆ.

**ಗಣೇಗಣೇ ತು ಗಾಂ ದದ್ಯಾದ್ಗಾಂ ಗರ್ಭೇಗಾಂ ತಥಾ ಮಣಾ ।**
**ಅರಾಜಾ ಭೂಮಿಪಾಲಸ್ತು ದದ್ಯಾದ್ದಶದಶ್ಶೈವ ತು ॥ ೨೩ ॥**

**ನಿಷ್ಕಾಮಃ ಸ ಭುವಂ ಚ್ಚೈವ ತಥಾ ದದ್ಯಾತ್ಪ್ರಥರೋಸೇ ।**
**ಅಭಯಾಯ ಮಣಿಃ ಕಾರ್ಯೋ ವರುಣಸ್ಯ ಭೃಗೂತ್ತಮ ॥ ೨೪ ॥**

**ಶತಕಾಂಡೋಽಮೃತಾಯಾಶ್ಚ ಸೌಮ್ಯಾಯಾಃ ಶಂಖಜೋ ಮಣಿಃ ।**
**ವೈಷ್ಣವ್ಯಾಸ್ತ್ರಿವೃತಃ ಪ್ರೋಕ್ತಃ ಸ್ನಾತೋ ರೌದ್ರ್ಯಾಃ ತಥಾಮಣಿಃ ॥ ೨೫ ॥**

**ಬ್ರಹ್ಮರಕ್ಷಸ್ತಥಾ ಬ್ರಾಹ್ಮ್ಯಾ ಮೈತ್ರ್ಯಾ ಸ್ಯಾತ್ಕನಕೋಮಣಿಃ ।**
**ವಾಯುವ್ಯಾಶ್ಚಾಂಗಿರಃ ಪ್ರೋಕ್ತೋ ವಾಯುವ್ಯಃ ಶಂಖಜೋ ಭವೇತ್ ॥**

**ಔದುಂಬರಶ್ಚ ಕೌ ಬೇರ್ಯಾಃ ಭಾರ್ಗವ್ಯಾಯಾಶ್ಯತಾವರೀಂ ।**
**ಪ್ರಾಜಾಪತ್ಯಾ ಬಿಲ್ವಮಣಿಃ ತ್ವಾಷ್ಟ್ರ್ಯಾಃ ಸಂಸ್ಕೃತಕೋಮಣಿಃ ॥ ೨೭ ॥**

---

ಗರ್ಭವನ್ನಾಗಿ ವಿಧಾನಮಾಡುವ ಕಾಲದಲ್ಲಿಯೂ ಸಹ ಗೋದಾನವನ್ನು ಮಾಡಬೇಕು. ಇದು ರಾಜನಲ್ಲದ ಸಾಮಾನ್ಯ ಜನಗಳಿಗೆ ಅನ್ವಯಿತಕ್ಕ ಕ್ರಮ. ರಾಜನಾಗಿದ್ದಲ್ಲಿ ಒಂದು ಗೋವಿನ ಸ್ಥಾನದಲ್ಲಿ ಹತ್ತು ಹತ್ತು ಗೋವುಗಳನ್ನು ದಾನ ಮಾಡಬೇಕು

೨೪–೨೫. ನಿಷ್ಕಾಮನಾದವನು ಭೂಮಿಯೊಡನೆ ಗೋವನ್ನು ಪುರೋಹಿತನಿಗೆ ಕೊಡಬೇಕು ಅಭಯಾ ಎಂಬ ಶಾಂತಿಗೆ ವರುಣನ ಮಣಿಯನ್ನು ಮಾಡಬೇಕು. ಅಮೃತಾ ಎಂಬ ಶಾಂತಿಗೆ ಶತಕಾಂಡವೆಂಬ ಓಷಧಿಯ ಮಣಿಯನ್ನು ಮಾಡಬೇಕು. ಸೌಮ್ಯಾ ಎಂಬ ಶಾಂತಿಗೆ ಶಂಖದಿಂದ ಉಂಟಾದ ಮಣಿಯನ್ನು ಮಾಡಬೇಕು ವೈಷ್ಣವೀ ಎಂಬ ಶಾಂತಿಗೆ ಮೂರು ಎಳೆಯುಳ್ಳ ಮಣಿಯನ್ನೂ ರೌದ್ರೀ ಎಂಬುದಕ್ಕೆ ಸ್ನಾತ ಮಣಿಯನ್ನೂ ಮಾಡಿಕೊಳ್ಳಬೇಕು.

೨೬–೨೮. ಬ್ರಾಹ್ಮೀ ಎಂಬುದಕ್ಕೆ ಬ್ರಹ್ಮರಕ್ಷಸ್ಸನ್ನೂ, ಮೈತ್ರೀ ಎಂಬುದಕ್ಕೆ ಚಿನ್ನದ ಮಣಿಯನ್ನೂ, ವಾಯವ್ಯಾ ಎಂಬುದಕ್ಕೆ ಆಂಗೀರಸನಿಂದ ಹೇಳಲ್ಪಟ್ಟ ಶಂಖಮಣಿಯನ್ನೂ, ಕೌಬೇರೀ ಎಂಬುದಕ್ಕೆ ಅತ್ತಿಯ ಮಣಿಯನ್ನೂ, ಭಾರ್ಗವೀ ಎಂಬುದಕ್ಕೆ ಆಷಾಡಿ ಎಂಬ ನಾರಾಯಣೀ ಗಿಡದ ಮಣಿಯನ್ನೂ, ಪ್ರಾಜಾಪತ್ಯಕ್ಕೆ ಬಿಲ್ವಮಣಿಯನ್ನೂ, ತ್ವಾಷ್ಟ್ರೀ ಎಂಬುದಕ್ಕೆ ಸಂಸ್ಕೃತವಾದ ಯಾವುದಾದರೊಂದು

ದಾಕ್ಷಾಯಣಶ್ಚ ಕೌಮಾರ್ಯಾಃ ಆಗ್ನೇಯ್ಯಾಶ್ಚ ತದೇವ ತು ।
ಮಾತಂಗಿನ್ಯಾ ಜಿಂಗಿತಜಂ ಗಾಂಧರ್ವ್ಯಾ ಅಜಶೃಂಗಜಂ ॥ ೨೮ ॥

ನೈಋತ್ಯಾಮಾಯಸಂ ಚೈವ ಆಂಗೀರಸ್ಯಾಸ್ತಥಾಂಜನಂ ।
ಐತಕಾಂಡಶ್ಚ ಯಾಮ್ಯಾಯಾಃ ಪಾರ್ಥಿವ್ಯಾ ಅಪಿ ಪಾರ್ಥಿವಂ ॥ ೨೯ ॥

ಅದ್ಭುತಸ್ಯ ಬಲಂ ಜ್ಞಾತ್ವಾ ಕೃಚ್ಛ್ರಂ ಕುರ್ಯಾತ್ಪುರೋಹಿತಃ ।
ಪ್ರಾಗೇವ ಕುರ್ಯಾಚ್ಛಮನಮಾದಾವೇವಾದ್ಭುತಸ್ಯ ತು ॥ ೩೦ ॥

ಕೃತಕೃಚ್ಛ್ರಸ್ತು ಕುರ್ವೀತ ತತಃ ಶಾಂತಿಮುಪೋಷಿತಃ ।
ಅರಣ್ಯಾಃ ಪಾತಯೇದ್ವಹ್ನಿಂ ಸರ್ವಾಸ್ವೇತಾಸು ಶಾಂತಿಷು ॥ ೩೧ ॥

ಉಪವಾಸದಿನಸ್ಯಾಂತೇ ವಹ್ನಿಮುತ್ಪಾದ್ಯ ಯತ್ನತಃ ।
ಉತ್ಪನ್ನಮನ್ನಂ ವಿಭಜೇತ್ಕ್ರವ್ಯಾದಂ ಸೌಮ್ಯಮೇವಚ ॥ ೩೨ ॥

---

ಮಣಿಯನ್ನೂ, ಕೌಮಾರೀ ಎಂಬುದಕ್ಕೂ ಮತ್ತು ಆಗ್ನೇಯಿಗೂ ಎಂಬುದಕ್ಕೂ ಸಹ ದಾಕ್ಷಾಯಣ ಮಣಿಯನ್ನೂ, ಮಾತಂಗಿನೀ ಎಂಬುದಕ್ಕೆ ಮಂಜಿಷ್ಠಾ ಮಣಿಯನ್ನೂ, ಗಾಂಧರ್ವೀ ಎಂಬುದಕ್ಕೆ ಬಲಮುರಿ ಅಥವಾ ಕೊರಟಿಗೆ ಗಿಡವನ್ನೂ, ನೈಋತಿಗೆ ಕಬ್ಬಿಣದ ಮಣಿಯನ್ನೂ, ಆಂಗಿರಸೀ ಎಂಬುದಕ್ಕೆ ಅಂಜನದ ಮಣಿಯನ್ನೂ, ಯಾಮ್ಯೆಗೆ ಕೊನ್ನಾರಿಯನ್ನೂ ಪಾರ್ಥಿವೀ ಎಂಬುದಕ್ಕೆ ಮಣ್ಣನ್ನೂ ಸಹ ಮಣಿಯನ್ನಾಗಿ ಮಾಡಿಕೊಳ್ಳಬೇಕು.

೩೦–೩೧. ದಿವ್ಯ ಭೌಮಾಂತರಿಕ್ಷ ಸಂಬಂಧಿಯಾದ ಶಾಂತಿಪ್ರಸಂಗದಲ್ಲಿ ಅವುಗಳ ಬಲಾಬಲವನ್ನು ತಿಳಿದು ಪುರೋಹಿತನು ಮೊದಲೇ ಶಾಂತ್ಯರ್ಥವಾದ ಕೃಚ್ಛ್ರವನ್ನು ಮಾಡಬೇಕು. ಕೃಚ್ಛ್ರವನ್ನು ಆಚರಿಸಿದನಂತರ ಉಪವಾಸವಿದ್ದು ಶಾಂತಿಯನ್ನು ಮಾಡಬೇಕು. ಈ ಎಲ್ಲಾ ಶಾಂತಿಗಳಲ್ಲಿಯೂ ಹೋಮಾಗ್ನಿಯನ್ನು ಅರಣಿಮಂಥನದಿಂದಲೇ ಉಂಟುಮಾಡಿಕೊಳ್ಳಬೇಕು.

೩೨–೩೪. ಉಪವಾಸ ದಿನದ ಕೊನೆಯಲ್ಲಿ ಮೇಲೆ ಹೇಳಿರುವಂತೆ ಮಂಥನದಿಂದ ಅಗ್ನಿಯನ್ನುಂಟುಮಾಡಿ ಅದರಿಂದ ಮಾಡಲ್ಪಟ್ಟ ಅನ್ನವನ್ನು ಕ್ರವ್ಯಾದ ಸೌಮ್ಯವೆಂಬ ಎರಡು ವಿಭಾಗವನ್ನಾಗಿ ಮಾಡಬೇಕು. ಕ್ರವ್ಯಾದವೆಂಬ ಭಾಗವನ್ನು

ಕೃತ್ವಾ ಕಪಾಲೇ ಕ್ರವ್ಯಾದಂ ಧ್ರುವೇಣ ನೈಋತೀಂ ದಿಶಂ ।
ಶಾಂತ್ಯಾಗಾರೇ ಸ್ಥಾಪಯೇಚ್ಚ ಶಾಂತ್ಯರ್ಥೇ ಸೌಮ್ಯಮೇವ ವಾ ॥ ೩೩

ಕೃಷ್ಣೋಷ್ಣೀಷಃ ಕೃಷ್ಣವಾಸಾಃ ಕೃಷ್ಣಮಾಲ್ಯಾನುಲೇಪನಃ ।
ಪುರೋಹಿತಃ ಪ್ರದೇಶಂ ತು ಗತ್ವಾ ವೈ ನೈಋತೀಂ ಯಜೇತ್ ॥ ೩೪

ಮೃನ್ಮಯಂ ಜೀರ್ಣಶೀರ್ಷೇ ತು ಗಂಧಮಾಲ್ಯಾನುಸಂಪದಾ ।
ಕೃಷ್ಣವಸ್ತ್ರೈಸ್ತು ಸಂಚ್ಛಾದ್ಯ ತತಸ್ತೂಪಹರೇದ್ಬಲಿಂ ॥ ೩೫

ವಾದ್ಯಘೋಷೇಣ ಮಹತಾ ತಥಾ ಕೋಲಾಹಲೈಃ ಶುಭೈಃ ।
ತತೋಗ್ನೌ ಜುಹುಯಾತ್ಸಮ್ಯಕ್ ಮೇದಃಪ್ರಭೃತಿ ವೈ ದ್ವಿಜ ॥ ೩೬

ಯೇ ಪಿಶಾಚಾಶ್ಚತುರ್ಭಿಸ್ತು ಇಷೀಕಾ ಶರ್ಕರೀ ತತಃ ।
ಕೇವಲೇ ಜುಹುಯಾದ್ವಹ್ನೌ ಕರಶುಕ್ರಾತ್ಯ ಶ್ರವಾಮಯಾ ॥ ೩೭

---

ದೃಢವಾದ ಕಪಾಲದಲ್ಲಿಟ್ಟು ಶಾಂತಿಗೃಹದ ನೈಋತ್ಯದಿಕ್ಕಿನಲ್ಲಿ ಇಡಬೇಕು. ಶಾಂ
ಗೋಸ್ಕರ ಸೌಮ್ಯವೆಂಬ ಭಾಗವನ್ನು ಉಪಯೋಗಿಸಬೇಕು. ಅನಂತರ ಪುರೋಹಿತನ
ಕಪ್ಪಾದ ರುಮಾಲು ವಸ್ತ್ರ ಇವುಗಳನ್ನೂ ಧರಿಸಿ, ಕಪ್ಪಾದ ಹೂವು ಮತ್ತು ಗಂ
ಗಳನ್ನೂ ಧರಿಸಿ ಆ ಸ್ಥಳಕ್ಕೆ ಹೋಗಿ ನಿಋಋತಿಯಾಗವನ್ನು ಮಾಡಬೇಕು.

೩೫–೩೬. ಮಣ್ಣಿನಿಂದ ಮಾಡಿದ ನಿಋಋತಿಯ ಜೀರ್ಣವಾಗಿರುವ ತಲೆಯು ಗಂಧಪುಷ್ಪಾದಿಗಳನ್ನೂ ಕಪ್ಪಾದ ವಸ್ತ್ರವನ್ನೂ ಹೊದ್ದಿಸಿ ಅನಂತರ ಹೆಚ್ಚಾ ವಾದ್ಯಘೋಷದೊಡನೆಯೂ, ಮಂಗಳಕರವಾದ ಕೋಲಾಹಲಧ್ವನಿಯೊಡನೆಯು ಸಹ ಆ ನಿಋಋತಿಗೆ ಬಲಿಹರಣ ಮಾಡಬೇಕು. ಅನಂತರ ಅಗ್ನಿಯಲ್ಲಿ ಮಾಂ ಮೇದಸ್ಸು ಮೊದಲಾದುವನ್ನು ಹೋಮಮಾಡಬೇಕು.

೩೭–೩೮ ಯೇ ಪಿಶಾಚಾಃ ಎಂಬ ನಾಲ್ಕು ಮಂತ್ರಗಳಿಂದಲೂ ಇಷಿ ಕಾಶರ್ಕರೀ ಎಂಬ ಮಂತ್ರದಿಂದಲೂ, ಶುಕ್ರಾತ್ಯ ಮತ್ತು ಶ್ರವಾಮಯಾ ಎಂ ಮಂತ್ರಗಳಿಂದಲೂ ಹೋಮಮಾಡಬೇಕು. ಅನಂತರ ಅಗ್ನಿಯಲ್ಲಿ ಫಲೀಕರ

ಫಲೀಕರಣಮಗ್ನೌ ಚ ಹುತ್ವಾ ಭುಕ್ತ್ವಾ ಚ ಪಾವಕಂ ।
ಅಪಶ್ಯನ್ಸ್ವಗೃಹಂ ಯಾಯಾತ್ ಸ್ನಾತ್ವಾ ಶ್ವೇತಾಂಬರಸ್ತತಃ ॥ ೩೮

ಅಹೋಮುಚಂ ಶಾಂತಿಕಂ ಚ ಜಪ್ತ್ವಾ ತಿಷ್ಠೇತ್ಸುಯಂತ್ರಿತಃ ।
ರಾತ್ರೌ ತ್ರಿಭಾಗಶೇಷಾಯಾಂ ಶಾಂತಿಕರ್ಮಸಮಾಚರೇತ್ ॥ ೩೯

ಶಾಂತಿಕಲ್ಪವಿಧಾನಜ್ಞಃ ಸದಸ್ಯೈಃ ಸಹಿತಸ್ತತಃ ।
ಏಕಃ ಕರ್ಮಣಿ ಯುಕ್ತಃ ಸ್ಯಾದೇಕೋ ಮಂತ್ರಸ್ಯ ನಿಶ್ಚಯೇ ॥ ೪೦

ಏಷ ಶಾಂತಿವಿಧಿಃ ಪ್ರೋಕ್ತಃ ಸಮಾಸಾತ್ಸರ್ವಶಾಂತಿಷು ।
ವಿಸ್ತರೇ ವಿಸ್ತರಃ ಪ್ರೋಕ್ತಃ ಶಾಂತಿಕರ್ಮಹ್ಯಥರ್ವಣಃ ॥ ೪೧

---

(ತೌಡಿನಿಂದ ಮಾಡುವ ಹೋಮ) ಹೋಮವನ್ನು ಮಾಡಿ ತಾನೂ ಭೋಜನಮಾ[illegible] ಆ ಅಗ್ನಿಯನ್ನು ಪುನಃ ನೋಡದೆ ಸ್ನಾನಮಾಡಿ ಬಿಳಿಯ ವಸ್ತ್ರವನ್ನುಟ್ಟು ತನ್ನ ಮನೆಗೆ ಬರಬೇಕು.

೩೯-೪೦. ಅಹೋಮುಚಂ ಎಂಬ ಮಂತ್ರವನ್ನೂ ಶಾಂತಿಮಂತ್ರವನ್ನೂ ಜಪಿಸಿ ದೃಢಬಂಧದಿಂದ ನಿಂತಿರಬೇಕು. ರಾತ್ರಿಯಲ್ಲಿ ಎರಡು ಭಾಗ ಕಳೆದ ಕೊನೆಯ ಭಾಗವಿರುವಾಗ ಶಾಂತಿ ಕರ್ಮವನ್ನು ಮಾಡಬೇಕು. ಶಾಂತಿಕರ್ಮ[illegible] ವಿಧಾನವನ್ನೂ ತಿಳಿದು ತಿಳಿದಿರುವ ಸದಸ್ಯರಿಂದಲೂ ಕೂಡಿ ತಾನೊಬ್ಬನೇ ಆ ಕರ್ಮದಲ್ಲಿ ಮುಖ್ಯನಾಗಿ ನಿಲ್ಲಬೇಕು ಮಂತ್ರಗಳ ನಿಶ್ಚಯಕ್ಕಾಗಿ ಮತ್ತೊಬ್ಬ[illegible] ನಿರಬೇಕು.

೪೧-೪೨. ಈ ರೀತಿ ಎಲ್ಲಾ ಶಾಂತಿವಿಧಿಗಳಲ್ಲಿಯೂ ಮಾಡುವ ಶಾಂತಿ ಕರ್ಮವನ್ನು ಸಂಗ್ರಹವಾಗಿ ಹೇಳಿರುವೆನು. ಇದು ಆಥರ್ವಣವಾದುದರಿಂದ ವಿಸ್ತಾರವಾದ ಕರ್ಮಗಳಲ್ಲಿ ವಿಸ್ತಾರವಾಗಿಯೇ ಆಚರಿಸಬೇಕಾಗುತ್ತದೆ. ಅನಂತರ ಪುರೋಹಿತನನ್ನೂ ಈ ಶಾಂತಿಕರ್ಮವನ್ನುಪದೇಶಿಸಿದ ಸಮರ್ಥನಾದ ಗುರುವನ್ನೂ

ಧನೇನ ಪೂಜ್ಯೋಥ ಪುರೋಹಿತಃ ಸ್ಯಾ
ತ್ತಥೋಪದೇಷ್ಟಾ ಗುರುರಪ್ರಮತ್ತಃ ।
ಸಾಂವತ್ಸರೋ ಯಸ್ತು ತತಃ ಸದಸ್ಯಾಃ
ಪೂಜ್ಯಾಸ್ತತೋ ವಿಪ್ರವರಾಶ್ಚ ಸರ್ವೇ ॥ ೪೨ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ಶಾಂತಿಕರ್ಮವರ್ಣನಂ ನಾಮ
ದ್ವಾತ್ರಿಂಶದುತ್ತರಶತತಮೋಧ್ಯಾಯಃ

---

ಸಹ ಧನಾದಿಗಳಿಂದ ಸತ್ಕರಿಸಬೇಕು. ಅನಂತರ ಜ್ಯೋತಿಷಿಕನನ್ನೂ, ಸದಸ್ಯರನ್ನೂ, ಬ್ರಾಹ್ಮಣರನ್ನೂ ಯಥೋಚಿತವಾಗಿ ಪೂಜಿಸಬೇಕು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ
ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನ ಉಪಾಖ್ಯಾನದಲ್ಲಿ
ಶಾಂತಿಕರ್ಮ ವರ್ಣನವೆಂಬ ನೂರ ಮೂವತ್ತೆರಡನೆಯ
ಅಧ್ಯಾಯವು ಮುಗಿದಿದೆ.



|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

### ತ್ರಯಸ್ತ್ರಿಂಶದುತ್ತರಶತತಮೋಽಧ್ಯಾಯಃ

**|| ರಾಮ ಉವಾಚ ||**

**ಕಾಕಾ ಶಾಂತಿರ್ಭವೇತ್ಕಾ ವಾ ಕಸ್ಮಿನ್ ಕಸ್ಮಿಂಸ್ತಥಾದ್ಭುತೇ ।**
**ಏತನ್ಮೇ ಸಂಶಯಂ ಛಿಂದಿ ದೇವಾರಿಬಲಸೂದನ || ೧ ||**

**|| ಪುಷ್ಕರ ಉವಾಚ ||**

**ಸರ್ವೋತ್ಪಾತಪ್ರಶಮನೀ ಹ್ಯಮೃತಾ ಚಾಭಯಾ ಸ್ಮೃತಾ ।**
**ಸೌಮ್ಯಾ ಚೈವ ಮಹಾಶಾಂತಿಃ ಸರ್ವಕರ್ಮಫಲಪ್ರದಾ || ೨ ||**

**ವಿಶೇಷೇಣ ತು ಭೌಮೇಷು ಶಾಂತಿಃ ಕಾರ್ಯಾಮೃತಾ ಭವೇತ್ ।**
**ಅಭಯಾಚಾಂತರಿಕ್ಷೇಷು ಸೌಮ್ಯಾ ದಿವ್ಯೇಷು ಭಾರ್ಗವ || ೩ ||**

---

## ನೂರ ಮೂವತ್ತಮೂರನೆಯ ಅಧ್ಯಾಯ.

೧. ಭಾರ್ಗವನು ಪುನಃ ಅದ್ಭುತವೆಂದು ಹೇಳಲ್ಪಡುವ ಯಾವ ಯಾವ ಸಂದರ್ಭದಲ್ಲಿ ಯಾವ ಯಾವ ಶಾಂತಿಗಳು ನಡೆಸಲ್ಪಡಬೇಕು. ಮಹಾಪರಾಕ್ರಮ ಶಾಲಿಯಾದ ನೀನೇ ಈ ನನ್ನ ಸಂಶಯವನ್ನು ಹೋಗಲಾಡಿಸಬೇಕು. ಎಂದು ಪ್ರಶ್ನೆ ಮಾಡಲು ಪುಷ್ಕರನು ಹೇಳುತ್ತಾನೆ.

೨–೩. ಅಮೃತಾ ಅಭಯಾ ಎಂಬ ಶಾಂತಿಗಳು ಎಲ್ಲಾ ವಿಧವಾದ ಉತ್ಪಾತ ಗಳನ್ನೂ ಶಮನಮಾಡುತ್ತವೆ. ಸೌಮ್ಯಾ ಎಂಬ ಮಹಾಶಾಂತಿಯು ಎಲ್ಲಾ ವಿಧ ವಾದ ಕರ್ಮಗಳಿಂದಲೂ ಫಲ ಉಂಟುಮಾಡಲು ಕಾರಣವಾಗುತ್ತದೆ. ಭೂಮಿ ಯಲ್ಲಿ ಉಂಟಾಗಬಹುದಾದ ಎಲ್ಲಾ ವಿಧವಾದ ಉತ್ಪಾತಗಳಿಗೂ ಅಮೃತಾ ಎಂಬ ಶಾಂತಿಯನ್ನೇ ವಿಶೇಷವಾಗಿ ಆಚರಿಸಬೇಕು. ಅಂತರಿಕ್ಷದಲ್ಲಿ ಉಂಟಾಗ ಬಹುದಾದ ಉತ್ಪಾತಗಳಿಗೆ ಸೌಮ್ಯಾ ಎಂಬ ಶಾಂತಿಯನ್ನೂ ಆಚರಿಸಬೇಕು.

ವಿಜಿಗೀಷುಃ ಪರಾನ್ರಾಜಾ ಭೂಮಿಕಾಮಶ್ಚ ಯೋ ಜಯೇತ್ ।
ಆರೋಗ್ಯಧನಕಾಮಶ್ಚ ಸೌಮ್ಯಾಂ ತಾಂ ಕಾರಯೇತ್ಸದಾ ॥ ೪ ॥

ವಿಜಿಗೀಷುಃ ಪರಾನೇವಮಭಿಯುಕ್ತಸ್ತಥಾಪರೈಃ ।
ತಥಾಭಿಚಾರಶಂಕಾಯಾಂ ಶತ್ರೂಣಾಮಪಿ ಶಾಸನೇ ॥ ೫ ॥

ಭಯೇ ಮಹತಿ ಚ ಪ್ರಾಪ್ತೇ ತ್ವಭಯಾ ಶಾಂತಿರಿಷ್ಯತೇ ।
ರಾಜಯಕ್ಷ್ಮಾಭಿಭೂತಸ್ಯ ಕ್ಷತಕ್ಷೀಣಸ್ಯ ಚಾಪ್ಯಥ ॥ ೬ ॥

ಸೌಮ್ಯಾ ಪ್ರಶಸ್ಯತೇ ಶಾಂತಿರ್ಯಜ್ಞಕಾಮಸ್ಯ ಚೈವ ಹಿ ।
ಭೂಮಿಕಂಪೇ ಸಮುತ್ಪನ್ನೇ ಪ್ರಾಪ್ತೇ ಚಾನ್ನಕ್ಷಯೇ ತಥಾ ॥ ೭ ॥

ಅತಿವೃಷ್ಟ್ಯಾಮನಾವೃಷ್ಟ್ಯಾಂ ಶಲಭಾಖುಭಯೇಷು ತು ।
ಪ್ರಪನ್ನೇಷು ಚ ಚೌರೇಷು ವೈಷ್ಣವೀ ಶಾಂತಿರಿಷ್ಯತೇ ॥ ೮ ॥

೪-೫. ಶತ್ರುಗಳನ್ನು ಜಯಿಸುವ ಇಚ್ಛೆಯುಳ್ಳ ರಾಜನೂ, ಮತ್ತು ಭೂಮಿಯನ್ನು ಅಪೇಕ್ಷಿಸುವವನೂ ಸಹ ಸೌಮ್ಯಾ ಎಂಬ ಶಾಂತಿಯನ್ನೇ ಮಾಡಬೇಕು ಆರೋಗ್ಯ ಮತ್ತು ಧನ ಇವನ್ನು ಅಪೇಕ್ಷಿಸುವವನೂ ಸಹ ಸೌಮ್ಯಾ ಎಂಬ ಆ ಶಾಂತಿಯನ್ನೇ ಮಾಡಬೇಕು. ಹೀಗೆಯೇ ಪರರನ್ನು ಜಯಿಸಲು ಇಚ್ಛೆಯುಳ್ಳ ಪುರುಷನೂ ಪರರಿಂದ ತಡೆಯಲ್ಪಟ್ಟಿರುವವನು, ಶತ್ರುಗಳಿಂದ ಅಭಿಚಾರಿಕ ಶಂಕೆಯುಳ್ಳವನೂ ಶತ್ರುಗಳನ್ನು ನಿಗ್ರಹಿಸಬೇಕೆಂದಿರುವವನೂ, ಮತ್ತು ಹೆಚ್ಚಾದ ಭಯವು ಸನ್ನಿಹಿತವಾದ ಸಮಯದಲ್ಲಿಯೂ ಸಹ ಅಭಯಾ ಎಂಬ ಶಾಂತಿಯನ್ನು ಮಾಡಬೇಕಾಗುತ್ತದೆ.

೬-೮. ಕ್ಷಯರೋಗದಿಂದ ಪೀಡಿಸಲ್ಪಡುತ್ತಿರುವವನ ವಿಷಯದಲ್ಲಿಯೂ, ಪ್ರಾಣಕ್ಕೆ ಅಪಾಯವಾದ ಗಾಯಗಳಿಂದ ಕೃಶನಾಗಿರುವವನ ವಿಷಯದಲ್ಲಿಯೂ, ಯಜ್ಞಾಪೇಕ್ಷೆಯುಳ್ಳವನ ವಿಷಯದಲ್ಲಿಯೂ ಸಹ ಸೌಮ್ಯಾ ಎಂಬ ಶಾಂತಿಯು ಪ್ರಶಸ್ತವೆಂದು ಹೇಳಲಾಗಿದೆ. ಭೂಮಿಯು ನಡುಗಿದ ಕಾಲದಲ್ಲಿಯೂ, ಅನ್ನಕ್ಷಯದಿಂದ ದುರ್ಭಿಕ್ಷ ಉಂಟಾದ ಕಾಲದಲ್ಲಿಯೂ, ಅತಿವೃಷ್ಟಿ ಮತ್ತು ಅನಾವೃಷ್ಟಿಯಿಂದ ತೊಂದರೆಯುಂಟಾದಾಗಲೂ ಮಿಡತೆ, ಇಲಿ ಇವುಗಳಿಂದ ಭಯವುಂಟಾದ ಸಮಯದಲ್ಲಿಯೂ ಕಳ್ಳರು ಸಮೀಪದಲ್ಲಿ ಬರುವ ಕಾಲದಲ್ಲಿಯೂ ಸಹ ವೈಷ್ಣವೀ ಎಂಬ ಶಾಂತಿಯನ್ನು ಆಚರಿಸಬೇಕು.

ಪಶೂನಾಂ ಮರಣೇ ಪ್ರಾಪ್ತೇ ನರಾಣಾಮಪಿ ದಾರುಣೇ ।
ಭೂತೇಷು ದೃಶ್ಯಮಾನೇಷು ರೌದ್ರೀ ಶಾಂತಿಸ್ತಥೇಷ್ಯತೇ ॥ ೯ ॥

ಭವಿಷ್ಯತ್ಯಭಿಷೇಕೇ ಚ ಪರಚಕ್ರಭಯೇಷು ಚ ।
ಸ್ವರಾಷ್ಟ್ರಭೇಧೇऽರಿವಧೇ ಶಾಂತೀರೌದ್ರೀ ಪ್ರಶಸ್ಯತೇ ॥ ೧೦ ॥

ತ್ರ್ಯಹಾತಿರಿಕ್ತೇ ಪವನೇ ರೂಕ್ಷೇ ಸರ್ವದಿಗುತ್ಥಿತೇ ।
ನೈಕೃತೇ ವಾತಜೆ ವ್ಯಾಧೌ ವಾಯುವೀ ಶಾಂತಿರಿಷ್ಯತೇ ॥ ೧೧ ॥

ಅನಾವೃಷ್ಟಿಭಯೇ ಜಾತೇ ಜಾತೇ ವಿಕೃತವರ್ಷಣೇ ।
ಜಲಾಶಯವಿಕಾರೇ ಚ ವಾರುಣೀ ಶಾಂತಿರಿಷ್ಯತೇ ॥ ೧೨ ॥

ಅಭಿಶಾಪಭಯೇ ಪ್ರಾಪ್ತೇ ಭಾರ್ಗವೀ ಚ ತಥಾ ದ್ವಿಜ ।
ಜಾತೇ ಪ್ರಸವವೈಕೃತ್ಯೇ ಪ್ರಾಜಾಪತ್ಯಾ ಮಹಾಭುಜ ॥ ೧೩ ॥

---

೯–೧೦. ಪಶುಗಳಿಗೆ ಆಕಸ್ಮಿಕವಾಗಿ ಮರಣ ಉಂಟಾಗುವಾಗಲೂ, ಮನುಷ್ಯರಿಗೂ ಸಹ ಭಯಂಕರವಾದ ಮರಣಪ್ರಸಂಗವಿರುವಾಗಲೂ ಭೂತಪ್ರೇತಾದಿಗಳು ಕಣ್ಣಿಗೆ ಕಾಣಿಸಿಕೊಂಡ ಕಾಲದಲ್ಲಿಯೂ ಸಹ ರೌದ್ರೀ ಎಂಬ ಶಾಂತಿಯನ್ನು ಆಚರಿಸಬೇಕು. ದೊರೆಗೆ ರಾಜ್ಯಾಭಿಷೇಕವು ನಡೆಯಬೇಕಾಗಿರುವ ಸಂದರ್ಭದಲ್ಲಿಯೂ, ಶತ್ರುಸೈನ್ಯದಿಂದ ಭಯ ಉಂಟಾದ ಕಾಲದಲ್ಲಿಯೂ, ತನ್ನ ದೇಶದಲ್ಲಿ ಒಡಕು ಉಂಟಾದ ಕಾಲದಲ್ಲಿಯೂ ಸಹ ರೌದ್ರೀ ಎಂಬ ಶಾಂತಿಯೇ ಪ್ರಶಸ್ತವಾಗುತ್ತದೆ.

೧೧–೧೨. ಮೂರು ದಿನಕ್ಕಿಂತಲೂ ಹೆಚ್ಚಾಗಿ ಎಲ್ಲಾ ದಿಕ್ಕಿನಲ್ಲಿಯೂ ಭಯಂಕರವಾದ ಬಿರುಗಾಳಿಯು ಎದ್ದಾಗಲೂ, ವಾತದಿಂದುಂಟಾದ ವ್ಯಾಧಿಯು ಎಲ್ಲರಿಗೂ ವಿಕಾರ ಉಂಟಾಗುವಂತೆ ಹರಡುತ್ತಿರುವಾಗಲೂ ಸಹ ವಾಯುವೀ ಎಂಬ ಶಾಂತಿಯನ್ನಾಚರಿಸಬೇಕು, ಅನಾವೃಷ್ಟಿಯ ಭಯ ಉಂಟಾದಾಗಲೂ ವಿಕಾರವಾದ ಕ್ರಮದಿಂದ ಮಳೆ ಬೀಳುವಾಗಲೂ ಜಲಾಶಯಗಳು ಕ್ಷೋಭಗೊಂಡ ಕಾಲದಲ್ಲಿಯೂ ಸಹ ವಾರುಣೀ ಎಂಬ ಶಾಂತಿಯನ್ನು ಮಾಡಬೇಕು.

೧೩–೧೪. ಶಾಪಕಾರ್ಯಾದಿಗಳಿಂದ ಭಯವುಂಟಾಗಿರುವ ಸಂದರ್ಭದಲ್ಲಿ ಭಾರ್ಗವೀ ಎಂಬ ಶಾಂತಿಯನ್ನು ಮಾಡಬೇಕು. ಪ್ರಸವಕಾಲದಲ್ಲಿ ಸ್ತ್ರೀಯರಿಗೆ ಅಥವಾ ಶಿಶುಗಳಿಗೆ ವಿಕಾರ ಉಂಟಾದಲ್ಲಿ ಪ್ರಾಜಾಪತ್ಯಶಾಂತಿಯನ್ನು ಮಾಡಬೇಕು.

ಉಪಸ್ಕರಾಣಾಂ ವೈಕೃತ್ಯೇ ತ್ವಾಷ್ಟ್ರೀ ಭಾರ್ಗವನಂದನ ।
ಬಾಲಾನಾಂ ಶಾಂತಿಕಾಮಸ್ಯ ಕೌಬೇರೀ ಚ ತಥಾ ಶುಭಾ ॥ ೧೪ ॥

ಆಗ್ನೇಯೀಂ ಕಾರಯೇಚ್ಛಾಂತಿಂ ಸಂಪ್ರಾಪ್ತೇ ವಹ್ನಿವೈಕೃತೇ ।
ಕಾರ್ಯಾ ಮಾರುದ್ಗಣೀ ಶಾಂತಿಃ ದುರ್ಬಲೇನ ಮಹೀಕ್ಷಿತಾ ॥ ೧೫ ॥

ಆಜ್ಞಾಭಂಗೇ ತಥಾ ಜಾತೇ ಜಾತೇ ಭೃತ್ಯಾದಿಸಂಕ್ಷಯೇ ।
ಅಶ್ವಾನಾಂ ಶಾಂತಿಕಾಮಸ್ಯ ತದ್ವಿಕಾರೇ ತಥೋತ್ಥಿತೇ ॥ ೧೬ ॥

ಗಜಾನಾಂ ಶಾಂತಿಕಾಮಸ್ಯ ಗಾಂಧರ್ವೀ ಶಾಂತಿರಿಷ್ಯತೇ ।
ಗಜಾನಾಂ ಶಾಂತಿಕಾಮಸ್ಯ ತದ್ವಿಕಾರೇ ತಥೋತ್ಥಿತೇ ॥ ೧೭ ॥

ಗಜಾರ್ಥಕಾಮಯಮಾನಸ್ಯ ಶಾಂತಿರಾಂಗಿರಸೀ ಭವೇತ್ ।
ಪಿಶಾಚಾದಿಭಯೇ ಜಾತೇ ಶಾಂತಿರ್ವೈ ನೈಋತೀ ಮತಾ ॥ ೧೮ ॥

---

ವಾಹನ ವಾದ್ಯ ಮೊದಲಾದ ಸಾಮಗ್ರಿಗಳಲ್ಲಿ ವಿಕಾರ ಉಂಟಾದಲ್ಲಿ ತ್ವಾಷ್ಟ್ರೀ ಎಂಬ ಶಾಂತಿಯನ್ನು ಮಾಡಬೇಕು. ಬಾಲಕರುಗಳಿಗೆ ಸಂಬಂಧಿಸಿದ ಶಾಂತಿಯ ಪ್ರಸಂಗದಲ್ಲಿ ಕೌಬೇರೀ ಎಂಬ ಶಾಂತಿಯು ಶುಭಕರವಾಗುತ್ತದೆ. ಪಾಕಾಗ್ನಿಯೇ ಮೊದಲಾದ ಅಗ್ನಿಯಲ್ಲಿ ವಿಕಾರ ಉಂಟಾದಲ್ಲಿ ಆಗ್ನೇಯೀ ಎಂಬ ಶಾಂತಿಯನ್ನು ಮಾಡಬೇಕು. ದುರ್ಬಲನಾದ ದೊರೆಯು ಬಲಪ್ರಾಪ್ತಿಗಾಗಿ ಮಾರುದ್ಗಣೀ ಎಂಬ ಶಾಂತಿಯನ್ನು ಮಾಡಬೇಕು.

೧೬-೧೭. ರಾಜನಿಗೆ ತನ್ನ ಆಜ್ಞೆಗೆ ಭಂಗ ಉಂಟಾದ ಕಾಲದಲ್ಲಿಯೂ, ಆನೆಗಳಿಗೆ ವಿಕಾರ ಉಂಟಾದ ಕಾಲದಲ್ಲಿಯೂ ಸಹ ಶಾಂತಿಯನ್ನು ಅಪೇಕ್ಷಿಸುವವನು ಗಾಂಧರ್ವೀ ಎಂಬ ಶಾಂತಿಯನ್ನು ಪ್ರಯೋಗಿಸಬೇಕು ಆನೆಗಳನ್ನು ಅಪೇಕ್ಷಿಸುವವನು ಗಾಂಧರ್ವೀ ಮತ್ತು ಅಂಗೀರಸೀ ಎಂಬ ಶಾಂತಿಗಳನ್ನು ಮಾಡಬೇಕಾಗುತ್ತದೆ.

೧೮-೧೯. ಪಿಶಾಚಾದಿಗಳಿಂದ ಭಯ ಉಂಟಾದಲ್ಲಿ ನೈಋತೀ ಎಂಬ ಶಾಂತಿಯನ್ನು ಆಚರಿಸಬೇಕು. ಅಪಮೃತ್ಯುವಿನಿಂದ ಭಯವುಂಟಾದಾಗಲೂ, ದುಃಸ್ವಪ್ನಗಳಿಂದ ಭಯ ಉಂಟಾದಾಗಲೂ, ಮಾರಕನಾದ ಶತ್ರುವು ಸನ್ನಿಹಿತನಾದಾಗಲೂ

ಅಪಮೃತ್ಯುಭಯೇ ಜಾತೇ ದುಸ್ವಪ್ನೇ ಚ ತಥಾ ದ್ವಿಜ ।
ಕಾಮ್ಯಾಂ ತು ಕಾರಯೇಚ್ಛಾಂತಿಂ ಪ್ರಾಪ್ತೇ ತು ಮಾರಕೇ ತಥಾ ॥ ೧೯ ॥

ಧನನಾಶೇ ಸಮುತ್ಪನ್ನೇ ಕೌಬೇರೀ ಶಾಂತಿರಿಷ್ಯತೇ ।
ವೃಕ್ಷಾಣಾಂ ಚ ತಥಾರ್ಚಾನಾಂ ವೈಕೃತೇ ಸಮುಪಸ್ಥಿತೇ ॥ ೨೦ ॥

ಭೂಮಿಕಾಮಸ್ತಥಾ ಶಾಂತಿಂ ಪಾರ್ಥಿವೀಂ ಸಂಪ್ರಯೋಜಯೇತ್ ।
ಪ್ರಥಮೇ ದಿನಯಾಮೇ ಚ ರಾತ್ರ್ಯಾಂ[1] ಚ ಮನುಜೋತ್ತಮ ॥ ೨೧ ॥

ಹಸ್ತೇ ಸ್ವಾತೌ ಚ ಚಿತ್ರಾಯಾಮಾದಿತ್ಯೇ ಚಾಶ್ವಿನೇ ತಥಾ ।
[2]ಅರ್ಯಮ್ಣೇ ಸೌಮ್ಯಜಾತೇಷು ವಾಯವ್ಯಾ ತ್ವದ್ಭುತೇಷು ಚ ॥ ೨೨ ॥

ದ್ವಿತೀಯೇ ದಿನಯಾಮೇ ಚ ರಾತ್ರೌ ಚ ಭೃಗುನಂದನ ।
ಪುಷ್ಯಾಗ್ನೇಯವಿಶಾಖಾಸು ಪಿತ್ರ್ಯೇಸು ಭರಣೀಷು ಚ ॥ ೨೩ ॥

ಸಹ ಕಾಮ್ಯಶಾಂತಿಯನ್ನು ಮಾಡಬೇಕು. ಧನದ ನಾಶವು ಉಂಟಾದಲ್ಲಿ ಕೌಬೇರೀ ಎಂಬ ಶಾಂತಿಯನ್ನಾಚರಿಸಬೇಕು.

೨೦–೨೨ ಮರಗಳು ಮತ್ತು ದೇವಾಲಯದಲ್ಲಿರುವ ಅರ್ಚಾವಿಗ್ರಹಗಳೂ ವಿಕಾರ ಹೊಂದಿದಲ್ಲಿಯೂ ಭೂಮಿಯನ್ನು ಹೊಂದಲು ಅಪೇಕ್ಷೆ ಇದ್ದಲ್ಲಿಯೂ ಸಹ ಪಾರ್ಥಿವೀ ಎಂಬ ಶಾಂತಿಯನ್ನು ಮಾಡಬೇಕು. ದಿನದಲ್ಲಿ ಪ್ರಥಮ ಯಾಮದಲ್ಲಿ ಯಾಗಲಿ ರಾತ್ರಿಯಲ್ಲಿ ಪ್ರಥಮ ಯಾಮದಲ್ಲಿಯಾಗಲಿ, ಹಸ್ತ, ಸ್ವಾತಿ, ಚಿತ್ರಾ, ಪುನರ್ವಸು, ಅಶ್ವಿನಿ, ಉತ್ತರಾ, ಮೃಗಶಿರಾ ಈ ನಕ್ಷತ್ರಗಳಲ್ಲಿ ಉಂಟಾದ ಅದ್ಭುತ ವಿಷಯದಲ್ಲಿ ವಾಯವ್ಯಾ ಎಂಬ ಶಾಂತಿಯನ್ನು ಮಾಡಬೇಕು.

೨೩–೨೫ ಎರಡನೆಯ ದಿನದಲ್ಲಿ ಎರಡನೇಯ ಯಾಮದಲ್ಲಿಯೂ, ರಾತ್ರಿಯಲ್ಲಿಯೂ ಮತ್ತು ಪುಷ್ಯ, ಕೃತ್ತಿಕಾ, ವಿಶಾಖಾ, ಮಖಾ, ಭರಣೀ ಇವುಗಳಲ್ಲಿ ಉಂಟಾದ ಉತ್ಪಾತಗಳಿಗೂ ಮತ್ತು ಭಾಗ್ಯಕ್ಕಾಗಿಯೂ, ಅಗ್ನೇಯೀ ಎಂಬ ಶಾಂತಿಯನ್ನು ಮಾಡಬೇಕು. ಮತ್ತು ಮೂರನೆಯ ದಿನದ ಮೂರನೆಯ ಯಾಮ

---

1 ಇಲ್ಲಿ ರಾತ್ರ್ಯಾಂ ವಾ ಎಂದು ಶಾಂತಿಸಾರದಲ್ಲಿ ಪಾಠವಿದೆ

2 ಇಲ್ಲಿ ಅರ್ಯಮ್ಣ ಸೌಮ್ಯ ಜಾತೇಷು ಎಂದು ಶಾಂತಿಸಾರದಲ್ಲಿ ಪಾಠವಿದೆ

**ಉತ್ಪಾತೇಷು ತಥಾ ಭಾಗ್ಯೇತ್ವಾಗ್ನೇಯೀ ಶಾಂತಿರಿಷ್ಯತೇ ।**
**ತೃತೀಯದಿನಯಾಮೇ ಚ ರಾತ್ರೌ ಚ ಭೃಗುನಂದನ ॥ ೨೪ ॥**

**ರೋಹಿಣ್ಯಾಂ ವೈಷ್ಣವೇ ಬ್ರಾಹ್ಮೇ ವಾಸವೇ ವಿಶ್ವದೇವತೇ ।**
**ಜ್ಯೇಷ್ಠಾಯಾಂ ಚ ತಥಾ ಮೈತ್ರೇಯೀ ಭವಂತ್ಯತ್ಭುತಾಃ ಕ್ವಚಿತ್ ॥ ೨೫ ॥**

**ಐಂದ್ರೀ ತೇಷು ಪ್ರಯೋಕ್ತವ್ಯಾ ಶಾಂತಿರ್ಭೃಗುಕುಲೋದ್ಭವ ।**
**ಚತುರ್ಥೇ ದಿನಯಾಮೇ ವಾ ರಾತ್ರೌ ಚ ಭೃಗುನಂದನ ॥ ೨೬ ॥**

**ಸಾರ್ಪೇಪೌಷ್ಣೇ ತಥಾದ್ರಾರ್ಯಾಂ ತ್ವಹಿರ್ಬುಧ್ನ್ಯೇ ಚ ದಾರುಣೇ ।**
**ಮೂಲೇ ವರುಣದೈವತ್ಯೇ ಯೇ ಭವಂತ್ಯದ್ಭುತಾಸ್ತಥಾ ॥ ೨೭ ॥**

**ವಾರುಣೀ ತೇಷು ಕರ್ತವ್ಯಾ ಮಹಾಶಾಂತಿರ್ಮಹೀಕ್ಷಿತಾ ।**
**ಭಿನ್ನಮಂಡಲವೇಲಾಸು ಯೇ ಭವಂತ್ಯದ್ಭುತಾಃ ಕ್ವಚಿತ್ ॥ ೨೮ ॥**

ದಲ್ಲಿಯೂ, ರಾತ್ರಿಯಲ್ಲಿಯೂ ಸಹ ರೋಹಿಣೀ, ಶ್ರವಣ, ಅಭಿಜಿತ್ತು, ಜ್ಯೇಷ್ಠಾ, ಉತ್ತರಾಷಾಢಾ, ಜ್ಯೇಷ್ಠಾ, ಅನೂರಾಧಾ ಈ ನಕ್ಷತ್ರಗಳಲ್ಲಿ ಸಂಭವಿಸಬಹುದಾದ ಕೆಲವು ಉತ್ಪಾತಗಳಿಗೆ ಐಂದ್ರೀ ಎಂಬ ಶಾಂತಿಯನ್ನು ಪ್ರಯೋಗಿಸಬೇಕು.

೨೬–೨೭ ನಾಲ್ಕನೆಯ ದಿನದಲ್ಲಿ ನಾಲ್ಕನೆಯ ಯಾಮದಲ್ಲಿಯೂ, ರಾತ್ರಿಯಲ್ಲಿಯೂ, ಆಶ್ರೇಷಾ, ರೇವತಿ, ಆದ್ರಾ, ಉತ್ತರಾಭಾದ್ರಾ, ಮೂಲ, ಶತಭಿಷಾ ಈ ನಕ್ಷತ್ರದಲ್ಲಿ ಉದ್ಭವಿಸುವ ಉತ್ಪಾತಗಳಿಗೆ ವಾರುಣೀ ಎಂಬ ಮಹಾಶಾಂತಿಯನ್ನು ಭೂರೆಯು ಮಾಡಬೇಕು

೨೮–೩೦. ಎಂತರಿಕ್ಷದಲ್ಲಿ ಸೂರ್ಯಮಂಡಲ ಭೇದವೇ ಮೊದಲಾದ ಉತ್ಪಾತಕಾಲದಲ್ಲಿ ಸ್ವಲ್ಪಸ್ವಲ್ಪವಾಗಿ ಇತರ ಉತ್ಪಾತಗಳೂ ಉಂಟಾಗಬಹುದು. ಅಂತಹ ಅನೇಕ ನಿಮಿತ್ತಗಳು ಇದ್ದ ಪಕ್ಷದಲ್ಲಿ ಅದಕ್ಕೆ ತಕ್ಕಂತೆ ಎರಡು ಶಾಂತಿಗಳನ್ನೂ ಮಾಡಬೇಕಾಗುತ್ತದೆ. ಆದರೆ ಅಂತಹ ನಿಮಿತ್ತಗಳಿಲ್ಲದಿರುವಾಗ ಅನೇಕ ಶಾಂತಿಗಳನ್ನು ಮಾಡಕೂಡದು. ಹಾಗೆ ಮಾಡಿದಲ್ಲಿ ನಿರ್ನಿಮಿತ್ತವಾಗಿ ನಡೆದ ಶಾಂತಿಯು ನಿಮಿತ್ತರೂಪವಾದ ಮತ್ತೊಂದು ಉತ್ಪಾತದ ಉತ್ಪತ್ತಿಗೆ ಕಾರಣವಾದೀತು. ಆದುದರಿಂದ ನಿಮಿತ್ತವಿದ್ದಲ್ಲಿ ಅನೇಕ ಶಾಂತಿಗಳನ್ನು ಆಚರಿಸಬೇಕೇ ವಿನಾ ವೃಥಾ

ತೇಷಾಂ ಶಾಂತಿದ್ವಯಂ ಕಾರ್ಯಂ ನಿಮಿತ್ತೇ ಸತಿ ನಾನ್ಯಥಾ ।
ನಿರ್ನಿಮಿತ್ತಾ ಕೃತಾ ಶಾಂತಿಃ ನಿಮಿತ್ತಾಯೋಪಜಾಯತೇ ॥ ೨೯ ॥
ಬಾಣಪ್ರಹಾರಾ ನ ಭವಂತಿ ಯದ್ವ
ನ್ನೃಣಾಂರಣೇ ಸನ್ನಹನೈರ್ಯುತಾನಾಂ ।
ದೈವೋಪಘಾತಾ ನ ಭವಂತಿ ತದ್ವ
ದ್ಧರ್ಮಾತ್ಮನಾಂಶಾಂತಿಪರಾಯಣಾನಾಂ ॥ ೩೦ ॥
ಇತಿ ಶ್ರೀ ವಿಷ್ಣು ಧರ್ಮೋತ್ತರೇ ದ್ವಿತೀಯಖಂಡೇ
ಅದ್ಭುತೇಷು ಶಾಂತಿಕರ್ಮವರ್ಣನೋನಾಮ
ತ್ರಯಸ್ತ್ರಿಂಶದುತ್ತರಶತತಮೋಽಧ್ಯಾಯಃ

---

ಆಚರಿಸಬಾರದು ಯುದ್ಧದಲ್ಲಿ ಸನ್ನಾಹದಿಂದ ಕೂಡಿರುವ ವೀರ ಪುರುಷರಿಗೆ ಬಾಣ ಪ್ರಹಾರಗಳು ಹೇಗೆ ಸಂಭವಿಸುವುದಿಲ್ಲವೋ, ಹಾಗೆಯೇ ಶಾಂತಿಪರಾಯಣರಾದ ಧಾರ್ಮಿಕರಿಗೆ ದೈವಿಕವಾದ ಯಾವ ತೊಂದರೆಯೂ ಉಂಟಾಗುವುದೇ ಇಲ್ಲ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ ಸಂವಾದದಲ್ಲಿ ಭಾರ್ಗವನನ್ನು ಕುರಿತು ಪುಷ್ಕರನು ಹೇಳಿದ ಉಪಖ್ಯಾನದಲ್ಲಿ ಅದ್ಭುತೋತ್ಪಾತಗಳಿಗೆ ಶಾಂತಿ ಕರ್ಮವರ್ಣನವೆಂಬ ನೂರ ಮೂವತ್ತ ಮೂರನೆಯ ಅಧ್ಯಾಯವು ಮುಗಿದಿದೆ.



|| ಓಂ ||

— ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಚತುಸ್ತ್ರಿಂಶದುತ್ತರಶತತಮೋಽಧ್ಯಾಯಃ

ಅದ್ಭುತಾನಾಂ ಫಲಂ ದೇವ ಶಮನಂ ಚ ತಥಾವದ ।
ತ್ವಂ ಹಿ ವೇತ್ಸಿ ವಿಶಾಲಾಕ್ಷ ಜ್ಞೇಯಂ ಸರ್ವಮಶೇಷತಃ || ೧ ||

|| ಪುಷ್ಕರ ಉವಾಚ ||

ಅತ್ರ ತೇ ವರ್ಣಯಿಷ್ಯಾಮಿ ಯದುವಾಚ ಮಹಾತಪಾಃ ।
ಅತ್ರ ಯೋ ವೃದ್ಧಗರ್ಗಸ್ತು ಸರ್ವಧರ್ಮಭೃತಾಂ ವರಃ || ೨ ||

ಸರಸ್ವತ್ಯಾಂ ಸುಖಾಸೀನಂ ಗರ್ಗಂ ಸ್ರೋತಸಿ ಭಾರ್ಗವ ।
ಪಪ್ರಚ್ಛಾತ್ರಿರ್ಮಹಾತೇಜಾಃ ಗರ್ಗಂ ಮುನಿಜನಪ್ರಿಯಂ || ೩ ||

---

### ನೂರಮೂವತ್ತನಾಲ್ಕನೇ ಅಧ್ಯಾಯ

೧. ಭಾರ್ಗವನು ಪುನಃ ಪೂಜ್ಯನೇ ಅದ್ಭುತಗಳೆಂದು ಹೇಳಲಾಗುತ್ತಿರುವ ಉತ್ಪಾತಗಳ ಫಲವನ್ನೂ ಅವುಗಳ ಶಮನವನ್ನೂ ಸಹ ಹೇಳಬೇಕು. ಸರ್ವಜ್ಞನಾದ ನೀನು ಅವೆಲ್ಲವನ್ನೂ ತಿಳಿದಿರುವೆ ಎಂದು ಪ್ರಶ್ನೆಮಾಡಲು ಪುಷ್ಕರನು ಹೇಳುತ್ತಾನೆ.

೨-೩ ಈ ವಿಷಯದಲ್ಲಿ ಮಹಾತಪಸ್ವಿಯಾಗಿಯೂ ಧಾರ್ಮಿಕಾಗ್ರೇಸರನಾಗಿಯೂ ಇರುವ ವೃದ್ಧಗರ್ಗನು ಏನು ಹೇಳಿರುವನೋ ಅದನ್ನು ನಿನಗೋಸ್ಕರ ವರ್ಣಿಸಿ ಹೇಳುತ್ತೇನೆ. ಸರಸ್ವತಿಯ ಪ್ರವಾಹದಲ್ಲಿ ಸುಖಿಯಾಗಿ ಕುಳಿತು ಯೋಗನಿಷ್ಠನಾಗಿದ್ದ ಮುನಿಗಳಿಗೆಲ್ಲರಿಗೂ ಪ್ರಿಯನಾಗಿಯೂ ತೇಜಸ್ವಿಯಾಗಿಯೂ ಇದ್ದ ಗರ್ಗನನ್ನು ತಪಸ್ವಿಯಾದ ಅತ್ರಿಯು ಪ್ರಶ್ನೆಮಾಡಿದನು.

|| ಅತ್ರಿರುವಾಚ ||

ನಶ್ಯತಾಂ ಪೂರ್ವರೂಪಾಣಿ ಜನಾನಾಂ ಕಥಯಸ್ವ ಮೇ ।
ನಗರಾಣಾಂ ತಥಾ ರಾಜ್ಞಾಂ ತ್ವಂ ಹಿ ಸರ್ವವಿದುಚ್ಯಸೇ || ೪ ||

|| ಗರ್ಗ ಉವಾಚ ||

ಪುರುಷಾಪಚಾರಾನ್ನಿಯತಮಪರಜ್ಯಂತಿ ದೇವತಾಃ ।
ತತೋಽಪರಾಗಾದ್ದೇವಾನಾಮುಪಸರ್ಗಃ ಪ್ರವರ್ತತೇ || ೫ ||

ದಿವ್ಯಾಂತರಿಕ್ಷಭೌಮಂ ತತ್ರಿವಿಧಂ ಪರಿಕೀರ್ತಿತಂ ।
ಗ್ರಹರ್ಕ್ಷಂ ವೈಕೃತಂ ದಿವ್ಯಮಾಂತರಿಕ್ಷಂ ನಿಬೋಧ ಮೇ || ೬ ||

ಉಲ್ಕಾಪಾತೋ ದಿಶಾಂ ದಾಹಃ ಪರಿವೇಷಸ್ತಥೈವ ಚ ।
ಗಂಧರ್ವನಗರಂ ಚೇತಿ ವೃಷ್ಟಿಸ್ತು ವಿಕೃತಾ ಚ ಯಾ || ೭ ||

---

೪–೫. ಅತ್ರಿಯು ಹೇಳುತ್ತಾನೆ. ಎಲೈ ಮಹಾಮುನಿಯೇ ನಾನಾವಿಧವಾದ ಕಾರಣಗಳಿಂದ ನಾಶಹೊಂದುತ್ತಿರುವ ಜನಗಳ ಮೊದಲಿನ ಸ್ಥಿತಿ ಎಂತಹುದು ಮತ್ತು ನಗರಗಳ ಹಾಗೂ ರಾಜರ ನಾಶವೂ ನಹ ಉಂಟಾದಲ್ಲಿ ಅವುಗಳ ಪೂರ್ವಸ್ಥಿತಿಯೂ ಎಂತಹುದು, ಈ ಪ್ರಶ್ನೆಗೆ ಉತ್ತರವಾಗಿ ಗರ್ಗನು ಹೇಳುತ್ತಾನೆ. ಮನುಷ್ಯನು ಮಾಡುವ ಅಪರಾಧ ಅಥವಾ ಪ್ರತಿಕೂಲಾಚರಣದಿಂದ ದೇವತೆಗಳು ಇವನಲ್ಲಿ ಅವಿಶ್ವಾಸ ಹೊಂದುತ್ತಾರೆ. ಈ ವಿಧವಾದ ದೇವತಾಪರಾಧದಿಂದ ನಾನಾವಿಧವಾದ ತೊಂದರೆಗಳು ಉದ್ಭವಿಸುತ್ತವೆ.

೬–೭. ಅಂತಹ ಉತ್ಪಾತಗಳು ದಿವ್ಯ ಆಂತರಿಕ್ಷ ಭಾನುವೆಂದು ಮೂರು ರೀತಿಯಲ್ಲಿ ಹೇಳಲ್ಪಟ್ಟಿವೆ. ಗ್ರಹ ಮತ್ತು ನಕ್ಷತ್ರಗಳಲ್ಲಿ ಉಂಟಾಗುವ ವಿಕಾರಗಳು ದಿವ್ಯವೆಂದೂ, ಉಲ್ಕಾಪಾತದಿಕ್ಕುಗಳಲ್ಲಿ ಕಾಣುವ ಉರಿ, ಪರಿವೇಷ, ಮೇಘಗಳ ಸನ್ನಿವೇಶದಿಂದ ತೋರುವ ಗಂಧರ್ವನಗರ. ವೃಷ್ಟಿಯ ವಿಕಾರ ಎಂಬುವು, ಆಂತರಿಕ್ಷವೆಂದೂ ಹೇಳಲ್ಪಟ್ಟಿವೆ. ಇದೇ ವಿಧವಾದ ಆಕಾಶದಲ್ಲಿ ಉಂಟಾಗುವ ವಿಕಾರಗಳನ್ನೆಲ್ಲಾ ಆಂತರಿಕ್ಷವೆಂದೇ ಕರೆಯಬೇಕು.

ವಮಾದೀನಿ ಲೋಕೇಸ್ಮಿನ್ನಾಭಸಾನಿ ವಿನಿರ್ದಿಶೇತ್ ।
ರಸ್ಥಿರಭಯಂ ಭೂಮೌ ¹ಭೂಕಲಾ ಮಪಿ ಭೂಮಿಜಂ ॥ ೮ ॥

ಲಾಶಯಾನಾಂ ನೈಕೃತ್ಯಂ ಭೂಮೌ ತದಪಿ ಕೀರ್ತಿತಂ ।
ವಮಂ ಯಾಮ್ಯಫಲಂ ಜ್ಞೇಯಂ ಚಿರೇಣ ಭುವಿ ಪಚ್ಯತೆ ॥ ೯ ॥

ಭಸಂ ಮಧ್ಯಫಲದಂ ಮಧ್ಯಕಾಲಫಲಪ್ರದಂ ।
ವ್ಯಂ ತೀವ್ರಫಲಂ ಜ್ಞೇಯಂ ಶೀಘ್ರಕಾರಿ ತಥೈವ ಚ ॥ ೧೦ ॥

ದ್ಭುತೆ ತು ಸಮುತ್ಪನ್ನೆ ಯದಿ ವೃಷ್ಟಿಃ ಶಿವಾ ಭವೇತ್ ।
ಪ್ತಾಹಾಭ್ಯಂತರೆ ಜ್ಞೇಯಮದ್ಭುತಂ ನಿಷ್ಫಲಂ ಹಿ ತತ್ ॥ ೧೧ ॥

ದ್ಭುತಸ್ಯ ವಿಪಾಕಶ್ಚೇದ್ವಿನಾ ಶಾಂತೇರ್ನ ದೃಶ್ಯತೆ ।
ಭಿರ್ವರ್ಷೈಸ್ತಥಾ ಜ್ಞೇಯಂ ಸುಮಹದ್ಭಯಕಾರಕಂ ॥ ೧೨ ॥

೮-೯. ಭೂಮಿಯಲ್ಲಿರುವ ಚರಸ್ಥಿರ ವಸ್ತುಗಳಿಗೂ, ಪ್ರಾಣಿಗಳಿಗೂ, ಉಂಟಾ ವ ಭಯವು ಭೂಮಿಜವೆಂದು ಹೇಳಲ್ಪಡುತ್ತದೆ. ಜಲಾಶಯಗಳಲ್ಲಿ ಉಂಟಾಗುವ ಕಾರಗಳೂ ಸಹ ಭೂಮಿಜವೇ ಆಗುತ್ತವೆ. ಭೌಮವಾದ ಉತ್ಪಾತಗಳು ವಿಲಂಬ ದ ಲಭಿಸಬಹುದಾದ ಮಂದಫಲಗಳೆಂದೂ, ಆಂತರಿಕ್ಷವಾದ ಉತ್ಪಾತವು ಮಧ್ಯ ಲದಲ್ಲಿ ಉಂಟಾಗುವ ಮಧ್ಯಮ ಫಲವುಳ್ಳದ್ದೆಂತಲೂ, ದಿವ್ಯವಾದ ಉತ್ಪಾತವು ಗ್ರತೆಯಾಗಿ ಫಲಿಸುವ ಮತ್ತು ತೀವ್ರವಾದ ಫಲವುಳ್ಳದ್ದೆಂದೂ ತಿಳಿಯಬೇಕು.

೧೧-೧೨. ಅದ್ಭುತವೆಂಬ ಈ ಉತ್ಪಾತವು ಉಂಟಾದಾಗ ಏಳು ದಿನಗಳೊಳಗೆ ಶ್ರೆಯ ಮಳೆಯು ಉಂಟಾದಲ್ಲಿ ಅಂತಹ ಉತ್ಪಾತವು ನಿಷ್ಫಲವೆಂದು ತಿಳಿಯ ೇಕು. ಅದರಿಂದ ಯಾವ ಅನಿಷ್ಟ ಫಲವೂ ಉಂಟಾಗುವುದಿಲ್ಲವೆಂದು ತಾತ್ಪರ್ಯ ಂತಹ ಅದ್ಭುತೋತ್ಪಾತವು ಉಂಟಾದಾಗ ಶಾಂತಿಮಾಡದಿದ್ದರೂ ಸಹ ಅದರ ಪಾಕರೂಪವಾದ ದುಷ್ಫಲವು ಕಣ್ಣಿಗೆ ಕಾಣಿಸದಿದ್ದಲ್ಲಿ ಅಂತಹ ಉತ್ಪಾತವು ಮೂರು ರ್ಷಗಳಲ್ಲಿ ಮಹಾಭಯಕಾರಿಯಾಗಿ ಪರಿಣಮಿಸುತ್ತದೆ ಎಂದು ತಿಳಿಯಬೇಕು.

1 ಭೂತಾನಾಮಪಿ ಎಂದು ಪಾಠವಿರಬೇಕು.

ರಾಜ್ಞಃ ಶರೀರೇ ಲೋಕೇ ಚ [1]ಪುರದಾರೇ ಪುರೋಹಿತೇ ।
ಪಾಕಮಾಯಾತಿ ಪುತ್ರೇಷು ತಥಾ ನೈ ಕೋಶವಾಹನೇ ॥ ೧೩ ॥

ದತ್ತಸ್ವಭಾವಜಾ ಯೇ ಚ ಭವಂತ್ಯದ್ಭುತಸಂಜ್ಞಿಕಾಃ ।
ಶುಭಾವಹಾಸ್ತೇ ವಿಜ್ಞೇಯಾಸ್ತಾಂಶ್ಚ ಮೇ ಗದತಃ ಶೃಣು ॥ ೧೪ ॥

ವಜ್ರಾಶನಿ ಮಹೀಕಂಪಸಂಧ್ಯಾನಿರ್ಘಾತನಿಸ್ವನಾಃ ।
ಪರಿವೇಷಂ ರಜೋ ಧೂಮಂ ರಕ್ತಾರ್ಕೋSಸ್ತಮನೋದಯೇ ॥ ೧೫ ॥

ದ್ರುಮೇಭ್ಯೋ ವಲಯಶ್ಚೈವ ಬಹುಪುಷ್ಪಫಲಾಪಗಾಃ ।
ಗೋಪಕ್ಷಮಧುವೃದ್ಧಿಶ್ಚ ಶುಭಾನಿ ಮಧು ಮಾಧವೇ ॥ ೧೬ ॥

ತಾರೋಲ್ಕಾಪಾತಕಲುಷಂ ಕಪಿಲಾರ್ಕಂ ತು ಮಂಡಲಂ ।
ಅನಗ್ನಿಜ್ವಲನಾಸ್ಫೋಟಧೂಮರೇಷ್ವ ನಿಲಾವಹಂ ॥ ೧೭ ॥

---

೧೩-೧೪. ಹಾಗೆ ಉಂಟಾಗುವ ಅದು ರಾಜನಾಗಿರುವವನ ಶರೀರದಲ್ಲಾಗಲಿ, ದೇಶದಲ್ಲಾಗಲಿ ಅವನ ನಗರ ಮತ್ತು ಪತ್ನಿ ಪುರೋಹಿತನಲ್ಲಾಗಲಿ, ಪುತ್ರರಲ್ಲಾಗಲಿ, ಭಂಡಾರ ಮತ್ತು ವಾಹನಗಳಲ್ಲಾಗಲಿ ಪರಿಪಾಕಹೊಂದುತ್ತದೆ. ಈ ಅದ್ಭುತಗಳಲ್ಲಿ ಪ್ರಾಕೃತಿಕಸ್ಥಿತಿಯಲ್ಲಿಲ್ಲದೆ ಇತರ ವಸ್ತುವಿನ ಸಂಬಂಧದಿಂದ ಯಾವ ನಿಮಿತ್ತಗಳು ಉಂಟಾಗುತ್ತವೆಯೋ ಅವೆಲ್ಲವೂ ಶುಭಕರಗಳೆಂದೇ ತಿಳಿಯಬೇಕು ಅವನ್ನೂ ನಾನು ಹೇಳುತ್ತೇನೆ ಕೇಳು

೧೫-೧೬. ಸಿಡಿಲು ಉಂಟಾದಾಗ ಆಗುವ ಭೂಕಂಪ, ಸಂಧ್ಯಾಕಾಲದಲ್ಲಿ ಉಂಟಾದ ಮೇಘ ಮತ್ತು ಸಿಡಿಲಿನ ಧ್ವನಿ, ಸೂರ್ಯನ ಅಸ್ತೋದಯಕಾಲಗಳಲ್ಲಿ ಬಿಂಬವು ಕೆಂಪಾಗಿರುವಿಕೆ, ಧೂಳಿ ಮತ್ತು ಹೊಗೆ, ಪರಿವೇಷ ಇವು ಶುಭಕರಗಳು. ಹಾಗೆಯೇ ಚೈತ್ರ ವೈಶಾಖ ಮಾಸಗಳಲ್ಲಿ ಮರಗಳಿಂದ ಹೆಚ್ಚಾಗಿ ಬಳ್ಳಿಗಳು ಹಬ್ಬುವುದು, ಅನೇಕ ಪುಷ್ಪಫಲಗಳಿಂದ ಕೂಡಿ ನದಿಗಳು ಹರಿಯುವುದು, ಗೋವುಗಳ ಗುಂಪಿನ ಅಭಿವೃದ್ಧಿ, ಹೆಚ್ಚಾಗಿ ಜೇನು ಉಂಟಾಗುವಿಕೆ ಇವು ಶುಭಕರಗಳೆಂದೇ ಹೇಳಬೇಕು

೧೭-೧೮. ಹಾಗೆಯೇ ಗ್ರೀಷ್ಮಕಾಲದಲ್ಲಿ ನಕ್ಷತ್ರ ಮತ್ತು ಉಲ್ಕಾಪಾತ ಇವುಗಳಿಂದ ಆಕಾಶಮಂಡಲವು ಕಪಿಲವರ್ಣದ ಸೂರ್ಯನಿಂದ ಕೂಡಿರುವಿಕೆ, ಅಗ್ನಿ

1 ಪುರದಾರ ಪುರೋಹಿತೆ ಎಂದು ಶಾಂತಿಸಾರ ಶಾಂತಿಕಮಲಾಕರಗಳಲ್ಲಿನ ಪಾಠ.

ರಕ್ತಪದ್ಮಾರುಣಂ ಸಾಂಧ್ಯಂ ನಭಃ ಕ್ಷುಬ್ಧಾರ್ಣವೋಪಮಂ ।
ಸರಿತಾಂ ಚಾಂಬುಸಂಶೋಷಂ ದೃಷ್ಟ್ವಾ ಗ್ರೀಷ್ಮೇ ಶುಭಂ ವದೇತ್ ॥ ೧೮ ॥

ಶಕ್ರಾಯುಧಂ ಪರೀವೇಷಂ ವಿಧುಶುಷ್ಕವಿರೋಹಣಂ ।
ಕಂಪೋದ್ವೇಲನವೈಕೃತ್ಯಂ ತ್ರಸನಂ ದಾರುಣಂ ಕ್ಷಿತೇಃ ॥ ೧೯ ॥

ನದ್ಯೋದಪಾನಸರಸಾಂ ವೃದ್ಧ್ಯಶ್ಚತಂಣಪ್ಲವಾಃ ।
ಶೀರ್ಣತಾ ಚಾಹ್ನಿಗೇಹಾನಾಂ ವರ್ಷಾಸು ಚ ಭವಿಷ್ಯತಿ ॥ ೨೦ ॥

ದಿವ್ಯಸ್ತ್ರೀಭೂತಗಂಧರ್ವವಿಮಾನಾದ್ಭುತದರ್ಶನಂ ।
ಗ್ರಹನಕ್ಷತ್ರತಾರಾಣಾಂ ದರ್ಶನಂ ಚ ದಿವಾಕರೇ ॥ ೨೧ ॥

---

ಇಲ್ಲದೆಯೂ, ಉರಿ, ಶಬ್ದ, ಹೊಗೆ ಇವುಗಳಿಂದ ಕೂಡಿದ ವಾಯುವನ್ನು ಧರಿಸಿಯೂ, ಸಂಧ್ಯಾಕಾಲದಲ್ಲಿ ಆಕಾಶವು ಕೆಂಪು ಕಮಲದಂತೆ ಕೆಂಪಾಗಿಯೂ, ಕ್ಷೋಭೆಗೊಂಡ ಸಮುದ್ರದಂತೆಯೂ ಇರುವಿಕೆ, ನದಿಗಳಲ್ಲಿ ನೀರು ಬಹುಮಟ್ಟಿಗೂ ಕಡಿಮೆಯಾಗಿರುವಿಕೆ ಇವುಗಳೆಲ್ಲವೂ ಶುಭಕರಗಳೆಂದೇ ಹೇಳಬೇಕು.

೧೯–೨೦. ಹೀಗೆಯೇ ಇಂದ್ರಧನುಸ್ಸು, ಪರಿವೇಷ, ಚಂದ್ರನು ಶುಷ್ಕನಂತೆ ನಿಸ್ತೇಜಸ್ಕನಾಗಿರುವಿಕೆ, ಭೂಮಿಯ ನಡುಕ, ಚಲನ ಮುಂತಾದ ವಿಕಾರಗಳು, ನದಿ ಸರೋವರ ಮೊದಲಾದ ಜಲಾಶಯಗಳ ಅಭಿವೃದ್ಧಿ, ತೆಪ್ಪಗಳನ್ನೇ ಕುದುರೆಗಳಂತೆ ಗಮನಸಾಧನಗಳನ್ನಾಗಿ ಹೊಂದಿರುವಿಕೆ, ಹಗಲಿನಲ್ಲೂ ಮನೆಗಳೆಲ್ಲಾ ಜರ್ಜರಿತವಾಗಿರುವಂತೆ ಕಾಣಿಸುವುದು ಇವೆಲ್ಲಾ ವರ್ಷಾಕಾಲದಲ್ಲಿ ಉಂಟಾಗುತ್ತದೆ. ಇವೂ ಶುಭಕರಗಳೆಂದೇ ತಾತ್ಪರ್ಯ.

೨೧–೨೨. ಹೀಗೆಯೇ ದಿವ್ಯಯುವತಿ, ಭೂತಗಳು, ಗಂಧರ್ವವಿಮಾನವೇ ಮೊದಲಾದ ಅದ್ಭುತ ದರ್ಶನವೂ ಸೂರ್ಯನಲ್ಲಿ ಗ್ರಹ, ನಕ್ಷತ್ರ, ಚುಕ್ಕಿಗಳು ಇವುಗಳನ್ನು ನೋಡುವುದೂ ಕಾಡಿನಲ್ಲಿಯೂ, ಪರ್ವತಗಳ ತಪ್ಪಲಿನಲ್ಲಿಯೂ, ಗೀತ

ಗೀತವಾದಿತ್ರನಿರ್ಘೋಷೋ ವನಪರ್ವತಸಾನುಷು ।
ರಸವೃದ್ಧೀ ರಸೋತ್ಪತ್ತಿಃ ಶರತ್ಕಾಲೇ ಶುಭಾಃ ಸ್ಮೃತಾ ॥ ೨೨ ॥

ಶೀತಾಲುಲತ್ತುಷಾರತ್ವಂ ನಂದನಂ ಗೃಹಪಕ್ಷಿಣಾಂ ।
ರಕ್ಷೋಯಕ್ಷಾದಿಸತ್ವಾನಾಂ ದರ್ಶನಂ ವಾಗಮಾನುಷೀ ॥ ೨೩ ॥

ದಿಶೋ ಧೂಮಾಂಧಕಾರಶ್ಚ ಶರಭೋಧನಪರ್ವತಾಃ ।
ಉಚ್ಚೈಃ ಸೂರ್ಯೋದಯಾಸ್ತೌ ಚ ಹೇಮಂತೇ ಶೋಭನಾಃ ಸ್ಮೃತಾಃ ॥

ಹಿಮಪಾತಾನಿಲೋತ್ಪಾತೌ ವಿರೂಪಾದ್ಭುತದರ್ಶನಂ ।
ಕೃಷ್ಣಾಂಜನಾಭಮಾಕಾಶಂ ತಾರೋಲ್ಕಾಪಾತಪಿಂಜರಂ ॥ ೨೫ ॥

ಚಿತ್ರಗರ್ಭೋದ್ಭವಂ ಸ್ತ್ರೀಷು ಗೋಜಾಶ್ವಮೃಗಪಕ್ಷಿಷು ।
ಪತ್ರಾಂಕುರಲತಾನಾಂ ಚ ವಿಕಾರಾಃ ಶಿಶಿರೇ ಶುಭಾಃ ॥ ೨೬ ॥

ವಾದ್ಯಾದಿಗಳ ಶಬ್ದವೂ, ಭೋಗ್ಯವಸ್ತುಗಳ ಉತ್ಪತ್ತಿ ಮತ್ತು ಅಭಿವೃದ್ಧಿಗಳೂ ನಹ ಶರತ್ಕಾಲದಲ್ಲಿ ಶುಭಕರಗಳೆಂದೇ ಹೇಳಲ್ಪಟ್ಟಿವೆ.

೨೩–೨೪ ಹೀಗೆಯೇ ಶೈತ್ಯ, ಮಂಜಿನ ವೃದ್ಧಿ, ಮನೆಯಲ್ಲಿರುವ ಪಕ್ಷಿಗಳು ಸಂತೋಷದಿಂದಿರುವಿಕೆ. ರಾಕ್ಷಸ, ಯಕ್ಷ, ಮೊದಲಾದುವುಗಳ ದರ್ಶನ, ಅಮಾನುಷ ವಾಣಿ, ದಿಕ್ಕುಗಳಲ್ಲಿ ಹೊಗೆ ಮುತ್ತಿರುವುದು, ಪರ್ವತಗಳಲ್ಲಿ ಶರವೆಂಬ ಹುಲ್ಲು ಬೆಳೆದಿರುವಿಕೆ, ಸೂರ್ಯನ ಉದಯಾಸ್ತಗಳ ಹೆಚ್ಚಾದ ಪರಿಮಿತಿ ಇವೆಲ್ಲವೂ ಹಿಮಂತ ಋತುವಿನಲ್ಲಿ ಶುಭಕರಗಳೆಂದು ಹೇಳಲಾಗಿದೆ.

೨೫–೨೬. ಹೆಚ್ಚಾಗಿ ಹಿಮ ಬೀಳುವುದು, ಗಾಳಿ ಏಳುವುದು, ವಿಕಾರವುಳ್ಳ ಅದ್ಭುತವಸ್ತುಗಳ ದರ್ಶನ, ಆಕಾಶವು ಕಾಡಿಗೆಯಂತೆ ಕಪ್ಪಾಗಿರುವಿಕೆ, ನಕ್ಷತ್ರ ಮತ್ತು ಉಲ್ಕಾಪಾತಗಳಿಂದ ಹೊಂಬಣ್ಣವಾಗಿರುವಿಕೆ, ಹಸು, ಆಡು, ಕುದುರೆ, ಮೃಗಪಕ್ಷಿಗಳು ಇವುಗಳ ಸ್ತ್ರೀಯರಲ್ಲಿ ವಿಚಿತ್ರವಾದ ಗರ್ಭಗಳ ಉತ್ಪತ್ತಿ, ಎಲೆ, ಮೊಳಕೆ, ಬಳ್ಳಿಗಳು ಇವುಗಳಲ್ಲಿ ಉಂಟಾಗುವ ನಾನಾವಿಧವಾದ ವಿಕಾರಗಳು ಇವೆಲ್ಲವೂ ಶಿಶಿರಋತುವಿನಲ್ಲಿ ಶುಭಕರಗಳು ಈ ಉತ್ಪಾತಗಳೆಲ್ಲವೂ ಆಯಾಯ

ಋತುಸ್ವಭಾವೇನ ವಿನಾದ್ಭುತಸ್ಯ
　　ಜಾತಸ್ಯ ದೃಷ್ಟಸ್ಯ ತು ಶೀಘ್ರಮೇವ ।
ಕೃತ್ವಾ ಶಮಂ ಶಾಂತಿರನಂತರಂ ತು
　　ಕಾರ್ಯಾ ಯಥೋಕ್ತಾ ವಸುಧಾಧಿಪೇನ　　॥ ១೨ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ನಾನಾವಿಧೋತ್ಪಾತಕಥನೋ ನಾಮ
ಚತುಸ್ತ್ರಿಂಶದುತ್ತರಶತತಮೋಽಧ್ಯಾಯಃ

---

ಋತುಸ್ವಭಾವದಿಂದ ಆಗತಕ್ಕವು ಹೀಗಿಲ್ಲದೆ ಸ್ವತಂತ್ರವಾಗಿ ಉಂಟಾಗುವ ಅದ್ಭುತೋತ್ಪಾತಗಳಿಗೆ ಅವುಗಳು ಉಂಟಾದ ಒಡನೆಯೇ ನೋಡಿ ಜಾಗ್ರತೆಯಾಗಿ ಅವನ್ನು ಶಮನಗೊಳಿಸಿ ಅನಂತರ ಅವುಗಳಿಗೆ ಉಕ್ತವಾಗಿರುವ ಶಾಂತಿಗಳನ್ನು ಧೊರೆಯಾದವನು ಮಾಡಬೇಕು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ
ಸಂವಾದದಲ್ಲಿ ಭಾರ್ಗವನನ್ನು ಕುರಿತು ಪುಷ್ಕರನ ಉಪಾಖ್ಯಾನದಲ್ಲಿ
ನಾನಾವಿಧೋತ್ಪಾತ ಕಥನವೆಂಬ ನೂರ ಮೂವತ್ತನಾಲ್ಕನೆಯ
ಅಧ್ಯಾಯ ಮುಗಿದಿದೆ.



|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಪಂಚತ್ರಿಂಶದುತ್ತರಶತತಮೋಽಧ್ಯಾಯಃ

**|| ಗರ್ಗ ಉವಾಚ ||**

**ದೇವತಾರ್ಚಾಃ ಪ್ರನೃತ್ಯಂತಿ ವೇಪಂತೇ ಪ್ರಜ್ವಲಂತಿ ಚ ।**
**ಆರಟಂತಿ ಚ ರೋದಂತಿ ಪ್ರಸ್ವಿದ್ಯಂತಿ ಹಸಂತಿ ಚ || ೧ ||**

**ಉತ್ತಿಷ್ಠಂತಿ ನಿಷೀದಂತಿ ಪ್ರಧಾವಂತಿ ವಸಂತಿ ಚ ।**
**ಭುಂಜತೇ ವಿಕ್ಷಿಪಂತೇ ವಾ ಗಾತ್ರಪ್ರಹರಣಧ್ವಜಾನ್ || ೨ ||**

**ಅವಾಙ್ಮುಖಾವತಿಷ್ಠಂತೇ ಸ್ಥಾನಾತ್ಸ್ಥಾನಂ ಭ್ರಮಂತಿ ಚ ।**
**ವಮಂತ್ಯಗ್ನಿಂ ತಥಾ ಧೂಮಂ ಸ್ನೇಹರಕ್ತೇ ತಥಾ ವಸಾಂ || ೩ ||**

---

### ನೂರ ಮೂವತ್ತೈದನೇ ಅಧ್ಯಾಯ.

೧–೨. ಗರ್ಗಋಷಿಯು ಹೇಳುತ್ತಾನೆ :—ದೇವಸ್ಥಾನದಲ್ಲಿರುವ ವಿಗ್ರಹಗಳು ಸಜೀವವಾಗಿ ಕುಣಿಯುತ್ತವೆ, ನಡುಗುತ್ತವೆ, ಉರಿಯಿಂದ ಜ್ವಲಿಸುತ್ತವೆ, ಕೂಗುತ್ತವೆ, ಅಳುತ್ತವೆ, ಬೆವರುತ್ತವೆ, ನಗುತ್ತವೆ, ಮೇಲಕ್ಕೆ ಏಳುತ್ತವೆ, ಕೂಡುತ್ತವೆ, ಓಡುತ್ತವೆ, ಬೇರೆ ಕಡೆಯಲ್ಲಿ ವಾಸಿಸಲು ಹೊರಡುತ್ತವೆ, ಊಟ ಮಾಡುತ್ತವೆ, ತಮ್ಮ ಶರೀರವನ್ನೂ, ಆಯುಧಗಳನ್ನೂ, ಧ್ವಜಗಳನ್ನೂ, ಇತ್ತ ಅತ್ತ ಎಸೆಯುತ್ತವೆ.

೩–೪. ಮುಖವನ್ನು ಕೆಳಗೆ ಮಾಡಿ ಮಲಗುತ್ತವೆ. ಅಥವಾ ಹಿಂಭಾಗಕ್ಕೆ ಮಾಡಿ ನಿಲ್ಲುತ್ತವೆ. ಒಂದು ಕಡೆಯಿಂದ ಮತ್ತೊಂದು ಕಡೆಗೆ ಓಡುತ್ತವೆ. ಬಾಯಿಯಿಂದ ಬೆಂಕಿಯನ್ನು ಕಾರುತ್ತವೆ. ಹೊಗೆಯನ್ನೂ ಕಾರುತ್ತವೆ. ಜಿಡ್ಡಾದ

ಏವಮಾದೀನಿ ದೃಶ್ಯಂತೇ ವಿಕಾರಾ ಸಹಸೋತ್ಥಿತಾಃ ।
ಲಿಂಗಾಯತನಚಿತ್ರೇಷು ತತ್ರ ವಾಸಂ ನ ರೋಚಯೇತ್ ॥ ೪ ॥

ರಾಜ್ಞೋವಾ ವ್ಯಸನಂ ತತ್ರ ಸರ್ವೋ ದೇಶೋ ವಿನಶ್ಯತಿ ।
ದೇವಯಾತ್ರಾಂ ಸಹೋತ್ಪಾತಾಂ ದೃಷ್ಟ್ವಾ ದೇಶಭಯಂ ವದೇತ್ ॥ ೫ ॥

ಪಿತಾಮಹರ್ಷಿಧರ್ಮೇಷು ಯನ್ನಿಮಿತ್ತಂ ದ್ವಿಜೇಷು ತತ್ ।
ಗುರುಶುಕ್ರಾಗ್ನಿಜಾತಾನಿ ಯಾನಿ ತಾನಿ ಪುರೋಹಿತೇ ॥ ೬ ॥

ಪಶೂನಾಂ ರುದ್ರಜಂ ಜ್ಞೇಯಂ ನೃಪಾಣಾಂ ಲೋಕಪಾಲಜಂ ।
ಜ್ಞೇಯಂ ಸೇನಾಪತೀನಾಂ ತು ಯತ್ಸ್ಯಾತ್ ಸ್ಕಂದವಿನಾಯಕಂ ॥ ೭ ॥

ಲೋಕಾನಾಂ ವಿಷ್ಣುವಾಯ್ವಿಂದ್ರ ವಿಶ್ವಕರ್ಮಸಮುದ್ಭವಂ ।
ವಿನಾಯಕೋದ್ಭವಂ ಜ್ಞೇಯಂ ಗಣಾನಾಂ ಯೇ ತು ನಾಯಕಾಃ ॥ ೮ ॥

ಸ್ನೇಹವಸ್ತು ಮತ್ತು ರಕ್ತ ವಸೆ ಇವನ್ನೂ ಬಾಯಿಯಿಂದ ಕಾರುತ್ತವೆ ಇವೇ ಮೊದಲಾದ ಅನೇಕ ವಿಕಾರಗಳು ಉತ್ಪಾತ ರೂಪದಿಂದ ಜಾಗ್ರತೆಯಾಗಿ ಕಾಣಿಸುತ್ತವೆ. ಹೀಗಿರುವಾಗ ಲಿಂಗವಿರುವ ದೇವಾಲಯದಲ್ಲಿ ಮತ್ತು ಲಿಂಗದ ಚಿತ್ರವಿರುವ ಆಲಯಗಳಲ್ಲಿಯೂ ವಾಸಿಸಬಾರದು.

೫-೬. ಇಂತಹ ಉತ್ಪಾತ ಉಂಟಾದ ಕಾಲದಲ್ಲಿ ರಾಜನಿಗೆ ವ್ಯಸನವೂ, ಸರ್ವದೇಶನಾಶವೂ ಸಹ ಉಂಟಾಗುತ್ತವೆ. ಈ ರೀತಿಯ ದೇವಯಾತ್ರೆ ಎಂಬ ಉತ್ಪಾತ ಉಂಟಾದಾಗ ಅದನ್ನು ನೋಡಿದ ಶಕುನಜ್ಞನು ದೇಶಭಯವೇ ಇದಕ್ಕೆ ಫಲವೆಂದು ಹೇಳಬೇಕು. ಬ್ರಹ್ಮ ಮತ್ತು ಋಷಿಗಳಂತಿರುವ ದೇವತೆಗಳಿಗೆ ಉಂಟಾಗುವ ಈ ಉತ್ಪಾತಗಳು ಬ್ರಾಹ್ಮಣರಲ್ಲಿ ಫಲೋನ್ಮುಖವಾಗುತ್ತವೆ. ಎಂದೂ, ಗುರು, ಶುಕ್ರ, ಅಗ್ನಿ ಇವುಗಳಲ್ಲಿ ಉಂಟಾಗುವ ಅಶುಭನಿಮಿತ್ತಗಳು ಪುರೋಹಿತನಲ್ಲಿ ಫಲೋನ್ಮುಖವಾಗುತ್ತವೆ. ಎಂತಲೂ ತಿಳಿಯಬೇಕು.

೭-೮. ರುದ್ರದೇವತೆಯ ಈ ವಿಧವಾದ ವಿಕಾರಗಳು ಪಶುಗಳಲ್ಲಿಯೂ ಲೋಕಪಾಲರ ವಿಗ್ರಹಗಳಿಗೆ ಉಂಟಾಗುವ ವಿಕಾರಗಳು ರಾಜರುಗಳಲ್ಲಿಯೂ ಸ್ಕಂದವಿನಾಯಕಾದಿಗಳ ವಿಕಾರವು ಸೇನಾಪತಿಗಳಲ್ಲಿಯೂ, ವಿಷ್ಣು, ವಾಯು,

**ದೇವಪ್ರೇಷ್ಯ ನೃಪಪ್ರೇಷ್ಯ ದೇವಸ್ತ್ರೀಷು ನೃಪಸ್ತ್ರಿಯಃ ।**
**ವಾಸ್ತುದೇವೇಷು ವಿಜ್ಞೇಯಂ ಗೃಹಿಣಾಮೇವ ನಾನ್ಯಥಾ ॥ ೯ ॥**

**ದೇವತಾರ್ಚಾವಿಕಾರೇಷು ಶ್ರುತಿವೇತ್ತಾ ಪುರೋಹಿತಃ ।**
**ದೇವತಾರ್ಚಾಂ ತತೋ ಗತ್ವಾ ಸ್ನಾತಾಮಾಚ್ಛಾದ್ಯ ಭೂಷಯೇತ್ ॥ ೧೦ ॥**

**ಪೂಜಯೇಚ್ಚ ಮಹಾಭಾಗ ಗಂಧಮಾಲ್ಯಾನ್ನಸಂಪದಾ ।**
**ಮಧುಪರ್ಕೇಣ ವಿಧಿವದುಪತಿಷ್ಠೇದನಂತರಂ ॥ ೧೧ ॥**

**ತಲ್ಲಿಂಗೇನ ಚ ಮಂತ್ರೇಣ ಸ್ಥಾಲೀಪಾಕಂ ಯಥಾವಿಧಿ ।**
**ಪುರೋಧಾ ಜುಹುಯಾದ್ವಹ್ನೌ ಸಪ್ತರಾತ್ರಮತಂದ್ರಿತಃ ॥ ೧೨ ॥**

---

ಇಂದ್ರ, ವಿಶ್ವಕರ್ಮ, ಈ ವಿಗ್ರಹಗಳಲ್ಲಿ ಉಂಟಾಗುವ ಈ ರೀತಿಯಾದ ನಿಮಿತ್ತಗಳು, ಜನಗಳಲ್ಲಿಯೂ, ವಿನಾಯಕನಿಗೆ ಉಂಟಾಗುವ ಈ ನಿಮಿತ್ತಗಳು, ಗಣಗಳ ಅಧಿಪತಿಗಳಲ್ಲಿಯೂ ಫಲೋನ್ಮುಖವಾಗುತ್ತವೆ.

೯-೧೦. ದೇವತೆಗಳ ಭೃತ್ಯವರ್ಗದಲ್ಲಿ ಇಂತಹ ವಿಕಾರ ಉಂಟಾದಲ್ಲಿ ಅದರ ಫಲವು ರಾಜರ ಭೃತ್ಯವರ್ಗದಲ್ಲಿಯೂ ದೇವತೆಗಳ ಸ್ತ್ರೀಯರಲ್ಲಿ ಇಂತಹ ವಿಕಾರ ಉಂಟಾದಲ್ಲಿ ಅದರ ಫಲವು ರಾಜಸ್ತ್ರೀಯರಲ್ಲೂ ಪರಿಪಾಕ ಹೊಂದುತ್ತದೆ. ವಾಸ್ತು ದೇವತೆ (ಗೃಹದೇವತೆ) ಗಳಲ್ಲಿ ಇಂತಹ ವಿಕಾರ ಉಂಟಾದಲ್ಲಿ ಅದರ ಫಲವು ಆಯಾಯ ಗೃಹದ ಸ್ವಾಮಿಯನ್ನೇ ಹೊಂದುತ್ತದೆ. ಇತರರಿಗೆ ಸಂಬಂಧಿಸುವುದಿಲ್ಲ. ದೇವಾಲಯಗಳಲ್ಲಿ ಈ ರೀತಿಯಾದ ವಿಕಾರವು ವಿಗ್ರಹಗಳಿಗೆ ಉಂಟಾದಲ್ಲಿ ವೇದಾಭಿಜ್ಞನಾದ ಪುರೋಹಿತನು ದೇವಗೃಹಕ್ಕೆ ಹೋಗಿ ಆ ವಿಗ್ರಹದಲ್ಲಿ ವಿಕಾರವು ತಿಳಿಯದಂತೆ ಆಚ್ಛಾದಿಸಿ ಆಭರಣಾದಿಗಳಿಂದ ಅಲಂಕರಿಸಬೇಕು.

೧೧-೧೨. ಗಂಧಪುಷ್ಪನೈವೇದ್ಯಾದಿಗಳಿಂದ ಪೂಜಿಸಬೇಕು. ಮಧುಪರ್ಕ ವನ್ನೂ ಸಮರ್ಪಿಸಿ ಯಥಾವಿಧಿಯಾಗಿ ಪೂಜೆಯನ್ನು ನಡೆಸಬೇಕು. ಮತ್ತು ಆ ಪುರೋಹಿತನು ವಿಕಾರವನ್ನು ಹೊಂದಿರುವ ದೇವತೆಯ ನಾಮಾಂಕಿತವಾಗಿರುವ ಮಂತ್ರದಿಂದ ಯಥಾವಿಧಿಯಾಗಿ ಸ್ಥಾಲೀಪಾಕಮಾಡಿ ಏಳು ರಾತ್ರಿಗಳವರಿಗೂ ಜಾಗರೂಕತೆಯಿಂದ ಅಗ್ನಿಯಲ್ಲಿ ಹೋಮವನ್ನೂ ಮಾಡಬೇಕು.

ವಿಪ್ರಾಶ್ಚ ಪೂಜ್ಯಾ ಮಧುರಾನ್ನಪಾನೈಃ
ಸದಕ್ಷಿಣೈಃ ಸಪ್ತದಿನಂ ದ್ವಿಜೇಂದ್ರ ।
ಪ್ರಾಪ್ತೇಽಷ್ಟಮೇಽಹ್ನಿ ಕ್ಷಿತಿಗೋಪ್ರದಾನೈಃ
ಸಕಾಂಚನೈಃ ಶಾಂತಿಮುಪೈತಿ ಪಾಪಂ ॥ ೧೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ಅರ್ಚಾವಿಕಾರೋಪಶಮನೋ ನಾಮ
ಪಂಚತ್ರಿಂಶದುತ್ತರಶತತಮೋಽಧ್ಯಾಯಃ

---

೧೩ ಆ ಏಳು ದಿನಗಳಲ್ಲಿಯೂ ಬ್ರಾಹ್ಮಣರನ್ನು ಮಧುರವಾದ ಅನ್ನ ಪಾನಾದಿಗಳಿಂದಲೂ ದಕ್ಷಿಣೆಗಳಿಂದಲೂ ಪೂಜಿಸಬೇಕು. ಎಂಟನೆಯ ದಿನ ಬಂದಾಗಲೂ ಗೋದಾನ, ಭೂದಾನವೇ ಮೊದಲಾದ ದಾನಗಳನ್ನೂ ಚಿನ್ನದೊಡನೆ ಮಾಡಿದಲ್ಲಿ ಆ ಶಾಂತಿಯಿಂದ ದೇವತಾ ವಿಕಾರಕ್ಕೆ ಕಾರಣವಾದ ರಾಷ್ಟ್ರದ ಅಥವಾ ಜನಗಳ ಅಥವಾ ರಾಜನ ಪಾಪವು ಶಾಂತವಾಗುತ್ತವೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ
ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ
ಅರ್ಚಾವಿಕಾರಶಮನವರ್ಣನವೆಂಬ ನೂರ ಮೂವತ್ತೈದನೆಯ
ಅಧ್ಯಾಯವು ಮುಗಿದಿದೆ.



॥ ಓಂ ॥

—ಃ ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಷಟ್‌ತ್ರಿಂಶದುತ್ತರಶತತಮೋಽಧ್ಯಾಯಃ

॥ ಗರ್ಗ ಉವಾಚ ॥

ಅನಗ್ನಿರ್ದೀಪ್ಯತೇ ಯತ್ರ ರಾಷ್ಟ್ರೇ ಭೃಶಸಮನ್ವಿತಃ ।
ನ ದೀಪ್ಯತೇ ಚೇಂಧನಂ ವಾ ಸರಾಷ್ಟ್ರಃ ಪೀಡ್ಯತೇ ನೃಪಃ ॥ ೧ ॥

ಪ್ರಜಲಾದಂಬುನಾಶಂ ಚ ತಥಾರ್ದ್ರಂ ವಾತಿ ಕಿಂಚನ ।
ಪ್ರಾಸಾದಸ್ತೋರಣಂ ದ್ವಾರಂ ನೃಪವೇಶ್ಮ ಸುರಾಲಯಂ ॥ ೨ ॥

---

### ನೂರ ಮೂವತ್ತಾರನೇ ಅಧ್ಯಾಯ,

೧–೨. ಗರ್ಗಮುನಿಯು ಹೇಳುತ್ತಾನೆ. ಯಾವ ರಾಷ್ಟ್ರದಲ್ಲಿ ಅಗ್ನಿ ಇಲ್ಲದಿದ್ದರೂ ಮನೆಮರಗಳು ಹೆಚ್ಚಾಗಿ ಜ್ವಲಿಸುವುವೋ ಮತ್ತು ಕಟ್ಟಿಗೆಯನ್ನು ಹಾಕಿದರೂ ಅಗ್ನಿಯು ಬೇಕಾದಾಗ ಉರಿಯುವುದೇ ಇಲ್ಲವೋ ಅಂತಹ ರಾಷ್ಟ್ರದೊಡನೆ ಧೊರೆಯೂ ಪೀಡೆಗೆ ಒಳಗಾಗುತ್ತಾನೆ. ಮತ್ತು ಹೆಚ್ಚಾದ ಜಲವಿರುವ ಜಲಾಶಯಗಳಲ್ಲಿ ಅಕಸ್ಮಿಕವಾಗಿ ಜಲವೆಲ್ಲವೂ ಬತ್ತಿಹೋಗುವುದೋ ಮತ್ತು ಸ್ವಲ್ಪವೂ ಆರ್ದ್ರತೆ ಇಲ್ಲದಂತೆ ಒಣಗುವುದೋ ಮತ್ತು ಉಪ್ಪರಿಗೆಗಳು, ಪುರದ್ವಾರ, ಗೃಹದ್ವಾರ, ಧೊರೆಯ ಮನೆ, ದೇವಾಲಯ ಅಥವಾ ಮದ್ಯಗೃಹ, ಇವು ಅಗ್ನಿಯಿಂದ ಸುಡಲ್ಪಡುವುವೋ ಅಂತಹ ದೇಶದಲ್ಲಿ ರಾಜನಿಗೆ ಭಯವು ತಪ್ಪುವುದಿಲ್ಲ.

ಏತಾನಿ ಯತ್ರ ದಹ್ಯಂತೇ ತತ್ರ ರಾಜಭಯಂ ಭವೇತ್ ।
ವಿದ್ಯುತಾ ವಾ ಪ್ರದಹ್ಯಂತೇ ತಥಾಪಿ ನೃಪತೇರ್ಭಯಂ ॥ ३ ॥

ಅನ್ಯೈ[1]ಶ್ಯಾನಿ ತಮಾಂಸಿ ಸ್ಯು ದಿ[2]ಶಾಂ ಪಾಂಸುರಜಾಂಸಿ ಚ ।
ಧೂಮಶ್ಚಾನಗ್ನಿಜೋ ಯತ್ರ ತತ್ರ ವಿದ್ಯಾನ್ಮಹದ್ಭಯಂ ॥ ೪ ॥

ರಾತ್ರಾವನಭ್ರೇ ಗಗನೇ ಭಯಂ ಸ್ಯಾದೃಕ್ಷವರ್ಜಿತೇ ।
ದಿವಾ ಸತಾರೇ ಗಗನೇ ತಥೈವ ಭಯಮಾದಿಶೇತ್ ॥ ೫ ॥

ಗ್ರಹನಕ್ಷತ್ರವೈಕೃತ್ಯೇ ತಾರಾವಿಕೃತದರ್ಶನೇ ।
ಪುರವಾಹನಯಾನೇಷು ಚತುಷ್ಪಾನ್ಮೃಗಪಕ್ಷಿಷು ॥ ೬ ॥

ಆಯುಧೇಷು ಚ ದೀಪ್ತೇಷು ಧೂಮಾಯತ್ಸು ತಥೈವ ಚ ।
ನಿರ್ಯತ್ಸು ಕೋಶಾಚ್ಚ ತಥಾ ಸಂಗ್ರಾಮಸ್ತುಮುಲೋ ಭವೇತ್ ॥ ೭ ॥

---

೩-೫. ಮಿಂಚಿನಿಂದುಂಟಾದ ಅಗ್ನಿಯಿಂದ ಇವು ಸುಡಲ್ಪಟ್ಟರೂ ಸಹ ದೊರೆಗೇ ಭಯ ಉಂಟಾಗುತ್ತದೆ. ಹಗಲಿನಲ್ಲಿಯೇ ಕತ್ತಲೆಯುಂಟಾಗುವುದು. ದಿಕ್ಕುಗಳಲ್ಲಿ ಕೆಂಧೂಳಿ ಇಲ್ಲದಿದ್ದರೂ ಧೂಳಿಯುಂಟಾಗುವುದು. ಬೆಂಕಿ ಇಲ್ಲದಿದ್ದರೂ ಹೊಗೆಯು ಆವರಿಸುವುದು. ಇವು ಯಾವ ದೇಶದಲ್ಲಿ ಉಂಟಾಗುತ್ತವೆಯೋ ಅಲ್ಲಿ ಹೆಚ್ಚಾದ ಭಯವು ಸನ್ನಿಹಿತವಾಗಿದೆ ಎಂದು ತಿಳಿಯಬೇಕು. ಹಾಗೆಯೇ ರಾತ್ರಿಯಲ್ಲಿ ಆಕಾಶವು ಮೇಘಗಳಿಂದ ಆವರಿಸಲ್ಪಡದೆ ಇದ್ದರೂ ನಕ್ಷತ್ರಗಳು ಕಾಣಿಸದಿದ್ದಲ್ಲಿಯೂ. ಮತ್ತು ಹಗಲಿನಲ್ಲಿ ಆಕಾಶದಲ್ಲಿ ನಕ್ಷತ್ರಗಳು ಕಂಡರೂ ಸಹ ಮಹಾಭಯವನ್ನೇ ಸೂಚಿಸುತ್ತವೆ

೬-೭. ಗ್ರಹಗಳು ಮತ್ತ ನಕ್ಷತ್ರಗಳು ವಿಕಾರ ಹೊಂದಿದಾಗಲೂ, ಆಕಾಶದಲ್ಲಿರುವ ಇತರ ಚುಕ್ಕಿಗಳಲ್ಲಿ ವಿಕಾರ ತೋರಿಬಂದರೂ, ನಗರದಲ್ಲಿನ, ವಾಹನ, ರಥವೇ ಮೊದಲಾದಯಾನಗಳಲ್ಲಿಯೂ, ನಾಲ್ಕು ಕಾಲುಗಳುಳ್ಳ ಮೃಗಗಳಲ್ಲಿಯೂ, ಇತರ ಪಕ್ಷಿಗಳಲ್ಲಿಯೂ ಸಹ ಅಂತಹ ವಿಕಾರ ಕಂಡುಬಂದರೂ, ಮತ್ತು ಆಯುಧಗಳು ತನ್ನಷ್ಟಕ್ಕೆತಾನೇ ಜ್ವಲಿಸಿದರೂ, ಹೊಗೆಯನ್ನು ಕಕ್ಕುತ್ತಿದ್ದರೂ, ಹಾಗೂ ತನ್ನ ಒರೆಯಿಂದ ಅಥವಾ ಕೋಶಗೃಹದಿಂದ ತನ್ನಷ್ಟಕ್ಕೆ ತಾನೇ ಹೊರಗೆ ಬಂದರೂ ಸಹ ಇಂತಹ ನಿಮಿತ್ತಗಳಿಂದಯುದ್ಧವು ಘೋರಾಕಾರದಲ್ಲಿ ಉಂಟಾಗುತ್ತದೆ ಎಂದೇ ತಿಳಿಯಬೇಕು.

---

1 ಅನ್ಯೈಶಾನಿ ಎಂದು ಶಾಂತಿಸಾರದಲ್ಲಿ ಪಾಠವಿದೆ.	2 ದಿನಾಪಾಂಸುಂ ಎಂದೂ ಪಾಠವಿದೆ

ವಿನಾಗ್ನಿಂ ವಿಸ್ಫುಲಿಂಗಾಶ್ಚ ದೃಶ್ಯಂತೇ ಯತ್ರ ಕರ್ಹಿಚಿತ್ ।
ಸ್ವಭಾವಾಚ್ಚಾಪಿ ಪೂರ್ಯಂತೇ ಧನೂಂಷಿ ವಿಕೃತಾನಿ ಚ ॥ ೮ ॥

ವಿಕಾರಾಶ್ಚಾಯುಧಾನಾಂ ಸ್ಯುಸ್ತತ್ರ ಸಂಗ್ರಾಮಮಾದಿಶೇತ್ ।
ತ್ರಿರಾತ್ರೋಪೋಷಿತಸ್ತತ್ರ ಪುರೋಧಾಃ ಸುಸಮಾಹಿತಃ ॥ ೯ ॥

ಸಮಿದ್ಭಿಃ ಕ್ಷೀರವೃಕ್ಷಾಣಾಂ ಸರ್ಷಪೈಶ್ಚ ಘೃತೇನ ಚ ।
ಅಗ್ನಿಲಿಂಗೈಶ್ಚ ಜುಹುಯಾದ್ವಹ್ನಿಂ ಶ್ವೇತಾಂಬರಃ ಶುಚಿಃ ॥ ೧೦ ॥

ದದ್ಯಾತ್ಸುವರ್ಣಂ ಚ ತಥಾ ದ್ವಿಜೇಭ್ಯಃ
ಗಾಶ್ಚೈವ ವಸ್ತ್ರಾಣಿ ತಥಾ ಭುವಂ ಚ ।
ಏವಂ ಕೃತೇ ಪಾಪಮುಪೈತಿ ನಾಶಂ
ಯದ್ವಹ್ನಿವೈಕೃತ್ಯಭವಂ ದ್ವಿಜೇಂದ್ರ ॥ ೧೧ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ರಾಮಂಪ್ರತಿ ಪುಷ್ಕರೋಪಾಖ್ಯಾನೇ ಔತ್ಪತ್ತಿಕಾಗ್ನಿವರ್ಣನೋನಾಮ ಷಟ್‌ತ್ರಿಂಶದುತ್ತರಶತತಮೋಽಧ್ಯಾಯಃ

---

೮-೧೧. ಬೆಂಕಿ ಇಲ್ಲದಿದ್ದರೂ ಎಲ್ಲಿ ಕಿಡಿಗಳು ಕಾಣಿಸಿಕೊಳ್ಳುತ್ತವೆಯೋ, ಬಿಲ್ಲುಗಳು ತಾನಾಗಿಯೇ ಹೆದೆ ಏರಿಸಿಕೊಳ್ಳುವುವೋ, ವಿಕಾರವನ್ನು ಹೊಂದುತ್ತವೆಯೋ, ಇತರ ಆಯುಧಗಳಲ್ಲಿಯೂ ವಿಕಾರಗಳುಂಟಾಗುತ್ತವೆಯೋ ಅಲ್ಲಿ ಯುದ್ಧವೇ ಮುಂದಿನ ಫಲವೆಂದು ಹೇಳಲಾಗಿದೆ. ಅಂತಹ ಸಂದರ್ಭದಲ್ಲಿ ಪುರೋಹಿತನಾದವನು ಮೂರು ರಾತ್ರಿ ಉಪವಾಸವಿದ್ದು ಮನಶ್ಶಾಂತಿಯಿಂದ ಕೂಡಿ ಹಾಲುಳ್ಳ ಮರಗಳ ಸಮಿತ್ತಿನಿಂದಲೂ, ಸಾಸವೆ ಮತ್ತು ಆಜ್ಯದಿಂದಲೂ ಅಗ್ನಿಯ ಚಿಹ್ನೆಯುಳ್ಳ ಮಂತ್ರಗಳಿಂದ ಅಗ್ನಿಯಲ್ಲಿ ಹೋಮಿಸಬೇಕು. ಶುಕ್ಲವಸ್ತ್ರಧಾರಿಯಾಗಿಯೂ ಇರಬೇಕು. ಬ್ರಾಹ್ಮಣರಿಗೆ ಸುವರ್ಣ, ಗೋವು, ವಸ್ತ್ರಗಳು, ಭೂಮಿ, ಇವನ್ನು ದಾನಮಾಡಬೇಕು. ಹೀಗೆ ಮಾಡಿದಲ್ಲಿ ಅಗ್ನಿಯ ವಿಕಾರಕ್ಕೆ ಕಾರಣವಾದ ಪಾಪವು ಶಾಂತವಾಗುತ್ತದೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ ಸಂವಾದದಲ್ಲಿ ಭಾರ್ಗವನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ ಔತ್ಪತ್ತಿಕಾಗ್ನಿ ವರ್ಣನವೆಂಬ ನೂರ ಮೂವತ್ತಾರನೆಯ ಅಧ್ಯಾಯ ಮುಗಿದಿದೆ.

|| ಓಂ ||

—: ಶ್ರೀ ಹಯಗ್ರೀವಾಯ ನಮಃ : —

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಸಪ್ತತ್ರಿಂಶದುತ್ತರಶತತಮೋಽಧ್ಯಾಯಃ

|| ಗರ್ಗ ಉವಾಚ ||

**ಪುರೇಷು ಯೇಷು ದೃಶ್ಯಂತೇ ಪಾದಪಾ ದೈವಚೋದಿತಾಃ ।**
**ರುದಂತೋ ವಾ ಹಸಂತೋ ವಾ ಸ್ರವಂತೋ ವಾ ಬಹೂನ್ರಸಾನ್ || ೧ ||**

**ಅರೋಗಾ ವಾ ವಿನಾ ವಾತಂ ಶಾಖಾಂ ಮುಂಚಂತ್ಯಸಂಭ್ರಮಾತ್ ।**
**ಫಲಪುಷ್ಪಂ ತಥಾ ಬಾಲಾ ದರ್ಶಯಂತಿ ತ್ರಿಹಾಯನಾಃ || ೨ ||**

**ಪೂರ್ವಾವಸ್ಥಾಂ ದರ್ಶಯಂತಿ ಫಲಪುಷ್ಪಮನಾರ್ತವೇ ।**
**ಕ್ಷೀರಂ ಸ್ನೇಹಂ ಸುರಾಂ ರಕ್ತಂ ಮಧು ತೋಯಂ ಸ್ರವಂತಿ ಚ || ೩ ||**

---

### ನೂರ ಮೂವತ್ತೇಳನೇ ಅಧ್ಯಾಯ

೧–೩. ಗರ್ಗಮುನಿಯು ಹೇಳುತ್ತಾನೆ. ಯಾವ ಊರುಗಳಲ್ಲಿ ದೈವ ಪ್ರಯತ್ನದಿಂದಲೇ ಹುಟ್ಟಿ ಬೆಳೆದಿರುವ ಮರಗಳು ಅಳುತ್ತಲೂ, ನಗುತ್ತಲೂ, ತನ್ನಲ್ಲಿರುವ ರಸವನ್ನು ಸುರಿಸುತ್ತಲೂ ಕಾಣಬರುತ್ತವೆಯೋ ಮತ್ತು ಯಾವ ರೋಗವೂ ಇಲ್ಲದಿದ್ದರೂ ತನ್ನ ಕೊಂಬೆಗಳನ್ನು ತಾನು ಧರಿಸದೇ ಕೆಳಕ್ಕೆ ಕೆಡಹುತ್ತವೆಯೋ ಮತ್ತು ಸಣ್ಣಮರಗಳು ಮೂರುವರ್ಷವಾಗಿರುವಾಗಲೇ ಫಲಪುಷ್ಪ ಗಳನ್ನ ತೋರಿಸುತ್ತವೆಯೋ ತನ್ನ ಪೂರ್ವಾವಸ್ಥೆಯನ್ನು ತೋರಿಸುತ್ತವೆಯೋ ಋತುನಿಯಮವಿಲ್ಲದೆ ಫಲಪುಷ್ಪಗಳನ್ನು ತೋರಿಸುತ್ತವೆಯೋ, ಹಾಲನ್ನೂ, ಸ್ನೇಹ ವನ್ನೂ, ಮದ್ಯವನ್ನೂ ರಕ್ತವನ್ನೂ, ಜೇನನ್ನೂ ನೀರನ್ನೂ ನಹ ತನ್ನಷ್ಟಕ್ಕೆ ತಾನೇ ಹೊರಗೆ ಸುರಿಸುವುವೋ.

ಶುಷ್ಕಂತ್ಯರೋಗಾಃ ಸಹಸಾ ಶುಷ್ಕಾ ರೋಹಂತಿ ವಾ ಪುನಃ ।
ಉತ್ತಿಷ್ಠಂತೀಹ ಪತಿತಾಃ ಪತಂತಿ ಚ ತಥೋತ್ಥಿತಾಃ ॥ ೪ ॥

ತತ್ರ ವಕ್ಷ್ಯಾಮಿ ತೇ ಬ್ರಹ್ಮನ್ ವಿಪಾಕೇ ಫಲಮೇವ ಚ ।
ರೋದನೇ ವ್ಯಾಧಿಮಾಖ್ಯಾತಿ ಹಸನೇ ದೇಶವಿಪ್ಲವಂ ॥ ೫ ॥

ಶಾಖಾಪ್ರಪತನಂ ಕುರ್ಯಾತ್ಸಂಗ್ರಾಮೇ ಯೋಧಪಾತನಂ ।
ಬಾಲಾನಾಂ ಮರಣಂ ಕುರ್ಯಾದ್ಬಾಲಾನಾಂ ಫಲಪುಷ್ಪತಾ ॥ ೬ ॥

ಸ್ವರಾಷ್ಟ್ರಭೇದಂ ಕುರುತೇ ಫಲಪುಷ್ಪಮನಾರ್ತವಂ ।
ಕ್ಷಯಂ ಸರ್ವತ್ರಗೇ ಕ್ಷೀರೇ ಸ್ನೇಹೇ ದುರ್ಭಿಕ್ಷಲಕ್ಷಣಂ ॥ ೭ ॥

ವಾಹನಾಪಚಯಂ ಮದ್ಯೇ ರಕ್ತೇ ಸಂಗ್ರಾಮಮಾದಿಶೇತ್ ।
ಮಧುಸ್ರಾವೇ ಭವೇದ್ವ್ಯಾಧಿ ಜಲಸ್ರಾವೇ ನ ವರ್ಷತಿ ॥ ೮ ॥

---

೪-೬. ಮತ್ತು ಯಾವ ರೋಗವೂ ಇಲ್ಲದಿದ್ದರೂ ಜಾಗ್ರತೆಯಾಗಿ ಒಣಗು ಹೋದ. ತನ್ನಾಗಿ ಒಣಗಿದ ಮರವೂ ಸಹ ಪುನಃ ಚಿಗುರಿ ಬೆಳೆಯುವುದು. ಕೆಳಕ್ಕೆ ಬಿದ್ದ ಮರಗಳೂ ಪುನಃ ಮೇಲಕ್ಕೇಳುವುದು. ಇಂತಹ ಉತ್ಪಾತಗಳುಂಟಾದಲ್ಲಿ ಅವುಗಳ ಪರಿಪಾಕರೂಪವಾದ ಫಲಗಳನ್ನೂ ನಿನಗೆ ಹೇಳುತ್ತೇನೆ. ಮರಗಳು ಅಳುವುದರಿಂದ ದೇಶಕ್ಕೆ ವ್ಯಾಧಿಯೂ, ನಗುವುದರಿಂದ ದೇಶಕ್ಕೆ ಇತರರಿಂದ ತೊಂದರೆಯೂ ಆಗುತ್ತವೆ. ತನ್ನಷ್ಟಕ್ಕೆ ತಾನೇ ಕೊಂಬೆಗಳು ಉದುರಿದಲ್ಲಿ ಅದು ಯುದ್ಧದಲ್ಲಿ ಉಂಟಾಗುವ ಯೋಧರ ನಾಶಕ್ಕೆ ಸೂಚಕವಾಗುತ್ತದೆ. ಸಣ್ಣ ಸಸಿಗಳ ಫಲಪುಷ್ಪಗಳನ್ನು ಹೊಂದಿದಲ್ಲಿ ಅವು ಬಾಲಕರ ಮರಣಕ್ಕೆ ಸೂಚಕವಾಗುತ್ತವೆ.

೭-೮. ಋತುಸಂಬಂಧವಿಲ್ಲದಿರುವ ಫಲಪುಷ್ಪಗಳು ರಾಷ್ಟ್ರಭೇದಕ್ಕೆ ಸೂಚಕವಾಗುತ್ತವೆ. ಎಲ್ಲಾ ಭಾಗದಲ್ಲಿಯೂ ಹಾಲುಸುರಿಯುತ್ತಿದ್ದಲ್ಲಿ ಅದು ರಾಷ್ಟ್ರದ ಕ್ಷಯಕ್ಕೂ ಸ್ನೇಹವು ಸುರಿಯುತ್ತಿದ್ದಲ್ಲಿ ಅದು ದುರ್ಭಿಕ್ಷಕ್ಕೂ ಕಾರಣವಾಗುತ್ತದೆ. ಮದ್ಯವನ್ನು ಸುರಿಸಿದಲ್ಲಿ ಅದು ವಾಹನಗಳ ನಾಶಕ್ಕೂ, ರಕ್ತವನ್ನು ಸುರಿಸಿದಲ್ಲಿ ಅದು ಮುಂದೆ ಬರುವ ಯುದ್ಧಕ್ಕೂ ಕಾರಣವಾಗುತ್ತದೆ. ಜೇನನ್ನು ಸುರಿಸಿದಲ್ಲಿ ಅದು ದೇಶವ್ಯಾಧಿಗೂ ಜಲವನ್ನು ಸ್ರವಿಸಿದಲ್ಲಿ ಅದು ಅನಾವೃಷ್ಟಿಗೂ ಕಾರಣವಾಗುತ್ತವೆ.

ಅರೋಗಶೋಷಣಂ ಜ್ಞೇಯಂ ಬ್ರಹ್ಮನ್ ದುರ್ಭಿಕ್ಷಲಕ್ಷಣಂ ।
ಶುಷ್ಕೇಷು ಸಂಪ್ರರೋಹತ್ಸು ವೀರ್ಯಮನ್ನಂ ಚ ಹೀಯತೇ || ೯ ||

ಉತ್ಥಾನೇ ಪತಿತಾನಾಂ ಚ ಭಯಂ ಭೇದಕರಂ ಭವೇತ್ ।
ಸ್ಥಾನಾತ್ ಸ್ಥಾನೇ ತು ಗಮನೇ ದೇಶಭಂಗಂ ತಥಾದಿಶೇತ್ || ೧೦ ||

ಜಲ್ಪತ್ಸ್ವಪಿ ಚ ವೃಕ್ಷೇಷು ರುದಸ್ಸ್ವಪಿ ಧನಕ್ಷಯಂ ।
ಏತತ್ಪೂಜಿತವೃಕ್ಷೇಷು ಸರ್ವಂ ರಾಜ್ಞಿ ವಿಪಚ್ಯತೇ || ೧೧ ||

ಪುಷ್ಪೇ ಫಲೇ ವಾ ವಿಕೃತೇ ರಾಜ್ಞೋ ಮೃತ್ಯುಂ ತದಾದಿಶೇತ್ ।
ಅನ್ಯೇಷು ಚೈವಂ ಯುಕ್ತೇಷು ವೃಕ್ಷೋತ್ಪಾತೇಷ್ವತಂದ್ರಿತಃ || ೧೨ ||

ಆಚ್ಛಾದಯಿತ್ವಾ ತಂ ವೃಕ್ಷಂ ಗಂಧಮಾಲ್ಯೈರ್ವಿಭೂಷಯೇತ್ ।
ವೃಕ್ಷೋಪರಿ ತಥಾ ಛತ್ರಂ ಕುರ್ಯಾತ್ತಾಪಪ್ರಶಾಂತಯೇ || ೧೩ ||

---

೯–೧೦. ರೋಗವಿಲ್ಲದಿದ್ದರೂ ತಾನಾಗಿ ಮರಗಳು ಒಣಗಿದಲ್ಲಿ ಅದು ದುರ್ಭಿಕ್ಷಕ್ಕೆ ಲಕ್ಷಣವಾಗುತ್ತದೆ. ಒಣಗಿರುವ ಮರಗಳು ಪುನಃ ಚಿಗುರಿ ಬೆಳೆದಲ್ಲಿ ದೇಶದ ಅನ್ನ ಮತ್ತು ಜನಗಳ ವೀರ್ಯಸಂಪತ್ತು ಇವು ನಷ್ಟವಾಗುತ್ತವೆ. ಬಿದ್ದ ಮರಗಳು ತಾನಾಗಿಯೇ ಎದ್ದುನಿಂತಲ್ಲಿ ಅದರಿಂದ ದೇಶಭೇದಕ್ಕೆ ಕಾರಣವಾದ ಮಹಾ ಭಯವೇ ಉಂಟಾಗುತ್ತದೆ. ಮರಗಳು ಒಂದು ಕಡೆಯಿಂದ ಮತ್ತೊಂದು ಸ್ಥಳಕ್ಕೆ ಚಲಿಸಿದಲ್ಲಿ ಅದೂದೇಶಭಂಗಕ್ಕೆ ಕಾರಣವಾಗುತ್ತದೆ.

೧೧–೧೨. ಮರಗಳು ಪರಸ್ಪರವಾಗಿ ಮಾತನಾಡಿಕೊಂಡರೂ, ಅತ್ತರೂ ಸಹ ಧನಕ್ಷಯವುಂಟಾಗುತ್ತದೆ. ಈವಿಕಾರಗಳೆಲ್ಲವೂ ಉತ್ತಮವೃಕ್ಷಗಳಲ್ಲಿ ಅಥವಾ ಜನರಿಂದ ಪೂಜಿಸಲ್ಪಡುವ ಅಶ್ವತ್ಥಮೊದಲಾದ ವೃಕ್ಷಗಳಲ್ಲಿ ಉಂಟಾದರೆ ಇವುಗಳ ಫಲವು ರಾಜನಲ್ಲಿ ಪರ್ಯವಸಾನ ಹೊಂದುತ್ತದೆ. ಹೂವುಗಳೂ, ಫಲಗಳೂ ಸ್ವಾಭಾವಿಕಸ್ಥಿತಿಯನ್ನು ಬಿಟ್ಟು ವಿಕಾರಹೊಂದಿದಲ್ಲಿ ಅದೂ ಸಹ ರಾಜನಿಗೇ ಮೃತ್ಯುಪ್ರದವಾಗಿ ಪರಿಣಮಿಸುತ್ತದೆ. ಇದೇರೀತಿಯಾದ ಬೇರೆಉತ್ಪಾತಗಳು ಮರಗಳಲ್ಲಿ ಕಂಡುಬಂದಲ್ಲಿ ಜಾಗರೂಕನಾಗಿ ಆಮರಗಳಲ್ಲಿರುವ ವಿಕಾರಸ್ಥಾನಗಳನ್ನು ವಸ್ತ್ರಾದಿಗಳಿಂದ ಮುಚ್ಚಿ ಗಂಧಪುಷ್ಪಾದಿಗಳಿಂದ ಅದನ್ನು ಪೂಜಿಸಬೇಕು

೧೩ ೧೪ ಮರದ ಮೇಲೆ ತಾಪದ ಶಾಂತಿಗಾಗಿ ಛತ್ರಿಯನ್ನು ಧರಿಸಬೇಕು. ರುದ್ರನನ್ನು ವಿಶೇಷವಾಗಿ ಪೂಜಿಸಿ ಅವನಿಗೆ ಪಶುವನ್ನು ಅರ್ಪಿಸಬೇಕು. ಮೂಲೇಭ್ಯಃ

ಶಿವಮಭ್ಯರ್ಚಯೇದ್ದೇವಂ ಪಶುಂ ಚಾಸ್ಮೈ ನಿವೇದಯೇತ್ ।
ಮೂಲ್ಯೇಭ್ಯ ಇತಿ ಷಣ್ಮಾಸಾನ್ ಹುತ್ವಾ ರುದ್ರೀಂ ಜಪೇತ್ತಥಾ ॥ ೧೪ ॥

ಮಧ್ವಾಜ್ಯಯುಕ್ತೇನ ತು ಪಾಯಸೇನ
ಸಂಪೂಜ್ಯ ವಿಪ್ರಾಂಶ್ಚ ಭುವಂ ಚ ದದ್ಯಾತ್ ।
ಗೀತೇನ ನೃತ್ಯೇನ ತಥಾರ್ಚಯೇತ
ದೇವಂ ಭವಂ ಪಾಪವಿನಾಶಹೇತೋಃ ॥ ೧೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ಔತ್ಪಾತಿಕವೃಕ್ಷವೈಕೃತ್ಯವರ್ಣನೋ ನಾಮ
ಸಪ್ತತ್ರಿಂಶದುತ್ತರಶತತಮೋಽಧ್ಯಾಯಃ

---

ಎಂಬ ಮಂತ್ರದಿಂದ ಆರು ಉದ್ದನ್ನು ಹೋಮಮಾಡಿ ರುದ್ರಸೂಕ್ತವನ್ನೂ ಜಪಿಸ ಬೇಕು ಜೇನು, ಆಜ್ಯ ಮೊದಲಾದುವುಗಳಿಂದ ಸಂಸ್ಕರಿಸಲ್ಪಟ್ಟ ಪಾಯಸದಿಂದ ಬ್ರಾಹ್ಮಣರನ್ನು ಆರಾಧಿಸಿ ಭೂಮಿಯನ್ನೂ ದಾನಮಾಡಬೇಕು. ರುದ್ರದೇವನನ್ನು ಗೀತ, ನರ್ತನಾದಿಗಳಿಂದ ಸಂತೋಷಪಡಿಸಿ ಪೂಜಿಸಬೇಕು. ಇದರಿಂದ ಇಂತಹ ಉತ್ಪಾತಕ್ಕೆ ಕಾರಣವಾದ ಪಾಪವು ನಾಶಹೊಂದುತ್ತದೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ
ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ
ಔತ್ಪಾತಿಕವಾದ ವೃಕ್ಷವಿಕಾರ ವರ್ಣನವೆಂಬ ನೂರ ಮೂವತ್ತೇಳನೆಯ
ಅಧ್ಯಾಯವು ಮುಗಿದಿದೆ.



|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

# ದ್ವಿತೀಯಖಂಡೇ

---

## ಅಷ್ಟತ್ರಿಂಶದುತ್ತರಶತತಮೋಽಧ್ಯಾಯಃ

|| ಗರ್ಗ ಉವಾಚ ||

ಅತಿವೃಷ್ಟಿರನಾವೃಷ್ಟಿರ್ದುರ್ಭಿಕ್ಷಾಯೋಭಯಂ ಮತಂ ।
[1]ಅನೃತೇ ಭ್ರದಿನೇ ರಿಕ್ತಾ ವೃಷ್ಟಿರ್ಜ್ಞೇಯಾ ಭಯಾವಹಾ || ೧ ||

ಅನಭ್ರೇ ವಿಕೃತಾ ಚೈವ ವಿಜ್ಞೇಯಾ ರಾಜಮೃತ್ಯವೇ ।
ಶೀತೋಷ್ಣತಾವಿಪರ್ಯಾಸೇ ಜಂತೂನಾಂ ರಿಪುಜಂ ಭಯಂ || ೨ ||

---

## ನೂರ ಮೂವತ್ತೆಂಟನೇ ಅಧ್ಯಾಯ.

೧–೨. ಪುನಃ ಗರ್ಗಮುನಿಯು ಹೇಳುತ್ತಾನೆ. ಅತಿವೃಷ್ಟಿ, ಅನಾವೃಷ್ಟಿ ಇವೆರಡೂ ದುರ್ಭಿಕ್ಷಲಕ್ಷಣವೆಂದು ತಿಳಿಯಬೇಕು. ಋತುನಿಯಮವನ್ನತಿಕ್ರಮಿಸಿ ಹಗಲಿನಲ್ಲಿ ಹೆಚ್ಚಾಗಿ ಮಳೆ ಬಂದಲ್ಲಿ ಅದು ದೇಶಕ್ಕೆ ಭಯಪ್ರದವಾದದ್ದು. ಆಕಾಶದಲ್ಲಿ ಮೋಡವಿಲ್ಲದಿದ್ದರೂ. ವಿಕಾರದಿಂದ ಮಳೆ ಸುರಿದಲ್ಲಿ ರಾಜನ ಮೃತ್ಯುವಿಗೆ ಕಾರಣವಾಗುತ್ತದೆ. ಋತುನಿಯಮಕ್ಕೆ ವಿರುದ್ಧವಾಗಿ ಶೀತೋಷ್ಣಾದಿಗಳು ವ್ಯತ್ಯಾಸ ಹೊಂದಿದಲ್ಲಿ ಪ್ರಾಣಿಗಳಿಗೆ ಶತ್ರುಗಳಿಂದ ಭಯ ಉಂಟಾಗುತ್ತದೆ ಎಂದು ತಿಳಿಯಬೇಕು. ಯಾವ ದೇಶದಲ್ಲಿ ಮೇಘವು ರಕ್ತವನ್ನೇ ಮಳೆಗರೆಯುತ್ತದೆಯೋ ಆ ದೇಶದಲ್ಲಿ ಶಸ್ತ್ರಗಳಿಂದ ಭಯವು ತಪ್ಪಿದ್ದಲ್ಲ.

---

1 ಅನೃತೌ ತುದಿವಾನಂತಾವೃಷ್ಟಿಃ ಎಂದು ಶಾಂತಿಸಾರದಲ್ಲಿರುವ ಪಾಠ.

ಶೋಣಿತಂ ವರ್ಷತೇ ಯತ್ರ ತತ್ರ ಶಸ್ತ್ರಭಯಂ ಭವೇತ್ ।
ಅಂಗಾರಪಾಂಸುವರ್ಷೇಣ ನಗರಂ ತದ್ವಿನಶ್ಯತಿ ॥ ೩ ॥

ಮಜ್ಜಾಸ್ಥಿಸ್ನೇಹಮಾಂಸಾನಾಂ ಜನಮಾರಭಯಂ ಭವೇತ್ ।
ಫಲಪುಷ್ಪೇ ತಥಾ ಧಾನ್ಯಂ ಹಿರಣ್ಯಾದಿ ಭಯಾಯ ತು ॥ ೪ ॥

ಪಾಂಸುಜಂತೂಪಲಾನಾಂ ತು ವರ್ಷಣೇ ರೋಗಜಂ ಭಯಂ ।
[1]ಛಿದ್ರಾಣಾಂ ತು ಪ್ರವರ್ಷೇ ಚ ಸಸ್ಯಾನಾಮೀತಿ ವರ್ಧನಂ ॥ ೫ ॥

ನಿರಜಸ್ಕೇ ರವೌ ವ್ಯಭ್ರೇ ಯದಾ ಛಾಯಾ ನ ದೃಶ್ಯತೇ ।
ದೃಶ್ಯತೇ ತು ಪ್ರತೀಪಾ ವಾ ತತ್ರ ದೇಶಭಯಂ ಭವೇತ್ ॥ ೬ ॥

ನಿರಭ್ರೇ ಚಾಥ ರಾತ್ರೌ ವಾ ಶ್ವೇತಂ ಯಾಮ್ಯೋತ್ತರೇಣ ತು ।
ಇಂದ್ರಾಯುಧಂ ತದಾ ದೃಷ್ಟ್ವಾ ಉಲ್ಕಾಪಾತಾಂಸ್ತಥೈವ ಚ ॥ ೭ ॥

೩-೫. ಬೆಂಕಿಯ ಕೆಂಡ ಮತ್ತು ಧೂಳಿಗಳನ್ನು ಮಳೆಗರೆದುದೇ ಆದರೆ ಆ ನಗರವೇ ನಾಶವಾಗುತ್ತದೆ. ಮಜ್ಜಾ ಎಂಬ ಧಾತು, ಅಸ್ಥಿಗಳು, ಸ್ನೇಹ ಮಾಂಸಗಳು ಇವುಗಳನ್ನು ಮಳೆಗರೆದಲ್ಲಿ ಜನಗಳ ಮರಣಭಯವು ಹೆಚ್ಚಾಗುತ್ತದೆ. ಫಲಪುಷ್ಪಗಳನ್ನೂ ಧಾನ್ಯ, ಹಿರಣ್ಯ ಇವನ್ನು ಮಳೆಗರೆದದ್ದೇ ಆದರೆ ಅದೂ ದೇಶಕ್ಕೆ ಭಯಪ್ರದವೇ ಆಗುತ್ತದೆ. ಧೂಳಿಗಳು, ಸಣ್ಣ ಪ್ರಾಣಿಗಳು ಮತ್ತು ಶಿಲೆಗಳು ಇವುಗಳ ವೃಷ್ಟಿಯುಂಟಾದಲ್ಲಿ ರೋಗಭಯ ಉಂಟಾಗುತ್ತದೆ. ಮತ್ತು ದೇಶದಲ್ಲಿ ಒಡಕು ಉಂಟಾಗುತ್ತದೆ. ಅನ್ನವೇ ವೃಷ್ಟಿಯಲ್ಲಿ ಬಿದ್ದಲ್ಲಿ ಸಸ್ಯಗಳಿಗೆ ಈತಿ ಬಾಧೆ ಯುಂಟಾಗುತ್ತದೆ.

೬-೭. ಧೂಳಿಗಳಿಂದ ಸೂರ್ಯನು ಮುಚ್ಚಲ್ಪಡದಿರುವಾಗಲೂ, ಮೇಘ ಗಳಿಂದಲೂ ಆಚ್ಛಾದಿಸಲ್ಪಡದೆ ಇರುವಾಗಲೂ ಸಹ ಸೂರ್ಯನಿಂದ ಛಾಯೆಯೇ ಬೀಳುವುದಿಲ್ಲವೋ ಬಿದ್ದರೂ ಸಹ ತಲೆಕೆಳಗಾಗಿ ಬೀಳುತ್ತದೆಯೋ ಅಂತಹ ಸಂದರ್ಭ ದಲ್ಲಿ ದೇಶಕ್ಕೆ ಭಯ ಉಂಟಾಗುತ್ತದೆ. ರಾತ್ರಿಯಲ್ಲಿ ಮೇಘಗಳಿಲ್ಲದಿರುವಾಗ ಬಿಳುಪಾದ ಕಾಮನಬಿಲ್ಲು ದಕ್ಷಿಣೋತ್ತರವಾಗಿ ಹರಡಿರುವುದನ್ನೂ ಮತ್ತು ಉಲ್ಕಾ

---

1 ಛಿದ್ರಂವಾನ್ನಪ್ರವರ್ಷೇಣ ಎಂದು ಶಾಸ್ತ್ರಿ ಸಾರದಲ್ಲಿರುವ ಪಾಠ.

ದಿಗ್ದಾಹಪರಿವೇಷೌ ವಾ ಗಂಧರ್ವನಗರಂ ತಥಾ ।
ಪರಚಕ್ರಭಯಂ ಬ್ರೂಯಾದ್ದೇಶೋಪದ್ರವಮೇವ ವಾ  ॥ ೮ ॥

ಸೂರ್ಯೇಂದುಪರ್ಜನ್ಯಸಮೀರಣಾನಾಂ
ಯಾಗಸ್ತು ಕಾರ್ಯೋ ವಿಧಿವದ್ದ್ವಿಜೇಂದ್ರ ।
ಧಾನ್ಯಾನ್ನಗೋಕಾಂಚನದಕ್ಷಿಣಾಶ್ಚ
ದೇಯಾದ್ದ್ವಿಜಾನಾಂ ಭಯನಾಶಹೇತೋಃ  ॥ ೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ಔತ್ಪತ್ತಿಕೇಷುವೃಷ್ಟಿವೈಕೃತ್ಯವರ್ಣನೋ
ನಾಮಾಷ್ಟತ್ರಿಂಶದುತ್ತರಶತತಮೋಽಧ್ಯಾಯಃ

---

ಪಾತ (ಕೊಳ್ಳಿ) ಗಳನ್ನೂ ದಿಕ್ಕುಗಳಲ್ಲಿ ಅಗ್ನಿಯನ್ನೂ, ಪರಿವೇಷವನ್ನೂ. ಗಂಧರ್ವ ನಗರವನ್ನೂ ಸಹ ಕಂಡಲ್ಲಿ ದೇಶಕ್ಕೆ ಶತ್ರುಸೈನ್ಯದಿಂದ ಭಯವೂ, ದೇಶೋಪ ದ್ರವಗಳೂ ಸಹ ಉಂಟಾಗುತ್ತವೆ.

೮. ಇಂತಹ ಸಂದರ್ಭದಲ್ಲಿ ಸೂರ್ಯ, ಚಂದ್ರ, ಮೇಘ, ವಾಯು, ಇವರ ತೃಪ್ತಿಗಾಗಿ ಯಥಾವಿಧಿಯಾಗಿ ಯಾಗವನ್ನು ಮಾಡಬೇಕು. ಧಾನ್ಯ, ಅನ್ನ, ಗೋವು, ಸುವರ್ಣ ಮುಂತಾದ ದಕ್ಷಿಣೆಯಿಂದ ಬ್ರಾಹ್ಮಣರನ್ನು ಸಂತೋಷಪಡಿಸ ಬೇಕು ಹೀಗೆ ಮಾಡಿದಲ್ಲಿ ಶಮನವಾಗುತ್ತದೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ ಸಂವಾದ
ದಲ್ಲಿ ಭಾರ್ಗವನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ
ಔತ್ಪತ್ತಿಕವೃಷ್ಟಿವಿಕಾರ ವರ್ಣನವೆಂಬ ನೂರ ಮೂವತ್ತೆಂಟನೆಯ
ಅಧ್ಯಾಯವು ಮುಗಿದಿದೆ.



|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಏಕೋನಚತ್ವಾರಿಂಶದುತ್ತರಶತತಮೋಽಧ್ಯಾಯಃ

|| ಗರ್ಗ ಉವಾಚ ||

**ನಗರಾದಪಸರ್ಪಂತಿ ಸಮೀಪಮುಪಯಾಂತಿ ವಾ |**
**ಅಶೋಷ್ಯಾ ಅಪಿ ಶುಷ್ಯಂತಿ ಸಮೀಪಂ ಪ್ರವಹಂತಿ ವಾ || ೧ ||**

**ನದ್ಯೋ ನದಪ್ರಸ್ರವಣಾ ವಿಸರಾಶ್ಚ ಭವಂತಿ ಚೇತ್ |**
**ವಿವರ್ಣಂ ಕಲುಷಂ ತಪ್ತಂ ಫೇನಾವರ್ತಂ ತು ಸಂಕುಲಂ || ೨ ||**

**ಕ್ಷೀರಂ ಸ್ನೇಹಂ ಸುರಾಂ ರಕ್ತಂ ವಹನ್ತೇ ವ್ಯಾಕುಲೋದಕಾಃ |**
**ಷಣ್ಮಾಸಾಭ್ಯಂತರೇ ತತ್ರ ಪರಚಕ್ರಭಯಂ ಭವೇತ್ || ೩ ||**

---

### ನೂರ ಮೂವತ್ತೊಂಭತ್ತನೇ ಅಧ್ಯಾಯ.

೧-೩. ಗರ್ಗಮುನಿಯು ಪುನಃ ಹೇಳುತ್ತಾನೆ. ನದಿಗಳು, ನದಗಳು, ಹರಿಯುವ ಪರ್ವತ ಝರಿಗಳು ಇವು ನಗರದ ಸಮೀಪದಿಂದ ದೂರಕ್ಕೆ ಸರಿಯುವಿಕೆ, ದೂರದಲ್ಲಿದ್ದರೂ ಹತ್ತಿರಕ್ಕೆ ಬರುವಿಕೆ, ಹೆಚ್ಚಾಗಿ ನೀರಿದ್ದರೂ ಒಣಗಿ ಬತ್ತಿ ಹೋಗುವಿಕೆ, ದೂರದಲ್ಲಿದ್ದರೂ ಹತ್ತಿರದಲ್ಲಿ ಹರಿಯುವಿಕೆ, ಎಲ್ಲವೂ ಒಟ್ಟುಗೂಡಿ ಒಂದಾಗುವಿಕೆ, ವರ್ಣವ್ಯತ್ಯಾಸದಿಂದಲೂ ಕದಡಲ್ಪಟ್ಟೂ ಮತ್ತು ಬೆಚ್ಚಗೂ, ಸುತ್ತು ಸುತ್ತಾಗಿರುವ ನೊರೆಗಳಿಂದ ಕೂಡಿಯೂ, ಬಹಳ ವೇಗದಹರಿಯುವಿಕೆಯಿಂದ ಕೂಡಿದ್ದಲ್ಲಿಯೂ ಮತ್ತು ಹಾಲು, ಜಿಡ್ಡು, ಮದ್ಯ, ರಕ್ತ ಇವುಗಳನ್ನು ಹೊಂದಿ

**ಜಲಾಶಯಾ ನದಂತೇ ವಾ ಪ್ರಜ್ವಲಂತಿ ಕ್ವಥಂತಿ ವಾ ।**
**ವಿಮುಂಚತೇऽಥವಾ ಬ್ರಹ್ಮನ್ ಜ್ವಾಲಾಧೂಮಂ ರಜಾಂಸಿ ಚ ॥ ೪ ॥**

**ಅಖಾತೇ ವಾ ಜಲೋತ್ಪತ್ತಿಃ ಸಸತ್ವಾ ವಾ ಜಲಾಶಯಾಃ ।**
**ಸಂಗೀತಶಬ್ದಾ ದೃಶ್ಯಂತೇ ಜನಮಾರಭಯಂ ವದೇತ್ ॥ ೫ ॥**

**ಜಲಾಶಯಾನಾಂ ವೈಕೃತ್ಯೇ ಸಂಯತಸ್ತು ಜಲಾಶಯೇ ।**
**ಸ್ಥಾಲೀಪಾಕೇನ ಪಶುನಾ ವರುಣಂ ಪೂಜಯೇದ್ದ್ವಿಜ ॥ ೬ ॥**

**ದಿವ್ಯಮಂಭಃ ಪಯಃ ಸರ್ಪಿರ್ಮಧು ಚಾತ್ರಾವಸೇಚನಂ ।**
**ಜಪ್ತವ್ಯಾ ವಾರುಣಾ ಮಂತ್ರಾಃ ತೈಶ್ಚ ಹೋಮೋ ಜಲೇ ಭವೇತ್ ॥ ೭ ॥**

---

ಬಹಳ ಅಸಹ್ಯವಾದ ನೀರಿನಿಂದ ಕೂಡಿದ್ದಲ್ಲಿಯೂ ಸಹ ಆರು ತಿಂಗಳೊಳಗೆ ಅಲ್ಲಿ ಶತ್ರುಸೈನ್ಯದಿಂದ ಭಯವು ತಪ್ಪಿದ್ದಲ್ಲ.

೪–೫. ಜಲಾಶಯಗಳು ಹೆಚ್ಚಾಗಿ ಗರ್ಜಿಸುವುದು ಮತ್ತು ಜ್ವಲಿಸುವುದು, ನೀರು ಕುದಿಯುವುದು, ಜ್ವಾಲೆಯಿಂದ ಕೂಡಿದ ಹೊಗೆಯನ್ನೂ, ಧೂಳಿಗಳನ್ನೂ, ಹೊರಗೆಡಹುವುದು ಮತ್ತು ನೆಲವನ್ನು ಅಗೆಯದಿದ್ದರೂ ನೀರು ಉದ್ಭವಿಸುವುದು, ಜಲಾಶಯದ ನೀರಿನಲ್ಲಿ ಅನೇಕ ಪ್ರಾಣಿಗಳು ಸೇರಿರುವುದು ಮತ್ತು ನೀರಿನಲ್ಲಿ ಸಂಗೀತ ಶಬ್ದವು ಕೇಳಿಬರುವುದು ಇಂತಹ ಉತ್ಪಾತಗಳೆಲ್ಲವೂ ಜನಗಳ ಮರಣಕ್ಕೆ ಕಾರಣವಾದ ಮಹಾಭಯವನ್ನು ಸೂಚಿಸುತ್ತವೆ.

೬-೭. ಜಲಾಶಯಗಳಲ್ಲಿ ಈ ವಿಧವಾದ ವಿಕಾರಗಳು ಕಂಡುಬಂದಲ್ಲಿ ಜಿತೇಂದ್ರಿಯನಾದ ಪುರೋಹಿತನು ಜಲಾಶಯದಲ್ಲಿಯೇ ಸ್ಥಾಲೀಪಾಕವನ್ನು ಪಶುವಿನಿಂದ ಏರ್ಪಡಿಸಿ ವರುಣನನ್ನು ಯಥಾವಿಧಿಯಾಗಿ ಪೂಜಿಸಬೇಕು. ಆಕಾಶದಲ್ಲೇ ಉದ್ಭವಿಸಿದ ದಿವ್ಯತೀರ್ಥ, ಹಾಲು, ಘೃತ, ಜೇನು ಮುಂತಾದುವುಗಳಿಂದ ಜಲಾಶಯಗಳನ್ನು ಸೇಚನಮಾಡಬೇಕು. ವಾರುಣಮಂತ್ರಗಳನ್ನು ಜಪಿಸಬೇಕು. ಆ ಮಂತ್ರಗಳಿಂದಲೇ ಜಲದಲ್ಲಿ ಹೋಮವನ್ನೂ ಮಾಡಬೇಕು.

ಮಧ್ವಾಜ್ಯಯುಕ್ತಂ ಪರಮಾನ್ನಮತ್ರ
ದೇಯಂ ದ್ವಿಜಾನಾಂ ದ್ವಿಜ ಭೋಜನಾರ್ಥೇ ।
ಗಾವಶ್ಚ ದೇಯಾ ದ್ವಿಜ ವಸ್ತ್ರಯುಕ್ತಾಃ
ತಥೋದಕುಂಭಾಃ ಸಕಲಾಂಗಶಾಂತ್ಯೈ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯವ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ಜಲವೈಕೃತವರ್ಣನೋ ನಾಮ
ಏಕೋನಚತ್ವಾರಿಂಶದುತ್ತರಶತತಮೋಽಧ್ಯಾಯಃ

---

೮. ಈ ಶಾಂತಿಕರ್ಮದಲ್ಲಿ ಜೇನು ಆಜ್ಯ ಇವುಗಳಿಂದ ಕೂಡಿದ ಪರಮ ದಿಂಗ ಬ್ರಾಹ್ಮಣರ ಭೋಜನವನ್ನು ಮಾಡಿಸಬೇಕು. ವಸ್ತ್ರಗಳಿಂದ ಅಲಂಕರಿಸ ಗೋವುಗಳನ್ನೂ ಉದಕುಂಭಗಳನ್ನೂ ದಾನಮಾಡಬೇಕು. ಇದರಿಂದ ಈ ಕವ ಅಂಗವೆಲ್ಲವೂ ಪೂರ್ಣವಾಗಿ ಶಾಂತಿಯು ಫಲಪ್ರದವಾಗಿ ಪರಿಣಮಿಸುತ್ತದೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದ ಮಾರ್ಕಂಡೇಯ ಸಂವಾದ
ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ
ಜಲವೈಕೃತವರ್ಣನವೆಂಬ ನೂರ ಮೂವತ್ತೊಂಭತ್ತನೆಯ
ಅಧ್ಯಾಯವು ಮುಗಿದಿದೆ.



॥ ಓಂ ॥

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

### ಚತ್ವಾರಿಂಶದುತ್ತರಶತತಮೋಽಧ್ಯಾಯಃ

॥ ಗರ್ಗ ಉವಾಚ ॥

[1]ಕಾಲಪ್ರಸವನಾ ನಾರ್ಯಃ ಕಾಲಾತೀತಾಃ ಪ್ರಜಾಸ್ತಥಾ ।
ವಿಕೃತಪ್ರಸವಾಶ್ಚೈವ ಯುಗ್ಮಪ್ರಸವಿಕಾಸ್ತಥಾ ॥ ೧ ॥

ಅಮಾನುಷಾ ಅರುಂಡಾಶ್ಚ ಸಂಜಾತವ್ಯಸನಾಸ್ತಥಾ ।
ಹೀನಾಂಗಾ ಅಧಿಕಾಂಗಾಶ್ಚ ಜಾಯಂತೇ ಯದಿ ವಾ ಸ್ತ್ರಿಯಃ ॥ ೨ ॥

ಪಶವಃ ಪಕ್ಷಿಣಶ್ಚೈವ ತಥಾ ಚೈವ ಸರೀಸೃಪಾಃ ।
ವಿನಾಶಂ ತಸ್ಯ ದೇಶಸ್ಯ ಕುಲಸ್ಯಾಪಿ ವಿನಿರ್ದಿಶೇತ್ ॥ ೩ ॥

---

### ನೂರ ನಲವತ್ತನೆಯ ಅಧ್ಯಾಯ.

೧–೩. ಅಕಾಲದಲ್ಲಿ ಸ್ತ್ರೀಯರು ಪ್ರಸವ ಹೊಂದುವುದು ಮತ್ತು ಕಾಲಾತೀತ ವಾಗಿ ಜನಿಸುವ ಪ್ರಜೆಗಳು ಅವಲಕ್ಷಣವಾದ ಪ್ರಸವ, ಅವಳಿಯ ಪ್ರಸವ, ಮನುಷ್ಯರಲ್ಲದ ಪ್ರಾಣಿಗಳಂತೆ ಶಿಶುಗಳು ಹುಟ್ಟುವುದು, ತಲೆ ಇಲ್ಲದ ದೇಹಮಾತ್ರ ಜನಿಸುವುದು, ಹುಟ್ಟಿದೊಡನೆಯೇ ನಾನಾವಿಧವಾದ ವ್ಯಸನಕ್ಕೀಡಾಗುವುದು, ಅಂಗ ವೈಕಲ್ಯದಿಂದಲೂ, ಅಂಗಾಧಿಕ್ಯದಿಂದಲೂ ಕೂಡಿರುವ ಸ್ತ್ರೀಪ್ರಜೆಯ ಜನನ, ಪಶು ಪಕ್ಷಿಗಳು, ಸರ್ಪಗಳೂ ಸಹ ಈ ರೀತಿ ಜನಿಸುವುದು ಇವು ಯಾವದೇಶದಲ್ಲಿ ಉಂಟಾಗುತ್ತದೆಯೋ ಆ ದೇಶಕ್ಕೆ ನಾಶವುಂಟಾಗುತ್ತದೆ. ಮತ್ತು ಆ ಕುಲಕ್ಕೂ ಸಹ ನಾಶವುಂಟಾಗುತ್ತದೆ

---

1 ಅಕಾಲ ಪ್ರಸವಾ ನಾರ್ಯಃ ಎಂದು ಪಾಠವಿರಬೇಕು.

ವಿನಾಸಯೇತ್ತಾನ್ ನೃಪತಿಃ ಸ್ವರಾಷ್ಟ್ರಾತ್
ಪ್ರಿಯಂ ಚ ಪೂಜ್ಯಾಶ್ಚ ತಥಾ ದ್ವಿಜೇಂದ್ರಾಃ ।
ಕಿಮಿಚ್ಛೆಕೈಃ ಬ್ರಾಹ್ಮಣತರ್ಪಣಂ ಚ
ಕಾರ್ಯಂತತಃ ಶಾಂತಿಮುಪೈತಿ ಪಾಪಂ ॥ ೪ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ಸ್ತ್ರೀಪ್ರಸವ ವೈಕೃತವರ್ಣನೋನಾಮ
ಚತ್ವಾರಿಂಶದುತ್ತರಶತತಮೋಽಧ್ಯಾಯಃ

---

೪. ಅಂತಹ ಸ್ತ್ರೀಯರನ್ನು ಧೊರೆಯು ತನ್ನ ದೇಶದಿಂದ ಹೊರಗೆ ಹೊರಡಿಸ ಬೇಕು ಆ ದೋಷದ ಶಾಂತಿಗಾಗಿ ಬ್ರಾಹ್ಮಣರನ್ನು ಪ್ರೀತಿಯಿಂದ ಪೂಜಿಸಬೇಕು ಅವರ ಇಚ್ಛೆಯನ್ನು ಕೇಳಿ ಅದಕ್ಕೆ ತಕ್ಕಂತೆ ಅವರನ್ನು ತೃಪ್ತಿಪಡಿಸಬೇಕು. ಹೀಗೆ ಮಾಡಿದಲ್ಲಿ ಇಂತಹ ಉತ್ಪಾತಕ್ಕೆ ಕಾರಣವಾದ ಪಾಪವು ಶಾಂತಿ ಹೊಂದುತ್ತದೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದ ಮಾರ್ಕಂಡೇಯ ಸಂವಾದದಲ್ಲಿ
ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ
ಸ್ತ್ರೀ ಪ್ರಸವವಿಕಾರ ವರ್ಣನವೆಂಬ ನೂರ ನಲವತ್ತನೆಯ
ಅಧ್ಯಾಯ ಮುಗಿದಿದೆ.



॥ ಓಂ ॥

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಏಕಚತ್ವಾರಿಂಶದುತ್ತರಶತತಮೋಽಧ್ಯಾಯಃ

**॥ ಗರ್ಗ ಉವಾಚ ॥**

**ವಡವಾ ಹಸ್ತಿನೀ ಗೌರ್ವಾ ಯದಿ ಯುಗ್ಮಂ ಪ್ರಸೂಯತೇ ।**
**ವಿಜಾತಂ ವಿಕೃತಂ ವಾಪಿ ಷಡ್ಭಿರ್ಮಾಸೈಃ ಮ್ರಿಯೇತ ವೈ ॥ ೧ ॥**

**ವಿಯೋನಿಷು ಚ ಗಚ್ಛಂತೋ ಮೈಥುನಂ ದೇಶನಾಶನಾಃ ।**
**ಅನ್ಯತ್ರ ವೇಸರೋತ್ಪತ್ತೇಃ ನೃಣಾಂ ಚಾಜಾತಿಮೈಥುನಂ ॥ ೨ ॥**

**ಸರ್ಪಮೂಷಕಮಾರ್ಜಾರ ಮತ್ಸ್ಯಶ್ವಾನೋ ವಿವರ್ಜಿತಾಃ**
**ಜ್ಞೇಯಾ ದುರ್ಭಿಕ್ಷಕರ್ತಾರಃ ಸ್ವಜಾತಿಪಿಶಿತಾಶಿನಃ ॥ ೩ ॥**

---

### ನೂರ ನೆಲವತ್ತೊಂದನೇ ಅಧ್ಯಾಯ.

೧–೩. ಪುನಃ ಗರ್ಗಮುನಿಯು ಹೇಳುತ್ತಾನೆ. ಹೆಣ್ಣು ಕುದುರೆ ಹೆಣ್ಣಾನೆ ಹಸು ಇವುಗಳು ಅವಳಿಯಾದ ಮರಿಗಳನ್ನು ಪ್ರಸವಿಸಿದರೂ ಮತ್ತು ಒಂದೇ ಕಣ್ಣು ಮತ್ತು ಒಂದೇ ಕಿವಿ ಇತ್ಯಾದಿ ವಿಕಾರವುಳ್ಳ ಪ್ರಾಣಿಯನ್ನೂ ಪ್ರಸವಿಸಿದರೂ, ಮತ್ತು ತನ್ನ ಸಜಾತೀಯಗಳಾದ ಹೆಣ್ಣು ಪ್ರಾಣಿಗಳನ್ನು ಬಿಟ್ಟು ವಿಜಾತೀಯವಾದ ಪ್ರಾಣಿಗಳಲ್ಲಿ ಮತ್ತು ಅನಿಯತಕಾಲದಲ್ಲಿ ಮೈಥುನ ಸುಖವನ್ನು ಹೊಂದಿದರೂ ಸಹ ಅದು ಆ ದೇಶಕ್ಕೆ ನಾಶವಾಗುತ್ತದೆ. ಮನುಷ್ಯನು ಅಮಾನುಷ ಜಾತಿಯಲ್ಲಿ

ಅಕಾಲಜಂ ಮದಂ ಘೋರಂ ಚತುಷ್ಪಾನ್ಮೃಗಪಕ್ಷಿಣಾಂ ।
ಅನ್ಯಜಾತಿವದೇತಚ್ಚ ಧೈನ್ವಂ ಶ್ವಾನಂ ವಿಶೇಷತಃ ॥ ೪ ॥

ಅಮಾನುಷಾ ಮಾನುಷವಜ್ಜಲ್ಪಂತಿ ಪ್ರಾಣಿನೋ ಯಥಿ ।
ವಿಕೃತಾ ವಾ ಪ್ರಸೂಯಂತೇ ಪರಚಕ್ರಾಗಮಂ ವದೇತ್ ॥ ೫ ॥

ತ್ಯಾಗೋ ವಿವಾಸನಂ ದಾನಂ ತೇಷಾಂ ಕಾರ್ಯಂ ವಿಜಾನತಾ ।
ತರ್ಪಯೇದ್ಬ್ರಾಹ್ಮಣಾಂಶ್ಚಾತ್ರ ಜಪಹೋಮಾಂಶ್ಚ ಕಾರಯೇತ್ ॥ ೬ ॥

---

ಮೈಥುನವನ್ನು ನಡೆಯಿಸಿದಲ್ಲಿಯೂ, ಮತ್ತು ಹಾವು, ಇಲಿ, ಬೆಕ್ಕು, ಮೀನು, ನಾಯಿ, ಇವು ಹೊರತು ಬೇರೆಯಾದ ಪ್ರಾಣಿಗಳು ಸ್ವಜಾತಿಯ ಮಾಂಸವನ್ನೇ ತಿನ್ನುವಕಾಲದಲ್ಲಿಯೂ ಸಹ ಇವುಗಳಿಂದ ದುರ್ಭಿಕ್ಷವೇ ಉಂಟಾಗುತ್ತದೆ ಎಂದು ತಿಳಿಯಬೇಕು.

೪-೫. ನಾಲ್ಕು ಕಾಲುಳ್ಳ ಮೃಗಗಳಿಗೂ ಮತ್ತು ಪಕ್ಷಿಗಳಿಗೂ ಸಹ ಅಕಾಲದಲ್ಲಿ ಹೆಚ್ಚಾದ ಮದ ಉಂಟಾದಲ್ಲಿಯೂ, ಇದು ಇತರ ಜಾತಿಯ ಪ್ರಾಣಿಗಳಿಗೂ ಅನ್ವಯಿಸುತ್ತದೆ. ಆದರೆ ಹಸುಗಳ ಮತ್ತು ನಾಯಿಗಳ ಇಂತಹ ಮದವು ವಿಶೇಷವಾದ ದೋಷವಾಗುತ್ತದೆ. ಮತ್ತು ಮನುಷ್ಯೇತರಪ್ರಾಣಿಗಳು ಮನುಷ್ಯನಂತೆ ಮಾತನಾಡಿದಲ್ಲಿಯೂ, ವಿಕಾರವುಳ್ಳ ಪ್ರಸವವನ್ನು ಹೊಂದಿದರೂ ಸಹ ಇವು ಶತ್ರುಸೈನ್ಯದ ಆಗಮನಕ್ಕೆ ಸೂಚಕವಾಗುತ್ತವೆ. ಇಂತಹ ಸಂದರ್ಭದಲ್ಲಿ ಅಂತಹ ಪ್ರಾಣಿಗಳನ್ನು ತ್ಯಾಗಮಾಡುವುದು, ಅಥವಾ ದೇಶದಿಂದ ಹೊರಕ್ಕೆ ಸಾಗಿಸುವುದು ಇತ್ಯಾದಿ ಪ್ರತೀಕಾರವನ್ನು ವಿವೇಕಿಯಾದವನು ಕೈಗೊಳ್ಳಬೇಕು. ದೋಷ ಶಾಂತಿಗಾಗಿ ದಾನವನ್ನೂ ಮಾಡಬೇಕು.

೬-೭. ಇಂತಹ ಸಂದರ್ಭದಲ್ಲಿ ಬ್ರಾಹ್ಮಣರನ್ನು ಭೋಜನಾದಿಗಳಿಂದ ತೃಪ್ತಿಪಡಿಸಬೇಕು. ಜಪಹೋಮಾದಿಗಳನ್ನೂ ಮಾಡಬೇಕು. ತಮಟೆ, ಮೃದಂಗ ಮೊದಲಾದ ವಾದ್ಯಗಳಿಂದಲೂ ಗೀತೆಗಳಿಂದಲೂ ದೇವತೆಗಳನ್ನು ಪೂಜಿಸಬೇಕು.

ಮೃದಂಗವಾದ್ಯೈಃ ಪಟಹೈಃ ಸಗೀತೈಃ
ಪೂಜಾ ಚ ಕಾರ್ಯಾ ತ್ರಿದಿವೌಕಸಾಂ ವೈ ।
ಧಾತುಸ್ತಥೇಜ್ಯಾ ವಿಧಿನಾ ಚ ಕಾರ್ಯಾ
ದೇಯಂ ತಥಾನ್ನಂ ಬಹುಶೋ ದ್ವಿಜೇಭ್ಯಃ ॥ ೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ರಾಮಂಪ್ರತಿ ಪುಷ್ಕರೋಪಾಖ್ಯಾನೇ ವೈಕೃತೋಪ ಶಮನ ವರ್ಣನೋನಾಮ ಏಕಚತ್ವಾರಿಂಶತತಮೋಽಧ್ಯಾಯಃ

---

ಚತುರ್ಮುಖನನ್ನುದ್ದೇಶಿಸಿ ಯಾಗವನ್ನೂ ಯಥಾವಿಧಿಯಾಗಿ ಮಾಡಬೇಕು ಬ್ರಾಹ್ಮಣರಿಗೆ ಹೆಚ್ಚಾಗಿ ಅನ್ನದಾನವನ್ನೂ ಮಾಡಬೇಕು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನ ಉಪಾಖ್ಯಾನದಲ್ಲಿ ವೈಕೃತೋಪಶಮನ ವರ್ಣನವೆಂಬ ನೂರ ನಲವತ್ತೊಂದನೆಯ ಅಧ್ಯಾಯವು ಮುಗಿದಿದೆ.



|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ದ್ವಿಚತ್ವಾರಿಂಶದಧಿಕಶತತಮೋಽಧ್ಯಾಯಃ

|| ಗರ್ಗ ಉವಾಚ ||

ಯಾಂತಿ ಯಾನಾನ್ಯಯುಕ್ತಾನಿ ಯುಕ್ತಾನಿ ನ ಹಿ ಯಾಂತಿ ಚೇತ್ ।
ಚೋದ್ಯಮಾನಾನಿ ತಸ್ಯ ಸ್ಯಾನ್ಮಹದ್ದುಃಖಮುಪಸ್ಥಿತಂ || ೧ ||

ವಾದ್ಯಮಾನಾ ನ ವಾದ್ಯಂತೇ ವಾದ್ಯಂತೇ ಚಾಪ್ಯನಾಹತಾಃ ।
ಅಚಲಾಶ್ಚ ಚಲಂತ್ಯೇವ ನ ಚಲಂತಿ ಚಲಸ್ತಥಾ || ೨ ||

ಆಕಾಶೇ ತೂರ್ಯನಾದಾಶ್ಚ ಗೀತಗಂಧರ್ವನಿಸ್ವನಾಃ ।
ಕಾಷ್ಠಂ ದರ್ವೀಕುಠಾರಾದಿ ವಿಕಾರಂ ಕುರತೇ ಯದಿ || ೩ ||

---

### ನೂರ ನಲವತ್ತೆರಡನೇ ಅಧ್ಯಾಯ.

೧-೪. ಪುನಃ ಗರ್ಗಮುನಿಯು ಹೇಳುತ್ತಾನೆ. ಯಾವನ ಯಾನಗಳು ಕುದುರೆಯೇ ಮೊದಲಾದುವುಗಳಿಂದ ಸಜ್ಜುಗೊಳಿಸಲ್ಪಡದಿದ್ದರೂ ತಾನಾಗಿಯೇ ಹೊರಡುವುವೋ ಮತ್ತು ಸಜ್ಜುಗೊಳಿಸಲ್ಪಟ್ಟು ಪ್ರೇರಿಸಿದರೂ ಹೊರಡುವುದಿಲ್ಲವೋ, ಅಂತಹವನಿಗೆ ಹೆಚ್ಚಾದದುಃಖನೇ ಸಮಾಪಿಸಿದೆ ಎಂದು ಹೇಳಬೇಕು. ವಾದ್ಯಗಳನ್ನು ಬಾರಿಸಿದರೂ ಧ್ವನಿಯುಂಟಾಗದಿರುವಿಕೆ, ಬಾರಿಸದಿದ್ದರೂ ತಾನಾಗಿ ಧ್ವನಿಯುಂಟಾಗುವಿಕೆ ಮತ್ತು ಸ್ಥಿರವಾದ ವಸ್ತುಗಳೂ ಚಲಿಸುವಿಕೆ, ಚಲಿಸುವ ವಸ್ತುಗಳೂ ಚಲಿಸದೆ ಸ್ಥಿರವಾಗಿರುವಿಕೆ, ಆಕಾಶದಲ್ಲಿ ಯುದ್ಧಸೂಚಕವಾದ ವಾದ್ಯಧ್ವನಿ, ಗೀತೆಗಳ ಮತ್ತು ಗಂಧರ್ವ ಧ್ವನಿಗಳ ಆವಿರ್ಭಾವ, ಸೌಟು, ಕೊಡಲಿ ಮುಂತಾದವುಗಳಲ್ಲಿರುವ ಕಟ್ಟಿಗೆಯು ಬಿರಿದು ವಿಕಾರಹೊಂದುವಿಕೆ, ಮತ್ತು ಎಮ್ಮೆಯ ಕೊಂಬು, ಶೂಲ ಇವುಗಳಿಂದ

[1]ಗವಾಂ ಲಾಂಗೂಲಸಂಗಶ್ಚೇತ್ ಸ್ತ್ರಿಯಂ ತು ಯದಿಪಾತಯೇತ್ ।
ಉಪರಾಗಾ ದಿವ್ಯಕೃತಾ ಘೋರಂ ಶಸ್ತ್ರಭಯಂ ವದೇತ್ ॥ ೪ ॥

ವಾಯೋಸ್ತು ಪೂಜಾಂ ದ್ವಿಜ ಸಕ್ತುಭಿಶ್ಚ
ಕೃತ್ವಾ ತದುಕ್ತಾಂಸ್ತು ಜಪೇಚ್ಚ ಮಂತ್ರಾನ್ ।
ದದ್ಯಾತ್ಪ್ರಭೂತಂ ಪರಮಾನ್ನಮತ್ರ
ಪ್ರದಕ್ಷಿಣಾಂ ತೇನ ಶಮೋಸ್ಯ ಭೂಯಾತ್ ॥ ೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂಪ್ರತಿ ಪುಷ್ಕರೋಪಾಖ್ಯಾನೇ ಉಪಸ್ಕರ
ವೈಕೃತವರ್ಣನೋನಾಮ ದ್ವಿಚತ್ವಾರಿಂಶದುತ್ತರಶತತಮೋಽಧ್ಯಾಯಃ

---

ಸ್ತ್ರೀಯ ಅಥವಾ ಸ್ತ್ರೀಯರ ಪತನ ಉಂಟಾದಲ್ಲಿಯೂ, ದೈವಿಕವಾದ ಗ್ರಹಣಗಳು ಅನೇಕವಾಗಿ ಬಂದಲ್ಲಿಯೂ ನಹ ಘೋರವಾದ ಶಸ್ತ್ರಭಯವೇ ಉಂಟಾಗುತ್ತದೆ. ಎಂದು ಹೇಳಬೇಕು.

೫. ಇಂತಹ ಸಂದರ್ಭದಲ್ಲಿ ಹುರಿಟ್ಟಿನಿಂದ ವಾಯುವನ್ನು ಪೂಜಿಸಿ ವಾಯು ಸೂಕ್ತದಲ್ಲಿ ಹೇಳಿರುವ ಮಂತ್ರಗಳನ್ನು ಜಪಿಸಬೇಕು. ಹೆಚ್ಚಾದ ಪಾಯಸವನ್ನು ದಾನಮಾಡಬೇಕು. ಅನಂತರ ಪ್ರದಕ್ಷಿಣ ನಮಸ್ಕಾರದಿಂದ ಈ ದೋಷಗಳು ಶಾಂತಿಹೊಂದುತ್ತವೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ
ಸಂವಾದದಲ್ಲಿ ರಾಮನನ್ನು ಕುರಿತು ಪುಸ್ಕರನ ಉಪಾಖ್ಯಾನದಲ್ಲಿ
ಉಪಸ್ಕರವೈಕೃತವರ್ಣನವೆಂಬ ನೂರ ನಲವತ್ತೆರಡನೆಯ
ಅಧ್ಯಾಯ ಮುಗಿದಿದೆ.



---

1 ಗವಲಂ ಶೂಲಸಂಘಾಶ್ಚ ಸ್ತ್ರಿಯಂ ಸ್ತ್ರೀರ್ವಾಪಿ ಘಾತಯೇತ್ ಎಂದು ಶಾಂತಿಸಾರದಲ್ಲಿನ ಪಾಠ.

|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯ ಖಂಡೇ

### ತ್ರಿಚತ್ವಾರಿಂಶದುತ್ತರಶತತಮೋಽಧ್ಯಾಯಃ

**|| ಗರ್ಗ ಉವಾಚ ||**

**ಪ್ರವಿಶಂತಿ ಯದಾ ಗ್ರಾಮಮಾರಣ್ಯಾ ಮೃಗಪಕ್ಷಿಣಃ |**
**ಅರಣ್ಯಂ ಯಾಂತಿ ವಾ ಗ್ರಾಮ್ಯಾಃ ಸ್ಥಲಂ ಯಾಂತಿ ಜಲೋದ್ಭವಾಃ || ೧ ||**

**ಜಲಂ ವಾ ಸ್ಥಲಜಾ ಯಾಂತಿ ಘೋರಂ ವಾಶಂತಿ ನಿರ್ಭಯಾಃ |**
**ರಾಜದ್ವಾರೇ ಪುರದ್ವಾರೇ ಶಿವಾಶ್ಚಾಪ್ಯಶಿವಪ್ರದಾಃ || ೨ ||**

**ದಿವಾ ರಾತ್ರಿಂಚರಾ ವಾಪಿ ರಾತ್ರೌ ವಾಪಿ ದಿವಾಚರಾಃ |**
**ಗ್ರಾಮ್ಯಾಃ ತ್ಯಜಂತಿ ಗ್ರಾಮಂ ವಾ ಶೂನ್ಯತಾಂ ತಸ್ಯ ನಿರ್ದಿಶೇತ್ || ೩ ||**

---

### ನೂರ ನಲವತ್ತಮೂರನೆಯ ಅಧ್ಯಾಯ.

೧–೩. ಗರ್ಗಮುನಿಯು ಮತ್ತೂ ಹೇಳುತ್ತಾನೆ. ಅರಣ್ಯದಲ್ಲಿರುವ ಮೃಗ ಪಕ್ಷಿಗಳು ಗ್ರಾಮವನ್ನು ಯಾವಾಗ ಪ್ರವೇಶಿಸುತ್ತವೆಯೋ, ಮತ್ತು ಗ್ರಾಮದಲ್ಲಿರುವ ಪ್ರಾಣಿಗಳು ಅರಣ್ಯವನ್ನು ಯಾವಾಗ ಪ್ರವೇಶಿಸುತ್ತವೆಯೋ ಮತ್ತು ಜಲದಲ್ಲಿ ವಾಸಿಸುವ ಪ್ರಾಣಿಗಳು ಜಲವನ್ನು ಬಿಟ್ಟು ಸ್ಥಳಕ್ಕೆ ಬರುವುವೋ, ಭೂಮಿಯಲ್ಲಿರುವ ಪ್ರಾಣಿಗಳು ಭೂಮಿಯನ್ನು ಬಿಟ್ಟು ಜಲಕ್ಕೆ ಪ್ರವೇಶಿಸುವುವೋ, ಭಯವಿಲ್ಲದೆ ಘೋರವಾಗಿ ಕಿರಿಚುತ್ತವೆಯೋ, ಮತ್ತು ರಾಜರ ಗೃಹದ್ವಾರದಲ್ಲಿಯೂ, ನಗರದ ಬಾಗಿಲಿನಲ್ಲಿಯೂ, ನರಿಗಳು ಅಮಂಗಲಧ್ವನಿಯಿಂದ ಎಲ್ಲಿ ಕೂಗುವುವೋ, ಮತ್ತು ರಾತ್ರಿಯಲ್ಲಿ ಸಂಚರಿಸುವ ಪ್ರಾಣಿಗಳು ಹಗಲಿನಲ್ಲಿಯೂ, ಹಗಲಿನಲ್ಲಿ ವ್ಯವಹರಿಸುವ ಪ್ರಾಣಿಗಳು ರಾತ್ರಿಯಲ್ಲಿಯೂ ಎಲ್ಲಿ ಸಂಚರಿಸುವುವೋ ಗ್ರಾಮದಲ್ಲಿರುವ ಪ್ರಾಣಿಗಳು ಆ ಗ್ರಾಮವನ್ನು ಬಿಟ್ಟು ಹೊರಗೆ ಹೊರಡುತ್ತವೆಯೋ ಅಂತಹ ಗ್ರಾಮನಗರಗಳು ಶೂನ್ಯವಾಗುತ್ತವೆ. ಎಂದು ತಿಳಿಯಬೇಕು.

ದೀಪ್ತಾ ವಾಶಂತಿ ಸಂಧ್ಯಾಸು ಮಂಡಲಾನಿ ಚ ಕುರ್ವತೇ ।
ವಾಶಂತೇ ವಿಸ್ವರಂ ಯತ್ರ ತದಾಪ್ಯೇತತ್ಫಲಂ ವದೇತ್ ॥ ೪ ॥

ಪ್ರದೋಷೇ ಕುಕ್ಕುಟೋ ವಾಶೇದ್ಧೇಮಂತೇ ವಾಪಿ ಕೋಕಿಲಃ ।
ಅರ್ಕೋಽದಯೇರ್ಕಾಭಿಮುಖಃ ಶ್ವಾನಾ ನೃಪಭಯಂ ಭವೇತ್ ॥ ೫ ॥

ಗೃಹಂ ಕಪೋತಃ ಪ್ರವಿಶೇತ್ ಕ್ರವ್ಯಾದೋ ಮೂರ್ಧ್ನಿ ಲೀಯತೇ ।
ಮಧುವಾ ಮಕ್ಷಿಕಾಃ ಕುರ್ಯುಃ ಮೃತ್ಯುಂ ಗೃಹಪತೇರ್ವದೇತ್ ॥ ೬ ॥

ಪ್ರಾಕಾರದ್ವಾರಗೇಹೇಷು ತೋರಣಾಪಣವೀಥಿಷು ।
ಕೇತುಚ್ಛತ್ರಾಯುಧಾದ್ಯೇಷು ಕ್ರವ್ಯಾತ್ಸನ್ನಿಪತೇದ್ಯದಿ ॥ ೭ ॥

ಜಾಯತೇ ವಾಥ ವಲ್ಮೀಕೋ ಮಧು ವಾ ದೃಶ್ಯತೇ ಯದಿ ।
ಸ ದೇಶೋ ನಾಶಮಾಯಾತಿ ರಾಜಾ ಚ ಮ್ರಿಯತೇಽಥವಾ ॥ ೮ ॥

---

೪-೬. ನರಿಯೇ ಮೊದಲಾದ ಪ್ರಾಣಿಗಳು ಬಾಯಿಯಿಂದ ಜ್ವಾಲೆ ಹೊಂಕಿಯನ್ನು ತೋರಿಸುತ್ತಾ ಸಂಧ್ಯಾಕಾಲದಲ್ಲಿ ಕಿರುಚುವುದು ಮತ್ತು ಮಂಡಲಾಕಾರವಾಗಿ ತಿರುಗುವುದು. ಮತ್ತು ಅಪಸ್ವರದಿಂದ ಕೂಗುವುದು. ಇಂತಹ ಉತ್ಪಾತಗಳಿಗೂ ಮೇಲೆ ಹೇಳಿರುವ ಫಲವನ್ನೇ ಹೇಳಬೇಕು ಸಾಯಂಕಾಲದಲ್ಲಿ ಕೋಳಿಯು ಕೂಗಿದರೂ, ಹಿಮಂತಋತುವಿನಲ್ಲಿ ಕೋಗಿಲೆಯು ಕೂಗಿದರೂ, ಸೂರ್ಯೋದಯ ಕಾಲದಲ್ಲಿ ಸೂರ್ಯನಿಗೆ ಎದುರಾಗಿ ನಿಂತು ನಾಯಿಯು ಬಗುಳಿದರೂ ಸಹ ಈ ಉತ್ಪಾತಗಳಿಂದ ದೊರೆಗೆ ಭಯ ಉಂಟಾಗುತ್ತದೆ. ಪಾರಿವಾಳವು ಮನೆಯೊಳಕ್ಕೆ ಹೊಕ್ಕರೂ, ಮಾಂಸಾಹಾರಿಗಳಾದ ಹದ್ದು ಮೊದಲಾದ ಪಕ್ಷಿಗಳು ತಲೆಯಮೇಲೆ ಅಡಗಿ ಕುಳಿತರೂ, ಜೇನುಹುಳುಗಳು ಮನೆಯಲ್ಲಿ ಕಟ್ಟಿ ಜೇನನ್ನುಂಟುಮಾಡಿದರೂ ಸಹ ಆ ಮನೆಯ ಯಜಮಾನನಿಗೆ ಮೃತ್ಯು ಭಯವನ್ನು ಸೂಚಿಸುತ್ತವೆ.

೭-೮. ಪ್ರಾಕಾರ (ಹೊರವಲಯ) ಬಾಗಿಲು, ಮತ್ತು ಮನೆಯ ಮೇಲೆಯೂ, ಮನೆಯ ಹೊರಗಿನ ಬಾಗಿಲಿನ ಮೇಲೆಯೂ, ಅಂಗಡಿಯ ಬೀದಿಯಲ್ಲಿಯೂ, ಬಾವುಟ ಮತ್ತು ಛತ್ರಿ, ಆಯುಧಗಳು ಇವುಗಳ ಮೇಲೆಯೂ ಮಾಂಸಾಹಾರಿಯಾದ ಹದ್ದು ಮೊದಲಾದ ಪಕ್ಷಿಗಳು ಕುಳಿತದ್ದೇ ಆದರೆ, ಮತ್ತು ಮನೆಯಲ್ಲಿ ಹುತ್ತವು ಬೆಳೆದದ್ದೇ ಆದರೆ, ಜೇನನ್ನು ಕಂಡದ್ದೇ ಆದರೆ (ಮನೆಯಲ್ಲಿಯೇ ಜೇನುಹುಳುವಿನಿಂದ ಉಂಟಾದ ಜೇನನ್ನು ನೋಡಿದ್ದೇ ಆದರೆ, ಅಂತಹ ಪ್ರದೇಶವೇ ನಾಶವಾಗುತ್ತದೆ. ಅಥವಾ ರಾಜನು ಮೃತನಾಗುತ್ತಾನೆ.

**ಮೂಷಕಾನ್ ಶಲಭಾನ್ ದೃಷ್ಟ್ವಾ ಪ್ರಭೂತಾನ್ ಕ್ಷುದ್ಭಯಂ ವದೇತ್ ।**
**ಕಾಷ್ಠೋಲ್ಮುಕಾಸ್ಥಿಶೃಂಗಾದ್ಯಾಃ ಶ್ವಾನೋ ಮರ್ಕಟಕೈರ್ಜಿತಾಃ ॥ ೯ ॥**

**ಶ್ಮಶಾನಂ ನಿರ್ಗತಾ ಗ್ರಾಮಾತ್ ಗ್ರಾಮಶ್ರೇಷ್ಠವಿನಾಶನಾಃ ।**
**ಏಕಾಂಡತಾ ತು ಕಾಕಾನಾಂ ಯದಿ ಚೈವಾಪ್ಯನಂಡತಾ ॥ ೧೦ ॥**

**ನಿಮ್ನೇಷು ಚ ನಿವೇಶಶ್ಚ ದೇಶನಾಶಕರಃ ಸ್ಮೃತಃ ।**
**ಅಪಸವ್ಯಂ ಭ್ರಮಂತಶ್ಚ ಮಂಡಲೇ ರಣವೇದಿನಃ ॥ ೧೧ ॥**

**ದುರ್ಭಿಕ್ಷವೇದಿನೋ ಜ್ಞೇಯಾ ಕಾಕಾಃ ಧಾನ್ಯಮುಷೋ ಯದಿ ।**
**ಜನಾನಭಿ ಭವಂತಶ್ಚ ನಿರ್ಭಯಾ ರಣವೇದಿನಃ ॥ ೧೨ ॥**

**ಕಾಕೋ ಮೈಥುನಸಕ್ತಶ್ಚ ಶ್ವೇತಶ್ಚ ಯದಿ ದೃಶ್ಯತೇ ।**
**ರಾಜಾ ವಾ ಮ್ರಿಯತೇ ತತ್ರ ಸವಾ ದೇಶೋ ವಿನಶ್ಯತಿ ॥ ೧೩ ॥**

---

೯–೧೦. ಇಲಿಗಳೂ ಮಿಡತೆಗಳೂ ಬಹಳ ಹೆಚ್ಚಾಗಿ ವೃದ್ಧಿಹೊಂದಿದಲ್ಲಿ ಜನರಿಗೆ ಹಸಿವಿನಿಂದ ಭಯವುಂಟಾಗುತ್ತದೆ. ನಾಯಿಗಳು ಕಪಿಗಳಿಂದ ಪರಾಜಿತಗಳಾಗಿ ಹೆದರಿ ಗ್ರಾಮದಿಂದ ಶ್ಮಶಾನಕ್ಕೆ ಹೋಗಿ ಅಲ್ಲಿಂದ ಉರಿಯುವ ಕೊಳ್ಳಿ ಮೂಳೆ, ಕೊಂಬು ಮುಂತಾದುವನ್ನು ತಂದು ಹಾಕಿದಲ್ಲಿ ಉತ್ತಮವಾದ ಆ ಗ್ರಾಮವು ನಾಶವನ್ನೇ ಹೊಂದುತ್ತದೆ. ಕಾಗೆಗಳು ಒಂದೇ ಮೊಟ್ಟೆಯನ್ನು ಹಾಕಿದರೂ, ಮತ್ತು ಮೊಟ್ಟೆ ಇಲ್ಲದೆ ಮರಿಯನ್ನೇ ಹಾಕಿದರೂ. ಮತ್ತು ಮರದ ಮೇಲ್ಭಾಗವೇ ಮೊದಲಾದ ಉನ್ನತ ಸ್ಥಾನಗಳನ್ನು ಬಿಟ್ಟು ಹಳ್ಳವಾದ ಭೂಪ್ರದೇಶದಲ್ಲಿ ವಾಸಮಾಡಿದರೂ ಸಹ ಅದು ದೇಶಕ್ಕೆ ನಾಶಕವೆಂದೇ ತಿಳಿಯಬೇಕು

೧೧–೧೩ ಕಾಗೆಗಳು ಅಪ್ರದಕ್ಷಿಣವಾಗಿ ಮಂಡಲಾಕಾರವಾಗಿಯೇ ಹಾರುತ್ತಿದ್ದಲ್ಲಿ ಅದು ಯುದ್ಧಕ್ಕೆ ಕಾರಣವಾಗುತ್ತದೆ. ಅಂತಹ ಕಾಗೆಗಳು ಧಾನ್ಯವಿಗುವ ಕಡೆಯಲ್ಲಿ ಕದಿಯಲು ಪ್ರಯತ್ನಿಸಿದಲ್ಲಿ ಅದು ದುರ್ಭಿಕ್ಷಕ್ಕೆ ಸೂಚಕವೆಂದು ತಿಳಿಯಬೇಕು. ಕಾಗೆಗಳು ನಿರ್ಭಯವಾಗಿ ಜನಗಳನ್ನು ಬಾಧಿಸತೊಡಗಿದಲ್ಲಿ ಅದೂ ಸಹ ಯುದ್ಧಕ್ಕೆ ಸೂಚಕವೆಂದು ತಿಳಿಯಬೇಕು. ಕಾಗೆಯು ಹೆಣ್ಣುಕಾಗೆಯೊಡನೆ ಮೈಥುನದಲ್ಲಿರುವಾಗಲೂ ಮತ್ತು ಬಿಳುಪಾಗಿಯೂ ಕಾಣಿಸಿಕೊಂಡಲ್ಲಿ ರಾಜನು ಮರಣಹೊಂದುತ್ತಾನೆ ಅಥವಾ ಆ ದೇಶವು ನಾಶವಾಗುತ್ತದೆ.

ಉಲೂಕೋ ವಾಶತೇ ಯತ್ರ ನಿಪತೇದ್ವಾ ತಥಾ ಗೃಹೇ ।
ಜ್ಞೇಯೋ ಗೃಹಪತೇರ್ಮೃತ್ಯುರ್ಧನನಾಶಸ್ತಥೈವ ಚ ॥ ೧೪ ॥

ಮೃಗಪಕ್ಷಿವಿಕಾರೇಷು ಕುರ್ಯಾದ್ಧೋಮಾನ್ ಸದಕ್ಷಿಣಾನ್ ।
ದೇವಾಃ ಕಪೋತ ಇತಿ ಚ ಜಪ್ತವ್ಯಾಃ ಪಂಚಭಿರ್ದ್ವಿಜೈಃ ॥ ೧೫ ॥

ಗಾವಶ್ಚ ದೇಯಾ ವಿಧಿವದ್ದ್ವಿಜಾನಾಂ
ಸಕಾಂಚನಾ ವಸ್ತ್ರಯುಗೋತ್ತರೀಯಾಃ ।
ಏವಂಕೃತೇ ಶಾಂತಿಮುಪೈತಿ ಪಾಪಂ
ಮೃಗೈರ್ದ್ವಿಜೈರ್ವಾ ವಿನಿವೇದಿತಂ ಯತ್ ॥ ೧೬ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ಔತ್ಪತ್ತಿಕೇ ಮೃಗಪಕ್ಷಿವೈಕೃತವರ್ಣನೋ ನಾಮ
ತ್ರಿಚತ್ವಾರಿಂಶದುತ್ತರಶತತಮೋಧ್ಯಾಯಃ

---

೧೪–೧೬. ಯಾವ ಮನೆಯಮೇಲೆ ಕುಳಿತುಕೊಂಡು ಗೂಬೆಯು ಕೂಗುತ್ತದೆಯೋ ಮತ್ತು ಯಾವ ಮನೆಯ ಮೇಲೆ ಅದು ಹಟಾತ್ತಾಗಿ ಬೀಳುತ್ತದೆಯೋ ಆ ಮನೆಯ ಯಜಮಾನನಿಗೆ ಮೃತ್ಯುವೂ ಧನನಾಶವೂ ಆಗುತ್ತದೆ. ಇಂತಹ ಮೃಗಪಕ್ಷಿಗಳ ವಿಕಾರ ಉಂಟಾದಾಗ ದಕ್ಷಿಣೆಯೊಡಗೂಡಿದ ಹೋಮವನ್ನು ಮಾಡಬೇಕು. ದೇವಾಃ ಕಪೋತಃ ಎಂಬ ಮಂತ್ರವು ಐದು ಜನ ಬ್ರಾಹ್ಮಣರಿಂದ ಜಪಿಸಲ್ಪಡಬೇಕು. ಬ್ರಾಹ್ಮಣರಿಗೆ ಯಥಾವಿಧಿಯಾಗಿ ವಸ್ತ್ರಗಳಿಂದ ಅಲಂಕರಿಸಲ್ಪಟ್ಟ ಗೋವುಗಳನ್ನು ಸುವರ್ಣದೊಡನೆ ದಾನಮಾಡಬೇಕು. ಹೀಗೆ ಮಾಡಿದಲ್ಲಿ ಮೃಗಗಳಿಂದಲೂ ಪಕ್ಷಿಗಳಿಂದಲೂ ಸೂಚಿಸಲ್ಪಟ್ಟ ಅಮಂಗಳವು ಶಾಂತಿ ಹೊಂದುತ್ತದೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ
ಸಂವಾದದಲ್ಲಿ ಭಾರ್ಗವನನ್ನು ಕುರಿತು ಪುಷ್ಕರನು ಹೇಳಿದ ಉಪಖ್ಯಾನದಲ್ಲಿ
ಔತ್ಪತ್ತಿಕಮೃಗಪಕ್ಷಿವೈಕೃತವರ್ಣನವೆಂಬ ನೂರ ನಲವತ್ತಮೂರನೆಯ
ಅಧ್ಯಾಯವು ಮುಗಿದಿದೆ.



॥ ಓಂ ॥

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

### ಚತುಶ್ಚತ್ವಾರಿಂಶದಧಿಕಶತತಮೋಽಧ್ಯಾಯಃ

॥ ಗರ್ಗ ಉವಾಚ ॥

ಪ್ರಾಸಾದತೋರಣಾಟ್ಟಾಲದ್ವಾರಪ್ರಾಕಾರವೇಶ್ಮನಾಂ ।
ಅನಿಮಿತ್ತಂ ತು ಪತನಂ ದೃಢಾನಾಂ ರಾಜಮೃತ್ಯವೇ ॥ ೧ ॥

ರಜಸಾ ವಾಥ ಧೂಮೇನ ದಿಶೋ ಯತ್ರ ಸಮಾಕುಲಾಃ ।
ಆದಿತ್ಯಚಂದ್ರತಾರಾಶ್ಚ ವಿವರ್ಣಾ ಭಯವೃದ್ಧಯೇ ॥ ೨ ॥

ರಾಕ್ಷಸಾ ಯತ್ರ ದೃಶ್ಯಂತೇ ಬ್ರಾಹ್ಮಣಾಶ್ಚ ವಿಧರ್ಮಿಣಃ ।
ಋತವಶ್ಚ ವಿಪರ್ಯಸ್ತಾಃ ಅಪೂಜ್ಯಃ ಪೂಜ್ಯತೇ ಜನೈಃ ॥ ೩ ॥

---

### ನೂರನಲವತ್ತನಾಲ್ಕನೇ ಅಧ್ಯಾಯ

೧-೨. ಗರ್ಗಮುನಿಯು ಪುನಃ ಹೇಳುತ್ತಾನೆ. ಉಪ್ಪರಿಗೆ, ಹೊರಬಾಗಿಲು, ಅಟ್ಟ, ಬಾಗಿಲು, ಹೊರವಲಯ, ಮನೆ ಇವುಗಳು ಯಾವ ದೃಷ್ಟ ಕಾರಣವೂ ಇಲ್ಲದೆ ದೃಢವಾಗಿದ್ದೂ ಹಠಾತ್ತಾಗಿ ಮುರಿದು ಬಿದ್ದಲ್ಲಿ ಇವು ರಾಜನ ಮೃತ್ಯುವಿಗೆ ಕಾರಣವೆಂದು ತಿಳಿಯಬೇಕು. ಎಲ್ಲಿ ದಿಕ್ಕುಗಳು ಆಕಸ್ಮಿಕವಾದ ಧೂಳಿಯಿಂದಲಾಗಲಿ, ಹೊಗೆಯಿಂದಲಾಗಲಿ ಆವರಿಸಲ್ಪಟ್ಟು ಮಲಿನಗಳಾಗಿ ತೋರಿಬರುತ್ತವೆಯೋ ಮತ್ತು ಸೂರ್ಯ, ಚಂದ್ರ, ನಕ್ಷತ್ರ ಇವುಗಳಲ್ಲಿ ವಿಪರೀತವಾದ ವರ್ಣವು ಕಂಡು ಬರುವುದೋ ಇವು ಆ ದೇಶದ ಭಯವೃದ್ಧಿಗೆ ಕಾರಣವಾಗುತ್ತವೆ.

೩-೪ ಎಲ್ಲಿ ರಾಕ್ಷಸರು ಕಾಣಿಸಿಕೊಳ್ಳುತ್ತಾರೆಯೋ, ಬ್ರಾಹ್ಮಣರು ಸ್ವಧರ್ಮದಿಂದ ಭ್ರಷ್ಟರಾಗಿರುತ್ತಾರೆಯೋ, ಆಯಾಯ ಋತು ಧರ್ಮಗಳು ವ್ಯತ್ಯಾಸ ಹೊಂದುತ್ತವೆಯೋ ಮತ್ತು ಪೂಜೆಗೆ (ಸತ್ಕಾರಕ್ಕೆ) ಅನರ್ಹನಾದವನು ಎಲ್ಲಿ ಪೂಜಿಸಲ್ಪಡು

ನಕ್ಷತ್ರಾಣಿ ವಿಯೋಗೀನಿ ತನ್ಮಹದ್ಭಯಲಕ್ಷಣಂ ।
ಕೇತೂದಯೋಪರಾಗೌ ಚ ಛಿದ್ರತಾ ಶಶಿಸೂರ್ಯಯೋಃ ॥ ೪ ॥

ಗ್ರಹರ್ಕ್ಷವಿಕೃತಿರ್ಯತ್ರ ತತ್ರಾಪಿ ಭಯಮಾದಿಶೇತ್ ।
ಸ್ತ್ರಿಯಶ್ಚ ಕಲಹಾಯಂತೇ ಬಾಲಾ ನಿಘ್ನಂತಿ ಬಾಲಕಾನ್ ॥ ೫ ॥

ಶೀಲಾಚಾರವಿಹೀನಾಶ್ಚ ಮದ್ಯಮಾಂಸಾನೃತಪ್ರಿಯಾಃ ।
ತಥಾ ಪಾಷಾಣಭೂಯಿಷ್ಠಾಃ ತ್ರಯೀಮಾರ್ಗಚ್ಯುತಾ ದ್ವಿಜಾಃ ॥ ೬ ॥

ಯತ್ರ ದೇಶೇ ವಿಜಾಯಂತೇ ತತ್ರ ವಿದ್ಯಾದುಪದ್ರವಂ ।
ಉಚಿತೈರ್ನಾಭಿಪೂಜ್ಯಂತೇ ಯೂಪಾನ್ನಬಲಿಭಿಃ ಸುರಾಃ ॥ ೭ ॥

ಕ್ರಿಯಾಣಾಮುಚಿತಾನಾಂ ಚ ವಿಚ್ಛಿತ್ತಿರ್ಯತ್ರ ಜಾಯತೇ ।
ಅಗ್ನಿರ್ಯತ್ರ ನ ದೀಪ್ಯೇತ ಹೂಯಮಾನಾಸು ಶಾಂತಿಷು ॥ ೮ ॥

---

ತ್ತಾನೆಯೋ ನಕ್ಷತ್ರಗಳು ವಿರುದ್ಧವಾದ ಯೋಗಗಳನ್ನು ಹೊಂದುತ್ತವೆಯೋ ಇವೆಲ್ಲವೂ ಆ ದೇಶದ ಮಹಾಭಯಕ್ಕೇ ಕಾರಣವಾಗುತ್ತವೆ ಮತ್ತು ಕೇತುಗ್ರಹದ ಉದಯ, ಗ್ರಹಣ, ಸೂರ್ಯ ಚಂದ್ರರಲ್ಲಿ ಛಿದ್ರ ಕಾಣಿಸುವುದು. ಗ್ರಹ ಮತ್ತು ನಕ್ಷತ್ರ ಇವುಗಳಲ್ಲಿ ತೋರಿಬರುವ ವಿಕಾರ ಇವೂ ಸಹ ಆ ದೇಶದ ಭಯಕ್ಕೇ ಸೂಚಕವಾಗುತ್ತವೆ.

೫-೬. ಯಾವ ದೇಶದಲ್ಲಿ ಸ್ತ್ರೀಯರು ಪರಸ್ಪರವಾಗಿ ಕಲಹಪರರೇ ಆಗುತ್ತಾರೆಯೋ ಮತ್ತು ಬಾಲಕರು ಬಾಲಕರನ್ನೇ ಹೊಡೆದು ನಾಶಮಾಡುತ್ತಾರೆಯೋ ದ್ವಿಜರು ವೇದಮಾರ್ಗದಿಂದ ಬಹಿಷ್ಕೃತರಾಗಿ ತಮ್ಮ ಸದ್ವೃತ್ತಿ, ಆಚಾರ ಇವುಗಳನ್ನು ಬಿಟ್ಟು ಮದ್ಯ ಮಾಂಸಾದಿಗಳಲ್ಲಿ ನಿರತರಾಗಿ ಅಸತ್ಯ ಭಾಷಿಗಳಾಗುತ್ತಾರೆಯೋ, ಕಲ್ಲಿನಂತೆ ಕಠಿನ ಹೃದಯರೂ ಆಗುತ್ತಾರೆಯೋ, ಅಂತಹ ದೇಶದಲ್ಲಿ ನಾನಾ ವಿಧವಾದ ಪೀಡೆಗಳು ತಪ್ಪುವುದಿಲ್ಲ.

೭-೧೧. ಯಾವ ದೇಶದಲ್ಲಿ ಅವರವರ ವರ್ಣಾಶ್ರಮಗಳಿಗೆ ಉಚಿತಗಳಾದ ಯಜ್ಞಯಾಗ ಬಲಿಪ್ರದಾನಾದಿಗಳಿಂದ ದೇವತೆಗಳಿಗೆ ಪೂಜೆಯು ನಡೆಯುವುದಿಲ್ಲವೋ, ಉಚಿತವಾದ ನಿತ್ಯನೈಮಿತ್ತಿಕ ಕ್ರಿಯೆಗಳಿಗೆ ಎಲ್ಲಿ ವಿಘ್ನದಿಂದ ಆತಂಕ ಉಂಟಾಗುತ್ತದೆಯೋ ಮತ್ತು ಶಾಂತಿಯೇ ಮೊದಲಾದುವನ್ನು ಮಾಡಿದರೂ

ಪಿಪೀಲಿಕಾಸ್ತು ಕ್ರವ್ಯಾದೋ ಯಾಂತಿ ಚಾತುರತಸ್ತಥಾ ।
ಪೂರ್ಣಕುಂಭಾಃ ಸ್ರವಂತೇ ಚ ಹವಿರ್ವಾ ವಿಪ್ರಲುಪ್ಯತೇ ॥ ೯ ॥

ಮಂಗಲ್ಯಾಶ್ಚ ಗಿರೋ ಯತ್ರ ನ ಶ್ರೂಯಂತೇ ಸಮಂತತಃ ।
[1] ಕ್ಷವಥುಃ ಧಾವತೀಚಾಥ ಪ್ರಹಸಂತಿ ರುದಂತಿ ಚ ॥ ೧೦ ॥

ನ ಚ ದೇವೇಷು ವರ್ತಂತೇ ಯಥಾವದ್ಬ್ರಾಹ್ಮಣೇಷು ಚ ।
ಮರ್ಮದೋಷಾಣಿ ಚೋಚ್ಯಂತೇ ವಾದ್ಯಂತೇ ವಿಸ್ವರಾಣಿ ಚ ॥ ೧೧ ॥

ಗುರುಮಿತ್ರದ್ರುಹೋ ಯತ್ರ ಶತ್ರುಪೂಜಾರತಾ ಜನಾಃ ।
ಬ್ರಾಹ್ಮಣಾನ್ ಸುಹೃದೋಽಮಾತ್ಯಾನ್ ಜನೋ ಯತ್ರಾವಮನ್ಯತೇ ॥

---

ಅಗ್ನಿಯು ಎಲ್ಲಿ ಚೆನ್ನಾಗಿ ಪ್ರಕಾಶಿಸುವುದಿಲ್ಲವೋ ಮತ್ತು ಇರುವೆಗಳೂ ಮಾಂಸಾಹಾರಿಗಳಾದ ಮೃಗಪಕ್ಷಿ ಮೊದಲಾದವುಗಳೂ ಬಹಳ ವ್ಯಾಕುಲತೆಯಿಂದ ಎಲ್ಲಿ ಓಡಾಡುತ್ತವೆಯೋ, ಮತ್ತು ಎಲ್ಲಿ ಮಂಗಲಾರ್ಥವಾದ ಪೂರ್ಣಕುಂಭಗಳಿಂದಲೂ ನೀರುಸ್ರವಿಸಿ ಹೋಗುತ್ತದೆಯೋ, ಯಜ್ಞಯಾಗಾದಿಗಳಿಗೆ ಮಾಡಿದ್ದ ಹವಿಸ್ಸು ಉಪಯೋಗಿಸುವುದಕ್ಕೆ ಮುಂಚಿತವಾಗಿಯೇ ನಾಶವಾಗುತ್ತದೆಯೋ, ಮತ್ತು ಯಾವ ದೇಶದಲ್ಲಿ ಮಂಗಲಕರವಾದ ಒಳ್ಳೆಯಮಾತುಗಳು ಎಲ್ಲಕಡೆಯಲ್ಲೂ ಕೇಳಿ ಬರುವುದಿಲ್ಲವೋ, ಮತ್ತು ಯಾವದೇಶದಲ್ಲಿ ಜನರು ಗೂರಲು, ಕೆಮ್ಮು, ರೋದನ, ನಗು ಇವುಗಳಿಂದಲೇ ಕೂಡಿರುವರೋ, ಮತ್ತು ದೇವತೆಗಳಲ್ಲಿಯೂ ಬ್ರಾಹ್ಮಣರಲ್ಲಿಯೂ ಯಥಾರ್ಥವಾದ ಭಕ್ತಿಶ್ರದ್ಧೆಗಳಿಂದ ಜನರು ಕೂಡಿರುವುದಿಲ್ಲವೋ ಮತ್ತು ಗುಣಪಕ್ಷಪಾತವಿಲ್ಲದೆ ಜನಗಳು ಒಬ್ಬೊಬ್ಬರ ಮರ್ಮದೋಷಗಳನ್ನು ಮತ್ತೊಬ್ಬರು ಎತ್ತಿ ಆಡುತ್ತಲೇ ಇರುವರೋ, ಮತ್ತು ವಾದ್ಯಗಳನ್ನು ಅಪಸ್ವರದಿಂದ ಬಾರಿಸುವರೋ.

೧೨–೧೩ ಮತ್ತು ಯಾವದೇಶದಲ್ಲಿ ಗುರುದ್ರೋಹಿಗಳೂ ಮಿತ್ರದ್ರೋಹಿಗಳೂ ಹೆಚ್ಚಾಗುತ್ತಾರೆಯೋ, ಜನಗಳು ಶತ್ರುವಿನ ಸತ್ಕಾರದಲ್ಲಿಯೇ ನಿರತರಾಗಿರುವರೋ, ಮತ್ತು ಬ್ರಾಹ್ಮಣರನ್ನೂ, ಸತ್ಪುರುಷರನ್ನೂ ಮಂತ್ರಿಗಳನ್ನೂ ಸಹ ಯಾವದೇಶದಲ್ಲಿ ಜನರು ಅವಮತಿಯಿಂದ (ತಿರಸ್ಕಾರ ಬುದ್ಧಿಯಿಂದ) ಕಾಣುತ್ತಾರೆಯೋ, ಮತ್ತು

---

1 ಕ್ಷವಥುಃ ಬಾಧತೇ ವಾಥ ಎಂದು ಶಾಂತಿಸಾರದಲ್ಲಿ ಪಾಠವಿದೆ.

ಶಾಂತಿಮಂಗಲಹೋಮೇಷು ನಾಸ್ತಿಕ್ಯಂ ಯತ್ರ ಜಾಯತೇ ।
ರಾಜಾ ವಾ ಮ್ರಿಯತೇ ತತ್ರ ಸವಾ ದೇಶೋ ವಿನಶ್ಯತಿ ॥ ೧೩ ॥

ರಾಜ್ಞೋ ವಿನಾಶೇ ಸಂಪ್ರಾಪ್ತೇ ನಿಮಿತ್ತಾನಿ ನಿಬೋಧ ಮೇ ।
ಬ್ರಾಹ್ಮಣಾನ್ ಪ್ರಥಮಂ ದ್ವೇಷ್ಟಿ ಬ್ರಾಹ್ಮಣೈಶ್ಚ ವಿರುಧ್ಯತೇ ॥ ೧೪ ॥

ಬ್ರಾಹ್ಮಣೈರ್ನಿಂದ್ಯತೇ ಚಾಪಿ ಬ್ರಾಹ್ಮಣಾಂಶ್ಚ ಜಿಘಾಂಸತಿ ।
ನ ತಾನ್ ಸ್ಮರತಿ ಕೃತ್ಯೇಷು ಯಾಚಿತಶ್ಚಾಭಿಭೂಯತೇ ॥ ೧೫ ॥

ರಮತೇ ನಿರ್ದಯಶ್ಚೈಷಾಂ ಪ್ರಶಂಸಾಂ ನಾಭಿನಂದತಿ ।
ಅಪೂರ್ವಂ ತು ಕರಂ ಲೋಭಾತ್ತಥಾ ಪಾತಯತೇ ಜನೇ ॥ ೧೬ ॥

ಏತೇಷ್ವಭ್ಯರ್ಥಯೇಚ್ಛಕ್ರಂ ಸಪತ್ನೀಕಂ ದ್ವಿಜೋತ್ತಮ ।
ಭೋಜ್ಯಾನಿ ಚೈವ ಕಾರ್ಯಾಣಿ ಸುರಾಣಾಂ ಬಲಯಸ್ತಥಾ ॥ ೧೭ ॥

---

ಶಾಂತಿಹೋಮ, ಮಂಗಲಹೋಮ ಮುಂತಾದುವುಗಳಲ್ಲಿ ನಾಸ್ತಿಕ್ಯದಿಂದ ಕೂಡಿರುವರೋ, ಆ ದೇಶಗಳ ರಾಜನು ಮರಣಹೊಂದುತ್ತಾನೆ. ಅಥವಾ ಅಂತಹ ದೇಶವೇ ನಾಶಹೊಂದುತ್ತದೆ

೧೪–೧೬. ರಾಜನಿಗೆ ವಿನಾಶವು ಸನ್ನಿಹಿತವಾದಲ್ಲಿ ಉಂಟಾಗುವ ಅಶುಭ ನಿಮಿತ್ತಗಳನ್ನು ಹೇಳುತ್ತೇನೆ ಕೇಳು, ಮೊದಲು ಆ ರಾಜನು ಬ್ರಾಣರನ್ನು ದ್ವೇಷಿಸುತ್ತಾನೆ. ಅವರೊಡನೆ ವಿರೋಧಹೊಂದುತ್ತಾನೆ. ಅಂತಹ ಬ್ರಾಹ್ಮಣರಿಂದ ನಿಂದಿಸಲ್ಪಡುತ್ತಾನೆ ಮತ್ತು ಅವರನ್ನು ಕೊಲ್ಲಲು ಆಶಿಸುತ್ತಾನೆ. ತಾನು ಮಾಡುವ ಶಾಸ್ತ್ರೀಯಕಾರ್ಯದಲ್ಲಿ ಅವರನ್ನು ಸ್ಮರಿಸುವುದೂ ಇಲ್ಲ. ಬ್ರಾಹ್ಮಣರು ಯಾಚನೆ ಮಾಡಿದಲ್ಲಿ ಅವರನ್ನು ತಿರಸ್ಕರಿಸುತ್ತಾನೆ. ಇಂತಹ ಬ್ರಾಹ್ಮಣರ ವಿಷಯದಲ್ಲಿ ನಿರ್ದಯತೆಯಿಂದ ವರ್ತಿಸುತ್ತಾನೆ. ಇವರ ಪ್ರಶಂಸೆಯನ್ನು ಒಪ್ಪುವುದಿಲ್ಲ. ಅರ್ಥಲೋಭದಿಂದ ಇಲ್ಲದ ಸಲ್ಲದ ಕಂದಾಯವನ್ನು ಜನರಮೇಲೆ ಹಾಕುತ್ತಾನೆ ಇಂತಹ ಅಶುಭನಿಮಿತ್ತಗಳು ರಾಜನಲ್ಲಿ ಕಂಡುಬಂದಲ್ಲಿ ಅವನಿಗೆ ಸನ್ನಿಹಿತವಾಗಲಿರುವ ಮೃತ್ಯುವನ್ನು ತಪ್ಪಿಸಲು ಸಪತ್ನೀಕನಾದ ಇಂದ್ರನನ್ನು ಯಥಾವಿಧಿಯಾಗಿ ಪೂಜಿಸಬೇಕು.

೧೭–೧೮. ಭೋಜ್ಯವಾದ ಎಲ್ಲಾ ವಸ್ತುಗಳನ್ನೂ ಮಾಡಬೇಕು ದೇವತೆಗಳಿಗೆ ಬಲಿಪ್ರದಾನವನ್ನೂ ಮಾಡಬೇಕು. ಬ್ರಾಹ್ಮಣರಿಗೆ ಗೋವು, ಭೂಮಿ,

ಗಾವಶ್ಚ ದೇಯಾ ದ್ವಿಜಪುಂಗವೇಭ್ಯೋ
ಭುವಂ ತಥಾ ಕಾಂಚನಮಂಬರಂ ಚ ।
ಹೋಮಶ್ಚ ಕಾರ್ಯಃ ಸುರಪೂಜನಂ ಚ
ಏವಂ ಕೃತೇ ಶಾಂತಿಮುಪೈತಿ ಪಾಪಂ ॥ ೧೮ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ಉತ್ಪಾತಪ್ರಶಮನಂ ನಾಮ
ಚತುಶ್ಚತ್ವಾರಿಂಶದುತ್ತರಶತತಮೋಽಧ್ಯಾಯಃ

---

ಸುವರ್ಣ, ವಸ್ತ್ರ, ಇವುಗಳನ್ನು ದಾನಮಾಡಿ, ಹೋಮವನ್ನೂ ದೇವತಾಪೂಜೆಯನ್ನೂ ಮಾಡಿದಲ್ಲಿ ಇಂತಹ ಪಾಪವು ಶಾಂತಿ ಹೊಂದುತ್ತದೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ ಸಂವಾದ ದಲ್ಲಿ ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ ಉತ್ಪಾತ ಪ್ರಶಮನವೆಂಬ ನೂರ ನಲವತ್ತನಾಲ್ಕನೆಯ ಅಧ್ಯಾಯ ಮುಗಿದಿದೆ.

॥ ಓಂ ॥

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಪಂಚಚತ್ವಾರಿಂಶದುತ್ತರಶತತಮೋಽಧ್ಯಾಯಃ

**॥ ರಾಮ ಉವಾಚ ॥**

**ಕಿಂನು ಕೃತ್ಯತಮಂ ರಾಜ್ಞಃ ತನ್ಮಮಾಚಕ್ಷ್ವ ಪೃಚ್ಛತಃ ।**
**ರಾಜ್ಯತಂತ್ರಂ ಕಥಂ ರಾಜ್ಞಾ ಪಾಲನೀಯಂ ವಿಪಶ್ಚಿತಾ ॥ ೧ ॥**

**॥ ಪುಷ್ಕರ ಉವಾಚ ॥**

**ಸಪ್ತಾಂಗಸ್ಯ ಚ ರಾಜ್ಯಸ್ಯ ಭಾವಯುಕ್ತೇನ ಭೂಭೃತಾ ।**
**ಏತಾವದೇವ ಕರ್ತ್ತವ್ಯಂ ರಾಜ್ಞಾ ತಂತ್ರಂ ಭೃಗೂತ್ತಮ ॥ ೨ ॥**

---

### ನೂರ ನಲವತ್ತೈದನೆಯ ಅಧ್ಯಾಯ.

೧. ಭಾರ್ಗವನು ಪ್ರಶ್ನೆ ಮಾಡುತ್ತಾನೆ:— ರಾಜನು ಮಾಡಬೇಕಾದ ಮುಖ್ಯವಾದ ಕಾರ್ಯವೇನೆಂಬುದನ್ನು ನನಗೆ ಹೇಳಬೇಕು ಬುದ್ಧಿಶಾಲಿಯಾದ ರಾಜನಿಂದ ರಾಜ್ಯದ ಆಡಳಿತವು ಹೇಗೆ ನಿರ್ವಹಿಸಲ್ಪಡಬೇಕು. ಈ ಪ್ರಶ್ನೆಗೆ ಉತ್ತರವಾಗಿ ಪುಷ್ಕರನು ಹೇಳುತ್ತಾನೆ.

೨-೩. ರಾಜ್ಯವೆಂದು ಹೇಳಲ್ಪಡುವ ರಾಜನ ಕರ್ತವ್ಯಗಳು ಏಳು ಅಂಗಗಳುಳ್ಳದ್ದಾಗಿದೆ. ಕಾಲೋಚಿತವಾದ ವಿವೇಕ ಉಳ್ಳ ದೊರೆಯು ಈ ಸಪ್ತಾಂಗಗಳನ್ನು ಸಿದ್ಧಪಡಿಸುವುದೇ ರಾಜ್ಯಾಡಳಿತವಾಗಿ ಪರಿಣಮಿಸುತ್ತದೆ. ಸಾಮೋಪಾಯ ದಾನವೆಂಬ ಉಪಾಯ ಮತ್ತು ದುರ್ಗಗಳ ಸ್ಥಾಪನೆ, ಧನಕನಕಾದಿಗಳಿಂದ ಕೂಡಿದ ಬೊಕ್ಕಸ, ಮತ್ತು ಶತ್ರುನಿರಸನಕ್ಕೆ ಬೇಕಾದ ದಂಡೋಪಾಯ ಎಂದರೆ ಸೈನ್ಯದ

ಸಾಮ ದಾನಂ ತಥಾ ದುರ್ಗಂ ಕೋಶೋ ದಂಡಸ್ತಥೈವ ಚ ।
ಮಿತ್ರಂ ಜನಪದಶ್ಚೇತಿ ರಾಜ್ಯಂ ಸಪ್ತಾಂಗಮುಚ್ಯತೇ ॥ ૩ ॥

ಸಪ್ತಾಂಗಸ್ಯ ಚ ರಾಜ್ಯಸ್ಯ ವಿಘ್ನಕರ್ತ್ರ್‌ನ್ ವಿನಾಶಯೇತ್ ।
ಅಹಿತಾನ್ ಘಾತಯೇದ್ರಾಜಾ ಕ್ಷಿಪ್ರಮೇವಾವಿಚಾರಯನ್ ॥ ೪ ॥

ಸಪ್ತಾಂಗಸ್ಯ ಚ ರಾಜ್ಯಸ್ಯ ವೃದ್ಧಿಃ ಕಾರ್ಯಾ ಸ್ವಮಂಡಲೇ ।
ಮಂಡಲೇಷು ಚ ಸರ್ವೇಷು ಕರ್ಷಣೀಯಾ ಮಹೀಕ್ಷಿತಾ ॥ ೫ ॥

॥ ರಾಮ ಉವಾಚ ॥

ಮಂಡಲಾನಿ ಸಮಾಚಕ್ಷ್ವ ವಿಜಿಗೀಷೋರ್ಯಥಾವಿಧಿ ।
ಯಸ್ಯಾಶ್ರಿತ್ಯ ನೃಪೈಃ ಕಾರ್ಯಂ ಸಂಧಿವಿಗ್ರಹಚಿಂತನಂ ॥ ೬ ॥

---

ಸಿದ್ಧತೆ, ಮಿತ್ರರನ್ನು ಹೊಂದಿರುವಿಕೆ, ಮತ್ತು ದೊಡ್ಡ ದೊಡ್ಡ ನಗರ ಮತ್ತು ದೇಶಗಳು ಇವೇ ರಾಜ್ಯಕ್ಕೆ ಸೇರಿದ ಏಳು ಅಂಗಗಳು ಇವುಗಳ ಸಿದ್ಧತೆಯೇ ಧೊರೆ ಯಾದವನ ಮುಖ್ಯ ಕಾರ್ಯ.

೪–೫ ಈ ವಿಧವಾದ ಏಳು ಅಂಗಗಳುಳ್ಳ ರಾಜ್ಯಾಡಳಿತಕ್ಕೆ ವಿಘ್ನ ಉಂಟು ಮಾಡುವ ಜನರನ್ನು ರಾಜನು ದೇಶದಿಂದ ಹೊರಕ್ಕೆ ಕಳುಹಿಸಬೇಕು. ದೇಶದಲ್ಲೇ ಇದ್ದು ಯಾರು ಅಹಿತವನ್ನುಂಟುಮಾಡುವರೋ ಅಂತಹವರನ್ನು ವಿಚಾರಮಾಡದೆ ಜಾಗ್ರತೆಯಾಗಿ ನಾಶಪಡಿಸಬೇಕು ಇಂತಹ ಏಳು ಅಂಗಗಳನ್ನೂ ಸ್ವದೇಶದಲ್ಲಿ ಹೆಚ್ಚಾಗಿ ವೃದ್ಧಿಗೆ ತರಬೇಕು. (ಮುಂದೆ ಹೇಳುವ) ಎಲ್ಲಾ ಮಂಡಲಗಳಲ್ಲಿಯೂ ಧೊರೆಯಾದವನು ಸ್ವಾಧೀನಕ್ಕೆ ತೆಗೆದುಕೊಳ್ಳುವ ಪ್ರಯತ್ನವನ್ನು ನಡೆಸುತ್ತಿರಬೇಕು.

೬ ರಾಮನು ಪ್ರಶ್ನೆಮಾಡುತ್ತಾನೆ : —ಜಯಾಪೇಕ್ಷೆಯುಳ್ಳ ರಾಜನು ಯಾವ ಯಾವ ಮಂಡಲಗಳನ್ನು ಆಶ್ರಯಿಸಿ ಸಂಧಿವಿಗ್ರಹಾದಿಗಳನ್ನು ಆಲೋಚಿಸ ಬೇಕಾಗುತ್ತದೆಯೋ ಅಂತಹ ಮಂಡಲಗಳನ್ನು ಯಥಾವಿಧಿಯಾಗಿ ಹೇಳಬೇಕು. ಇದಕ್ಕೆ ಉತ್ತರವಾಗಿ ಪುಷ್ಕರನು ಹೇಳುತ್ತಾನೆ.

|| ಪುಷ್ಕರ ಉವಾಚ ||

ಆತ್ಮಮಂಡಲಮೇವಾತ್ರ ಪ್ರಥಮಂ ಮಂಡಲಂ ಭವೇತ್ ।
ಸಮಂತಾತ್ತಸ್ಯ ವಿಜ್ಞೇಯಾ ರಿಪವೋ ಮಂಡಲಸ್ಯ ತು || ೭ ||

ಅಧಿಕೃತ್ಯಾಭಿಯೋಜ್ಯಂ ತು ತತ್ರಾಪಿ ಶೃಣು ಕಲ್ಪನಂ ।
ಅಭಿಯೋಜ್ಯಃ ಸ್ಮೃತಃ ಶತ್ರುಸ್ತತ್ರಾಪಿ ಚ ಪ್ರತೀಕ್ಷಿತಾ || ೮ ||

ತತ್ಪರಸ್ತು ಸುಹೃತ್ ಜ್ಞೇಯಃ ಮಿತ್ರಂ ಮಿತ್ರರಿಪುಸ್ತಥಾ ।
ಏತತ್ಪುರಸ್ತಾತ್ಕಥಿತಂ ಪಶ್ಚಾದಪಿ ನಿಬೋಧ ಮೇ || ೯ ||

ಪಾರ್ಷ್ಣಿಗ್ರಾಹಸ್ತತಃ ಪಶ್ಚಾತ್ತತಸ್ತ್ವಾಕ್ರಂದ ಉಚ್ಯತೇ ।
ಆಸಾರಸ್ತು ತತೋಽಸ್ಯನ್ಯಸ್ತ್ವಾಕ್ರಂದಾಸಾರ ಉಚ್ಯತೇ || ೧೦ ||

೭-೮. ಆತ್ಮಮಂಡಲವೆಂಬುದು ಮೊದಲನೆಯದು. ತನ್ನ ದೇಶವೆಂದು ತಾತ್ಪರ್ಯ. ಆ ಮಂಡಲದ ಸುತ್ತಲೂ ಇರುವ ದೇಶಗಳು ರಿಪುಮಂಡಲವೆನಿಸಿ ಕೊಳ್ಳುತ್ತವೆ. ಆ ಶತ್ರುಮಂಡಲದ ವಿಷಯದಲ್ಲಿಯೂ ಅಧಿಕಾರ ಹೊಂದಿ ಸ್ವಾಧೀನಕ್ಕೆ ತಂದುಕೊಳ್ಳಬೇಕಾದ ವಿಷಯದಲ್ಲಿ ಈ ರೀತಿ ಶತ್ರುಮಿತ್ರಭಾವಗಳನ್ನು ಕಲ್ಪಿಸಬೇಕಾಗುತ್ತದೆ ಎದುರಾಗಿ ಹೋಗಿ ಎದುರಿಸಲ್ಪಡತಕ್ಕವನು ಶತ್ರುವೆಂದರ್ಥ. ಅದರಲ್ಲಿಯೂ ಪರೀಕ್ಷಿಸುತ್ತಿರುವ ಶತ್ರುವು ಮುಖ್ಯವಾದ ಶತ್ರುವಾಗುತ್ತಾನೆ.

೯-೧೦. ಆ ಶತ್ರುಮಂಡಲಕ್ಕಿಂತ ದೂರದಲ್ಲಿರುವವನು ಸುಹೃತ್ತೆಂದು ತಿಳಿಯಬೇಕು. ಹಾಗೆಯೇ ಮಿತ್ರನು ಮಿತ್ರಮಂಡಲಕ್ಕೆ ಸೇರಿದವನೆಂತಲೂ, ಮಿತ್ರನಂತಿದ್ದರೂ ಶತ್ರುವಾಗಿರುವವನು ಮಿತ್ರರಿಪುವೆಂತಲೂ ತಿಳಿಯಬೇಕು ಈ ವಿಚಾರವನ್ನು ಮೊದಲಿನಲ್ಲಿಯೇ ಹೇಳಿರುವೆನು ಈಗಲೂ ಹೇಳಿದ್ದೇನೆ, ಹಿಂಭಾಗ ದಲ್ಲಿರುವವನು ಪಾರ್ಷ್ಣಿಗ್ರಾಹನೆಂದೂ. ಅದಕ್ಕೂ ಮೇಲೆ ಇರುವವನು ಆಕ್ರಂದನೆಂದೂ ಹೇಳಲ್ಪಡುತ್ತಾನೆ. ಅವನಿಗಿಂತಲೂ ಬೇರೆ ಇರುವವನು ಆಸಾರನೆಂದೂ ಮತ್ತೊಬ್ಬನು ಆಕ್ರಂದಾಸಾರನೆಂದೂ ಹೇಳಲ್ಪಡುತ್ತಾನೆ.

ಜಿಗೀಷೋಃ ಶಸ್ತ್ರಯುಕ್ತಸ್ಯ ವಿಯುಕ್ತಸ್ಯ ತಥಾ ದ್ವಿಜ ।
ನಿಗ್ರಹಾನುಗ್ರಹೇ ಶಕ್ತೋ ಮಧ್ಯಸ್ಥಃ ಪರಿಕೀರ್ತಿತಃ ॥ ೧೧ ॥

ನಿಗ್ರಹಾನುಗ್ರಹೇ ಶಕ್ತಃ ಸರ್ವೇಷಾಮಪಿ ಯೋ ಭವೇತ್ ।
ಉದಾಸೀನಃ ಸ ಕಥಿತೋ ಬಲವಾನ್ ಪೃಥಿವೀಪತಿಃ ॥ ೧೨ ॥

ಏತಾವದೇವ ತೇ ರಾಮ ಪ್ರೋಕ್ತಂ ದ್ವಾದಶರಾಜಕಂ ।
ನಾತ್ರಾಪಿ ನಿಶ್ಚಯಶ್ಶಕ್ಯೋ ವಕ್ತುಂ ಮನುಜಪುಂಗವ ॥ ೧೩ ॥

ನಾಸ್ತಿ ಜಾತ್ಯಾ ರಿಪುರ್ನಾಮ ಮಿತ್ರಂ ನಾಮ ನ ವಿದ್ಯತೇ ।
ಸಾಮರ್ಥ್ಯಯೋಗಾಜ್ಜಾಯಂತೇ ಮಿತ್ರಾಣಿ ರಿಪವಸ್ತಥಾ ॥ ೧೪ ॥

ತ್ರಿವಿಧಾ ರಿಪವಃ ಪ್ರೋಕ್ತಾಃ ಕುಲ್ಯಾ ನಂತರಕೃತ್ರಿಮಾಃ ।
ಪೂರ್ವಃ ಪೂರ್ವೋ ಗುರುಸ್ತೇಷಾಂ ದುಶ್ಚಿಕಿತ್ಸ್ಯತಮೋ ಮತಃ ॥ ೧೫ ॥

೧೧–೧೨. ವಿಜಯೇಚ್ಛೆಯಿಂದ ಶಸ್ತ್ರಧಾರಿಯಾಗಿರುವವನ ಮತ್ತು ಶಸ್ತ್ರವಿಲ್ಲದೆ ಇರುವವನ ವಿಷಯದಲ್ಲಿಯೂ ಸಹ ನಿಗ್ರಹಾನುಗ್ರಹಮಾಡಲು ಸಮರ್ಥನಾಗಿರುವವನು ಮಧ್ಯಸ್ಥನೆಂದು ಹೇಳಲ್ಪಡುತ್ತಾನೆ ಎಲ್ಲರ ವಿಷಯದಲ್ಲಿಯೂ ನಿಗ್ರಹಾನುಗ್ರಹಸಮರ್ಥನಾಗಿ ಯಾವ ದೊರೆಯು ಇರುತ್ತಾನೆಯೋ ಬಲಿಷ್ಠನಾದ ಆ ದೊರೆಯು ಉದಾಸೀನನೆನಿಸಿಕೊಳ್ಳುತ್ತಾನೆ.

೧೩–೧೪. ಎಲೈ ರಾಮನೇ ರಾಜನ ಆಡಳಿತಕ್ಕೆ ಸಂಬಂಧಪಟ್ಟ ಈ ಹನ್ನೆರಡು ಮಂಡಲಗಳನ್ನು ನಿನಗೆ ಹೇಳಿದ್ದೇನೆ ಆದರೆ ಈ ವಿಷಯದಲ್ಲಿ ಹೀಗೆಯೇ ಎಂದು ನಿಶ್ಚಯಿಸಲು ಸಾಧ್ಯವಿಲ್ಲ. ಏತಕ್ಕೆಂದರೆ ಶತ್ರುವೆಂದು ಕರೆಯಲ್ಪಡುವವನು ಜಾತಿಯಿಂದಲೇ ಶತ್ರುವಾಗಿ ಹುಟ್ಟಿ ಹಗೆಯಾಗುವುದಿಲ್ಲ ಮಿತ್ರನೆಂಬುವವನೂ ಸಹ ಜಾತಿಯಿಂದಲೇ ಮಿತ್ರನಾಗವುದಿಲ್ಲ. ಅವರವರ ಸಾಮರ್ಥ್ಯಾನುಗುಣವಾದ ಕಾರ್ಯಗಳಿಂದ ಇಂತಹ ಮಿತ್ರಶತ್ರುಭಾವವು ಉಂಟಾಗುತ್ತದೆ. (ಶತ್ರುಮಿತ್ರಭಾವವು ಸ್ವಾಭಾವಿಕವಾದ ಧರ್ಮವಲ್ಲ. ಅವರವರ ಕಾರ್ಯಕ್ಕೆ ಅನುಗುಣವಾದ ಅಸ್ವಾಭಾವಿಕವಾದ ಧರ್ಮ. ಇಂತಹ ಕಾರ್ಯಾಭಿಸಂಧಿಯಿಂದ ಶತ್ರುವೂ ಮಿತ್ರನಾಗಬಹುದು, ಮಿತ್ರನೂ ಶತ್ರುವಾಗಬಹುದುದೆಂದು ತಾತ್ಪರ್ಯ.)

೧೫–೧೬. ಕುಲ್ಯ (ತನ್ನ ಕುಲದವನು) ಅನಂತರ ಕೃತ್ರಿಮ ಎಂದು ಶತ್ರುಗಳು ಮೂರುವಿಧವಾಗಿರುತ್ತಾರೆ. ಇವರುಗಳಲ್ಲಿ ಕೊನೆಕೊನೆಯವನಿಗಿಂತ ಮೊದಮೊದಲಿ

ಅನಂತರೋಽಪಿ ಯಃ ಶತ್ರುಃ ಸೋಽಪಿ ಮೇ ಕೃತ್ರಿಮೋ ಮತಃ ।
ಪಾರ್ಷ್ಣಿಗ್ರಾಹೋ ಭವೇದ್ರಾಜಾ ಶತ್ರೋರ್ಮಿತ್ರಾಭಿಯೋಗಿನಃ ॥ ೧೬ ॥

ಪಾರ್ಷ್ಣಿಗ್ರಾಹಮುಪಾಯೈಸ್ತು ಶಮಯೇಚ್ಚ ತಥಾ ಸ್ವಕಂ ।
ಮಿತ್ರೇಣ ಶತ್ರೋರುಚ್ಛೇದಂ ನ ಶಂಸಂತಿ ಪುರಾತನಾಃ ॥ ೧೭ ॥

ಮಿತ್ರಂ ಹಿ ಶತ್ರುತಾಮೇತಿ ಸಾಮಂತತ್ವಾದನಂತರಂ ।
ಶತ್ರುಂ ಜಿಗೀಷುರುಚ್ಛಿಂದ್ಯಾತ್ಸ್ವಯಂ ಶಕ್ನೋತಿ ಚೇದ್ಯದಿ ॥ ೧೮ ॥

ಪ್ರತಾಪವೃದ್ಧೌ ತೇನಾಸ್ಯ ನ ಮಿತ್ರಾಜ್ಜಾಯತೇ ಭಯಂ ।
ನಾನ್ಯಥಾ ಪೃಥಿವೀ ಜೇತುಂ ಶಕ್ಯಾ ರಾಮ ಜಿಗೀಷುಣಾ ॥ ೧೯ ॥

ಪ್ರತಾಪವೃದ್ಧಿಃ ಕರ್ತವ್ಯಾ ತಸ್ಮಾದ್ರಾಜ್ಞಾ ಯಥಾ ತಥಾ ।
ತಥಾಸ್ಯ ನೋದ್ವಿಜೇಲ್ಲೋಕೋ ವಿಶ್ವಾಸ್ಯಶ್ಚ ಯಥಾ ಭವೇತ್ ॥ ೨೦ ॥

ನನಸು ಪ್ರಬಲನೆನಿಸುತ್ತಾನೆ　ಪ್ರತೀಕಾರಕ್ಕೆ ಅಶಕ್ಯನೂ ಆಗುತ್ತಾನೆ. ಅನಂತರ ನೆಂಬ ಶತ್ರುವೂ ಕೃತ್ರಿಮಶತ್ರುವೇ ಆಗುತ್ತಾನೆ ಎಂದು ನನ್ನ ಅಭಿಪ್ರಾಯ. ಮಿತ್ರನ ಮೇಲೆ ದಂಡೆತ್ತಿಹೋಗುವ ಶತ್ರುವಿನ ವಿಷಯದಲ್ಲಿ ರಾಜನಾದವನು ಪಾರ್ಷ್ಣಿಗ್ರಾಹ ನಾಗಿಯೇ ಆಗಬೇಕು (ಹಿಂದಿನಿಂದ ಬೆನ್ನು ಹತ್ತಿ ಹೋಗುವವನು ಪಾರ್ಷ್ಣಿಗ್ರಾಹ ನಾಗುತ್ತಾನೆ.

೧೭-೧೯. ಅಂತಹ ಸಮಯದಲ್ಲಿ ತನ್ನನ್ನೂ ಬೆನ್ನುಹತ್ತಿ ಬಂದ ಮತ್ತೊಬ್ಬ ನನ್ನು ಉಪಾಯಗಳಿಂದ ಶಾಂತಿಗೊಳಿಸಬೇಕು, ಮಿತ್ರನಾಗಿರುವವನಿಂದ ತನ್ನ ಶತ್ರುವನ್ನು ನಾಶಪಡಿಸುವಿಕೆಯನ್ನು ಪ್ರಾಚೀನರಾದ ಶಾಸ್ತ್ರಜ್ಞರು ಮೆಚ್ಚುವುದಿಲ್ಲ ಏತಕ್ಕೆಂದರೆ ಮಿತ್ರನೂ ಸಹ ಸಾಮಂತರಾಜನಾಗಿರುವುದರಿಂದ ಮತ್ತೊಬ್ಬರೊಡನೆ ಕಲಹಬಂದ ಕಾಲದಲ್ಲಿ ತನಗೆ ಶತ್ರುವೇ ಆಗುತ್ತಾನೆ. ಆದುದರಿಂದ ಶತ್ರುವಿಜಯದಲ್ಲಿ ತೊಡಗುವವನು ಸಾಮರ್ಥ್ಯವಿದ್ದಲ್ಲಿ ತಾನಾಗಿಯೇ ಆ ಶತ್ರುವನ್ನು ನಾಶಮಾಡಬೇಕು ಇದರಿಂದ ಇವನ ಪರಾಕ್ರಮವು ಅಭಿವೃದ್ಧಿ ಹೊಂದುತ್ತದೆ　ಆಗ ಸಾಮಂತ ನಾಗಿರುವ ಮಿತ್ರನಿಂದ ಇವನಿಗೆ ಭಯವಿಲ್ಲ ಹೀಗಿಲ್ಲದಿದ್ದರೆ(ಜಯಶಾಲಿ)ವಿಜಯೇಚ್ಛೆ ಯುಳ್ಳವನು ಪೃಥಿವಿಯನ್ನು ಜಯಿಸಿ ಸ್ವಾಧೀನ ಪಡಿಸಿಕೊಳ್ಳಲು ಅವಕಾಶವೇ ಇರುವುದಿಲ್ಲ

ಜಿಗೀಷುರ್ಧರ್ಮವಿಜಯೀ ತಥಾ ಲೋಕಂ ವಶಂ ನಯೇತ್ ।
ಯಸ್ಮಾದಧರ್ಮ ವಿಜಯೀ ತಸ್ಮಾದುದ್ವಿಜತೇ ಜನಃ ।
ಪ್ರಾಪ್ಯಾಪಿ ವಸುಧಾಂ ಕೃತ್ಸ್ನಾಂ ನ ಚಿರಂ ಶ್ರಿಯಮಶ್ನುತೇ ॥ ೨೧ ॥

ಧರ್ಮೇಣ ಯಜ್ಞೋ ಭವತೀಹ ವೃದ್ಧಿ-
ರ್ಧರ್ಮೇಣ ವೃದ್ಧಿಶ್ಚ ತಥಾ ಪರತ್ರ ।
ಧರ್ಮೇಣ ಲಬ್ಧಾಂ ವಸುಧಾಂ ಜಿತಾರಿ-
ರ್ಭುಕ್ತ್ವಾ ಚಿರಂ ನಾಕಮನುಪ್ರಯಾತಿ ॥ ೨೨ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ರಾಜ್ಯಮಂಡಲ ವರ್ಣನಂ ನಾಮ ಪಂಚಚತ್ವಾರಿಂಶದುತ್ತರಶತತಮೋಽಧ್ಯಾಯಃ

---

೨೧-೨೨. ಆದುದರಿಂದ ಈ ಪ್ರಕಾರವಾದ ವಿಜಯಗಳಿಂದ ರಾಜನಾದವನು ತನ್ನ ಪ್ರತಾಪಾಭಿವೃದ್ಧಿಯನ್ನು ಹೇಗಾದರೂ ಉಂಟುಮಾಡಿಕೊಳ್ಳಲೇಬೇಕು. ಇಂತಹ ರಾಜನ ವಿಷಯದಲ್ಲಿ ಜನಗಳು ವ್ಯಥೆಗೊಳ್ಳುವುದಿಲ್ಲ (ಅಸಮರ್ಥನಾದ ರಾಜನಿಂದ ಜನರೂ ವ್ಯಥೆಪಡುತ್ತಾರೆಂದು ತಾತ್ಪರ್ಯ) ಜನಗಳ ವಿಶ್ವಾಸಕ್ಕೂ ಪಾತ್ರನಾಗುತ್ತಾನೆ. ಆದುದರಿಂದ ಧರ್ಮಮಾರ್ಗದಿಂದ ವಿಜಯ ಹೊಂದಿದವನು ಜನಗಳಿಗೆ ಉದ್ವೇಗ ಉಂಟಾಗದಂತೆಯೂ, ತನ್ನಲ್ಲಿ ವಿಶ್ವಾಸ ಉಂಟಾಗುವಂತೆಯೂ, ಮಾಡಿ ಕ್ರಮಕ್ರಮವಾಗಿ ತನ್ನ ಗುಣಗಳಿಂದಲೇ ಜನಗಳನ್ನು ವಶಪಡಿಸಿಕೊಳ್ಳಬೇಕು. ಅಧರ್ಮದಿಂದ ವಿಜಯವನ್ನು ಗಳಿಸಿದ ರಾಜನಲ್ಲಿ ಜನಗಳಿಗೆ ಉದ್ವೇಗ ಉಂಟಾಗುತ್ತದೆ. ಅಂತಹ ವಿಜಯದಿಂದ ಅವನು ಎಲ್ಲಾ ಭೂಮಂಡಲವನ್ನೂ ಹೊಂದಿದರೂ ಬಹಳಕಾಲ ಅದನ್ನು ಅನುಭವಿಸುವುದಿಲ್ಲ. ಆದುದರಿಂದ ಧರ್ಮ ಮಾರ್ಗದಿಂದ ಯಜ್ಞಮಾಡಿದಂತೆಯೇ ಆಗುತ್ತದೆ. ಈ ಲೋಕದಲ್ಲಿ ಅಭಿವೃದ್ಧಿಯೂ ಪರಲೋಕದ ಅಭಿವೃದ್ಧಿಯೂ ಉಂಟಾಗುತ್ತದೆ. ಧರ್ಮಲಬ್ಧವಾದ ಭೂಮಿಯ ಸಂಪತ್ತನ್ನು ಶತ್ರುವಿಜಯ ಮೂಲಕವಾಗಿ ಬಹುಕಾಲ ಅನುಭವಿಸಿ ಅನಂತರ ಸ್ವರ್ಗ ಹೊಂದಿ ಅಲ್ಲಿಯ ಸುಖಕ್ಕೂ ಭಾಗಿಯಾಗುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ ರಾಜ್ಯಮಂಡಲ ವರ್ಣನವೆಂಬ ನೂರ ನಲವತ್ತೈದನೆಯ ಅಧ್ಯಾಯ ಮುಗಿದಿದೆ.

॥ ಓಂ ॥

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಷಟ್‌ಚತ್ವಾರಿಂಶದುತ್ತರಶತತಮೋಽಧ್ಯಾಯಃ

**॥ ರಾಮ ಉವಾಚ ॥**

**ಸಾಮಭೇದೌ ತಥಾ ಪ್ರೋಕ್ತೌ ದಾನದಂಡೌ ತಥೈವ ಚ ।**
**ದಂಡಃ ಸ್ವದೇಶೇ ಕಥಿತಃ ಪರದೇಶೆ ಬ್ರವೀಹಿ ನೋ ॥ ೧ ॥**

**॥ ಪುಷ್ಕರ ಉವಾಚ ॥**

**ದ್ವಿವಿಧಃ ಕಥಿತೋ ದಂಡಃ ಪರದೇಶೇ ಪುರಾತನೈಃ ।**
**ಪ್ರಕಾಶಶ್ಚಾಪ್ರಕಾಶಶ್ಚ ತಂ ನಿಬೋಧ ದ್ವಿಜೋತ್ತಮ ॥ ೨ ॥**

---

### ನೂರ ನಲವತ್ತಾರನೇ ಅಧ್ಯಾಯ.

೧. ಭಾರ್ಗವನು ಪುನಃ ಪ್ರಶ್ನೆಮಾಡುತ್ತಾನೆ. ಸಾಮ, ಭೇದ, ದಾನ, ದಂಡಗಳೆಂಬ ಉಪಾಯಗಳನ್ನು ಹೇಳಿರುವಿರಿ. ಸ್ವದೇಶದಲ್ಲಿ ಪ್ರಯೋಗಿಸ ಬಹುದಾದ ದಂಡೋಪಾಯವನ್ನೂ ಹೇಳಿರುವಿರಿ. ಪರದೇಶದಲ್ಲಿ ಆದಂಡೋ ಪಾಯದ ಪ್ರಯೋಗ ವಿಧಾನವನ್ನೂ ಹೇಳಬೇಕು. ಈ ಪ್ರಶ್ನೆಗೆ ಉತ್ತರವಾಗಿ ಉಷ್ಕರನು ಹೇಳುತ್ತಾನೆ.

೨-೩. ಪರದೇಶದಲ್ಲಿ ದಂಡೋಪಾಯದ ವಿಧಾನ ಕ್ರಮವನ್ನು ಪ್ರಾಚೀನರಾದ ಶಾಸ್ತ್ರಜ್ಞರು ಎರಡು ವಿಧವಾಗಿ ಹೇಳಿರುವರು. ಪ್ರಕಾಶ, ಅಪ್ರಕಾಶವೆಂಬುವೇ ಆ ಪ್ರಕಾರಗಳು ಅದನ್ನೂ ಹೇಳುತ್ತೇನೆ ಕೇಳು, ಶತ್ರುದೇಶವನ್ನು ಕೊಳ್ಳೆ

ಲುಂಠನಂ ಗ್ರಾಮಘಾತಶ್ಚ ಸಸ್ಯಘಾತಸ್ತಥೈವ ಚ ।
ಚತುರಂಗೇನ ದಂಡೇನ ಪರೇಷಾಂಚ ತಥಾ ವಧಃ ॥ ೩ ॥

ಪ್ರಕಾಶಃ ಕಥಿತೋ ದಂಡಃ ಪ್ರತ್ಯಕ್ಷಂ ವಹ್ನಿದೀಪನಂ ।
ಅಪ್ರಕಾಶೋ ವಿಷಂ ವಹ್ನಿಃ ಗೂಢೈಶ್ಚ ಪುರುಷೈರ್ವಧಃ ॥ ೪ ॥

ದೂಷಣಂ ಯವಸಾದೀನಾಂ ಉದಕಾನಾಂ ಚ ದೂಷಣಂ ।
ರಸಕ್ರಿಯಾಶ್ಚ ವಿವಿಧಾಃ ಸುಭಗಾ ಭೇದನಾದಿಕಂ ॥ ೫ ॥

ಏವಮಾದೀನಿ ಕಾರ್ಯಾಣಿ ಪರಚಕ್ರೇ ಮಹೀಕ್ಷಿತಾ ।
ಸ್ವರಾಷ್ಟ್ರೇ ಚ ದ್ವಿಜಶ್ರೇಷ್ಠ ದೂಷಣಂ ಬಲಿನಾಮಪಿ ॥ ೬ ॥

ಹೊಡೆಯುವುದು, ಗ್ರಾಮಗಳನ್ನು ನಾಶಮಾಡುವುದು, ಸಸ್ಯಗಳನ್ನು ನಾಶಮಾಡುವುದು, ಸಾಮಾದ್ಯುಪಾಯಗಳನ್ನು ಪುರಸ್ಕರಿಸುವ ದಂಡೋಪಾಯದಿಂದ ಶತ್ರುಗಳನ್ನು ವಧಿಸುವುದು ಮತ್ತು ಶತ್ರುನಗರಗಳಿಗೆ ಪ್ರತ್ಯಕ್ಷವಾಗಿಯೇ ಬೆಂಕಿ ಇಡುವುದು. ಇವು ಪ್ರಕಾಶವಾದ ದಂಡಪ್ರಯೋಗಗಳು.

೪–೫. ಅಪ್ರಕಾಶವಾದ ದಂಡೋಪಾಯಗಳೆಂದರೆ ಶತ್ರುರಾಷ್ಟ್ರದಲ್ಲಿ ವಿಷವನ್ನು ಪ್ರಯೋಗಿಸುವುದು, ಗುಟ್ಟಾಗಿ ಬೆಂಕಿಯನ್ನಿಡುವುದು, ಗೂಢಚಾರರುಗಳಿಂದ ಅಲ್ಲಿರುವ ಪ್ರಧಾನ ಪುರುಷರನ್ನು ವಧಿಸುವುದು. ಶತ್ರುದೇಶದಲ್ಲಿರುವ ಹುಲ್ಲು, ನೀರು ಮೊದಲಾದುವನ್ನು ಕೆಡಿಸಿ ಉಪಯೋಗಕ್ಕೆ ಅನರ್ಹವನ್ನಾಗಿ ಮಾಡುವುದು, ನಾನಾ ವಿಧವಾದ ರಸಗಳ ಪ್ರಯೋಗದಿಂದ ನಾಶಪಡಿಸುವುದು, ರಾಜನಿಗೂ ಪ್ರಧಾನಾಧಿಕಾರಿಗಳಿಗೂ ಭೇದಭಾವವನ್ನುಂಟುಮಾಡುವುದು, ಇತ್ಯಾದಿ ಗೂಢವ್ಯಾಪಾರಗಳನ್ನು ಶತ್ರುರಾಷ್ಟ್ರದಲ್ಲಿ ಪ್ರಯೋಗಿಸುವಿಕೆ.

೬–೭. ಎಲೈ ಬ್ರಾಹ್ಮಣೋತ್ತಮನೇ ಈ ಉಪಾಯಗಳು ಶತ್ರುರಾಷ್ಟ್ರದಲ್ಲಿ ಮಾತ್ರವೇ ಪ್ರಯೋಗಿಸಲ್ಪಡತಕ್ಕವೆಂಬ ನಿಯಮವಿಲ್ಲ. ಸ್ವದೇಶದಲ್ಲಿಯೂ ಬಲಿಷ್ಠರಾದವರಿದ್ದಲ್ಲಿ ಅವರಿಂದ ತನಗೆ ತೊಂದರೆಯುಂಟಾಗದಂತೆ ಅವರಲ್ಲಿಯೂ ಈ ಉಪಾಯ ಪ್ರಯೋಗದಿಂದ ದೂಷಣವನ್ನು ಉಂಟುಮಾಡಬೇಕು. ಈ ನಾಲ್ಕೇ

ಚತ್ವಾರ ಏತೇ ಕಥಿತಾಭ್ಯುಪಾಯಾಃ
ಪ್ರಧಾನಭೂತಾ ಭುವಿ ಪಾರ್ಥಿವಾನಾಂ ।
ಅತಃಪರಂ ತೇ ಕಥಯಾಮಿ ರಾಮ
ಶೇಷಾಸ್ತ್ರಯಸ್ತೇ ನಮಯೋರಿತಾ ಯೇ ॥ ೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ದಂಡಪ್ರಣಯನ ವರ್ಣನೋ ನಾಮ
ಷಟ್ಚತ್ವಾರಿಂಶದುತ್ತರಶತತಮೋಽಧ್ಯಾಯಃ

ಭೂಮಿಯಲ್ಲಿ ರಾಜಭಾವವನ್ನು ಅನುಭವಿಸುವ ದೊರೆಗಳಿಗೆ ಪ್ರಧಾನಗಳಾದ ಉಪಾಯಗಳು ಇನ್ನು ಮುಂದೆ ಇದುವರಿಗೂ ನಾನು ಹೇಳದಿರುವ ಇತರ ಮೂರು ಉಪಾಯಗಳನ್ನು ಹೇಳುತ್ತೇನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ
ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ
ದಂಡಪ್ರಣಯನವೆಂಬ ನೂರ ನಲವತ್ತಾರನೆಯ
ಅಧ್ಯಾಯ ಮುಗಿದಿದೆ.

|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಸಪ್ತಚತ್ವಾರಿಂಶದುತ್ತರಶತತಮೋಽಧ್ಯಾಯಃ

**|| ಪುಷ್ಕರ ಉವಾಚ ||**

**ಅಭಿಮನ್ಯೇತ ನೃಪತಿಃ ಅನೇನ ಮಮ ವಿಗ್ರಹೇ |**
**ಅನರ್ಥಾಯಾನುಬಂಧಃ ಸ್ಯಾತ್ಸಂಧಿನಾ ಚ ತಥಾ ಭವೇತ್ || ೧ ||**

**ಸಾಮ ಲಜ್ಜಾಸ್ಪದಂ ಚಾತ್ರ ದಾನಂ ಚಾತ್ರ ಕ್ಷಯಾರ್ಥಕಂ |**
**ಭೇದೆ ದಂಡೇಽನುಬಂಧಸ್ಯಾತ್ತದಾ ಪಕ್ಷಂ ಸಮಾಶ್ರಯೇತ್ || ೨ ||**

### ನೂರ ನಲವತ್ತೇಳನೆಯ ಅಧ್ಯಾಯ.

೧–೨. ಪುಷ್ಕರನು ಹೇಳುತ್ತಾನೆ. ಧೊರೆಯಾದವನು ಪರರಾಷ್ಟ್ರದ ಧೊರೆಯಿಂದ ತನಗೆ ತೊಂದರೆ ಒದಗುವ ಸಂದರ್ಭದಲ್ಲಿ ಹೀಗೆ ಆಲೋಚಿಸಬೇಕು. ಈ ಶತ್ರುವಿನೊಡನೆ ನನಗೆ ಯುದ್ಧವು ಒದಗಿದಲ್ಲಿ ಇದು ನನಗೆ ನಷ್ಟದಲ್ಲಿ ಪರ್ಯವಸಾನವಾದೀತೆ ಹಾಗೂ ಸಂಧಿಯಿಂದ ಸರಿಪಡಿಸಿಕೊಳ್ಳಲು ಸಾಧ್ಯವೇ ಈ ವಿಷಯದಲ್ಲಿ ಸಾಮೋಪಾಯವು ನನಗೇ ಲಜ್ಜೆಯನ್ನು ತರತಕ್ಕದ್ದಾಗುತ್ತದೆ. ದಾನೋಪಾಯವನ್ನು ಆಶ್ರಯಿಸಿದಲ್ಲಿ ಅದು ಅರ್ಥವ್ಯಯಕ್ಕೆ ಕಾರಣವಾಗುತ್ತದೆ. ಭೇದ ಮತ್ತು ದಂಡೋಪಾಯಗಳು ಅನರ್ಥಾವಹವಾಗಿದ್ದಲ್ಲಿ ಇದನ್ನು ಆಲೋಚಿಸಿ ಉದಾಸೀನ ಪಕ್ಷವನ್ನೇ ಆಶ್ರಯಿಸಬೇಕು

ಅವಜ್ಞೋಪಹತಸ್ತತ್ರ ರಾಜ್ಞಾ ಕಾರ್ಯೋ ರಿಪುರ್ಭವೇತ್ ।
ಉಪೇಕ್ಷಯೈವ ಧರ್ಮಜ್ಞ ಶ್ರೇಯಸೇ ತತ್ರ ಸಾ ಸ್ಮೃತಾ ॥ ೩ ॥

ಉಪೇಕ್ಷಯಾ ಯತ್ರ ತು ಶಕ್ಯಮರ್ಥಂ
ಕ್ಷಯವ್ಯವಾಯಾಸಮತಾ ನ ತತ್ರ ।
ಕಾರ್ಯಂ ಭವೇದ್ಬ್ರಾಹ್ಮಣ ವಿಗ್ರಹೇಣ
ಲಜ್ಜಾಸ್ಪದೇನಾಪ್ಯಥ ಸಂಧಿನಾ ವಾ ॥ ೪ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ಉಪೇಕ್ಷಾವರ್ಣನೋ ನಾಮ
ಸಪ್ತಚತ್ವಾರಿಂಶದುತ್ತರಶತತಮೋಽಧ್ಯಾಯಃ

---

೩-೪. ಅಂತಹ ಸಂದರ್ಭದಲ್ಲಿ ರಾಜನು ತಿರಸ್ಕಾರದಿಂದಲೇ ಶತ್ರುವನ್ನು ಭಗ್ನೋತ್ಸಾಹನನ್ನಾಗಿ ಮಾಡಬೇಕು. ಆಗ ಉಪೇಕ್ಷೆಯೇ ಶ್ರೇಯಸ್ಕರವಾಗುತ್ತದೆ. ಉಪೇಕ್ಷೆಯಿಂದಿದ್ದು ಎಲ್ಲಿ ಶತ್ರುವನ್ನು ತಡೆಗಟ್ಟಲು ಸಾಧ್ಯವಿಲ್ಲವೋ ಅಂತಹ ಸಂದರ್ಭದಲ್ಲಿ ಅರ್ಥಕ್ಷಯವಾದರೂ ಮೈತ್ರಿಯಿಂದ ಸಾಮ್ಯವನ್ನು ಹೊಂದಬೇಕು. ಹಾಗಿಲ್ಲದಿದ್ದರೆ ಯುದ್ಧವನ್ನೇ ಹೂಡಬೇಕು. ತನಗೆ ಹೆಚ್ಚಾದ ಬಲವಿಲ್ಲದಿದ್ದಲ್ಲಿ ಲಜ್ಜಾಕರವಾದರೂ ಸಂಧಿಯನ್ನೇ ಆಶ್ರಯಿಸಬೇಕು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದ ಮಾರ್ಕಂಡೇಯ ಸಂವಾದದಲ್ಲಿ
ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ
ಉಪೇಕ್ಷಾವರ್ಣನವೆಂಬ ನೂರ ನಲವತ್ತೇಳನೆಯ
ಅಧ್ಯಾಯವು ಮುಗಿದಿದೆ.



|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಅಷ್ಟಚತ್ವಾರಿಂಶದುತ್ತರಶತತಮೋಽಧ್ಯಾಯಃ

|| ಪುಷ್ಕರ ಉವಾಚ ||

ಉತ್ಪಾತೈರನೃತೈಃ ಕಾರ್ಯಂ ಪರಸ್ಯೋದ್ವೇಜನಂ ನೃಪೈಃ ।
ಅರಾತಿಶಿಬಿರಸ್ಥಾನೇ ವಸತಿರ್ಯಸ್ಯ ಪಕ್ಷಿಣಃ || ೧ ||

ಸ್ಥೂಲಸ್ಯ ತಸ್ಯ ಪುಚ್ಛಸ್ಥಾಂ ಕೃತ್ವೋಲ್ಕಾಂ ವಿಪುಲಾಂ ದ್ವಿಜ ।
ವಿಸೃಜ್ಯೈನಂ ತತಸ್ತೀರಮುಲ್ಕಾಪಾತಂ ಪ್ರದರ್ಶಯೇತ್ || ೨ ||

ಅನೇನೈವಾತ್ರ ಸಾರೇಣ ಬುದ್ಧ್ಯಾ ನಿಶ್ಚಿತ್ಯ ಯತ್ನತಃ ।
ಉತ್ಪಾತಾನಿ ತಥಾನ್ಯಾನಿ ದರ್ಶನೀಯಾನಿ ಪಾರ್ಥಿವೈಃ || ೩ ||

---

### ನೂರ ನಲವತ್ತೆಂಟನೇ ಅಧ್ಯಾಯ.

೧-೨. ಪುಷ್ಕರನು ಹೇಳುತ್ತಾನೆ. ಯುದ್ಧೋನ್ಮುಖನಾಗಿ ಬಂದ ಶತ್ರುವು ಶಿಬಿರದಲ್ಲಿರುವಾಗ ಅವನಿಗೆ ಭಯ ಉಂಟುಮಾಡಲು ಸುಳ್ಳುಸುಳ್ಳಾದ ಉತ್ಪಾತಗಳನ್ನು ಅವನಿಗೆ ತೋರ್ಪಡಿಸಬೇಕು. ಶತ್ರುವಿನ ಶಿಬಿರಪ್ರದೇಶದಲ್ಲಿಯೇ ವಾಸವಾಗಿರುವ ಒಂದು ದಪ್ಪನಾಗಿರುವ ಪಕ್ಷಿಯನ್ನು ಹಿಡಿದು ಅದರ ಪುಕ್ಕಕ್ಕೆ ದಪ್ಪವಾದ ಕೊಳ್ಳಿಯನ್ನು ಕಟ್ಟಿ ಆ ಶಿಬಿರಾಭಿಮುಖವಾಗಿ ಬಿಟ್ಟು ಆ ಶಿಬಿರದ ತೀರದಲ್ಲಿಯೇ ಉಲ್ಕಾಪಾತವನ್ನು ತೋರಿಸಬೇಕು.

೩-೪. ಈ ರೀತಿಯಾದ ಪ್ರಯೋಗದ ಫಲವನ್ನು ತನ್ನ ಬುದ್ಧಿಯಿಂದಲೇ ನಿಶ್ಚೈಸಿ ಪ್ರಯತ್ನಪೂರ್ವಕವಾಗಿ ಇತರ ಉತ್ಪಾತಗಳನ್ನೂ ಸಹ ಜಯಾಪೇಕ್ಷಿಗಳಾದ ರಾಜರು ತೋರ್ಪಡಿಸಬೇಕು. ಹೀಗೆಯೇ ನಾನಾ ವಿಧವಾದ ಕಲ್ಪಿತ ಕ್ಷುದ್ರ

ಉದ್ವೇಜನಂ ತಥಾ ಕುರ್ಯಾತ್ಕುಹಕೈರ್ವಿವಿಧೈರ್ದ್ವಿಷಾಂ ।
ಸಂವತ್ಸರಾ[1]ನಹಾರ್ಷಶ್ಚ ನಾಶಂ ಬ್ರೂಯುಃ ಪರಸ್ಯ ಚ ॥ ೪ ॥

ಜಿಗೀಷುಃ ಪೃಥಿವೀರಾಜ್ಯೇ ತೇನ ಚೋದ್ವೇಜಯೇತ್ಪರಾನ್ ।
ದೇವತಾನಾಂ ಪ್ರಸಾದಾನಿ ಕೀರ್ತನೀಯಾನಿ ತಸ್ಯ ತು ॥ ೫ ॥

ಸುಸ್ವಪ್ನಲಾಭಾಂಶ್ಚ ತಥಾ ಜಿಗೀಷುಃ ಪರಿಕೀರ್ತಯೇತ್ ।
ದುಃಸ್ವಪ್ನಲಾಭಂ ಚ ತಥಾ ಪರೇಷಾಮಿತಿ ನಿಶ್ಚಯಃ ॥ ೬ ॥

ಆಗತಂ ನೋ ಮಿತ್ರಬಲಂ ಪ್ರಹರಧ್ವಮಭೀತವತ್ ।
ಏವಂ ಬ್ರೂಯಾದ್ರಣೇ ಪ್ರಾಪ್ತೇ ಮಯಾ ಭಗ್ನಾಃ ಪರೇ ಇತಿ ॥ ೭ ॥

ಕ್ಷ್ವೇಡಾಃ ಕಿಲಕಿಲಾಶಬ್ದಂ ಮಮ ಶತ್ರುರ್ಹತಸ್ತಥಾ ।
ದೇವಾಜ್ಞಾಬೃಂಹಿತೋ ರಾಜಾ ಸನ್ನದ್ಧಃ ಸಮರಂ ಪ್ರತಿ ॥ ೮ ॥

ವ್ಯಾಪಾರಗಳಿಂದಲೂ ಶತ್ರುಗಳಿಗೆ ಭಯ ಉಂಟಾಗುವಂತೆ ಮಾಡಬೇಕು. ಕೃತ್ರಿಮ ವೇಷಧಾರಿಗಳಾದ ಜ್ಯೋತಿಷಿಕರು ಅಲ್ಲಿ ಹೋಗಿ ಶತ್ರುವಿಗೆ ನಾಶ ಉಂಟಾಗುವುದೆಂದು ಹೇಳಬೇಕು.

೫-೬. ಜಯವನ್ನು ಬಯಸುವ ದೊರೆಯು ಇಂತಹ ಜ್ಯೋತಿಷಿಕನ ಮಾತಿನಿಂದ ಶತ್ರುವನ್ನು ಭಯಪಡಿಸಬೇಕು. ತನ್ನ ವಿಜಯಕ್ಕೆ ತಕ್ಕ ದೇವತಾಪ್ರಸಾದವು ದೊರೆತಿದೆ ಎಂದು ಶತ್ರುವಿಗೆ ತಿಳಿಯುವಂತೆ ಪ್ರಖ್ಯಾತಿ ಪಡಿಸಬೇಕು. ತನ್ನ ವಿಜಯಕ್ಕೆ ಸೂಚಕವಾದ ಒಳ್ಳೆಯ ಸ್ವಪ್ನವೂ ಉಂಟಾಗಿದೆ ಎಂದು ಪ್ರಖ್ಯಾತಿಪಡಿಸಬೇಕು. ಶತ್ರುವಿಗೆ ಅಪಜಯಸೂಚಕವಾದ ದುಃಸ್ವಪ್ನ ಉಂಟಾಗಿದೆ ಎಂದೂ ಪ್ರಖ್ಯಾತಿ ಪಡಿಸಬೇಕು.

೭-೯. ಯುದ್ಧವೇ ಒದಗಿದ ಕಾಲದಲ್ಲಿಯೂ ನಮಗೆ ಸಹಾಯಕ್ಕಾಗಿ ನಮ್ಮ ಮಿತ್ರಬಲವು ಬಂದಿತು, ನಿಶ್ಚಯವಾಗಿ ಪ್ರಹರಿಸಿರಿ, ಶತ್ರುಗಳನ್ನು ನಾವು ನಾಶಪಡಿಸಿ ಆಯಿತು ಎಂದು ಯುದ್ಧಭೂಮಿಯಲ್ಲೇ ಹೇಳುತ್ತಿರಬೇಕು. ಹಾಗೆಯೇ ನಮ್ಮ ಶತ್ರುವು ಹತನಾದನು ಎಂದು ಸಿಂಹನಾದವನ್ನೂ, ಕಿಲಕಿಲಾ ಶಬ್ದವನ್ನೂ ಮಾಡಬೇಕು. ಮತ್ತು ಸೈನ್ಯದಲ್ಲಿರುವ ಭಟರು ದೇವರೇ ನಮ್ಮ ದೊರೆಗೆ ಸಾಕ್ಷಾತ್ತಾಗಿ

1 ಸಾಂವತ್ಸರಾಸ್ತಥಾಗತ್ಯ ಎಂದು ಪಾಠವಿರಬೇಕು.

**ಏವಂಪ್ರಕಾರಾ ದ್ವಿಜವರ್ಯ ಮಾಯಾಃ**
**ಕಾರ್ಯಾ ನರೇಂದ್ರೈರರಿಷು ಪ್ರಹೃಷ್ಟೈಃ ।**
**ಮಾಯಾಹತಃ ಶತ್ರುರಥ ಪ್ರಸಹ್ಯ**
**ಶಕ್ಯಃ ಸುಖಂ ಹಂತುಮ[1]ದೀನಸತ್ವಃ ॥ ೯ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ಉಪಧಿವರ್ಣನಂ ನಾಮ ಅಷ್ಟಚತ್ವಾರಿಂಶದುತ್ತರಶತತಮೋಽಧ್ಯಾಯಃ**

---

ಆಜ್ಞೆಮಾಡಿದ್ದಾನೆ. ಅಂತಹ ದೇವರ ಆಜ್ಞೆಯಿಂದಲೇ ನಮ್ಮ ದೊರೆಯು ಯುದ್ಧ ಸನ್ನದ್ಧನಾಗಿದ್ದಾನೆ ಎಂದು ಸುಳ್ಳುಸುಳ್ಳಾದ ಪ್ರವಾದವನ್ನು ಪ್ರಕಾಶಿಸಬೇಕು ಈ ರೀತಿ ಶತ್ರುಜಯವನ್ನು ಅಪೇಕ್ಷಿಸುವ ರಾಜರು ತಾವು ಸಂತೋಷದಿಂದಲೂ, ಧೈರ್ಯದಿಂದಲೂ ಇದ್ದು ಶತ್ರುಗಳ ವಿಷಯದಲ್ಲಿ ನಾನಾ ವಿಧವಾದ ಕಪಟಗಳನ್ನು ಪ್ರಯೋಗಿಸಬೇಕು. ಈ ಕಪಟದಿಂದ ಭಯಗೊಂಡ ಶತ್ರುವು ಬಲಾತ್ಕರಿಸಿ ಕೊಲ್ಲಲು ಅರ್ಹನಾಗುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನ ಉಪಾಖ್ಯಾನದಲ್ಲಿ ಉಪಧಿವರ್ಣನವೆಂಬ ನೂರ ನಲವತ್ತೆಂಟನೆಯ ಅಧ್ಯಾಯ ಮುಗಿದಿದೆ.



---

1 ಮಧೀರಸತ್ವಃ ಎಂದು ಪಾಠವಿರಬೇಕು.

|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಏಕೋನಪಂಚಾಶದುತ್ತರಶತತಮೋಽಧ್ಯಾಯಃ

**|| ಪುಷ್ಕರ ಉವಾಚ ||**

**ಚತುರಂಗಂ ಬಲಂ ರಾಜಾ ಮಾಯಾಜಾಲೇನ ದರ್ಶಯೇತ್ ।**
**ಸಹಾಯಾರ್ಥಮನುಪ್ರಾಪ್ತಾನ್ ದರ್ಶಯೇತ್ತ್ರಿದಿವೌಕಸಃ || ೧ ||**

**ರಕ್ತವೃಷ್ಟಿಶ್ಚ ಸಂದರ್ಶ್ಯಾ ಪರೇಷಾಂ ಶಿಬಿರಂ ಪ್ರತಿ ।**
**ಛಿನ್ನಾನಿ ರಿಪುಶೀರ್ಷಾಣಿ ಪ್ರಾಸಾದಾಗ್ರೇಷು ದರ್ಶಯೇತ್ || ೨ ||**

---

### ನೂರ ನಲವತ್ತೊಂಭತ್ತನೇ ಅಧ್ಯಾಯ.

೧–೩. ಪುಷ್ಕರನು ಹೇಳುತ್ತಾನೆ. ಜಯಾಪೇಕ್ಷೆಯುಳ್ಳ ರಾಜನು ಇಂದ್ರಜಾಲವನ್ನಾಶ್ರಯಿಸಿ ತನ್ನ ಚತುರಂಗ ಸೈನ್ಯವನ್ನು ಹೆಚ್ಚುಹೆಚ್ಚಾಗಿ ಶತ್ರುವಿಗೆ ತೋರ್ಪಡಿಸಬೇಕು. ತನ್ನ ಸಹಾಯಕ್ಕಾಗಿ ದೇವತೆಗಳೂ ಬರುತ್ತಿರುವುದನ್ನು ಆ ಇಂದ್ರಜಾಲದಿಂದಲೇ ತೋರಿಸಬೇಕು. ಶತ್ರುವಿನ ಸೇನಾಶಿಬಿರದ ಮೇಲೆ ರಕ್ತದ ಮಳೆಯು ಸುರಿಯುತ್ತಿರುವುದನ್ನು ಆ ಮಾಯೆಯಿಂದಲೇ ತೋರಿಸಬೇಕು. ಆ ಮಾಯೆಯ ಮಹಿಮೆಯಿಂದಲೇ ಕತ್ತರಿಸಲ್ಪಟ್ಟ ಶತ್ರುಗಳ ತಲೆಯನ್ನು ನಿರ್ಮಿಸಿ ತನ್ನ ಉಪ್ಪರಿಗೆಯ ಮೇಲೆ ಅವುಗಳನ್ನಿಟ್ಟು ತೋರಿಸಬೇಕು. ಸಂಧಿಯನ್ನು ಉಂಟು

ಆಧಿಕ್ಷಿತಾ ಸಂಧಿಮಹೀನಸತ್ತ್ವೇ ಕಾರ್ಯೇಣ
ಭವೇದ್ರಾಮ ಮಹೇಂದ್ರಜಾಲಂ ।
ವಕ್ಷ್ಯಾಮಿ ತಚ್ಚೋಪನಿಷತ್ಸು ತುಭ್ಯಂ
ಯೋಗಾನಿ ಚಾನ್ಯಾನಿ ಜಯಾವಹಾನಿ ॥ ೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ಇಂದ್ರಜಾಲವರ್ಣನೋ ನಾಮ
ಏಕೋನಪಂಚಾಶದುತ್ತರಶತತಮೋಽಧ್ಯಾಯಃ

---

ಮಾಡಲು ಅಪೇಕ್ಷಿಸುವ ಘೋರೆಯು ಈ ರೀತಿ ಶತ್ರುವಿಗೆ ಭಯವನ್ನು ತೋರಿಸಿದಲ್ಲಿ ಅವನ ಕಾರ್ಯವು ಸಿದ್ಧಿಹೊಂದುತ್ತದೆ. ಅಂತಹ ಇಂದ್ರಜಾಲವನ್ನೂ, ಜಯಪ್ರದಗಳಾದ ಇತರ ಯೋಗಗಳನ್ನೂ ನಹ ನಿನಗೆ ಉಪನಿಷತ್ತುಗಳಲ್ಲಿ ಹೇಳುತ್ತೇನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ ಸಂವಾದ
ದಲ್ಲಿ ಭಾರ್ಗವನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ
ಇಂದ್ರಜಾಲ ವರ್ಣನವೆಂಬ ನೂರ'ನಲವತ್ತೊಂಭತ್ತನೆಯ
ಅಧ್ಯಾಯವು ಮುಗಿದಿದೆ.



॥ ಓಂ ॥

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಪಂಚಾಶದುತ್ತರಶತತಮೋಽಧ್ಯಾಯಃ

॥ ಪುಷ್ಕರ ಉವಾಚ ॥

**ಸಂಧಿಶ್ಚ ವಿಗ್ರಹಶ್ಚೈವ ದ್ವೈಗುಣ್ಯಂ ಕಥಿತಂ ಬುಧೈಃ ।**
**ಯದಾಶ್ರಿತ್ಯ ತಥೈವಾನ್ಯೈಃ ಷಾಡ್ಗುಣ್ಯಂ ಪರಿಕೀರ್ತಿತಂ ॥ ೧ ॥**

**ಸಂಧಿಶ್ಚ ವಿಗ್ರಹಶ್ಚೈವ ಯಾನಮಾಸನಮೇವ ಚ ।**
**ದ್ವೈಧೀಭಾವಂ ಸಂಶ್ರಯಂ ಚ ಷಾಡ್ಗುಣ್ಯಂ ಪರಿಕೀರ್ತಿತಂ ॥ ೨ ॥**

**ಪಣಬಂಧಃ ಸ್ಮೃತಃ ಸಂಧಿಃ ಅಪಕಾರಸ್ತು ವಿಗ್ರಹಃ ।**
**ಜಿಗೀಷೋಃ ಶತ್ರುವಿಷಯೇ ಯಾನಂ ಯಾತ್ರಾಭಿಧೀಯತೇ ॥ ೩ ॥**

---

### ನೂರ ಐವತ್ತನೆಯ ಅಧ್ಯಾಯ.

೧–೨. ಪುಷ್ಕರನು ಹೇಳುತ್ತಾನೆ. ಜಯವನ್ನು ಅಪೇಕ್ಷಿಸುವ ರಾಜನು ಸಂಧಿ ಮತ್ತು ಯುದ್ಧ ಇವನ್ನೇ ಆಶ್ರಯಿಸುವುದರಿಂದ ಗುಣವಿಲ್ಲವೆಂದು ಪಂಡಿತರು ಹೇಳಿರುತ್ತಾರೆ. ಆ ಸಂಧಿವಿಗ್ರಹಗಳನ್ನೂ ಆಶ್ರಯಿಸಿ (ಸೇರಿಸಿ) ಆರು ಗುಣಗಳು ಇವೆ ಎಂದು ಇತರ ಪಂಡಿತರೂ ಒಪ್ಪಿದ್ದಾರೆ. ಷಾಡ್ಗುಣ್ಯವೆಂದರೆ ನೀತಿಶಾಸ್ತ್ರಜ್ಞನಾದ ರಾಜನಿಂದ ಪ್ರಯೋಗಿಸಲು ಅರ್ಹವಾದ ಆರು ಗುಣಗಳು, ಅವುಗಳೂ ಸಹ ಸಂಧಿ, ವಿಗ್ರಹ, ಯಾನ, ಆಸನ, ದ್ವೈಧೀಭಾವ, ಸಂಶ್ರಯ ಎಂದು ಪ್ರಸಿದ್ಧಿ ಹೊಂದಿವೆ.

೩–೪. ಪರಸ್ಪರ ಪಣಬಂಧದಿಂದ (ಕರಾರುಗಳಿಂದ) ಯುದ್ಧಶಾಂತಿಯನ್ನು ಹೊಂದುವುದೇ ಸಂಧಿ. ಅದಕ್ಕೆ ಅವಕಾಶವಿಲ್ಲದಿದ್ದಲ್ಲಿ ಶತ್ರುವಿಗೆ ಅಪಕಾರ ಮಾಡುವುದೇ ವಿಗ್ರಹವೆನಿಸುತ್ತದೆ. ಜಯಾಪೇಕ್ಷೆಯಿಂದ ಶತ್ರುವಿಗೆ ಅಭಿಮುಖನಾಗಿ

ವಿಗ್ರಹೇಽಪಿ ಸ್ವಕೇ ದೇಶೇ ಸ್ಥಿತಿರಾಸನಮುಚ್ಯತೇ ।
ಬಲಾರ್ಧೇನ ಪ್ರಯಾಣಂ ತು ದ್ವೈಧೀಭಾವಸ್ತುದುಚ್ಯತೇ ॥ ೪ ॥

ಉದಾಸೀನೇ ಮಧ್ಯಮೇ ವಾ ಸಂಶ್ರಯಾತ್ಸಂಶ್ರಯಃ ಸ್ಮೃತಃ ।
ಸಮೇನ ಸಂಧಿರನ್ವೇಷ್ಯೋ ಹೀನೇನ ಚ ಬಲೀಯಸಃ ॥ ೫ ॥

ಹೀನೇನ ವಿಗ್ರಹಃ ಕಾರ್ಯಃ ಸ್ವಯಂ ರಾಜ್ಞಾ ಬಲೀಯಸಾ ।
ತತ್ರಾಪಿ ತಸ್ಯ ಪಾರ್ಷ್ಣಿಸ್ತು ಬಲೀಯಾನ್ನ ಸಮಾಶ್ರಯೇತ್ ॥ ೬ ॥

ಆಸೀನಃ ಕರ್ಮವಿಚ್ಛೇದಂ ಶಕ್ತಃ ಕರ್ತುಂ ರಿಪುರ್ಯದಾ ।
ಅಶುದ್ಧಪಾರ್ಷ್ಣಿರ್ಬಲವಾನ್ ದ್ವೈಧೀಭಾವಂ ಸಮಾಶ್ರಯೇತ್ ॥ ೭ ॥

ಬಲಿನಾ ನಿಗೃಹೀತಸ್ತು ಯೋ ಮನ್ಯೇದ್ಯೇನ ಪಾರ್ಥಿವಃ ।
ಸಂಶ್ರಯಸ್ತೇನ ಕರ್ತವ್ಯೋ ಗುಣಾನಾಮಧಮೋ ಗುಣಃ ॥ ೮ ॥

---

ಪ್ರಯಾಣ ಹೊಂದುವುದೇ ಯಾನವೆಂದು ಹೇಳಲ್ಪಡುತ್ತದೆ. ಯುದ್ಧ ನಡೆಯುತ್ತಿದ್ದರೂ ತನ್ನ ದೇಶವನ್ನು ಬಿಡದೆ ತನ್ನ ದೇಶದಲ್ಲಿ ಸ್ಥಿರವಾಗಿ ನಿಲ್ಲುವುದೇ ಆಸನ, ತನ್ನ ಸೈನ್ಯದಲ್ಲಿ ಅರ್ಧವನ್ನು ರಕ್ಷಣೆಗಾಗಿ ಇಟ್ಟು ಉಳಿದ ಅರ್ಧಭಾಗದೊಡನೆ ಯುದ್ಧಕ್ಕೆ ಹೊರಡುವುದೇ ದ್ವೈಧೀಭಾವವೆನಿಸುತ್ತದೆ. ಸಂಶ್ರಯವೆಂದರೆ ಶತ್ರುವು ಪ್ರಬಲನಾಗಿದ್ದಲ್ಲಿ ಉದಾಸೀನನಾಗಿರುವ ಅಥವಾ ಮಧ್ಯಸ್ಥನಾಗಿರುವ ಮತ್ತೊಬ್ಬ ರಾಜನನ್ನು ಆಶ್ರಯಿಸುವಿಕೆ. ಇವೇ ಆರು ಗುಣಗಳ ಸ್ವರೂಪ.

೫-೭. ಶತ್ರುರಾಜನು ತನಗೆ ಸಮಬಲನಾಗಿದ್ದಲ್ಲಿ ಅಥವಾ ಬಲಿಷ್ಠನೇ ಆಗಿದ್ದಲ್ಲಿ ದುರ್ಬಲನಾದ ತಾನು ಸಂಧಿಮಾಡಿಕೊಳ್ಳಬೇಕು. ತನಗಿಂತಲೂ ಅಲ್ಪ ಬಲವುಳ್ಳವನೊಡನೆ ರಾಜನು ತಾನು ಬಲಿಷ್ಠನಾಗಿದ್ದಲ್ಲಿ ಯುದ್ಧವನ್ನೇ ಆಶ್ರಯಿಸಬೇಕು. ಅದರಲ್ಲಿಯೂ ಬಲಿಷ್ಠನಾದ ತಾನು ಶತ್ರುವನ್ನು ಹಿಂದಿನಿಂದ ಹೋಗಿ ಎದುರಿಸುವ ಪಾರ್ಷ್ಣಿಗ್ರಾಹಿತ್ವವನ್ನು ಹೊಂದಕೂಡದು ಎದುರಾಗಿಯೇ ಹೋಗಿ ಎದುರಿಸಬೇಕೆಂದು ತಾತ್ಪರ್ಯ. ಶತ್ರುವು ಬಲಿಷ್ಠನಾಗಿ ತನ್ನ ಸ್ಥಾನದಲ್ಲೇ ಇದ್ದುಕೊಂಡು ಪರರಾಜರ ಎಲ್ಲಾ ವ್ಯಾಪಾರವನ್ನು ತಡೆಯಲು ಸಮರ್ಥನಾಗಿದ್ದಲ್ಲಿ ಅವನ ಪಕ್ಕದಲ್ಲಿ ಅಥವಾ ಹಿಂದೆ ಇರುವ ರಾಜನು ಅವನಿಗೆ ವಿರೋಧಿಯಾಗಿದ್ದಲ್ಲಿ ಆಗ ದ್ವೈಧೀಭಾವವನ್ನು ಆಶ್ರಯಿಸಬೇಕು.

೮-೯. ಪ್ರಬಲನಾದ ಶತ್ರುವಿನಿಂದ ನಿಗ್ರಹಿಸಲ್ಪಟ್ಟು ಬೇರೆ ಉಪಾಯವಿಲ್ಲದ ರಾಜನು ಅವನನ್ನೇ ಆಶ್ರಯಿಸಿ ಸಂಶ್ರಯವೆಂಬ ಉಪಾಯವನ್ನು ಕೈಗೊಳ್ಳಬೇಕು.

ಬಹುಕ್ಷಯವ್ಯಯಾಯಾಸಂ ತೇಷಾಂ ಯಾನಂ ಪ್ರಕೀರ್ತಿತಂ ।
ಬಹುಲಾಭಕರಂ[1] ಸ್ಯಾತ್ತದಾ ರಾಮ ಸಮಾಶ್ರಯೇತ್ ॥ ೯ ॥

ಸರ್ವಶಕ್ತಿವಿಹೀನಸ್ತು ತದಾ ಕುರ್ಯಾತ್ತು ಸಂಶ್ರಯಂ ॥ ೧೦ ॥

ಏವಂ ಚ ಬುದ್ಧ್ವಾ ನೃಪತಿರ್ಗುಣಾನಾಂ
ಕಾಲೇ ಚ ದೇಶೇ ಚ ತಥಾ ವಿಭಾಗೇ ।
ಸಮಾಶ್ರಯೇದ್ಭಾರ್ಗವವಂಶಮುಖ್ಯ
ಚೈತಾವದುಕ್ತಂ ನೃಪತೇಸ್ತು ಕಾರ್ಯಂ ॥ ೧೧ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ಷಾಡ್ಗುಣ್ಯವರ್ಣನೋ ನಾಮ
ಪಂಚಾಶದುತ್ತರಶತತಮೋಽಧ್ಯಾಯಃ

---

ಇದು ಎಲ್ಲಾ ಉಪಾಯಗಳಿಗಿಂತಲೂ ಬಹಳ ಅಧಮವಾದುದು. ಅಂತಹವರಿಗೆ ಯಾನವೆಂಬ ಯುದ್ಧೋದ್ಯೋಗವು ಬಹುಮಟ್ಟಿನ ಜನಕ್ಷಯಕ್ಕೂ ಅರ್ಥವ್ಯಯಕ್ಕೂ ಆಯಾಸಕ್ಕೂ ಕಾರಣವಾಗುತ್ತದೆ. ಇಂತಹ ಅಧಮೋಪಾಯವನ್ನು ಆಶ್ರಯಿಸುವವನು ಅದು ಬಹಳ ಲಾಭಕರವಾಗಿದ್ದಲ್ಲಿ ಆಶ್ರಯಿಸಬಹುದು.

೧೧. ಯಾವದೊಂದು ವಿಧವಾದ ಸಾಮರ್ಥ್ಯವೂ ಇಲ್ಲದವನು ಈ ಉಪಾಯವನ್ನು ಆಶ್ರಯಿಸಬೇಕಾಗುತ್ತದೆ ಈ ಪ್ರಕಾರದ ಷಡ್ಗುಣಗಳ ಸ್ವಭಾವವನ್ನು ತಿಳಿದು ರಾಜನಾದವನು ಅವುಗಳ ಪ್ರಯೋಗ ವಿಷಯದಲ್ಲಿ ದೇಶಕಾಲಾದಿ ವಿಭಾಗದಿಂದ ಉಪಯೋಗವನ್ನರಿತು ಇವುಗಳಿಂದ ಪ್ರಯೋಜನವನ್ನು ಹೊಂದಬೇಕು. ರಾಜನಾದವನು ಮಾಡಬೇಕಾದ ಕಾರ್ಯಗಳನ್ನು ಇಲ್ಲಿಯವರೆಗೆ ಹೇಳಿದ್ದಾಯಿತು.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ ಸಂವಾದದಲ್ಲಿ
ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ ಷಾಡ್ಗುಣ್ಯ
ವರ್ಣನವೆಂಬ ನೂರ ಐವತ್ತನೆಯ ಅಧ್ಯಾಯವು ಮುಗಿದಿದೆ



---

1 ಇಲ್ಲಿ ಬಹುಲಾಭಕರಂ ತತ್ಸ್ಯಾತ್ ಎಂದು ಬೇರೆ ಪಾಠವಿರಬೇಕು.

|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಏಕಪಂಚಾಶದುತ್ತರಶತತಮೋಽಧ್ಯಾಯಃ

|| ರಾಮ ಉವಾಚ ||

ಅಜಸ್ರಂ ಕರ್ಮ ಮೇ ಬ್ರೂಹಿ ರಾಜ್ಞಾಂ ರಾಜೀವಲೋಚನ ।
ಯಚ್ಚ ಕಾರ್ಯಂ ನರೇಂದ್ರಾಣಾಂ ತಥಾ ಚ ಪ್ರತಿವತ್ಸರಂ || ೧ ||

|| ಪುಷ್ಕರ ಉವಾಚ ||

ದ್ವಿಮುಹೂರ್ತಾವಶೇಷಾಯಾಂ ರಾತ್ರೌ ನಿದ್ರಾಂ ತ್ಯಜೇನ್ನೃಪಃ ।
ವೇಣುವೀಣಾಮೃದಂಗಾನಾಂ ಪಟಹಾನಾಂ ಚ ನಿಸ್ವನೈಃ || ೨ ||

---

### ನೂರ ಐವತ್ತೊಂದನೆಯ ಅಧ್ಯಾಯ.

೧. ಪುನಃ ರಾಮನು ಪ್ರಶ್ನೆ ಮಾಡುತ್ತಾನೆ. ಪ್ರಸನ್ನ ದೃಷ್ಟಿಯಿಂದ ಅನುಗ್ರಹೋನ್ಮುಖನಾದ ಮಹಾತ್ಮನೇ ದೊರೆಗಳು ಯಾವಾಗಲೂ ಮಾಡಬೇಕಾದ ಕಾರ್ಯಗಳಾವುವು. ಪ್ರತಿಸಂವತ್ಸರದಲ್ಲಿಯೂ ಸಹ ಅವರು ಮಾಡಬೇಕಾದ ವಿಶೇಷಕಾರ್ಯಗಳಾದರೂ ಯಾವುವು ಹೇಳಬೇಕು. ಇದಕ್ಕೆ ಉತ್ತರವಾಗಿ ಪುಷ್ಕರನು ಹೇಳುತ್ತಾನೆ.

೨—೩. ದೊರೆಯಾದವನು ನಿತ್ಯವೂ ರಾತ್ರಿಯು ಇನ್ನೂ ನಾಲ್ಕು ಘಳಿಗೆ ಇರುವಾಗಲೇ ನಿದ್ರೆಯನ್ನು ಬಿಡಬೇಕು ಕೊಳಲು, ವೀಣಾ, ಮೃದಂಗ, ತಬಲ ಮುಂತಾದ ಮಂಗಲಕರವಾದ ವಾದ್ಯಗಳ ಧ್ವನಿಯಿಂದಲೂ ಹೊಗಳು ಭಟ್ಟರ

**ವಂದಿನಾಂ ನಿಃಸ್ವನೈಶ್ಚೈವ ತಥಾ ಮಂಗಲವಾದಿನಾಂ ।**
**ತತಃ ಪಶ್ಯೇನ್ಮಹೀಪಾಲೋ ಗೂಢಾಂಶ್ಚ ಪುರುಷಾನ್ ನಿಶಿ ॥ ३ ॥**

**ವಿಜ್ಞಾಯಂತೇ ನ ಯೇ ಲೋಕೇ ತದೀಯಾ ಇತಿ ಕೇನ ಚಿತ್ ।**
**ಆಯವ್ಯಯಸ್ಯ ಶ್ರವಣಂ ಅತಃ ಕಾರ್ಯಂ ಯಥಾವಿಧಿ ॥ ೪ ॥**

**ವೇಗೋತ್ಸರ್ಗಂ ತತಃ ಕೃತ್ವಾ ರಾಜಾ ಸ್ನಾನಗೃಹಂ ವ್ರಜೇತ್ ।**
**ದತ್ತಾಭ್ಯಂಗಃ ಪ್ರದೋಷೇ ತು ಕಲ್ಕೈರುತ್ಸಾದಿತಸ್ತತಃ ॥ ೫ ॥**

**ಸ್ನಾನಂ ಕುರ್ಯಾತ್ತತಃ ಪಶ್ಚಾದ್ದಂತಧಾವನಪೂರ್ವಕಂ ।**
**ಸೋಷಧೈರ್ಮಂತ್ರಪೂತೈಸ್ತು ಪಾನೀಯೈರ್ವಿವಿಧೈಃ ಶುಭೈಃ ॥ ೬ ॥**

**ಸಂಧ್ಯಾಮುಪಾಸ್ಯ ಪ್ರಯತಃ ಕೃತಜಪ್ಯಃ ಸಮಾಹಿತಃ ।**
**ಅಗ್ನ್ಯಗಾರಂ ಪ್ರವಿಶ್ಯಾಥ ವಹ್ನೀನ್ ಪಶ್ಯೇತ್ಪುರೋಧಸಾ ॥ ೭ ॥**

---

ಮಂಗಲಧ್ವನಿಯಿಂದಲೂ ಎಚ್ಚತ್ತು ರಾತ್ರಿಯಲ್ಲಿ ಆಜ್ಞಾಪಿಸಲ್ಪಟ್ಟಿದ್ದ ಗೂಢಚಾರರನ್ನು ಮೊದಲು ನೋಡಬೇಕು.

೪–೬. ಆ ಗೂಢಪುರುಷರು ರಾಜಕೀಯರೆಂದು ಯಾರೂ ತಿಳಿದಿರಕೂಡದು ಅನಂತರ ದ್ರವ್ಯದ ಆದಾಯ ವ್ಯಯಗಳನ್ನು ಯಥಾವಿಧಿಯಾಗಿ ಕೇಳಬೇಕು. ಅನಂತರ ತ್ವರಿತದಿಂದ ಉತ್ಸರ್ಗಾದಿಗಳನ್ನು ಮಾಡಿ ಸ್ನಾನದ ಮನೆಗೆ ಹೋಗಬೇಕು. ಅಲ್ಲಿ ಅಭ್ಯಂಗಸ್ನಾನಮಾಡಬೇಕು. ಆ ರಾತ್ರಿಯ ಕೊನೆಯ ಭಾಗದಲ್ಲಿಯೇ ದೇಹಶೋಧಕ ಸಾಮಗ್ರಿಗಳಿಂದ ಚೊಕ್ಕಟವಾಗಿ ಸ್ನಾನಮಾಡಬೇಕು, ಸ್ನಾನಕ್ಕೆ ಮೊದಲು ದಂತಧಾವನಾದಿಗಳನ್ನು ಮಾಡಿ ಔಷಧಿವಿಶೇಷಗಳಿಂದ ಕೂಡಿಯೂ ಮಂತ್ರಗಳಿಂದ ಪರಿಶುದ್ಧಿಹೊಂದಿಯೂ ಇರುವ ನಾನಾವಿಧವಾದ ಜಲದಿಂದ ಶುಭ ಸ್ನಾನವನ್ನು ಮಾಡಬೇಕು.

೭–೮. ಅನಂತರ ಸಂಧ್ಯಾವಂದನವನ್ನು ನೆರವೇರಿಸಿ ಶಾಂತಮನಸ್ಕನಾಗಿ ಜಪಗಳನ್ನೆಲ್ಲಾ ಮಾಡಿ ಅಗ್ನಿಗೃಹಕ್ಕೆ ಹೋಗಿ ಪುರೋಹಿತನೊಡನೆ ಅಗ್ನಿಗಳನ್ನು ದರ್ಶನಮಾಡಬೇಕು ಅಲ್ಲಿ ಅಗ್ನಿಗಳಿಗೆ ಹೋಮವನ್ನು ಮಾಡಿ ಅನಂತರ

ಹುತಾನ್ ಸಮ್ಯಕ್ತತಃ ಕುರ್ಯಾದ್ವಾಸುದೇವಸ್ಯ ಚಾರ್ಚನಂ ।
ದುಃಸ್ವಪ್ನಶಮನಂ ಕರ್ಮ ತತ್ರ ಕುರ್ಯಾತ್ಪುರೋಹಿತಃ ॥ ೮ ॥

ಸ್ವಯಂ ಚೋಪಸದೇ ವಹ್ನೌ ಪವಿತ್ರಾಂ ಜುಹುಯಾನ್ನೃಪಃ ।
ತರ್ಪಯೇದುದಕೈರ್ದೇವಾನ್ಪಿತೄನಥ ಯಥಾವಿಧಿ ॥ ೯ ॥

ದದ್ಯಾದ್ವಿಜಾತಯೇ ಧೇನುಂ ಸವತ್ಸಾಂ ಚ ಸಕಾಂಚನಾಂ ।
ಶಕ್ತ್ಯಾ ಧನೈಃ ಪೂಜಯಿತ್ವಾ ದತ್ತಾ ಶ್ರೀಃ ಸತತಂ ದ್ವಿಜೈಃ ॥ ೧೦ ॥

ಅನುಲಿಪ್ತಃ ತತಃ ಸ್ರಗ್ವೀ ಸುವಾಸಾಶ್ಚಾಪ್ಯಲಂಕೃತಃ ।
ದರ್ಪಣೇ ಚ ಮುಖಂ ಪಶ್ಯೇತ್ಸುವರ್ಣೇ ಚ ಸರ್ಪಿಷಿ ॥ ೧೧ ॥

ಆಜ್ಯಂ ಪ್ರಸನ್ನಂ ಸುರಭಿ ಯದಿಸ್ಯಾದ್ವಿಜಯೋ ಭವೇತ್ ।
ದೀಯಮಾನೇ ಚ ದುರ್ಗಂಧೇ ಪತಿತೇ ಚ ಭಯಂ ಭವೇತ್ ॥ ೧೨ ॥

ವಾಸುದೇವನ ಪೂಜೆಯನ್ನು ನೆರವೇರಿಸಬೇಕು ಪುರೋಹಿತನಾದವನು ಅಲ್ಲಿ ರಾಜನಿಗೆ ದುಃಸ್ವಪ್ನದಿಂದುಂಟಾದ ಅನಿಷ್ಟನಿವೃತ್ತಿಗಾಗಿ ಶಾಂತಿಕರ್ಮವನ್ನಾಚರಿಸಬೇಕು.

೧೦. ಔಪಸದವೆಂಬ ಅಗ್ನಿಯಲ್ಲಿ ಪವಿತ್ರವಾದ ಹೋಮವನ್ನು ತಾನೇ ಮಾಡಿ ಯಥಾವಿಧಿಯಾಗಿ ದೇವಪಿತೃತರ್ಪಣವನ್ನು ನೆರವೇರಿಸಬೇಕು. ಬ್ರಾಹ್ಮಣನಿಗೆ ಕರುವಿನೊಡನೆ ಕೂಡಿರುವ ಗೋವನ್ನು ಹಿರಣ್ಯದೊಡನೆ ದಾನಮಾಡಿ ಶಕ್ತ್ಯನುಸಾರವಾಗಿ ಬ್ರಾಹ್ಮಣರನ್ನು ಪೂಜಿಸಿ ಯಾವಾಗಲೂ ಅವರ ಆಶೀರ್ವಾದವನ್ನು ಹೊಂದಬೇಕು.

೧೧-೧೨. ಆನಂತರ ವಸ್ತ್ರಭೂಷಣಾದಿಗಳಿಂದಲೂ ಅಲಂಕೃತನಾಗಿ ಕನ್ನಡಿಯಲ್ಲಿ ಮುಖವನ್ನು ನೋಡಿಕೊಳ್ಳಬೇಕು. ಸುವರ್ಣ ಪಾತ್ರದಲ್ಲಿ ಆಜ್ಯವನ್ನಿಟ್ಟು ಅದರಲ್ಲಿಯೂ ಮುಖವನ್ನು ನೋಡಿಕೊಳ್ಳಬೇಕು. ಆ ಆಜ್ಯವು ಪ್ರಸನ್ನವಾಗಿಯೂ ಸುಗಂಧಿಯಾಗಿಯೂ ಇದ್ದಲ್ಲಿ ದೊರೆಯು ವಿಜಯಶಾಲಿಯಾಗುತ್ತಾನೆ. ದುರ್ಗಂಧ ಉಂಟಾದಲ್ಲಿಯೂ ದಾನಮಾಡುವಾಗ ಕೆಳಕ್ಕೆ ಬಿದ್ದಲ್ಲಿಯೂ ನಹ ಭಯ ಉಂಟಾಗುತ್ತದೆ. ಎಂದು ತಿಳಿಯಬೇಕು.

ವಿಕೃತಂ ಚೇನ್ಮುಖಂ ಪಶ್ಯೇತ್ ರಾಜಾ ಮೃತ್ಯುಮವಾಪ್ನುಯಾತ್ ।
ಸುಪ್ರಭಂ ಚ ಯದಾ ಪಶ್ಯೇತ್ತದಾ ತಸ್ಯ ಶುಭಂ ಭವೇತ್ ॥ ೧೩ ॥

ತತಸ್ತು ಶೃಣುಯಾದ್ರಾಜಾ ಸಾಂವತ್ಸರಮುಖೋದ್ಗತಂ ।
ದಿವಸೇ ತಿಥಿನಕ್ಷತ್ರೇ ಸರ್ವಾಶುಭವಿನಾಶನಂ ॥ ೧೪ ॥

ಭಿಷಜಾಂ ಚ ವಚಃ ಕುರ್ಯಾತ್ತತಸ್ತ್ವಾರೋಗ್ಯವರ್ಧನಂ ।
ಮಂಗಲಾಲಂಭನಂ ಕೃತ್ವಾ ತತಃ ಪಶ್ಯೇದ್ಗುರೂನ್ನೃಪಃ ॥ ೧೫ ॥

ಕೃತಾಶೀರ್ಗುರುಭಿಃ ಪಶ್ಚಾದ್ರಾಜಾ ಗಚ್ಛೇತ್ಸಮಂತತಃ ।
ತತ್ರಸ್ಥಾನ್ ಬ್ರಾಹ್ಮಣಾನ್ ಪಶ್ಯೇದಮಾತ್ಯಾನ್ಮಂತ್ರಿಣಸ್ತಥಾ ॥ ೧೬ ॥

ಪ್ರಕೃತೀಶ್ಚ ಮಹಾಭಾಗ ಪ್ರತೀಹಾರನಿಬೋಧತಃ ।
ತತ್ರೇತಿಹಾಸಶ್ರವಣಂ ಕುರ್ಯಾತ್ಕಿಂಚಿದತಂದ್ರಿತಃ ॥ ೧೭ ॥

---

೧೩-೧೫. ತನ್ನ ಮುಖವು ಆ ಆಜ್ಯದಲ್ಲಿ ವಿಕಾರವಾಗಿ ಕಂಡು ಬಂದಲ್ಲಿ ರಾಜನಿಗೆ ಮೃತ್ಯುಉಂಟಾಗುತ್ತದೆ. ತೇಜಸ್ವಿಯಾಗಿ ಕಂಡುಬಂದಲ್ಲಿ ಶುಭವಾಗುತ್ತದೆ ಅನಂತರ ಅಶುಭನಾಶಕವಾದ ತಿಥಿವಾರ ನಕ್ಷತ್ರಾದಿಗಳ ಶ್ರವಣವನ್ನು ಜ್ಯೋತಿಷಿಕ ನಿಂದ ಹೊಂದಬೇಕು. ಆರೋಗ್ಯಾಭಿವೃದ್ಧಿಗಾಗಿ ವೈದ್ಯರ ಸಲಹೆಯನ್ನು ಕೇಳಿ ಮಂಗಲವಸ್ತುಗಳನ್ನು ಸ್ಪರ್ಶಮಾಡಿ ಗುರುಗಳ ದರ್ಶನ ಮಾಡಬೇಕು.

೧೬-೧೭ ಅಲ್ಲಿ ಗುರುಗಳಿಂದ ಆಶೀರ್ವಾದವನ್ನು ಸ್ವೀಕರಿಸಿ ಸಭೆಯ ಎಲ್ಲಾ ಕಡೆಯಲ್ಲೂ ಸುತ್ತಬೇಕು. ಅಲ್ಲಿರುವ ಬ್ರಾಹ್ಮಣೋತ್ತಮರನ್ನೂ ಅಮಾತ್ಯರನ್ನೂ ಮಂತ್ರಿಮುಖ್ಯರನ್ನೂ ಕಟಾಕ್ಷಿಸಬೇಕು. ದ್ವಾರಪಾಲಕರಿಂದ ಅರಿಕೆಮಾಡಲ್ಪಟ್ಟ ಪ್ರಜಾಮುಖ್ಯರನ್ನೂ ಪ್ರೀತಿಯಿಂದ ಕಟಾಕ್ಷಿಸಬೇಕು. ಅಲ್ಲಿರುವ ಪೌರಾಣಿಕರಿಂದ ಹೇಳಲ್ಪಡುವ ಇತಿಹಾಸದ ವಿಷಯವನ್ನೂ ಸ್ವಲ್ಪಮಟ್ಟಿಗಾದರೂ ಸಾವಧಾನದಿಂದ ಕೇಳಬೇಕು.

ತತಃ ಕಾರ್ಯಾರ್ಥಿನಾಂ ಕುರ್ಯಾದ್ವ್ಯಥಾಧೀಃ ಕಾರ್ಯನಿರ್ಣಯಂ ॥ ೧೮ ॥

ವ್ಯವಹಾರಾಂಸ್ತತಃ ಪಶ್ಯೇತ್ಸಮೋ ಭೂತ್ವಾರಿಮಿತ್ರಯೋಃ ।
ತ್ಯಕ್ತ್ವಾ ಸಭಾಂ ತತಃ ಕುರ್ಯಾನ್ಮಂತ್ರಂ ತು ಸಹ ಮಂತ್ರಿಭಿಃ ॥ ೧೯ ॥

ಯತ್ರಾಸ್ಯ ಕಶ್ಚಿತ್ತಂ ಮಂತ್ರಂ ಶೃಣುಯಾನ್ನ ಕಥಂಚನ ।
ಏಕೇನ ಸಹ ತಂ ಕುರ್ಯಾನ್ನಕುರ್ಯಾದ್ಬಹುಭಿಃ ಸಹ ॥ ೨೦ ॥

ನ ಚ ಮೂರ್ಖೈಃ ನಚಾನಾಪ್ತೈಸ್ತಥಾ ನಾಧರ್ಮಿಕೈರ್ನೃಪಃ ।
ಮಂತ್ರಂ ಸ್ವಧಿಷ್ಠಿತಂ ಕುರ್ಯಾದ್ಯೇನ ರಾಷ್ಟ್ರಂ ನ ಧಾವತಿ ॥ ೨೧ ॥

ರಾಜ್ಞಾಂ ವಿನಾಶಮೂಲಸ್ತು ಕಥಿತೋ ಮಂತ್ರವಿಭ್ರಮಃ ।
ನಾಶಹೇತುರ್ಭವೇನ್ಮಂತ್ರಃ ಕುಪ್ರಯುಕ್ತಸ್ತ್ವಮಂತ್ರವತ್ ॥ ೨೨ ॥

---

೧೮-೨೦. ಅನಂತರ ಕಾರ್ಯಾರ್ಥಿಗಳಾಗಿ ಬಂದಿರುವ ಪ್ರಜೆಗಳ ಅರಿಕೆಯನ್ನು ಲಾಲಿಸಿ ತನ್ನ ಬುದ್ಧಿಗೆ ತಕ್ಕಂತೆ ನ್ಯಾಯನಿರ್ಣಯವನ್ನು ಮಾಡಬೇಕು. ವ್ಯವಹಾರಾರ್ಥಿಗಳಾಗಿ ಬಂದಿರುವ ಪ್ರಜೆಗಳ ವ್ಯವಹಾರಗಳನ್ನು ಶತ್ರುಮಿತ್ರರಿಬ್ಬರಲ್ಲಿಯೂ ಸಮದೃಷ್ಟಿಯಿಂದ ನೋಡಿ ತೀರ್ಮಾನಿಸಬೇಕು. ಅನಂತರ ಸಭಾಂಗಣವನ್ನು ಬಿಟ್ಟು ಮಂತ್ರಶಾಲೆಗೆ ಪ್ರವೇಶಿಸಿ ಮಂತ್ರಾಲೋಚನೆಯನ್ನು ಇತರರು ಯಾರೂ ಕೇಳದಂತೆ ಮಂತ್ರಿಗಳೊಡನೆ ನಡೆಸಬೇಕು. ಬಹಳ ರಹಸ್ಯವಾದ ಮಂತ್ರಾಲೋಚನೆಯನ್ನು ಒಬ್ಬನೊಡನೆಯೇ ಮಾಡಬೇಕು. ಅನೇಕ ಮಂತ್ರಿಗಳೊಡನೆ ನಡೆಸಬಾರದು.

೨೧-೨೨. ಮೂರ್ಖರೊಡನೆಯೂ ವಿನಯವಿಲ್ಲದ ಧೂರ್ತರೊಡನೆಯೂ, ಅಧಾರ್ಮಿಕರೊಡನೆಯೂ ಮಂತ್ರಾಲೋಚನೆಯನ್ನು ನಡೆಸಕೂಡದು ಎಂತಹ ಸುಪ್ರತಿಷ್ಠಿತವಾದ ಮಂತ್ರಾಲೋಚನೆಯಿಂದ ರಾಷ್ಟ್ರವು ಮತ್ತೊಬ್ಬನ ಕೈಯ್ಯಿಗೆ ಧಾವಿಸದೆ ತನ್ನ ಸ್ವಾಮಿತ್ವದಲ್ಲಿಯೇ ನಿಲ್ಲಬಹುದೋ ಅಂತಹ ಸುಪ್ರತಿಷ್ಠಿತವಾದ ಮಂತ್ರವನ್ನೇ ಸ್ವೀಕರಿಸಬೇಕು. ಮಂತ್ರಾಲೋಚನೆಯು ವಿವೇಕವಿಲ್ಲದೆ ಭ್ರಮದಿಂದ ನಡೆಸಲ್ಪಟ್ಟಲ್ಲಿ ಅಂತಹ ದುರ್ಮಂತ್ರಗಳು ರಾಜನ ವಿನಾಶಕ್ಕೆ ಕಾರಣವಾಗುತ್ತದೆ ಎಂದು ಶಾಸ್ತ್ರಗಳು ಹೇಳುತ್ತವೆ. ಕುತ್ಸಿತರಿಂದ ನಿರ್ಣಯಿಸಲ್ಪಟ್ಟ ಮಂತ್ರಾಭಾಸಗಳು ಅಭಿಚಾರಿಕವಾದ ದುರ್ಮಂತ್ರಪ್ರಯೋಗದಂತೆ ನಾಶಕ್ಕೆ ಕಾರಣವಾಗುತ್ತವೆ.

**ಮಂತ್ರೇ ಸುನಿಶ್ಚಿತೇ ಸಿದ್ಧಿಃ ಕಥಿತಾ ಪೃಥಿವೀಕ್ಷಿತಾಂ ।**
**ಕ್ರಿಯಮಾಣಾನಿ ಕರ್ಮಾಣಿ ಯಸ್ಯ ವೇತ್ತಿ ನ ಕಶ್ಚನ　　॥ ೨೩ ॥**

**ಕೃತಾನ್ಯೇವ ವಿಜಾನಾತಿ ಸ ರಾಜಾ ಪೃಥಿವೀಪತಿಃ ।**
**ಪೃಥಕ್ಚ ಮಂತ್ರಿಭಿರ್ಮಂತ್ರಂ ಕೃತಂ ವೈ ಸಂಹತೈಃ ಪುನಃ　　॥ ೨೪ ॥**

**ವಿಚಾರ್ಯ ಚಾತ್ಮನಃ ಸಾಧು ಪಶ್ಚಾತ್ತತ್ರ ಸಮಾಶ್ರಯೇತ್ ।**
**ಪ್ರಜ್ಞಾಭಿಮಾನೀ ನೃಪತಿಃ ನ ಮಂತ್ರಿವಚನೇರತಃ　　॥ ೨೫ ॥**

**ಕ್ಷಿಪ್ರಂ ವಿನಾಶಮಾಯಾತಿ ತಡಾಗಮಿವ ಕಾಜಲಂ ।**
**ಆಕಾರಗೂಹನೈ ರಾಜ್ಞೋ ಮಂತ್ರರಕ್ಷಾ ಪರಾ ಮತಾ　　॥ ೨೬ ॥**

---

೨೩–೨೪. ಸಾಧಕ ಬಾಧಕ ಯುಕ್ತಿಗಳಿಂದ ನಿಸ್ಸಂದೇಹವಾಗಿ ಸ್ಥಿರಗೊಳಿಸಲ್ಪಟ್ಟ ಮಂತ್ರವೇ ರಾಜರುಗಳಿಗೆ ಸಿದ್ಧಿರೂಪವಾಗಿ ಪರಿಣಮಿಸುತ್ತದೆ. ಯಾವ ಮಂತ್ರದಿಂದ ಸಿದ್ಧವಾದ ಕಾರ್ಯವನ್ನು ಫಲೋನ್ಮುಖವಾದ ಕಾಲದಲ್ಲೇ ಇತರರು ತಿಳಿಯಬಹುದೋ ಆ ಕಾರ್ಯದ ಭವಿಷ್ಯಾವಸ್ಥೆಯಲ್ಲಿ ಇತರರು ತಿಳಿಯಲು ಸಾಧ್ಯವೇ ಆಗುವುದಿಲ್ಲವೋ ಅಂತಹ ಮಂತ್ರಾಲೋಚನೆಯುಳ್ಳ ರಾಜನೇ ಸಮಸ್ತ ಭೂಮಂಡಲಾಧಿಪತಿಯಾಗುತ್ತಾನೆ. ಮೊದಲು ಮಂತ್ರಿಗಳು ಬೇರೆಬೇರೆಯಾಗಿ ತಮ್ಮಿಷ್ಟಕ್ಕೆ ತಾವೇ ಆಲೋಚಿಸಿರಬೇಕು. ಪುನಃ ಎಲ್ಲರೂ ಸೇರಿ ವಿಚಾರಮಾಡಿ ಅದನ್ನು ಇದಂಇತ್ಥಂ ಎಂದು ನಿರ್ಣಯಿಸಬೇಕು. ಅನಂತರ ರಾಜನು ಆ ನಿರ್ಣಯವು ತನಗೆ ಸಾಧುವೇ ಅಸಾಧುವೇ ಎಂಬುದನ್ನು ವಿಚಾರಮಾಡಿ ಸಮೀಚೀನವಾದ ಆ ಮಂತ್ರವನ್ನು ಆಶ್ರಯಿಸಬೇಕು.

೨೫–೨೬. ಯಾವ ದೊರೆಯು ತನ್ನ ಬುದ್ಧಿಯಲ್ಲಿಯೇ ನಂಬಿಕೆಯಿಟ್ಟು ತನ್ನ ನಿರ್ಣಯವನ್ನೇ ಪುರಸ್ಕರಿಸುತ್ತಾ ಮಂತ್ರಿಗಳ ಮಾತನ್ನು ಲಕ್ಷಿಸುವುದಿಲ್ಲವೋ ಅಂತಹ ದೊರೆಯು ಕ್ಷುದ್ರಜಲವುಳ್ಳ ತಟಾಕದಂತೆ ಜಾಗ್ರತೆಯಾಗಿ ನಾಶಹೊಂದುತ್ತಾನೆ. ರಾಜನಾದವನು ಮಂತ್ರನಿರ್ಣಯದಿಂದ ಉಂಟಾಗ ಬಹುದಾದ ತನ್ನ ಬಾಹ್ಯಾಕಾರವನ್ನು ಪ್ರಕಾಶಗೊಳಿಸದೆ ಮಂತ್ರವನ್ನು ರಕ್ಷಿಸಬೇಕು. ಇದು ರಾಜನ ಮುಖ್ಯ ಕಾರ್ಯ ಏಕೆಂದರೆ ಪ್ರಾಜ್ಞರಾದ ಪಂಡಿತರು ಬಾಹ್ಯಕಾರ್ಯದಿಂದಲೂ ಇಂಗಿತದಿಂದಲೂ ಹರ್ಷಶೋಕಾದಿಗಳನ್ನು ಊಹಿಸಿ ಮಂತ್ರವು ಹೀಗೆಯೇ ನಿಶ್ಚಯಿಸಲ್ಪಟ್ಟಿದೆ ಎಂದು ತಿಳಿಯುತ್ತಾರೆ.

ಆಕಾರೈರಿಂಗಿತೈಃ ಪ್ರಾಜ್ಞಾ ಮಂತ್ರಂ ಜಾನಂತಿ ಪಂಡಿತಾಃ |
ಸಾಂವತ್ಸರಾಣಾಂ ವೈದ್ಯಾನಾಂ ಮಂತ್ರಿಣಾಂ ವಚನೇ ರತಃ || ೨೭ ||

ರಾಜಾ ವಿಭೂತಿಮಾಪ್ನೋತಿ ಚಿರಂ ಯಶಸಿ ತಿಷ್ಠತಿ |
ತ ಏನಂ ಮೃಗಯಾಸಕ್ತಂ ಧಾರಯಂತಿ ವಿಪಶ್ಚಿತಃ || ೨೮ ||

ಸ್ತ್ರೀಷು ಮಾನೇ ತಥಾಕ್ಷೇಷು ವೃಥಾಜ್ಯಾಯಾಂಶ್ಚ ಭಾರ್ಗವ |
ಕರಪ್ರಣಯನೇ ಸಕ್ತಂ ಹಿಂಸಾಯಾಂ ಚ ನರಾಧಿಪಂ || ೨೯ ||

ತಥಾ ಪರೋಕ್ಷನಿಂದಾಯಾಂ ಬಲವದ್ವಿಗ್ರಹೇಪಿ ಚ |
ಅನ್ಯೇಷು ಚಾಪ್ಯನರ್ಥೇಷು ಪ್ರಸಕ್ತಂ ವಾರಯಂತಿ ತಂ || ೩೦ ||

ಮಂತ್ರಂ ಕೃತ್ವಾ ತತಃ ಕುರ್ಯಾದ್ವ್ಯಾಯಾಮಂ ಪೃಥಿವೀಪತಿಃ |
ರಥೇ ನಾಗೇ ತಥೈವಾಶ್ವೇ ಖಡ್ಗೇ ಧನುಷಿ ಚಾಪ್ಯಥ || ೩೧ ||

---

೨೭-೩೦. ಜ್ಯೋತಿಷಿಕರು ಮತ್ತು ವೈದ್ಯರು ಮತ್ತು ಮಂತ್ರಿಗಳ ಮಾತಿಗೆ ಅನುಗುಣವಾಗಿ ನಡೆಯುವ ರಾಜನು ಸಂಪತ್ತನ್ನು ಹೊಂದುತ್ತಾನೆ. ಬಹಳಕಾಲ ಯಶಸ್ವಿಯಾಗಿಯೂ ಬದುಕುತ್ತಾನೆ. ಹೇಗೆಂದರೆ ಇವರೆಲ್ಲರೂ ತಮಗೆ ಶಾಸ್ತ್ರದಿಂದುಂಟಾದ ಬುದ್ಧಿಶಕ್ತಿಯಿಂದ ಬೇಟೆಯೇ ಮೊದಲಾದವ್ಯಸನಗಳಲ್ಲಿ ನಿರತನಾಗುವ ರಾಜನನ್ನು ತಡೆದು ಅವನ ಸ್ಥಿತಿಗೆ ಕಾರಣರಾಗುತ್ತಾರೆ. ಮತ್ತು ಸ್ತ್ರೀವಿಷಯಕವಾದ ವ್ಯಾಮೋಹದಲ್ಲಿಯೂ ಹೆಚ್ಚಾದ ಅಹಂಕಾರದಲ್ಲಿಯೂ, ದ್ಯೂತದಲ್ಲಿಯೂ, ವ್ಯರ್ಥವಾದ ಧನುರ್ವ್ಯಾಪಾರದಲ್ಲಿಯೂ, ಅನವಶ್ಯಕವಾದ ತೆರಿಗೆಯನ್ನು ಹಾಕುವುದರಲ್ಲಿಯೂ, ಹಿಂಸೆಯಲ್ಲಿಯೂ, ಪರೋಕ್ಷದಲ್ಲಿ ಮಾಡಬಹುದಾದ ಇತರರ ನಿಂದೆಯಲ್ಲಿಯೂ, ಬಲಿಷ್ಠನೊಡನೆ ಉಂಟಾಗಬಹುದಾದ ಯುದ್ಧದಲ್ಲಿಯೂ, ಇತರ ಅನರ್ಥಾವಹವಾದ ಕಾರ್ಯದಲ್ಲಿಯೂ ಹೆಚ್ಚಾಗಿ ಪ್ರಸಕ್ತನಾದ ದೊರೆಯನ್ನು ತಡೆಯುತ್ತಾರೆ.

೩೧-೩೨. ಮಂತ್ರಾಲೋಚನೆಯನ್ನು ನಡೆಸಿದ ನಂತರ ದೊರೆಯು ವ್ಯಾಯಾಮಕ್ಕೆ ಹೊರಡಬೇಕು. ರಥ, ಗಜ, ಅಶ್ವ, ಖಡ್ಗ, ಧನುಸ್ಸು ಮುಂತಾದವುಗಳಿಂದಲೂ, ಇತರ ಶಸ್ತ್ರಗಳಿಂದಲೂ, ಬಾಹುಯುದ್ಧದಿಂದಲೂ, ತನ್ನ ವ್ಯಾಯಾಮ

**ಅನ್ಯೇಷು ಚೈವ ಶಸ್ತ್ರೇಷು ನಿಯುದ್ಧೇಷು ತತಃ ಪರಂ ।**
**ಪದ್ಭ್ಯಾಮುದ್ವರ್ತಿತಃ ಸ್ನಾತಃ ಪಶ್ಯೇದ್ವಿಷ್ಣುಂ ಸುಪೂಜಿತಂ　　|| ೩೨ ||**

**ಹುತಂ ಚ ಪಾವಕಂ ಪಶ್ಯೇದ್ವಿಪ್ರಾನ್ ಪಶ್ಯೇತ್ಸುಪೂಜಿತಾನ್ ।**
**ಸ್ವಾಮಿನೋ ದಕ್ಷಿಣಾಭಿಶ್ಚ ಪೂಜಿತಾನ್ ಭೃಗುನಂದನ　　|| ೩೩ ||**

**ತತೋಽನುಲಿಪ್ತಃ ಸುರಭಿಃ ಸ್ರಗ್ವೀ ರುಚಿರಭೂಷಣಃ ।**
**ಸುವಾಸಾ ಭೋಜನಂ ಕುರ್ಯಾದ್ಗೀತಂ ಚ ಶೃಣುಯಾತ್ತದಾ　　|| ೩೪ ||**

**ಅಷ್ಟಂ ಪರೀಕ್ಷಿತಂ ವಹ್ನೌ ಮೃಗಪಕ್ಷೀಂಗಿತೈಸ್ತಥಾ ।**
**ಪೂರ್ವಂ ಪರೀಕ್ಷಿತಂ ಚಾನ್ಯೈಃ ಚಾಂಗುಲ್ಯಾ ಚಾಭಿಮಂತ್ರಿತಂ　　|| ೩೫ ||**

**ವಿಷಘ್ನಾಂಶ್ಚ ಮಣೀನ್ ರಾಜಾ ಧಾರಯೇನ್ಔಷಧೀಂಸ್ತಥಾ ।**
**ಭುಕ್ತ್ವಾ ಗೃಹೀತ ತಾಂಬೂಲಃ ಪರಿಕ್ರಮ್ಯ ವಿಶೇಷತಃ　　|| ೩೬ ||**

---

ವನ್ನು ನೆರವೇರಿಸಬೇಕು. ಅನಂತರ ಪಾದಪ್ರಕ್ಷಾಲನ ರೂಪವಾದ ಸ್ನಾನದಿಂದ ಶುದ್ಧನಾಗಿ ಪೂಜಿಸಲ್ಪಟ್ಟಿರುವ ಮಹಾವಿಷ್ಣುವನ್ನು ದರ್ಶನಮಾಡಬೇಕು.

೩೩-೩೪. ಹೋಮಹೊಂದಿರುವ ಅಗ್ನಿಯನ್ನೂ ಪೂಜೆಯಿಂದ ಸಂತುಷ್ಟರಾದ ಬ್ರಾಹ್ಮಣರನ್ನೂ ನೋಡಬೇಕು. ದಕ್ಷಿಣಾದಿಗಳಿಂದ ಸಂತುಷ್ಟರಾದ ಗುರುಗಳನ್ನೂ ನೋಡಬೇಕು ಅನಂತರ ಗಂಧಮಾಲ್ಯಾದಿಗಳಿಂದಲೂ, ಆಭರಣಗಳಿಂದಲೂ ಅಲಂಕೃತನಾಗಿ ಶುಭ್ರವಸ್ತ್ರವನ್ನು ಧರಿಸಿ ಭೋಜನಮಾಡಬೇಕು. ಆ ಸಮಯದಲ್ಲಿ ಗೀತೆಗಳನ್ನೂ ಶ್ರವಣಮಾಡಬೇಕು.

೩೫-೩೬. ಅನಂತರ ತನಗೆ ಇಷ್ಟವಾಗಿಯೂ, ಅಗ್ನಿಯಲ್ಲಿಟ್ಟು ಪರೀಕ್ಷಿಸಲ್ಪಟ್ಟೂ ಮೃಗಪಕ್ಷಿಮುಂತಾದವುಗಳ ಮನಸ್ಸಿನಿಂದಲೂ ಪರೀಕ್ಷಿಸಲ್ಪಟ್ಟ ಮಣಿಯನ್ನು ಇತರರಿಂದಲೂ ಪುನಃ ಪರೀಕ್ಷಿಸಿ ಅದನ್ನು ವಿಷವೈದ್ಯನಿಂದ ಅಭಿಮಂತ್ರಿಸಿ ಆ ಮಣಿಯನ್ನೂ ವಿಷನಾಶಕವಾದ ಓಷಧಿಗಳನ್ನೂ ಧರಿಸಬೇಕು. ಭೋಜನವಾದ ಮೇಲೆ ತಾಂಬೂಲವನ್ನು ಗ್ರಹಿಸಿ ಸ್ವಲ್ಪ ಹೆಜ್ಜಾಗಿಯೇ ಸುತ್ತಬೇಕು. (ಭುಕ್ತ್ವಾ ಶತಪದಂ ಗಚ್ಛೇತ್)

ಶಯನೇ ವಾಮಪಾರ್ಶ್ವೇನ ತತಃ ಶಾಸ್ತ್ರಾಣಿ ಚಿಂತಯೇತ್ ।
ಕೋಷ್ಠಾಗಾರಾಯುಧಾಗಾರಾನ್ಪ್ರತಿ ಚಾಗ್ರ್ಯಂ ಚ ವಾಹನಂ ॥ ೩೭ ॥

ಯೋಧಾಂಶ್ಚ ದೃಷ್ಟ್ವಾ ಚಾನ್ವಾಸ್ಯಾ ತತಃ ಸಂಧ್ಯಾ ಚ ಪಶ್ಚಿಮಾ ।
ಕಾರ್ಯಾಣಿ ಚಿಂತಯಿತ್ವಾ ಚ ಪ್ರೇಷಯಿತ್ವಾ ತತಶ್ಚರಾನ್ ।
ಅಂತಃಪುರಚರೋ ಭೂತ್ವಾ ಲಘು ಭುಕ್ತ್ವಾ ತಥಾಹಿತಂ ॥ ೩೮ ॥

ಸವೇಣುವೀಣಾಪಟಹಸ್ವನೇನ
ಸೇವೇತ ನಿದ್ರಾಂ ಕೃತಪೂರ್ವರಕ್ಷಾಂ ।
ಏತದ್ಯಶಸ್ಯಂ ಹಿ ನರಾಧಿಪಾನಾಂ
ಆಜಸ್ರಿಕಂ ತೇ ಕಥಿತಂ ವಿಧಾನಂ ॥ ೩೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ಆಜಸ್ರಿಕೋನಾಮೈಕ
ಪಂಚಾಶದುತ್ತರಶತತಮೋಽಧ್ಯಾಯಃ

---

೩೭–೩೯. ಹಾಸಿಗೆಯ ಮೇಲೆ ಎಡಮಗ್ಗುಲಿನಲ್ಲಿ ಮಲಗಿಕೊಂಡು ಶಾಸ್ತ್ರಗಳ ಪರಿಚಿಂತನವನ್ನು ಮಾಡಬೇಕು. ಮುಖ್ಯವಾದ ನಿಧಿ, ಗೃಹ ಮತ್ತು ಆಯುಧ ಶಾಲೆ ಮತ್ತು ವಾಹನಗಳು ಯೋಧರು ಇವರನ್ನೆಲ್ಲಾ ನೋಡಿದ ನಂತರ ಸಾಯಂ ಕಾಲದ ಸಂಧ್ಯಾಕಾರ್ಯವನ್ನು ನೆರವೇರಿಸಬೇಕು. ಅನಂತರ ಮಾರನೆಯ ದಿನದ ಕಾರ್ಯವಿಶೇಷಗಳನ್ನು ಆಲೋಚಿಸಿ ಗೂಢಚಾರರನ್ನು ಆಯಾಯ ಕಾರ್ಯದಲ್ಲಿ ನಿಯಮಿಸಿ ಅಂತಃಪುರಕ್ಕೆ ಹೋಗಿ ಲಘುವಾಗಿಯೂ ಹಿತವಾಗಿಯೂ ಇರುವ ಭೋಜನವನ್ನು ಮಾಡಿ ಮಂತ್ರಪೂರ್ವಕವಾದ ರಕ್ಷೆಯಿಂದ ಕೂಡಿದ ನಿದ್ರಾಗೃಹ ವನ್ನು ಪ್ರವೇಶಿಸಿ ಕೊಳಲು, ವೀಣಾ, ತಬಲ ಮೊದಲಾದ ಸಂಗೀತಧ್ವನಿಯಿಂದ ಸಂತುಷ್ಟನಾಗಿ ನಿದ್ರೆಯನ್ನು ಸೇವಿಸಬೇಕು. ರಾಜರು ನಡೆಸಬೇಕಾದ ಯಶಃ ಪ್ರದವಾದ ಸಾರ್ವಕಾಲಿಕ ವಿಧಾನವನ್ನು ನಿನಗೆ ಈ ರೀತಿ ಹೇಳಿದ್ದಾಯಿತು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ
ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನು ಹೇಳಿದ
ಉಪಾಖ್ಯಾನದಲ್ಲಿ ಆಜಸ್ರಿಕವೆಂಬ ನೂರ ಐವತ್ತೊಂದನೆಯ
ಅಧ್ಯಾಯವು ಮುಗಿದಿದೆ.

॥ ಓಂ ॥

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ದ್ವಿಪಂಚಾಶದುತ್ತರಶತತಮೋಽಧ್ಯಾಯಃ

॥ ಪುಷ್ಕರ ಉವಾಚ ॥

ರಾಜಾ ತು ಜನ್ಮನಕ್ಷತ್ರೇ ಪ್ರತಿಮಾಸಂ ಸಮಾಚರೇತ್ ।
ಜನ್ಮನಃ ಕ್ಷಾಲನಂ ಕರ್ಮ ಯತ್ತತ್ಪೂರ್ವಂ ಮಯೇರಿತಂ ॥ ೧ ॥

ಪುಷ್ಪಸ್ನಾನಂ ತತಃ ಕುರ್ಯಾತ್ಪ್ರತಿಮಾಸಂ ನರಾಧಿಪಃ ।
ಸಂಕ್ರಾನ್ತೌ ಪೂಜಯೇತ್ಸೂರ್ಯಂ ಬಾಲಮಿಂದುಂ ತಥೈವ ಚ ॥ ೨ ॥

ಗ್ರಹಂ ಸಂಪೂಜಯೇದ್ರಾಜಾ ನಿರ್ಗತಂ ರವಿಮಂಡಲಾತ್ ।
ಅಗಸ್ತ್ಯಸ್ಯೋದಯೇ ಕಾರ್ಯಾ ತಥಾ ಪೂಜಾ ನರಾಧಿಪೈಃ ॥ ೩ ॥

ಪೂಜಯೇಚ್ಚತುರೋ ಮಾಸಾನ್ಪ್ರಸುಪ್ತಂ ಮಧುಸೂದನಂ ।
ಪ್ರೋಷ್ಠಪಾದಾಮಲೇ ರಕ್ಷೇತ್ಪೂಜಯೇಚ್ಚ ಶತಕ್ರತುಂ ॥ ೪ ॥

### ನೂರ ಐವತ್ತೆರಡನೇ ಅಧ್ಯಾಯ.

೧–೨. ಪುಷ್ಕರನು ಹೇಳುತ್ತಾನೆ. ರಾಜನಾದವನು ಪ್ರತಿ ತಿಂಗಳಲ್ಲಿಯೂ ತನ್ನ ಜನ್ಮ ನಕ್ಷತ್ರದಲ್ಲಿ ಪರಿಶುದ್ಧಿಕರವಾದ ಶಾಂತಿಕರ್ಮವನ್ನು ನಾನು ಹಿಂದೆ ಹೇಳಿದಂತೆ ನಡೆಸಬೇಕು. ಹಾಗೆಯೇ ಪ್ರತಿಮಾಸದಲ್ಲಿಯೂ ಪುಷ್ಪಸ್ನಾನವನ್ನೂ ಮಾಡಬೇಕು. ಸಂಕ್ರಮಣ ಕಾಲದಲ್ಲಿ ಸೂರ್ಯನನ್ನೂ ಬಾಲಚಂದ್ರನನ್ನೂ ಸಹ ಪೂಜಿಸಬೇಕು.

೩–೪. ಹಾಗೆಯೇ ಸೂರ್ಯಮಂಡಲದಿಂದ ಹೊರಗೆ ಗ್ರಹಗಳು ಹೊರಡುವಾಗ ಆಗ್ರಹಗಳನ್ನೂ ಪೂಜಿಸಬೇಕು. ಅಗಸ್ತ್ಯೋದಯ ಕಾಲದಲ್ಲಿಯೂ ಸಹ ದೊರೆಗಳು ಪೂಜಿಸಬೇಕು ಚತುರ್ಮಾಸದಲ್ಲಿ ಪವಡಿಸುವ ಮಧುಸೂಧನನ್ನೂ

ನವಮ್ಯಾಮಾಶ್ವಯುಕ್ಛುಕ್ಲೇ ಭದ್ರಕಾಲೀಂ ಚ ಪೂಜಯೇತ್ ।
ರವೌ ಸ್ವಾತಿಮನುಪ್ರಾಪ್ತೇ ಕುರ್ಯಾನ್ನೀರಾಜನಂ ತಥಾ ॥ ೫ ॥

ಸಂವತ್ಸರಾತ್ಕೋಟಿಹೋಮಂ ಕುರ್ಯಾಚ್ಚ ಘೃತಕೇವಲಂ ।
ರಾಜ್ಯಸಂವತ್ಸರಗ್ರಂಥೌ ಕುರ್ಯಾತ್ತದ್ರುದ್ರಪೂಜನಂ ॥ ೬ ॥

ಕರ್ಮಾಣ್ಯಥೈತಾನಿ ನರಾಧಿಪಸ್ಯ
ನಿತ್ಯಾನಿ ತೇ ರಾಮ ಮಯೋದಿತಾನಿ ।
ಏತಾನಿ ಕೃತ್ವಾ ವಿಧಿವನ್ನರೇಂದ್ರ
ಶ್ಚಿರಂಸಮಗ್ರಾಂ ವಸುಧಾಂ ಪ್ರಶಾಸ್ತಿ ॥ ೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ರಾಮಂಪ್ರತಿ ಪುಷ್ಕರೋಪಾಖ್ಯಾನೇ ಸಾಂವತ್ಸರಿಕ ವರ್ಣನೋನಾಮ ದ್ವಿಪಂಚಾಶದುತ್ತರಶತತಮೋಽಧ್ಯಾಯಃ

---

ನಾಲ್ಕು ತಿಂಗಳಲ್ಲಿಯೂ ಪೂಜಿಸಬೇಕು. ಭಾದ್ರಪದ ಶುಕ್ಲಪಕ್ಷದಲ್ಲಿಯೂ ಹಾಗೆಯೇ ಆ ಪೂಜೆಯನ್ನೂ ರಕ್ಷಿಸುತ್ತಾ ಆಗ ಇಂದ್ರನನ್ನೂ ಪೂಜಿಸಬೇಕು. ಆಶ್ವಯುಜ ಶುದ್ಧ ನವಮಿಯಲ್ಲಿ ಭದ್ರಕಾಳಿಯನ್ನು ಪೂಜಿಸಬೇಕು.

೫-೭. ಸೂರ್ಯನು ಸ್ವಾತೀನಕ್ಷತ್ರವನ್ನು ಹೊಂದಿದಾಗ ನೀರಾಜನವನ್ನು (ಆರತಿ) ನಡೆಸಬೇಕು. ಆ ಸಂವತ್ಸರವು ಮುಗಿಯುವುದರೊಳಗೆ ಆಜ್ಯದಿಂದ ಕೋಟಿಹೋಮವನ್ನು ಮಾಡಬೇಕು. ರಾಜ್ಯಭಾರವನ್ನು ಮೊದಲು ಮಾಡಿದ ಸಂವತ್ಸರ ಸಂಧಿಯಲ್ಲಿ (ಹಿಂದಿನ ವರ್ಷತುಂಬಿ ಮುಂದಿನವರ್ಷ ಪ್ರಾರಂಭದ ಸಮಯದಲ್ಲಿ) ರುದ್ರನನ್ನು ಪೂಜಿಸಬೇಕು ಈ ಕರ್ಮಗಳೆಲ್ಲವೂ ರಾಜನಾದವನಿಗೆ ನಿತ್ಯಗಳೆಂದೇ ಹೇಳಲ್ಪಟ್ಟಿವೆ. ನಾನು ಹೇಳಿರುವ ಈ ಕರ್ಮಗಳನ್ನು ಯಥಾವಿಧಿ ಯಾಗಿ ನೆರವೇರಿಸಿದುದೇ ಆದರೆ ಅಂತಹ ದೊರೆಯು ಬಹುಕಾಲದವರಿಗೂ ಅಖಂಡ ಭೂಮಂಡಲವನ್ನೇ ಆಳುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ದ್ವಿತೀಯಖಂಡದಲ್ಲಿ ಮಾರ್ಕಂಡೇಯ ಸಂವಾದ ದಲ್ಲಿ ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ ಸಾಂವತ್ಸರಿಕವರ್ಣನವೆಂಬ ನೂರ ಐವತ್ತೆರಡನೆಯ ಅಧ್ಯಾಯ ಮುಗಿದಿದೆ.

॥ ಓಂ ॥

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ತ್ರಿಪಂಚಾಶದುತ್ತರಶತತಮೋಽಧ್ಯಾಯಃ

॥ ರಾಮ ಉವಾಚ ॥

**ಕಥಂ ಹಿ ಚತುರೋಮಾಸಾನ್ ಕಾರ್ಯಂ ಕೇಶವಪೂಜನಂ ।**
**ಪಾರ್ಥಿವೇನ ಸುರಶ್ರೇಷ್ಠ ತನ್ಮಮಾಚಕ್ಷ್ವ ಪೃಚ್ಛತಃ** ॥ ೧ ॥

॥ ಪುಷ್ಕರ ಉವಾಚ ॥

**ಉದ್ಯುಕ್ತೇನ ಸದಾ ಭಾವ್ಯಂ ರಾಜ್ಞಾ ಭೃಗುಕುಲೋದ್ವಹ ।**
**ಆಷಾಢಶುಕ್ಲಪಕ್ಷಾಂತೇ ರಾಜಾ ಸ್ಥಾನಮುಪಾಶ್ರಯೇತ್** ॥ ೨ ॥

**ಅಧೃಷ್ಯಂ ಪರರಾಷ್ಟ್ರಾಣಾಂ ಪ್ರಭೂತಯವಸೇಂಧನಂ ।**
**ತೋಯೋಪೇತಂ ವಿಪಂಕಂ ಚ ಪ್ರಾವೃಟ್ಕಾಲಹತಂ ತಥಾ** ॥ ೩ ॥

---

### ನೂರ ಐವತ್ತಮೂರನೇ ಅಧ್ಯಾಯ.

೧. ಪರಶುರಾಮನು ಪುನಃ ಪ್ರಶ್ನೆಮಾಡುತ್ತಾನೆ :— ಚಾತುರ್ಮಾಸ್ಯದ ನಾಲ್ಕು ತಿಂಗಳಲ್ಲಿಯೂ ಕೇಶವನ ಪೂಜೆಯನ್ನು ರಾಜನಾದವನು ಹೇಗೆ ನಡೆಸಬೇಕೆಂಬುದನ್ನು ಹೇಳಬೇಕು. ಇದಕ್ಕೆ ಉತ್ತರವಾಗಿ ಪುಷ್ಕರನು ಹೇಳುತ್ತಾನೆ.

೨–೩. ಎಲೈ ಭೃಗುಕುಲಶ್ರೇಷ್ಠನೇ, ರಾಜನಾದವನು ಯಾವಾಗಲೂ ತನ್ನ ದಿಗ್ವಿಜಯ ಯಾತ್ರೆಯಲ್ಲಿಯೇ ಪ್ರಯತ್ನಶಾಲಿಯಾಗಿರಬೇಕು. ಆದರೆ ಆಷಾಢಶುಕ್ಲಪಕ್ಷದ ಕಡೆಯ ಭಾಗದಲ್ಲಿ ಆ ದಿಗ್ವಿಜಯ ಪ್ರಸ್ಥಾನವನ್ನು ಮುಗಿಸಿ

ಯತ್ರಸ್ಥಶ್ಚ ಸ್ವವಿಷಯಂ ಸರ್ವಂ ಶಕ್ನೋತಿ ರಕ್ಷಿತುಂ ।
ತತ್ರಸ್ಥಶ್ಚತುರೋಮಾಸಾನಜಾಂಶ್ಚ ಪೋಷಯೇನ್ನೃಪಃ ॥ ೪ ॥

ಸ್ನೇಹಪಾನೈರ್ಬಹುವಿಧೈಃ ಪ್ರತಿಪಾನೈಶ್ಚ ಭಾರ್ಗವ ।
ಆಷಾಢಶುಕ್ಲಪಕ್ಷಾಂತೇ ದಶಮ್ಯೂರ್ಧ್ವಂ ನರಾಧಿಪಃ ॥ ೫ ॥

ಉತ್ಸವಂ ತು ಮಹತ್ಕುರ್ಯಾದ್ದೇವಸ್ಯ ಚಾರ್ಚನೇ ರತಃ ।
ಅರ್ಚಾಯಾಂ ವಾ ಪಟೇ ವಾಪಿ ಕೃತಂ ದೇವಮಥಾರ್ಚಯೇತ್ ॥ ೬ ॥

ದೇವಭೋಗಮಯಂ ವಿಷ್ಣುಂ ಶ್ರೀಸಹಾಯಮರಿಂದಮಂ ।
ಬಲಿಭಿರ್ವಿವಿಧಾಭಿಸ್ತು ಪುಷ್ಪೈರ್ಧೂಪೈಃ ಸುಗಂಧಿಭಿಃ ॥ ೭ ॥

ಕೊಂಡು ತನ್ನ ಸ್ಥಾನಕ್ಕೆ ಬಂದು ಸೇರಬೇಕು. ಅಂತಹ ಪ್ರದೇಶವೂ ಸಹ ಪರ ರಾಜರ ಬಾಧೆಗೆ ಒಳಪಡದಂತೆಯೂ ಹೆಚ್ಚಾದ ತೃಣಕಾಷ್ಠಸಮೃದ್ಧಿಯಿಂದಲೂ ಕೂಡಿರಬೇಕು ವರ್ಷಾಕಾಲದ ತೊಂದರೆಗಳಾವುವೂ ಇಲ್ಲದಂತೆಯೂ ಕೆಸರಿಲ್ಲ ದೆಯೂ, ಜಲಸೌಕರ್ಯದಿಂದ ಕೂಡಿಯೂ ಇರಬೇಕು.

೪–೬. ಯಾವ ಸ್ಥಳದಲ್ಲಿ ತಾನು ಇದ್ದಲ್ಲಿ ತನ್ನ ಎಲ್ಲಾ ಭಾಗವನ್ನೂ ರಕ್ಷಿಸಿಕೊಳ್ಳಬಹುದೋ ಅಂತಹ ಸಮೃದ್ಧಿಯುಳ್ಳ ಸ್ಥಾನದಲ್ಲಿ ನೆಲಸಿ ನಾಲ್ಕು ತಿಂಗಳ ವರಿಗೂ ಆಡು ಹಸು ಮುಂತಾದುವನ್ನು ಪೋಷಿಸಬೇಕು. ಆ ಪೋಷಣವನ್ನೂ ಸಹ ನಾನಾವಿಧವಾದ ಸ್ನೇಹವಸ್ತುಗಳ ಪಾನದಿಂದಲೂ, ಔಷಧರೂಪವಾದ ಪುಷ್ಟಿಕರವಾದ ಪಾನಗಳಿಂದಲೂ ನಡೆಸಬೇಕು. ಅನಂತರ ಆಷಾಢಮಾಸದ ಶುಕ್ಲಪಕ್ಷದಲ್ಲಿ ದಶಮಿಯನಂತರ ರಾಜನಾದವನು ದೇವಾರ್ಚನೆಯಲ್ಲಿಯೇ ಆಸಕ್ತ ನಾಗಿ ಮಹೋತ್ಸವಗಳನ್ನು ನಡೆಸಬೇಕು ಅಂತಹ ಪೂಜಾಸಂದರ್ಭದಲ್ಲಿ ವಿಗ್ರಹ ರೂಪದಿಂದಾಗಲಿ, ವಸ್ತ್ರದಲ್ಲಿ ಚಿತ್ರರೂಪದಿಂದಾಗಲಿ ನಿರ್ಮಿಸಲ್ಪಟ್ಟ ಮಧುಸೂಧನ ನನ್ನು ಪೂಜಿಸಬೇಕು.

೭–೮ ಅಪ್ರಾಕೃತಸ್ವಾಸಾಧಾರಣ ದಿವ್ಯಮಂಗಳ ವಿಗ್ರಹದಿಂದ ಕೂಡಿ ಲಕ್ಷ್ಮೀಸಹಿತನಾಗಿಯೂ ಶತ್ರುಭಯನಿವಾರಕನಾಗಿಯೂ ಇರುವ ಮಹಾವಿಷ್ಣುವನ್ನು

ಉತ್ಸವಂ ತು ಮಹತ್ಕುರ್ಯಾತ್ತತಃ ಪಂಚದಿನಂ ನೃಪಃ ।
ತತಃ ಪ್ರಭೃತಿ ನಿತ್ಯಂ ಸ್ಯಾದ್ವಾಸುದೇವಸ್ಯ ಪೂಜನಂ ॥ ೮ ॥

ಸಾತ್ವತೈರ್ಭಾರ್ಗವಶ್ರೇಷ್ಠ ಸಾಂವತ್ಸರಪುರೋಹಿತೈಃ ।
ಗೀತನೃತ್ಯೈಸ್ತಥಾ ದೇವಂ ವಿಶೇಷೇಣಾತ್ರ ಪೂಜಯೇತ್ ॥ ೯ ॥

ಅಸ್ಮಿನ್ನೇವ ತಥಾ ಕಾಲೇ ಕೋಟಿಹೋಮಂ ಸಮಾಚರೇತ್ ।
ಕಾರ್ತಿಕ್ಯಾಂ ತತ್ಸಮಾಪ್ತಿಸ್ತು ಯಥಾ ಭವತಿ ಭಾರ್ಗವ ॥ ೧೦ ॥

ಶುಕ್ಲಪಕ್ಷತ್ರಿಭಾಗೇನ್ತ್ಯೇ ಕಾರ್ತಿಕಸ್ಯ ತತೋ ನೃಪಃ ।
ಉತ್ಸವಂ ಸುಮಹತ್ಕುರ್ಯಾದ್ದೇವದೇವಾರ್ಚನಂ ತಥಾ ॥ ೧೧ ॥

ವೈಕುಂಠಂ ಪೂಜಯೇದ್ದೇವಮರ್ಚಾಯಾಮಥವಾ ಪಟೇ ।
ಮಹಾದಾನಂ ತತೋ ದದ್ಯಾತ್ಪ್ರೇಕ್ಷ್ಯಾಂ ದದ್ಯಾತ್ತಥೈವ ಚ ॥ ೧೨ ॥

---

ನಾನಾವಿಧವಾದ ಬಲಿಹರಣಗಳಿಂದಲೂ ಪೂಜಿಸಿ ಅದು ಮೊದಲು ನಿತ್ಯವೂ ಆ ವಾಸುದೇವನ ಪೂಜೆಯನ್ನು ನಿತ್ಯವೂ ಮಾಡುತ್ತಿರಬೇಕು

೯–೧೦ ಪಾಂಚರಾತ್ರವಿಧಿಯಲ್ಲಿ ಅಭಿಜ್ಞರಾದ ಜ್ಯೋತಿಷಿಕರು ಮತ್ತು ಪುರೋಹಿತರು ಇವರುಗಳಿಂದ ಕೂಡಿ ನೃತ್ಯಗೀತವಾದ್ಯಾದಿಗಳೊಡನೆ ವಿಶೇಷ ಸಂಭ್ರಮದಿಂದ ಈ ಪೂಜೆಯನ್ನು ನೆರವೇರಿಸಬೇಕು ಈ ಸಮಯದಲ್ಲಿಯೇ ಕೋಟಿಹೋಮವನ್ನು ಮಾಡಬೇಕು, ಕಾರ್ತಿಕಶುದ್ಧಪೂರ್ಣಿಮೆಗೆ ಸರಿಯಾಗಿ ಅದರ ಸಮಾಪ್ತಿಯಾಗಬೇಕು.

೧೧–೧೨ ಕಾರ್ತಿಕಮಾಸದ ಶುಕ್ಲಪಕ್ಷದ ಕೊನೆಯ ಮೂರನೆಯ ಭಾಗದಲ್ಲಿ ದೇವದೇವನಾದ ಆ ಮಹಾವಿಷ್ಣುವಿನ ಉತ್ಸವವನ್ನೂ ಪೂಜೆಯನ್ನೂ ಹೆಚ್ಚುಹೆಚ್ಚಾಗಿ ನಡೆಸುತ್ತಿರಬೇಕು. ಅರ್ಚಾರೂಪವಾದ ವಿಗ್ರಹದಲ್ಲಾಗಲಿ ವಸ್ತ್ರದಲ್ಲಿ ಬರೆದಿರುವ ಚಿತ್ರದಲ್ಲಾಗಲಿ ವೈಕುಂಠನಾದ ಆ ಪ್ರಭುವನ್ನು ಈರೀತಿ ಪೂಜಿಸಿ ಅನಂತರ ಮಹಾದಾನಗಳನ್ನೂ ಕನ್ನಡಿಯೇ ಮೊದಲಾದ ಮಂಗಳವಸ್ತುಗಳನ್ನೂ ದಾನ ಮಾಡಬೇಕು

ಮಲ್ಲಾನಾಮಥ ಝಲ್ಲಾನಾಂ ನಟಾನಾಂ ನರ್ತಕೈಸ್ಸಹ ।
ಯಾತ್ರಾವಿಧಾನಂ ಸಕಲಂ ತಥಾ ಕುರ್ಯಾನ್ಮಹೀಪತಿಃ ॥ ೧೩ ॥

ಏತತ್ಕೃತ್ವಾ ತತೋ ಯಾತ್ರಾ ದೇಯಾ ಭವತಿ ಪಾರ್ಥಿವೈಃ ।
ಶರತ್ಕಾಲೆ ಗಜಾತಂಕೈಃ ಪುಷ್ಟಾಶ್ವರಥಕುಂಜರೈಃ ॥ ೧೪ ॥

ಏವಂ ಚ ರಾಜ್ಞಾ ಚತುರೋ ಹಿ ಮಾಸಾನ್
ಪೂಜ್ಯೋ ಭವೇದ್ದೇವವರೋ ಹಿ ಹರ್ತಾ ।
ಸಂತ್ಯಕ್ತಚಿಹ್ನಂ ಮಧುಸೂದನಂ ಚ
ಸಂಪೂಜ್ಯ ಯಾತ್ರಾಭಿಮತಪ್ರದಾ ಸ್ಯಾತ್ ॥ ೧೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ಚಾತುರ್ಮಾಸ್ಯವಿಧಿಕಥನೋ ನಾಮ
ತ್ರಿಪಂಚಾಶದುತ್ತರಶತತಮೋಽಧ್ಯಾಯಃ

---

೧೩–೧೫. ಅನಂತರ ಜಟ್ಟಿಗಳೂ ಮತ್ತು ಝಲ್ಲಾ ಎಂಬ ವಾದ್ಯವಿಶೇಷ ಧಾರಿಗಳೂ ನಟರೂ, ನರ್ತಕರೂ ಎಲ್ಲರನ್ನೂ ನೇರಿಸಿ ಆ ದೇವತೆಯ ಉತ್ಸವವನ್ನು ದೊರೆಯು ಸಂಭ್ರಮದಿಂದ ಬೀದಿಯಲ್ಲಿ ನಡೆಸಬೇಕು. ಹೀಗೆ ನಡೆಸಿದನಂತರ ದೊರೆಗಳು ತಾವೂ ಸಹ ವಿಜಯಯಾತ್ರೆಯನ್ನು ಕೈಗೊಳ್ಳಬೇಕು ಅನಂತರ ಉಂಟಾಗುವ ಶರತ್ಕಾಲದಲ್ಲಿ ಪರಿಪುಷ್ಟವಾದ ಗಜಾಶ್ವಗಳಿಂದಲೂ ರಥವೇ ಮೊದಲಾದ ವಾಹನಗಳಿಂದಲೂ ಸೇರಿ ಯಾವ ಆತಂಕವೂ ಇಲ್ಲದ ವಿಜಯ ಯಾತ್ರೆಯನ್ನು ಕೈಗೊಳ್ಳಬೇಕು. ಈ ರೀತಿ ಶತ್ರುಸಂಹರ್ತೃವಾದ ಹರಿಯನ್ನು ಈ ನಾಲ್ಕು ತಿಂಗಳಲ್ಲಿಯೂ ದೊರೆಯು ಪೂಜಿಸಬೇಕು. ಈ ಚಾತುರ್ಮಾಸ್ಯ ಕಾಲದಲ್ಲಿ ನಿದ್ರಿತನಾದ ಹರಿಗೆ ವಸ್ತ್ರಭೂಷಣಾದಿ ಯಾವ ಚಿಹ್ನವನ್ನೂ ಧರಿಸದೆ ಪೂಜಿಸಿದಲ್ಲಿ ತಮ್ಮ ವಿಜಯಯಾತ್ರೆಯೂ ಸಹ ರಾಜರಿಗೆ ಫಲಪ್ರದವಾಗಿ ಪರಿಣಮಿಸುತ್ತದೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ
ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನ ಉಪಾಖ್ಯಾನದಲ್ಲಿ
ಚಾತುರ್ಮಾಸ್ಯವಿಧಿಕಥನ ವರ್ಣನವೆಂಬ ನೂರ ಐವತ್ತಮೂರನೆಯ
ಅಧ್ಯಾಯವು ಮುಗಿದಿದೆ.

॥ ಓಂ ॥

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಚತುಃಪಂಚಾಶದುತ್ತರಶತತಮೋಽಧ್ಯಾಯಃ

॥ ರಾಮ ಉವಾಚ ॥

ಶಕ್ರಸಂಪೂಜನಂ ಕಾರ್ಯಂ ಕಥಂ ರಾಜ್ಞಾ ಸುರೋತ್ತಮ ।
ಸಮ್ಯಗ್ಭಾದ್ರಪದೇ ಮಾಸಿ ತನ್ಮಮಾಚಕ್ಷ್ವ ಪೃಚ್ಛತಃ ॥ ೧ ॥

॥ ಪುಷ್ಕರ ಉವಾಚ ॥

ಅಸುರೈಸ್ತು ಸುರಾ ಭಗ್ನಾಃ ಪುರಾಯುದ್ಧೇ ಭೃಗೋತ್ತಮ ।
ಬ್ರಹ್ಮಾಣಂ ಶರಣಂ ಜಗ್ಮುಃ ಸರ್ವಭೂತಹಿತೇ ರತಂ ॥ ೨ ॥

---

### ನೂರ ಐವತ್ತನಾಲ್ಕನೇ ಅಧ್ಯಾಯ.

೧. ರಾಮನು ಪುನಃ ಪ್ರಶ್ನೆಮಾಡುತ್ತಾನೆ. ರಾಜನು ಭಾದ್ರಪದ ಮಾಸದಲ್ಲಿ ಇಂದ್ರನನ್ನು ಪೂಜಿಸಬೇಕೆಂದು ಹೇಳಿರುವಿರಿ ಸಮೀಚೀನವಾದ ಆ ಪೂಜಾ ವಿಧಿಯ ಕ್ರಮವೇನೆಂಬುದನ್ನು ದಯವಿಟ್ಟು ಹೇಳಬೇಕು. ಇದಕ್ಕೆ ಉತ್ತರವಾಗಿ ಪುಷ್ಕರನು ಹೇಳುತ್ತಾನೆ.

೨–೩. ಎಲೈ ರಾಮನೇ, ಪೂರ್ವದಲ್ಲಿ ಅಸುರರಿಂದ ಸುರರೆಲ್ಲರೂ ಯುದ್ಧದಲ್ಲಿ ಪರಾಜಿತರಾಗಿ ಸರ್ವಪ್ರಾಣಿಗಳಿಗೂ ಹಿತಕರನಾದ ಬ್ರಹ್ಮನಲ್ಲಿ ಶರಣಾಗತರಾದರು.

ತೇ ತು ಮೂಢಾಃ ಸುರಾಸ್ಸರ್ವೇ ನಿರ್ಜಿತಾದಾನವೈರ್ವಧಂ ।
ತಾನುವಾಚ ತತೋ ಬ್ರಹ್ಮಾ ಕ್ಷೀರೋದೇ ಮಧುಸೂದನಂ ॥ ೩ ॥

ಗಚ್ಛಧ್ವಂ ಸಹಿತಾಸ್ಸರ್ವೇ ಸ ವಃ ಶ್ರೇಯಃ ಕರಿಷ್ಯತಿ ।
ಏವಮುಕ್ತಾಃ ಸುರಾಃ ಸರ್ವೇ ಕ್ಷೀರೋದೆ ಕೇಶವಂ ಯಯುಃ ॥ ೪ ॥

ದದೃಶುಶ್ಚ ತದಾ ದೇವಂ ವಾಸುದೇವಂ ಜಗದ್ಗುರುಂ ।
ಅಮೃತಾಧ್ಮಾತಮೇಘಾಭಂ ಶಂಕಚಕ್ರಗದಾಧರಂ ॥ ೫ ॥

ತುಷ್ಟುವುಶ್ಚ ಮಹಾಭಾಗಂ ತ್ರಿದಶಾಸ್ತಂ ಪುನಃಪುನಃ ।
ಸರ್ವೇಷಾಮೀಶ್ವರಂ ದೇವಂ ಭುವನಸ್ಯೈಕಕಾರಣಂ ॥ ೬ ॥

॥ ದೇವಾ ಊಚುಃ ॥

ನಮಸ್ತೇ ಪುಂಡರೀಕಾಕ್ಷ ಶರಣಾಗತವತ್ಸಲ ।
ದೇವಾರಿಬಲದರ್ಪಘ್ನ ತ್ರಿದಶೇಂದ್ರಸುಖಪ್ರದ ॥ ೭ ॥

---

ತಮ್ಮ ಅಜ್ಞಾನದಿಂದ ವಧಪರ್ಯಂತರವೂ ಆದ ಪರಾಜಯವನ್ನು ಅಸುರರಿಂದ ಹೊಂದಿ ಬಂದ ದೇವತೆಗಳನ್ನು ನೋಡಿ ಚತುರ್ಮುಖನು ಕ್ಷೀರ ಸಮುದ್ರದಲ್ಲಿರುವ ಮಧುಸೂದನನನ್ನು ನೋಡಲು ನೀವೆಲ್ಲರೂ ಏಕೀಭವಿಸಿ ಹೊರಡಿರಿ ಆ ಮಧುಸೂದನನೇ ನಿಮಗೆ ಶ್ರೇಯಸ್ಸನ್ನು ಉಂಟುಮಾಡುತ್ತಾನೆ.

೪-೬. ಹೀಗೆ ಹೇಳಲ್ಪಟ್ಟ ದೇವತೆಗಳೆಲ್ಲರೂ ಕ್ಷೀರಸಮುದ್ರಕ್ಕೆ ಹೋಗಿ ಅಲ್ಲಿರುವ ಕೇಶವನ ಸಮೀಪಕ್ಕೆ ಹೋಗಿ ಸೇರಿದರು. ಅಲ್ಲಿ ಅಪ್ರಾಕೃತ ಮೂರ್ತಿಯಾಗಿಯೂ ಜಗದ್ಗುರುವಾಗಿಯೂ, ಜಲದಿಂದ ತುಂಬಿದ ನೀಲಮೇಘದಂತೆಯೂ, ಚಕ್ರಗದಾಧಾರನಾಗಿಯೂ ಇರುವ ಆ ವಾಸುದೇವನನ್ನು ನೋಡಿದರು. ಮತ್ತು ಬಾರಿ ಬಾರಿಗೂ ಆ ಮಹಾತ್ಮನನ್ನು ಎಲ್ಲರೂ ಸ್ತೋತ್ರಮಾಡಿದರು. ಅವನೇ ಎಲ್ಲರಿಗೂ ಪ್ರಭುವಾಗಿಯೂ ಪ್ರಪಂಚಕ್ಕೆಲ್ಲಾ ಮುಖ್ಯವಾದ ಅದ್ವಿತೀಯ ಕಾರಣನಾಗಿಯೂ ಇರುವನಷ್ಟೆ.

೭-೧೦. ದೇವತೆಗಳು ಸ್ತೋತ್ರಮಾಡುತ್ತಾರೆ ಬಿಳಿಯ ಕಮಲದಂತೆ ಪ್ರಸನ್ನವಾಗಿಯೂ ರಮ್ಯವಾಗಿಯೂ ಇರುವ ನೇತ್ರಗಳುಳ್ಳವನೇ, ಶರಣಾಗತರಲ್ಲಿ ಪ್ರೀತಿಯುಳ್ಳ ಪ್ರಭುವೇ, ಸುರಶತ್ರುಗಳ ಬಲವನ್ನೂ, ದರ್ಪವನ್ನೂ ನಾಶಪಡಿಸು

ಚಾಮೀಕರಾಭವಸನ ತಾರ್ಕ್ಷ್ಯಪ್ರವರಕೇತನ ।
ಶೇಷಪರ್ಯಂಕಶಯನ ಲಕ್ಷ್ಮೀಹೃದಯವಲ್ಲಭ ॥ ೮ ॥

ಸುರಾಸುರಶಿರೋರತ್ನನಿಘೃಷ್ಟಚರಣಾಂಬುಜ ।
ಉನ್ನಿದ್ರಚಾರುಕಮಲ ವಿರಾಜಿತಕರಾಂಬುಜ ॥ ೯ ॥

ಸಚ್ಚೈಕದೇವ ಭಗ್ನಾನಾಮಸ್ಮಾಕಮಸುರೈರ್ಭವಾನ್ ।
ಗತಿಸ್ತೇನ ಸ್ಮ ಸಂಪ್ರಾಪ್ತಾಃ ದೈತ್ಯಭಗ್ನಾಸ್ತ್ವದಂತಿಕಂ ॥ ೧೦ ॥

ಪ್ರಸೀದ ದೇವದೇವೇಶ ಜಹಿ ತಾನಸುರಾಧಮಾನ್ ।
ಯೇಽಸ್ಮಾಕಂ ದೇವದೇವೇಶ ಪೀಡಯಂತಿ ಸದೈವ ತು ॥ ೧೧ ॥

॥ ಭಗವಾನುವಾಚ ॥

ಧ್ವಜಮೇತಂ ಪ್ರದಾಸ್ಯಾಮಿ ಭವತಾಮರಿನಾಶನಂ ।
ದೃಷ್ಟಮಾತ್ರೇಣ ಯೇನೇಹ ವಿದ್ರವಿಷ್ಯಂತಿ ದಾನವಾಃ ॥ ೧೨ ॥

---

ಪವನೇ, ಇಂದ್ರನ ಸುಖಕ್ಕೆ ನೆರವಾಗುತ್ತಿರುವವನೇ, ಸುವರ್ಣದಂತೆ ಉಜ್ವಲವಾಗಿಯೂ ಹೊಂಬಣ್ಣವಾಗಿಯೂ ಇರುವ ಪೀತಾಂಬರಧಾರಿಯೇ, ಗರುಡಧ್ವಜನೇ, ಶೇಷಶಯನಶಾಯಿಯೇ, ಮಹಾಲಕ್ಷ್ಮಿಯ ಹೃದಯವಲ್ಲಭನೇ, ನಮಸ್ಕರಿಸುವ ದೇವಾಸುರರ ಕಿರೀಟದಲ್ಲಿರುವ ರತ್ನಗಳಿಂದ ಉಜ್ಜಲ್ಪಟ್ಟ ಚರಣಕಮಲಗಳುಳ್ಳವನೇ ಅರಳಿರುವ ಕೆಂದಾವರೆಯಿಂದ ಪ್ರಕಾಶಿಸುತ್ತಿರುವ ಕರವುಳ್ಳವನೇ, ಅಸುರರಿಂದ ಪರಾಜಿತರಾಗಿ ಬಂದಿರುವ ನಮಗೆ ಸರ್ವಜಗತ್ಪತಿಯಾದ ನೀನೇ ಗತಿಯಾಗಿದ್ದೀಯೆ ದೈತ್ಯರಿಂದ ಭಗ್ನರಾದ ನಾವು ಶರಣಾಗತರಾಗಿ ನಿನ್ನಲ್ಲಿ ಬಂದಿದ್ದೇವೆ.

೧೧. ದೇವಾಧಿಪರಾದ ಇಂದ್ರಾದಿಗಳಿಗೂ ಪ್ರಭುವಾಗಿರುವ ಎಲೈ ಪರಮಾತ್ಮನೇ, ಪ್ರಸನ್ನನಾಗು. ಯಾವ ಅಸುರಾಧಮರು ನಮ್ಮನ್ನು ಯಾವಾಗಲೂ ಪೀಡಿಸುತ್ತಿರುವರೋ ಅವರನ್ನು ಈಗಲೇ ನಾಶಪಡಿಸು, ಹೀಗೆ ಸ್ತೋತ್ರಮಾಡಿ ಪ್ರಾರ್ಥಿಸಿದ ದೇವತೆಗಳನ್ನು ಕುರಿತು ಭಗವಂತನು ಹೇಳುತ್ತಾನೆ.

೧೨. ಎಲೈ ದೇವತೆಗಳಿರಾ, ನಿಮ್ಮ ಶತ್ರುಗಳನ್ನೆಲ್ಲಾ ನಾಶಪಡಿಸುವಂತಹ ಈ ಧ್ವಜವನ್ನು ನಿಮಗೆ ಕೊಡುತ್ತೇನೆ. ಇದನ್ನು ನೋಡಿದೊಡನೆಯೇ ನಿಮ್ಮ

|| ಶ್ರೀ ಪುಷ್ಕರ ಉವಾಚ ||

ಏವಮುಕ್ತ್ವಾ ಧ್ವಜಂ ತೇಷಾಂ ದದೌ ವಿಷ್ಣುರನುತ್ತಮಂ |
ಸೌವರ್ಣಮುಚ್ಛ್ರಿತಂ ದಿವ್ಯಂ ಶಕ್ರಧ್ವಜಮಿತಿಶ್ರುತಂ || ೧೩ ||

ತಮಾದಾಯ ಸುರಾಸ್ಸರ್ವೇ ಪ್ರಯಯುರ್ದಾನವಾಲಯಂ |
ದೇವಾನುಪಗತಾನ್ ಶ್ರುತ್ವಾ ದಾನವಾ ನಿರ್ಯಯುಸ್ತತಃ || ೧೪ ||

ಸುಸನ್ನದ್ಧಬಲಾಸ್ಸರ್ವೇ ಪ್ರಗೃಹೀತಾಯುಧಾಸ್ತಥಾ |
ದೃಷ್ಟ್ವಾ ದೇವಬಲಂ ತೇ ಚ ಶಕ್ರಕೇತುವಿರಾಜಿತಂ || ೧೫ ||

ತತ್ತೇಜಸಾ ಮಹಾಭಾಗ ಮೂರ್ಚ್ಛೀಭೂತಾಃ ಕ್ಷಣೇನ ತು |
ಮೂರ್ಚ್ಛಿತಾಸ್ತು ತತೋ ದೈತ್ಯಾಸ್ತ್ರಿದಶೈರ್ವಿನಿಪಾತಿತಾಃ || ೧೬ ||

---

ಶತ್ರುಗಳಾದ ದಾನವರೆಲ್ಲರೂ ಭಯದಿಂದ ಓಡುತ್ತಾರೆ. ಎಂದು ಉತ್ತರವಿತ್ತನು. ಮುಂದಿನ ವೃತ್ತಾಂತವನ್ನು ಪುಷ್ಕರನು ಹೇಳುತ್ತಾನೆ

೧೩-೧೪. ಹೀಗೆ ಹೇಳಿ ಮಹಾವಿಷ್ಣುವು ವಿಜಯಪ್ರದವಾದ ಆ ಧ್ವಜವನ್ನು ದೇವತೆಗಳಿಗೆ ಕೊಟ್ಟನು. ಸ್ವರ್ಣಮಯವಾಗಿಯೂ, ಉನ್ನತವಾಗಿಯೂ ಇದ್ದ ಆ ಧ್ವಜವು ಶಕ್ರಧ್ವಜವೆಂದು ಪ್ರಸಿದ್ಧಿಗೆ ಬಂದಿತು. ಆ ಧ್ವಜವನ್ನು ತೆಗೆದುಕೊಂಡು ವಿಜಯಾರ್ಥಿಗಳಾದ ದೇವತೆಗಳೆಲ್ಲರೂ ದಾನವರ ಆವಾಸಸ್ಥಾನಕ್ಕೆ ಹೋದರು. ದೇವತೆಗಳು ಬಂದುದನ್ನು ಕೇಳಿ ಆ ದಾನವರೂ ಸಹ ಸೇನಾಸನ್ನಾಹದೊಡನೆ ಆಯುಧಧಾರಿಗಳಾಗಿ ಯುದ್ಧಾಭಿಮುಖರಾಗಿ ಅಲ್ಲಿಂದ ಹೊರಟರು.

೧೫-೧೬. ಹಾಗೆ ಯುದ್ಧಕ್ಕಾಗಿ ಹೊರಟು ಬಂದ ಆ ದಾನವರು ಇಂದ್ರ ಧ್ವಜದಿಂದ ಪ್ರಕಾಶಿಸುತ್ತಿರುವ ಆ ದೇವಸೈನ್ಯವನ್ನು ನೋಡಿದೊಡನೆಯೇ ಆ ಧ್ವಜದ ತೇಜಸ್ಸಿನಿಂದ ಕ್ಷಣಕಾಲದಲ್ಲಿಯೇ ಎಲ್ಲರೂ ಮೂರ್ಛಿತರಾದರು. ಹಾಗೆ ಮೂರ್ಛೆ ಹೊಂದಿದ ದಾನವರು ದೇವತೆಗಳಿಂದ ಅನಾಯಾಸದಿಂದ ನಾಶಪಡಿಸಲ್ಪಟ್ಟರು. ಕೆಲವರು ಸೋತು ದಿಕ್ಕುದಿಕ್ಕಿಗೆ ಪಲಾಯನಮಾಡಿದರು. ಅನಂತರ ಸಮುದ್ರ

ಕೇಚಿದ್ಭಗ್ನಾ ದಿಶೋ ಜಗ್ಮುಃ ಸಮುದ್ರಂ ವಿವಿಶುಸ್ತತಃ ।
ತತೋ ಲಬ್ಧಜಯಃ ಶಕ್ರಃ ಪೂಜಯಾಮಾಸ ತಂ ಧ್ವಜಂ ॥ ೧೭ ॥

ಪೂಜಯಿತ್ವಾ ನೃಪತಯೇ ವಸವೇ ಪ್ರದದೌ ತದಾ ।
ಗರ್ಗೋಕ್ತೇನ ವಿಧಾನೇನ ತಂ ಚ ಪೂಜಿತವಾನ್ವಸುಃ ॥ ೧೮ ॥

ತೇನಾಸ್ಯ ತುಷ್ಟೋ ಮಘವಾನಿದಂ ವಚನಮಬ್ರವೀತ್ ।

॥ ಇಂದ್ರ ಉವಾಚ ॥

ಯೇಽಪ್ಯನ್ಯೇ ಭೂಮಿಪಾಃ ಶ್ರೇಷ್ಠಾ ಶಕ್ರಧ್ವಜಮಹೋತ್ಸವಂ ॥ ೧೯ ॥

ಅದ್ಯ ಪ್ರಭೃತಿ ಧರ್ಮಜ್ಞಾ ಕರಿಷ್ಯಂತಿ ಸಮಾಹಿತಾಃ ।
ತೇಷಾಂ ತು ವಿವಿಧಾ ವೃದ್ಧಿಃ ಭವಿಷ್ಯತಿ ಸದಾ ದ್ವಿಜ ॥ ೨೦ ॥

ದುರ್ಭಿಕ್ಷಂ ಮರಣೋ ವ್ಯಾಧಿಃ ಪರಚಕ್ರಭಯಂ ತಥಾ ।
ಸರ್ವಾಣ್ಯೇತಾನಿ ನಶ್ಯಂತಿ ಕೃತೇ ಶಕ್ರಧ್ವಜೋತ್ಸವೇ ॥ ೨೧ ॥

---

ದಲ್ಲಿಯೂ ಹೋಗಿ ಬಿದ್ದರು ಹೀಗೆ ಅಸುರರೆಲ್ಲರನ್ನೂ ನಾಶಮಾಡಿ ವಿಜಯ ಹೊಂದಿದ ಇಂದ್ರನು ತನ್ನ ವಿಜಯಕ್ಕೆ ಸಾಧಕವಾದ ಆ ಧ್ವಜವನ್ನು ಭಕ್ತಿಯಿಂದ ಪೂಜಿಸಿದನು.

೧೮-೨೦. ತಾನು ಪೂಜೆಮಾಡಿದನಂತರ ಆ ಧ್ವಜವನ್ನು ದೊರೆಯಾದ ವಸುವಿಗೆ ಕೊಟ್ಟನು. ವಸುವೂ ಸಹ ಗರ್ಗರು ಹೇಳುವ ವಿಧಿಯನ್ನನುಸರಿಸಿ ಆ ಧ್ವಜವನ್ನು ಪೂಜಿಸಿದನು. ಅವನ ಪೂಜಾವಿಧಾನದಿಂದ ಸಂತುಷ್ಟನಾದ ಇಂದ್ರನು ಹೀಗೆ ಹೇಳಿದನು ಈ ಶಕ್ರಧ್ವಜದ ಪೂಜೆ ಎಂಬ ಮಹೋತ್ಸವವನ್ನು ಇತರ ಯಾವ ರಾಜಶ್ರೇಷ್ಠರು ನಡೆಸುವರೋ ಜಿತೇಂದ್ರಿಯರಾದ ಅಂತಹ ರಾಜರಿಗೂ ಎಲ್ಲಾ ವಿಧವಾದ ಸಿದ್ಧಿಗಳೂ ಸಹ ಯಾವಾಗಲೂ ಉಂಟಾಗುತ್ತವೆ.

೨೧-೨೩. ಈ ಶಕ್ರಧ್ವಜೋತ್ಸವವನ್ನು ಯಾವದೇಶದಲ್ಲಿ ನಡೆಸುತ್ತಾರೆಯೋ ಆ ದೇಶದಲ್ಲಿ ದುರ್ಭಿಕ್ಷವೇ ಆಗಲಿ, ಮಾರಕವಾದ ವ್ಯಾಧಿಯೇ ಆಗಲಿ, ಶತ್ರುಸೈನ್ಯದಿಂದ ಭಯವೇ ಆಗಲಿ ಯಾವುದೂ ಉಂಟಾಗುವುದಿಲ್ಲ. ಅನಂತರ ಪುಷ್ಕರನು ಹೇಳುತ್ತಾನೆ. ಇದು ಮೊದಲು ಈ ಶಕ್ರಧ್ವಜೋತ್ಸವವನ್ನು ಸರ್ವವಿಧವಾದ

॥ ಪುಷ್ಕರ ಉವಾಚ ॥

ತತಃ ಪ್ರಭೃತಿ ರಾಜಾನೋ ರಾಮ ಶಕ್ರಮಹೋತ್ಸವಂ ।
ಕುರ್ವಂತಿ ಗರ್ಗಕಥಿತಂ ಸರ್ವಾಭಯವಿನಾಶನಂ ॥ ೨೨ ॥

ಧನ್ಯಂ ಯಶಸ್ಯಂ ರಿಪುನಾಶಕಾರಿ
ಕೀರ್ತಿಪ್ರದಂ ಧರ್ಮಫಲಪ್ರದಂ ಚ ।
ಕಾರ್ಯಂ ನರೇಂದ್ರೈರ್ವಿಜಯಾಯ ಯತ್ನಾ-
ಚ್ಛಕ್ರೋತ್ಸವಂ ತತ್ಕಥಯಾಮಿ ತುಭ್ಯಂ ॥ ೨೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ಶಕ್ರಧ್ವಜೋತ್ಪತ್ತಿವರ್ಣನೋ ನಾಮ
ಚತುಃಪಂಚಾಶದುತ್ತರಶತತಮೋಽಧ್ಯಾಯಃ

---

ಭಯನಾಶಕವೆಂದು ತಿಳಿದು ರಾಜರುಗಳೂ ಗರ್ಗಮುನಿಯು ಹೇಳಿದ ಕ್ರಮದಿಂದ ಆಚರಿಸುತ್ತಿದ್ದಾರೆ ಆದುದರಿಂದ ಧನಪ್ರದವಾಗಿಯೂ, ಕೀರ್ತಿಪ್ರದವಾಗಿಯೂ, ಶತ್ರುನಾಶಕಾರಿಯಾಗಿಯೂ, ಧರ್ಮಫಲಕ್ಕೆ ಸಾಧಕವಾಗಿಯೂ ಈ ಉತ್ಸವವನ್ನು ವಿಜಯಾರ್ಥಿಗಳಾದ ರಾಜರು ಪ್ರಯತ್ನದಿಂದ ಮಾಡಿಯೇ ಮಾಡಬೇಕು ಅದರ ವಿಧಾನಕ್ರಮವನ್ನು ನಿನಗೆ ಮುಂದೆ ಹೇಳುತ್ತೇನೆ.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ
ಶಕ್ರಧ್ವಜೋತ್ಪತ್ತಿ ವರ್ಣನವೆಂಬ ನೂರ ಐವತ್ತನಾಲ್ಕನೆಯ
ಅಧ್ಯಾಯ ಮುಗಿದಿದೆ.



॥ ಓಂ ॥

—. ಶ್ರೀ ಹಯಗ್ರೀವಾಯ ನಮಃ .—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಪಂಚಪಂಚಾಶದುತ್ತರಶತತಮೋಽಧ್ಯಾಯಃ

॥ ಪುಷ್ಕರ ಉವಾಚ ॥

ಶಿಬಿರಾತ್ಪೂರ್ವದಿಗ್ಭಾಗೇ ಭೂಮಿಭಾಗೇ ತಥಾ ಶುಭೇ ।
ಪ್ರಾಗುದಕ್ಪ್ರವಣೇ ದೇಶೇ ಶಕ್ರಾರ್ಥಂ ಭವನಂ ಶುಭಂ

ವಾಸೋಭಿಃ ಶಯನೈಃ ಶುದ್ಧೈರ್ನಾನಾರಾಗೈಸ್ತಥೈವ ಚ ।
ತತಃ ಶಕ್ರಧ್ವಜಸ್ಥಾನಂ ಮಧ್ಯೇ ಸಂಸ್ಥಾಪ್ಯ ಯತ್ನತಃ

ಮಘವಂತಂ ಪಟೇ ಕುರ್ಯಾತ್ತಸ್ಯ ಭಾಗೇ ತು ದಕ್ಷಿಣೇ

---

### ನೂರ ಐವತ್ತೈದನೇ ಅಧ್ಯಾಯ.

೧–೩. ಪುಷ್ಕರನು ಹೇಳುತ್ತಾನೆ. ಸೇನಾಸ್ಥಾನದಿಂದ ಪೂರ್ವಭ ಪರಿಶುದ್ಧವಾದ ಭೂಮಿಯನ್ನು ನೋಡಬೇಕು. ಆ ಭೂಮಿಯಲ್ಲಿ ಪೂವ ಉತ್ತರದಿಕ್ಕಿನ ಕಡೆಗೆ ಹಳ್ಳವಾಗಿರುವ ಪ್ರದೇಶದಲ್ಲಿ ಇಂದ್ರನ ಪೂಜಾಭವ ನಿರ್ಮಿಸಬೇಕು. ಆ ಭವನವನ್ನು ನಾನಾ ವಿಧವಾದ ವರ್ಣಗಳಿಂದಲೂ, ಚಿತ್ರ ಗಳಾದ ವಸ್ತ್ರಗಳಿಂದಲೂ, ಶಯನಗಳಿಂದಲೂ, ಅಲಂಕರಿಸಬೇಕು ಆ ಮಧ್ಯದಲ್ಲಿ ಶಕ್ರಧ್ವಜವನ್ನು ಪ್ರತಿಷ್ಠಿಸಲು ಸ್ಥಾನವನ್ನು ಮಾಡಿ ಅಲ್ಲಿ ಆ ಧ್ವ ಸ್ಥಾಪಿಸಬೇಕು ಅದರ ಬಲಭಾಗದಲ್ಲಿ ವಸ್ತ್ರದಲ್ಲಿ ಚಿತ್ರಿಸಿರುವ ಇಂದ್ರ ಎಡಭಾಗದಲ್ಲಿ ಹಾಗೆಯೇ ಚಿತ್ರಿಸಿರುವ ಶಚೀದೇವಿಯನ್ನೂ ಸ್ಥಾಪಿಸಬೇಕು.

ವಾಮಭಾಗೇ ಪಟೇ ಕುರ್ಯಾಚ್ಛಚೀಂ ದೇವೀಂ ತಥೈವ ಚ ।
ಪ್ರೋಷ್ಠಪಾದಸಿತೇ ಪಕ್ಷೇ ಪತಿಪತ್ಪ್ರಭೃತಿಕ್ರಮಾತ್ ॥ ೪ ॥

ತಯೋಸ್ತು ಪೂಜಾ ಕರ್ತವ್ಯಾ ಸತತಂ ವಸುಧಾಧಿಪೈಃ ।
ವನಪ್ರವೇಶವಿಧಿನಾ ಶಕ್ರಯಷ್ಟಿಂ ತತೋ ನೃಪ ॥ ೫ ॥

ಆನಯೇದ್ಗೋರಥೇನಾಥ ವಾಯವ್ಯೈಃ ಪುರುಷೈರಥ ।
ಅರ್ಜುನಸ್ಯಾಜಕರ್ಣಸ್ಯ ಪ್ರಿಯಕಸ್ಯ ವಟಸ್ಯ ಚ ॥ ೬ ॥

ಸುರದಾರುಣಶ್ಚ ತಥಾ ತಥೈವೋದುಂಬರಸ್ಯ ಚ ।
ಚಂದನಸ್ಯಾಥವಾ ರಾಮ ಪದ್ಮಕಸ್ಯಾಥವಾ ಯದಿ ॥ ೭ ॥

ಅಲಾಭೇ ಸರ್ವಕಾಷ್ಠಾನಾಂ ಯಷ್ಟಿಂ ಕುರ್ವೀತ ವೈಷ್ಣವೀಂ ।
ಸುವರ್ಣನದ್ಧಾಂ ಧರ್ಮಜ್ಞ ತಾಂ ಚ ಸಮ್ಯಕ್ಪ್ರವೇಶಯೇತ್ ॥ ೮ ॥

ಪ್ರೋಷ್ಠಪಾದಸಿತೇ ಪಕ್ಷೇ ಅಷ್ಟಮ್ಯಾಂ ರಿಪುಸೂದನ ।
ಕ್ರಮಪ್ರಮಾಣಾ ವಿಜ್ಞೇಯಾ ಶಕ್ರಯಷ್ಟಿಸ್ತತೋ ನೃಪ ॥ ೯ ॥

---

೪-೮. ಭಾದ್ರಪದ ಕೃಷ್ಣಪಕ್ಷದಲ್ಲಿ ಪ್ರಥಮೆಯಿಂದ ಉಪಕ್ರಮಿಸಿ ಅದರ ಪೂಜೆಯನ್ನು ರಾಜರು ಪ್ರತಿವರ್ಷದಲ್ಲಿಯೂ ಮಾಡಬೇಕು. ಶಕ್ರಧ್ವಜಕ್ಕೆ ತಕ್ಕ ಮರದ ಕಾಷ್ಠವನ್ನು ಕಾಡಿನಿಂದ ತರಬೇಕು. ಎತ್ತಿನ ಗಾಡಿಯಿಂದ ವಾಯವ್ಯ ಪುರುಷರು ಅದನ್ನು ತರಬೇಕು. ಕೆಂಪುಮತ್ತಿ ಅಥವಾ ಅಜಕರ್ಣ ಅಥವಾ ಹೊನ್ನೆ ಅಥವಾ ಬೆತ್ತ ಅಥವಾ ದೇವದಾರು ಅಥವಾ ಅತ್ತಿ ಅಥವಾ ಶ್ರೀಗಂಧ ಅಥವಾ ಪದ್ಮಕ ಈ ಕಾಷ್ಠಗಳಲ್ಲಿ ಯಾವುದೂ ಲಭಿಸದಿದ್ದಲ್ಲಿ ವೈಷ್ಣವಯಷ್ಟಿಯನ್ನೇ ಉಪಯೋಗಿಸಬೇಕು. ಚಿನ್ನದಿಂದ ಅಥವಾ ಸುವರ್ಣವಸ್ತ್ರದಿಂದ ಸುತ್ತಿದ ಆ ದಂಡವನ್ನು ಭಾದ್ರಪದ ಬಹುಳ ಅಷ್ಟಮೀ ದಿವಸದಲ್ಲಿ ಯಥಾವಿಧಿಯಾಗಿ ಕಾಡಿನಿಂದ ತಂದು ಪೂಜಾಗೃಹಕ್ಕೆ ಒಯ್ಯಬೇಕು.

೯-೧೨. ಆ ಶಕ್ರಯಷ್ಟಿಯ ಪ್ರಮಾಣಕ್ರಮವನ್ನು ಈ ರೀತಿ ತಿಳಿಯಬೇಕು. ಆ ಯಷ್ಟಿಯು ಮೇಲು ಭಾಗದಲ್ಲಿ ನಾಲ್ಕು ಅಂಗುಲ ಕತ್ತರಿಸಲ್ಪಟ್ಟಿರಬೇಕು ಹಾಗಿದ್ದಲ್ಲಿ ಅದು ಸುಖಪ್ರದವಾಗುತ್ತದೆ. ಅದರ ಬುಡದಲ್ಲಿ ಎಂಟು ಅಂಗುಲದಷ್ಟು

ಚತುರ್ಭಿರಂಗುಲ್ಯೈರ್ಹೀನಾ ಸಾಗ್ರೇ ಭವತಿ ಶರ್ಮದಾ ।
ಅಷ್ಟಾಭಿಶ್ಚ ತಥಾ ಮೂಲೇ ಛಿತ್ವಾ ತೋಯೇ ತಥಾ ಕ್ಷಿಪೇತ್ || ೧೦ ||

ಯಾಯಾದುದ್ಧೃತ್ಯ ನಗರಂ ಸಮ್ಯಗೇವ ಪ್ರವರ್ತತೇ ।
ತಸ್ಯಾಃ ಪ್ರವೇಶೇ ನಗರಂ ಪತಾಕಾಧ್ವಜಮಾಲಿ ಚ || ೧೧ ||

ಸಿಕ್ತರಾಜಪಥಂ ಕುರ್ಯಾತ್ತಥಾಲಂಕೃತಬಾಲಕಂ ।
ನಟನರ್ತಕಸಂಕೀರ್ಣಂ ತಥಾ ಪೂಜಿತದೈವತಂ || ೧೨ ||

ಸಂಪೂಜಿತಗೃಹಂ ರಾಮ ತಥಾ ಪೂಜಿತವಾನಯಂ[1] ।
ಪೌರೈರನುಗತೋ ರಾಜಾ ಸುವೇಷೈಃ ಫಲಪಾಣಿಭಿಃ || ೧೩ ||

ಅಷ್ಟಮ್ಯಾಂ ವಾದ್ಯಘೋಷೇಣ ತಾಂ ತು ಯಷ್ಟಿಂ ಪ್ರವೇಶಯೇತ್ ।
ಪ್ರಾಕ್ಶಿರಾಸ್ತಾಂ ತತಃ ಕುರ್ಯಾದ್ವಸ್ತ್ರೈಃ ಸಂಛಾದಿತಾಂ ಶುಭೈಃ || ೧೪ ||

---

ಕತ್ತರಿಸಿ ಅದನ್ನು ಜಲದಲ್ಲಿ ಹಾಕಬೇಕು. ಅಂತಹ ಆ ದಂಡವನ್ನು ತೆಗೆದುಕೊಂಡು ಕಾಡಿನಿಂದ ನಗರಾಭಿಮುಖವಾಗಿ ಹೊರಟು ಬರಬೇಕು ಅದನ್ನು ನಗರಕ್ಕೆ ಒಯ್ಯುವ ಕಾಲದಲ್ಲಿ ಆ ನಗರವನ್ನು ಬಾವುಟ ಧ್ವಜ, ತೋರಣಾದಿಗಳಿಂದಲೂ ಬಾಲಕರನ್ನು ಅಲಂಕರಿಸುವುದರಿಂದಲೂ, ಚೆನ್ನಾಗಿ ಅಲಂಕರಿಸಬೇಕು. ನಟರೂ ನರ್ತಕರೂ ಸಂತೋಷದಿಂದ ತಮ್ಮ ಕಾರ್ಯದಲ್ಲಿ ನಿರತರಾಗಬೇಕು. ನಗರದಲ್ಲಿರುವ ಎಲ್ಲಾ ದೇವತೆಗಳನ್ನೂ ಪೂಜಿಸಿರಬೇಕು.

೧೩–೧೪. ನಗರದ ಮನೆಗಳನ್ನೆಲ್ಲಾ ಅಲಂಕಾರಮಾಡಿ ಪೂಜಿಸಿರಬೇಕು. ರಥಾಶ್ವಾದಿ ವಾಹನಗಳನ್ನೂ ಪೂಜಿಸಿರಬೇಕು. ಆಗ ಒಳ್ಳೆಯ ಅಲಂಕಾರದಿಂದ ಕೂಡಿ ಫಲ ಹಸ್ತರಾಗಿರುವ ಪುರಜನಗಳೊಡನೆ ರಾಜನು ಅಷ್ಟಮಿಯ ದಿನದಲ್ಲಿ ಮಂಗಲವಾದ್ಯದೊಡನೆ ಆ ದಂಡವನ್ನು ನಗರಕ್ಕೆ ತರಬೇಕು. ಹೀಗೆ ತಂದು ತಾನು ಪೂರ್ವಾಭಿಮುಖನಾಗಿ ನಿಂತು ಆ ದಂಡವನ್ನು ಶುಭವಾದ ಮಂಗಲವಸ್ತ್ರದಿಂದ ಹೊದ್ದಿಸಬೇಕು.

---

1 ಇಲ್ಲಿ ವಾಹನಂ ಎಂದು ಪಾಠವಿರಬೇಕು.

ಪೂಜಿತಾಂ ಪೂಜಯೇತ್ತಾಂ ತು ಯಾವತ್ಸ್ಯಾದ್ದ್ವಾದಶೀಫಲಂ ।
ಏಕಾದಶ್ಯಾಂ ಸೋಪವಾಸೋ ನೃಪಃ ಕುರ್ಯಾತ್ಪ್ರಜಾಗರಂ ॥ ೧೫ ॥

ಸಾಂವತ್ಸರೇಣ ಸಹಿತೋ ಮಂತ್ರಿಣಾ ಸಪುರೋಧಸಾ ।
ರಾತ್ರೌ ಜಾಗರಣಂ ಕಾರ್ಯಂ ನಾಗರೇಣ ಜನೇನ ಚ ॥ ೧೬ ॥

ಸ್ಥಾನೆಸ್ಥಾನೇ ಮಹಾಭಾಗ ದೇಯಾ ಪ್ರೇಕ್ಷ್ಯಾ ತಥಾ ಮಧು ।
ಪೂಜಯೇನ್ನೃತ್ಯಗೀತೇನ ರಾತ್ರೌ ಶಕ್ರಂ ನರಾಧಿಪಃ ॥ ೧೭ ॥

ದ್ವಾದಶ್ಯಾಂ ತು ಶಿರಸ್ನಾತೋ ನೃಪತಿಃ ಪ್ರಯತಸ್ತತಃ ।
ಯಂತ್ರೇಣೋತ್ಥಾಪನಂ ಕುರ್ಯಾಚ್ಛಕ್ರಕೇತೋಃ ಸಮಾಹಿತಃ ॥ ೧೮ ॥

ಸುಯಂತ್ರಿತಂ ತು ತಂ ಕುರ್ಯಾತ್ ಗೃಹಂ[1] ಸ್ತಂಭಚತುಷ್ಟಯಂ ।
ಪೂಜಯೇತ್ತನ್ಮಹಾಭಾಗ ಗಂಧಮಾಲ್ಯಾನ್ನಸಂಪದಾ ॥ ೧೯ ॥

೧೫-೧೬ ಹೀಗೆ ತಂದ ಆ ಧ್ವಜ ದಂಡವನ್ನು ನಾಗರಕರೆಲ್ಲರೂ ಪೂಜಿಸಿದ ನಂತರ ತಾನೂ ಸಹ ದ್ವಾದಶೀ ವ್ರತದ ಫಲವು ಲಭಿಸುವವರಿಗೂ ಪೂಜಿಸುತ್ತಿರಬೇಕು. ಏಕಾದಶಿಯಲ್ಲಿ ಉಪವಾಸವಿದ್ದು ಜಾಗರಣೆಯನ್ನೂ ಮಾಡಬೇಕು. ಜ್ಯೋತಿಷಕರು ಮಂತ್ರಿಗಳು, ಆಪ್ತ ಪುರೋಹಿತರು ನಗರದ ಜನಗಳು ಇದರೊಡಗೂಡಿ ರಾತ್ರಿಯಲ್ಲಿ ಜಾಗರಣವನ್ನು ಆಚರಿಸಬೇಕು.

೧೭-೧೮. ಹಾಗೆ ತರುವ ಕಾಲದಲ್ಲಿ ಮಾರ್ಗದ ಪ್ರತಿಯೊಂದು ಮುಖ್ಯ ಸ್ಥಾನಗಳಲ್ಲಿಯೂ ಆ ಧ್ವಜ ದಂಡಕ್ಕೆ ಮಧುಪರ್ಕ ಮೊದಲಾದ ಉಪಚಾರಗಳನ್ನು ಸಮರ್ಪಿಸಬೇಕು ರಾತ್ರಿಯಲ್ಲಿ ನೃತ್ಯಗೀತಾದಿಗಳಿಂದ ಇಂದ್ರನನ್ನು ಪೂಜಿಸಬೇಕು. ಏಕಾದಶಿಯಲ್ಲಿ ಮೇಲೆ ಹೇಳಿದಂತೆ ಉಪವಾಸ ಜಾಗರಣಾದಿಗಳನ್ನು ನಡೆಸಿದ ತರುವಾಯ ದ್ವಾದಶಿಯ ದಿನದಲ್ಲಿ ರಾಜನು ಶಿರಸ್ನಾನಮಾಡಿ ಪರಿಶುದ್ಧನಾಗಿದ್ದು ಆ ಗಾಡಿಯಿಂದ ಇಂದ್ರ ಧ್ವಜವನ್ನು ಜಾಗರೂಕತೆಯಿಂದ ಎತ್ತಿ ನಿಲ್ಲಿಸಬೇಕು.

೧೯-೨೦. ಹಾಗೆ ಎತ್ತಿ ನಿಲ್ಲಿಸಿದ ಇಂದ್ರ ಧ್ವಜವನ್ನು ನಾಲ್ಕು ಸ್ತಂಭಗಳಿಂದ ಕೂಡಿರುವ ಗೃಹದಲ್ಲಿ ಭದ್ರವಾಗಿ ಪ್ರತಿಷ್ಠಿಸಿ ಗಂಧಪುಷ್ಪ ಧೂಪದೀಪಾದಿ ಸಮೃದ್ಧಿ

1 ಇಲ್ಲಿ ಗೃಹೆ ಸ್ಥಂಭ ಚತುಷ್ಟಯೇ ಎಂದು ಪಾಠವಿರಬೇಕೆಂದು ತೋರುತ್ತದೆ.

ನಿತ್ಯಂ ಚ ಪಟಯೋಃ ಪೂಜಾಂ ಯಷ್ಟಿಪೂಜಾಂ ಚ ಕಾರಯೇತ್।
ಬಲಿಭಿಸ್ತು ವಿಚಿತ್ರಾಭಿಃ ತಥಾ ಬ್ರಾಹ್ಮಣಪೂಜನೈಃ ॥ ೨೦ ॥

ನಿತ್ಯಂ ಚ ಜುಹುಯಾನ್ಮಂತ್ರಾನ್ ಪುರೋಧಾಃ ಶಾಕ್ರವೈಷ್ಣವಾನ್ ।
ನಿತ್ಯಂ ನೃತ್ಯೇನ ಗೀತೇನ ತಥಾ ಶಕ್ರಂ ಚ ಪೂಜಯೇತ್ ॥ ೨೧ ॥

ದ್ವಾದಶ್ಯಾಂ ಪೂಜಯೇದ್ರಾಜಾ ಬ್ರಾಹ್ಮಣಾನ್ ಧನಸಂಚಯೈಃ ।
ವಿಶೇಷೇಣ ಚ ಧರ್ಮಜ್ಞ ಸಾಂವತ್ಸರಪುರೋಹಿತೌ ॥ ೨೨ ॥

ಉತ್ಥಾನೇ ಚ ಪ್ರವೇಶೇ ಚ ಶಕ್ರಭೂಯಾನ್ನರಾಧಿಪಃ ।
ವಕ್ಷ್ಯಮಾಣೇನ ಮಂತ್ರೇಣ ಕಾಲವಿತ್ಸಪುರೋಹಿತಃ ॥ ೨೩ ॥

ಪೂಜಯೇದುತ್ಥಿತಂ ಕೇತುಂ ಭೂಷಣೈರ್ದ್ವಿವಿಧೈರಪಿ ।
ಛತ್ರೇಣ ಚ ತಥಾ ವಸ್ತ್ರೈಃ ಮಾಲ್ಯದಾಮೈಸ್ತಥೈವ ಚ ॥ ೨೪ ॥

---

ಯಿಂದ ಆ ಧ್ವಜವನ್ನು ಪೂಜಿಸಬೇಕು. ನಿತ್ಯವೂ ಇಂದ್ರ ಮತ್ತು ಶಚಿಯ ಚಿತ್ರ ಪಟಗಳಿಗೂ ಧ್ವಜದಂಡಕ್ಕೂ ಸಹ ಪೂಜೆಯನ್ನು ನಾನಾವಿಧವಾದ ಬಲಿ ಸಮರ್ಪಣೆ ದೊಡನೆಯೂ ಮಾಡುತ್ತಿರಬೇಕು.

೨೧–೨೨. ನಿತ್ಯವೂ ಪುರೋಹಿತನು ಇಂದ್ರ ದೇವತಾಕ ಮತ್ತು ವಿಷ್ಣು ದೇವತಾಕಗಳಾದ ಮಂತ್ರಗಳಿಂದ ಹೋಮಮಾಡುತ್ತಿರಬೇಕು. ಹಾಗೆಯೇ ನೃತ್ಯ ಗೀತಾದಿಗಳಿಂದ ಇಂದ್ರನನ್ನೂ ಪೂಜಿಸುತ್ತಿರಬೇಕು. ದ್ವಾದಶಿಯ ದಿನದಲ್ಲಿ ರಾಜನು ಬ್ರಾಹ್ಮಣರನ್ನು ಹೆಚ್ಚಾದ ಧನಕನಕಾದಿಗಳಿಂದ ಪೂಜಿಸಬೇಕು ಜ್ಯೋತಿಷಿಕನನ್ನೂ ಪುರೋಹಿತನನ್ನೂ ಸಹ ವಿಶೇಷರೀತಿಯಿಂದ ಸತ್ಕರಿಸಬೇಕು.

೨೩–೨೪ ಇಂದ್ರಸ್ಥಾನೀಯವಾದ ಆ ಧ್ವಜದ ಪ್ರವೇಶ ಕಾಲದಲ್ಲಿಯೂ ಮೇಲಕ್ಕೆ ಎತ್ತಿ ಕಟ್ಟುವ ಕಾಲದಲ್ಲಿಯೂ ಸಹ ಆಯಾಯ ಸಮಯವನ್ನು ತಿಳಿದ ರಾಜನು ಪುರೋಹಿತನೊಡಗೂಡಿ ಮುಂದೆ ಹೇಳುವ ಮಂತ್ರದಿಂದ ಪೂಜಿಸಬೇಕು. ಉತ್ಥಾನಕಾಲದಲ್ಲಿ ಆ ಧ್ವಜವನ್ನು ನಾನಾವಿಧವಾದ ಭೂಷಣಗಳಿಂದಲೂ, ಛತ್ರಿಯಿಂದಲೂ, ವಸ್ತ್ರಗಳಿಂದಲೂ ಹೂವಿನ ಮಾಲಿಕೆಗಳಿಂದಲೂ ಪೂಜಿಸಬೇಕು ಈ ರೀತಿ ಅಷ್ಟಮಿ ಮೊದಲು ನಾಲ್ಕು ದಿನಗಳಲ್ಲಿಯೂ ಆ ಧ್ವಜವನ್ನು ಪೂಜಿಸಬೇಕು.

ಏವಂ ಸಂಪೂಜಯೇದ್ರಾಮ ತದಾ ದಿನಚತುಷ್ಟಯಂ ।
ಪಂಚಮೇ ದಿವಸೇ ಪ್ರಾಪ್ತೇ ಶಕ್ರಕೇತುಂ ವಿಸರ್ಜಯೇತ್ ॥ ೨೫ ॥

ಪೂಜಯಿತ್ವಾ ಮಹಾಭಾಗ ಬಲೇನ ಚತುರಂಗಿಣಾ ।
ನೀತ್ವಾ ಕರೀಂದ್ರೈಃ ತ್ರಿತಯಂ ತತೋ ನದ್ಯಾಂ ಪ್ರವಾಹಯೇತ್ ॥ ೨೬ ॥

ವಾದ್ಯಘೋಷೇಣ ಮಹತಾ ಸಂಗೀತಂ ತತ್ರ ಕೀರ್ತಿತಂ ।
ಪೌರಾ ಜಾನಪದಾಸ್ತತ್ರ ಕ್ರೀಡಾಂ ಕುರ್ಯುಸ್ತದಾಂಭಸಿ ।
ಉತ್ಸವಂ ಚ ತಥಾ ಕಾರ್ಯಂ ಜಲತೀರಗತೈರ್ಮಹತ್ ॥ ೨೭ ॥

ಏತದ್ವಿಧಾನಂ ನೃಪತಿಸ್ತು ಕೃತ್ವಾ ಪ್ರಾಪ್ನೋತಿ ವೃದ್ಧಿಂ ಧನವಾಹನಾನಾಂ ।
ನಾಶಂ ತಥಾ ಶತ್ರುಗಣಸ್ಯ ರಾಮ ಮಹತ್ಪ್ರಸಾದಂ ತ್ರಿದಶಾಧಿನೇತುಃ ॥ ೨೮ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ಶಕ್ರಧ್ವಜೋತ್ಸವ ವರ್ಣನಂ ನಾಮ ಪಂಚಪಂಚಾಶದುತ್ತರಶತತಮೋಽಧ್ಯಾಯಃ

---

೨೫–೨೬. ಐದನೆಯ ದಿವಸದಲ್ಲಿ ಆ ಶಕ್ರಧ್ವಜವನ್ನು ವಿಸರ್ಜನೆಮಾಡಬೇಕು. ಆ ಧ್ವಜವನ್ನು ಚತುರಂಗ ಸೈನ್ಯದೊಡನೆ ಪೂಜಿಸಿ ಆನೆಗಳ ಮೇಲೆ ಚಿತ್ರಪಟಗಳು ಮತ್ತು ಧ್ವಜ ಈ ಮೂರನ್ನೂ ತೆಗೆದುಕೊಂಡು ಹೋಗಿ ನದಿಯ ಪ್ರವಾಹದಲ್ಲಿ ಬಿಡಬೇಕು ಬಿಡುವಾಗ ಹೆಚ್ಚಾದ ವಾದ್ಯಘೋಷವನ್ನೂ, ಸಂಗೀತವನ್ನೂ ಏರ್ಪಡಿಸಬೇಕು.

೨೭–೨೮. ನಗರದ ಮತ್ತು ದೇಶದ ಜನಗಳು ಆ ಜಲದಲ್ಲಿ ಅವಭೃತಸ್ನಾನದಿಂದ ವಿಹರಿಸುವರು. ಆ ನದಿಯ ತೀರದಲ್ಲಿಯೂ ಸಹ ಜನಗಳು ಮಹೋತ್ಸವವನ್ನು ನಡೆಸಬೇಕು ಈ ವಿಧಿಯನ್ನು ಯಥಾಕ್ರಮವಾಗಿ ನಡೆಸುವ ರಾಜನು ಧನ ಮತ್ತು ವಾಹನಗಳ ಅಭಿವೃದ್ಧಿಯನ್ನು ಹೊಂದುತ್ತಾನೆ. ಇದರಿಂದ ಶತ್ರುನಾಶವೂ ಉಂಟಾಗುತ್ತದೆ, ಇಂದ್ರನ ಅನುಗ್ರಹವೂ ಸಹ ಉಂಟಾಗುತ್ತದೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ ಶಕ್ರಧ್ವಜೋತ್ಸವವರ್ಣನವೆಂಬ ನೂರ ಐವತ್ತೈದನೆಯ ಅಧ್ಯಾಯವು ಮುಗಿದಿದೆ.

॥ ಓಂ ॥

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಷಟ್ಪಂಚಾಶದುತ್ತರ ಶತತಮೋಽಧ್ಯಾಯಃ

॥ ಪುಷ್ಕರ ಉವಾಚ ॥

ಇಂದ್ರಧ್ವಜಶಿರೋ ಭಜ್ಯೇತ್ಪತೇದಿಂದ್ರಧ್ವಜೋ ಯದಿ ।
ಭಜ್ಯತೇ ಶಕ್ರಯಷ್ಟಿರ್ವಾ ನೃಪತೇರ್ನಿಯತಂ ವಧಃ ॥ ೧ ॥

ಯಂತ್ರಭಂಗೇ ತಥಾಜ್ಞೇಯಂ ರಜ್ಜುಚ್ಛೇದೇ ತಥೈವ ಚ ।
ಮಾತೃಕಾಯಾಸ್ತಥಾ ಭಂಗೇ ಪರಚಕ್ರ ಭಯಂ ದ್ವಿಜ ॥ ೨ ॥

---

### ನೂರ ಐವತ್ತಾರನೇ ಅಧ್ಯಾಯ.

೧–೨. ಪುಷ್ಕರನು ಹೇಳುತ್ತಾನೆ. ಹಿಂದೆ ಹೇಳಿರುವ ವಿಧಾನದಂತೆ ಇಂದ್ರ ಧ್ವಜದ ಉತ್ಸವವನ್ನು ನಡೆಸುವಾಗ ಧ್ವಜದಂಡದ ಮೇಲ್ಭಾಗವು ಮುರಿದು ಹೋದರೂ ಮತ್ತು ಪ್ರತಿಷ್ಠಿಸಿದ ನಂತರ ಅದು ಆಕಸ್ಮಿಕವಾಗಿ ಕೆಳಗೆ ಮುರಿದು ಬಿದ್ದರೂ ಅಥವಾ ಆ ದಂಡವೇ ಮುರಿದು ಹೋದರೂ ಸರಿ. ಆಗ ಆ ದೊರೆಗೇ ನಾಶ ಉಂಟಾಗುತ್ತದೆ. ಅದನ್ನು ಕೆಳಗೆ ಭದ್ರಪಡಿಸಿದ ಸ್ಥಳದಲ್ಲಿ ಭಂಗವಾಗಲಿ ಅಥವಾ ಅದನ್ನು ಕಟ್ಟಿರುವ ಹಗ್ಗಗಳು ಹರಿದು ಹೋಗುವುದಾಗಲಿ ಉಂಟಾದಲ್ಲಿ ಮತ್ತು ಅಲ್ಲಿ ಇಟ್ಟಿರುವ ಇಂದ್ರ ಶಚೀ ಇವರ ಪ್ರತಿಕೃತಿಗಳಿಗೆ ಭಂಗವುಂಟಾಗುವುದಾಗಲಿ ಸಂಭವಿಸಿದಲ್ಲಿ ಆ ರಾಷ್ಟ್ರಕ್ಕೆ ಶತ್ರುಸೈನ್ಯದಿಂದ ಭಯವು ತಪ್ಪಿದ್ದಲ್ಲ.

ದಿವ್ಯಾಂತರಿಕ್ಷಭೌಮಾಃ ಸ್ಯುರುತ್ಪಾತಾಃ ತತ್ರ ವೈ ಯಥಾ ।
ತೇಷಾಂ ತೀವ್ರತಮಂ ಜ್ಞೇಯಂ ಫಲಮತ್ಯಂತದಾರುಣಂ ॥ ೩ ॥

ನಿಲೀಯತೇ ಚೇತ್ಕ್ರವ್ಯಾದಃ ಶಕ್ರಯಷ್ಟೌ ಯದಾ ದ್ವಿಜ ।
ರಾಜಾ ವಾ ಮ್ರಿಯತೇ ತತ್ರ ಸ ವಾ ದೇಶೋ ವಿನಶ್ಯತಿ ॥ ೪ ॥

ಇಂದ್ರಧ್ವಜೋಪಕರಣಂ ಯತ್ಕಿಂಚಿದ್ದ್ವಿಜಸತ್ತಮ ।
ವಿನಶ್ಯತಿ ತದಾ ಜ್ಞೇಯಾ ಪೀಡಾ ನಗರವಾಸಿನಾಂ ॥ ೫ ॥

ಇಂದ್ರವಾಜಿನಿಮಿತ್ತೇ ತು ಪ್ರಾಯಶ್ಚಿತ್ತಮಿದಂ ಸ್ಮೃತಂ ।
ಇಂದ್ರಯಾಗಂ ಪುನಃ ಕುರ್ಯಾತ್ಸೌವರ್ಣೇನೇಂದ್ರಕೇತುನಾ ॥ ೬ ॥

ರಾಜ್ಯಂ ದತ್ವಾ ಚ ಗುರವೇ ಬಂಧನಾನಿ ಪ್ರಮೋಚಯೇತ್ ।
ಸಪ್ತಾಹಂ ಪೂಜಯಿತ್ವಾ ಚ ಧ್ವಜಂ ದದ್ಯಾದ್ದ್ವಿಜಾತಿಷು ॥ ೭ ॥

---

೩-೫ ಅಂತಹ ಸಂದರ್ಭದಲ್ಲಿ ದಿವ್ಯ ಆಂತರಿಕ್ಷ ಭೌಮ ಮುಂತಾದ ಉತ್ಪಾತಗಳೂ ಉಂಟಾಗುತ್ತವೆ. ಅವುಗಳ ಫಲವೂ ನಹ ದುಸ್ಸಹವಾಗಿಯೂ ಬಹಳ ತೀವ್ರವಾಗಿಯೂ ಆಗುತ್ತವೆ. ಆ ಚಕ್ರಧ್ವಜದ ಮೇಲೆ ಮಾಂಸಾಹಾರಿಗಳಾದ ಗೃಧ್ರವೇ ಮೊದಲಾದ ಪಕ್ಷಿಗಳು ಕುಳಿತದ್ದೇ ಆದರೆ ರಾಜನು ಮರಣಹೊಂದುತ್ತಾನೆ ಅಥವಾ ಆ ದೇಶವೇ ನಾಶ ಹೊಂದುತ್ತದೆ. ಆ ಇಂದ್ರಧ್ವಜಕ್ಕೆ ಸಂಬಂಧಿಸಿದ ಉಪಕರಣಗಳಲ್ಲಿ ಯಾವುದಾದರೂ ನಾಶವಾದಲ್ಲಿ ಆ ನಗರವಾಸಿಗಳಾದ ಜನಗಳಿಗೆ ಪೀಡೆಯುಂಟಾಗುತ್ತದೆಂದೂ ತಿಳಿಯಬೇಕು.

೬-೭. ಇಂದ್ರ ಧ್ವಜಕ್ಕೆ ಸಂಬಂಧಿಸಿದ ಇಂತಹ ಅಪಶಕುನಗಳೇನಾದರೂ ಉಂಟಾದಲ್ಲಿ ಅದರ ಅನಿಷ್ಟ ಫಲನಿವೃತ್ತಿಗಾಗಿ ಈ ಪ್ರಾಯಶ್ಚಿತ್ತವು ವಿಹಿತವಾಗಿದೆ. ಸುವರ್ಣದಿಂದ ಇಂದ್ರ ಧ್ವಜವನ್ನು ನಿರ್ಮಿಸಿ ಅದನ್ನುದ್ದೇಶಿಸಿ ಇಂದ್ರಯಾಗವನ್ನೇ ಪುನಃ ಮಾಡಬೇಕು. ರಾಜ್ಯವನ್ನು ತನ್ನ ಗುರುವಿಗೆ ದಾನಮಾಡಿ ಬಂಧನದಲ್ಲಿರುವ ಅಪರಾಧಿಗಳನ್ನೆಲ್ಲಾ ಬಿಟ್ಟು ಬಿಡಬೇಕು. ಏಳು ದಿವಸ ಅದನ್ನು ಪೂಜಿಸಿ ನಂತರ ಅವನ್ನು ದ್ವಿಜರಿಗೆ ದಾನಮಾಡಬೇಕು.

ಶಾಂತೀ ರೌದ್ರೀ ಭವೇತ್ಕಾರ್ಯಾ ಯಷ್ಟವ್ಯಶ್ಚ ಪುರಂದರಃ ।
ಮಹಾಭೋಜ್ಯಾನಿ ಕಾರ್ಯಾಣಿ ಬ್ರಾಹ್ಮಣಾನಾಂ ದಿನೇ ದಿನೇ ॥ ೮ ॥

ಗಾವಶ್ಚ ದೇಯಾ ದ್ವಿಜಪುಂಗವೇಭ್ಯೋ
ಹಿರಣ್ಯವಾಸೋ ರಜತೈಃ ಸಮೇತಾಃ ।
ಏವಂ ಕೃತೇ ಶಾಂತಿಮುಪೈತಿ ಪಾಪಂ
ವೃದ್ಧಿಸ್ತಥಾಸ್ಯಾನ್ಮನುಜಾಧಿಪಸ್ಯ ॥ ೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ಇಂದ್ರಧ್ವಜನಿಮಿತ್ತವರ್ಣನೋ ನಾಮ
ಷಟ್ಪಂಚಾಶದುತ್ತರಶತತಮೋಽಧ್ಯಾಯಃ

---

೮-೯. ರೌದ್ರಿ ಎಂಬ ಶಾಂತಿಯನ್ನೂ ಮಾಡಬೇಕು. ಇಂದ್ರನನ್ನೂ ಯಜ್ಞಾದಿ ರೂಪದಿಂದ ಪೂಜಿಸಬೇಕು ಹೆಚ್ಚು ಹೆಚ್ಚಾಗಿ ಭೋಜ್ಯವಸ್ತುಗಳನ್ನು ನಿತ್ಯವೂ ಬ್ರಾಹ್ಮಣರಿಗೆ ನೀಡಬೇಕು ಮತ್ತು ಹಿರಣ್ಯ, ವಸ್ತ್ರ, ಬೆಳ್ಳಿ ಮುಂತಾದವುಗಳೊಡನೆ ಬ್ರಾಹ್ಮಣೋತ್ತಮರಿಗೆ ಗೋವುಗಳನ್ನೂ ದಾನಮಾಡಬೇಕು. ಹೀಗೆ ಮಾಡಿದಲ್ಲಿ ಈ ಅನಿಮಿತ್ತದಿಂದ ಉಂಟಾದ ಪಾಪವು ಶಮನ ಹೊಂದುತ್ತದೆ. ರಾಜನಿಗೆ ಬಹು ವಿಧವಾದ ಅಭಿವೃದ್ಧಿಯೂ ಸಹ ಉಂಟಾಗುತ್ತದೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದ ಮಾರ್ಕಂಡೇಯ ಸಂವಾದದಲ್ಲಿ
ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ
ಇಂದ್ರಧ್ವಜನಿಮಿತ್ತ ವರ್ಣನವೆಂಬ ನೂರ ಐವತ್ತಾರನೆಯ
ಅಧ್ಯಾಯ ಮುಗಿದಿದೆ.



|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಸಪ್ತಪಂಚಾಶದುತ್ತರಶತತಮೋಽಧ್ಯಾಯಃ

|| ರಾಮ ಉವಾಚ ||

**ಶಕ್ರೋಚ್ಛ್ರಾಯೇ ತು ಯಾನ್ಮಂತ್ರಾನ್ ಸೋಪವಾಸೋ ನೃಪಃ ಪಠೇತ್ ।**
**ತಾನಹಂ ಶ್ರೋತುಮಿಚ್ಛಾಮಿ ಸರ್ವಧರ್ಮಭೃತಾಂ ವರ || ೧ ||**

|| ಪುಷ್ಕರ ಉವಾಚ ||

**ಶೃಣು ಮಂತ್ರಾನಿಮಾನ್ಸಮ್ಯಕ್ ಸರ್ವಕಿಲ್ಬಿಷನಾಶನಾನ್ ।**
**ಪ್ರಾಪ್ತೇ ಶಕ್ರಧ್ವಜೋಚ್ಛ್ರಾಯೇ ಯಾನ್ ಪಠೇತ್ಪ್ರಯತೋ ನೃಪಃ || ೨ ||**

---

### ನೂರ ಐವತ್ತೇಳನೇ ಅಧ್ಯಾಯ.

೧. ಭಾರ್ಗವನು ಪ್ರಶ್ನೆಮಾಡುತ್ತಾನೆ. ಇಂದ್ರಧ್ವಜವನ್ನು ಎತ್ತಿ ನಿಲ್ಲಿಸಿದ ನಂತರ ರಾಜನು ಉಪವಾಸದಿಂದಿದ್ದು ಯಾವ ಮಂತ್ರಗಳನ್ನು ಪಠಿಸಬೇಕೋ ಆ ಮಂತ್ರಗಳನ್ನು ನಾನು ಕೇಳಲು ಕುತೂಹಲಿಯಾಗಿರುವೆನು. ಧರ್ಮಜ್ಞರಲ್ಲಿ ಅಗ್ರೇಸರನಾದ ನೀನು ಅವುಗಳನ್ನು ದಯೆಯಿಟ್ಟು ಹೇಳಬೇಕು. ಈ ಪ್ರಶ್ನೆಗೆ ಉತ್ತರವಾಗಿ ಪುಷ್ಕರನು ಹೇಳುತ್ತಾನೆ.

೨-೪. ಯಾವ ಈ ಮಂತ್ರಗಳನ್ನು ಇಂದ್ರಧ್ವಜವನ್ನು ನಿಲ್ಲಿಸುವಾಗ ಪರಿಶುದ್ಧನಾದ ರಾಜನು ಪಠಿಸುತ್ತಾನೆಯೋ ಅಂತಹ ಸರ್ವಪಾಪನಾಶಕಗಳಾದ ಈ ಮಂತ್ರಗಳನ್ನು ಸಾಂಗವಾಗಿ ಹೇಳುತ್ತೇನೆ. ಕೇಳು, ಪೂಜ್ಯನಾದ ಇಂದ್ರನೇ,

ವರಸ್ತ್ವಿಂದ್ರ ಜಿತಾಮಿತ್ರ ವೃತ್ರಹನ್ ಪಾಕಶಾಸನ ।
ದೇವದೇವ ಮಹಾಭಾಗ ತ್ವಂ ಹಿ ವರ್ಧಿಷ್ಣುತಾಂ ಗತಃ ॥ ೩ ॥

ತ್ವಂ ಪ್ರಭುಃ ಶಾಶ್ವತಶ್ಚೈವ ಸರ್ವಭೂತಹಿತೇ ರತಃ ।
ಅನಂತತೇಜೋ ವಿರಜೋ ಯಶೋ ವಿಜಯವರ್ಧನಃ ।
ಅಪ್ರಭುಸ್ತ್ವಂ ಪ್ರಭುರ್ನಿತ್ಯಮುತ್ತಿಷ್ಠ ಸುರಪೂಜಿತ ॥ ೪ ॥

ಬ್ರಹ್ಮಾ ಸ್ವಯಂಭೂರ್ಭಗವಾನ್ ಸರ್ವಲೋಕಪಿತಾಮಹಃ ।
ರುದ್ರಃ ಪಿನಾಕಭೃದ್ದೃಷ್ಟ ಶ್ಚತಸೃದ್ವಯಸಂಸ್ತುತಃ ॥ ೫ ॥

ಯೋಗಸ್ಯ ನೇತಾ ಕರ್ತಾ ಚ ತಥಾ ವಿಷ್ಣುರುರುಕ್ರಮಃ ।
ತೇಜಸ್ತೇ ವರ್ಧಯಂತ್ವೇತೇ ನಿತ್ಯಮೇವ ಮಹಾಬಲಾಃ ॥ ೬ ॥

---

ಶತ್ರುಗಳನ್ನು ಜಯಿಸಿ ವಿಜಯಹೊಂದಿರುವವನೇ, ವೃತ್ರಾಸುರನನ್ನು ನಾಶ ಮಾಡಿದವನೇ, ಪಾಕನೆಂಬ ಅಸುರನನ್ನು ನಿಗ್ರಹಿಸಿದವನೇ, ದೇವಾಧಿಪನೇ, ಮಹಾಭಾಗ್ಯಶಾಲಿಯೇ, ನೀನು ಬಹಳಮಟ್ಟಿಗೂ ಅಭಿವೃದ್ಧಿಗೆ ಉನ್ಮುಖನಾಗಿದ್ದೀಯೆ, ನೀನೇ ಪ್ರಭುವಾಗಿರುವೆ, ನಿತ್ಯನೂ ಆಗಿರುವೆ. ಸರ್ವಪ್ರಾಣಿಗಳಿಗೂ ಹಿತಚಿಂತಕನಾಗಿರುವೆ, ಬಹಳ ತೇಜಸ್ವಿಯಾಗಿಯೂ, ನಿಷ್ಪಾಪನಾಗಿಯೂ ಇರುವೆ ಯಶಸ್ಸಿಗೂ ವಿಜಯಕ್ಕೂ ವೃದ್ಧಿಪ್ರದನಾಗಿರುವೆ. ನಿನಗೂ ನಿಯಾಮಕನಾಗಿ ಪ್ರಭುವಾಗಿರುವವನು ಮತ್ತೊಬ್ಬನಿಲ್ಲ. ದೇವತೆಗಳಿಂದ ಪೂಜಿಸಲ್ಪಡುವ ಎಲೈ ಪ್ರಭುವೇ ನೀನು ಮೇಲಕ್ಕೆ ಏಳು.

೫–೬. ಪರಮಾತ್ಮನ ಸಂಕಲ್ಪದಿಂದ ತಾನಾಗಿ ಉದಯಿಸಿದ ಮತ್ತು ಸರ್ವ ಜಗತ್ತಿಗೂ ಪಿತಾಮಹನೆಂದು ಹೇಳಲು ಅರ್ಹವಾದ ಮಹಾಮಹಿಮೆಯುಳ್ಳ ಬ್ರಹ್ಮನೂ, ಪಿನಾಕವೆಂಬ ಅಸಾಧಾರಣ ಆಯುಧದಿಂದ ಗರ್ವಿತನಾಗಿರುವ ಅಷ್ಟ ಮೂರ್ತ್ಯಾತ್ಮಕನಾದ ಮತ್ತು ಯೋಗಶಾಸ್ತ್ರಕ್ಕೆ ಕರ್ತೃವೂ ನಿಯಾಮಕನೂ ಆದ ರುದ್ರನೂ, ಹಾಗೆಯೇ ತ್ರಿವಿಕ್ರಮರೂಪದಿಂದ ಲೋಕವನ್ನೆಲ್ಲಾ ಆಕ್ರಮಿಸಿ ಅನ್ವರ್ಥ ನಾಮವನ್ನು ಹೊಂದಿರುವ ಮಹಾವಿಷ್ಣು ಮಹಾಬಲಶಾಲಿಗಳಾದ ಈ ಮೂರು ದೇವತೆಗಳೂ ಸಹ ನಿನ್ನ ತೇಜಸ್ಸನ್ನು ಅಭಿವೃದ್ಧಿಪಡಿಸಲಿ.

ಅನಾದಿನಿಧನೋ ದೇವೋ ಬ್ರಹ್ಮಾ ಸ್ರಷ್ಟಾ ಸನಾತನಃ ।
ಅಗ್ನಿಸ್ತೇಜೋಮಯೋ ಭಾಗೋ ರುದ್ರಾತ್ಮಾ ಪಾರ್ವತೀಸುತಃ ॥ ೭ ॥

ಕಾರ್ತಿಕೇಯಃ ಶಕ್ತಿಧರಃ ಷಡ್ವಕ್ತ್ರಶ್ಚ ಗದಾಧರಃ ।
ಶತಂ ವರೇಣ್ಯೋ ವರದಃ ತೇಜೋ ವರ್ಧಯತಾಂ ವಿಭುಃ ॥ ೮ ॥

ದೇವಸೇನಾಪತಿಃ ಸ್ಕಂದಃ ಸುರಪ್ರವರಪೂಜಿತಃ ।
ಆದಿತ್ಯಾ ವಸವೋ ರುದ್ರಾಃ ಸಾಧ್ಯಾ ದೇವಾಸ್ತಥಾಶ್ವಿನೌ ॥ ೯ ॥

ಭೃಗುರಂಗಿರಸಶ್ಚೈವ ವಿಶ್ವೇದೇವಾ ಮರುದ್ಗಣಾಃ ।
ಲೋಕಪಾಲಾಸ್ತ್ರಯಶ್ಚೈವ ಚಂದ್ರಃ ಸೂರ್ಯೋಽನಲೋಽನಿಲಃ ॥ ೧೦ ॥

ದೇವಾಶ್ಚ ಋಷಯಶ್ಚೈವ ಯಕ್ಷಗಂಧರ್ವರಾಕ್ಷಸಾಃ ।
ಸಮುದ್ರಾ ಗಿರಯಶ್ಚೈವ ನದ್ಯೋ ಭೂತಾನಿ ಯಾನಿ ಚ ॥ ೧೧ ॥

೭-೮. ಯಾವ ತೇಜೋಮಯವಾದ ದೇವತೆಯು, ಆದ್ಯಂತರಹಿತವಾಗಿಯೂ ದೇವಪ್ರಕೃತಿಯಾಗಿಯೂ, ಪುರಾತನ ಸೃಷ್ಟಿಕರ್ತನಾಗಿಯೂ ಇರುವ ಚತುರ್ಮುಖನಿಂದ ಅಗ್ನಿರೂಪವಾದ ಅವನ ತೇಜೋಭಾವದಿಂದ ರುದ್ರಾತ್ಮಕವಾಗಿ ಪಾರ್ವತಿಯಲ್ಲಿ ಉದಯಿಸಿತೋ, ಅಂತಹ ಪಾರ್ವತೀಪುತ್ರನಾದ, ಶಕ್ತಿಧರನಾಗಿಯೂ, ಷಣ್ಮುಖನಾಗಿಯೂ, ಗದಾಧರನಾಗಿಯೂ ಇರುವ ಪೂಜ್ಯನಾದ ಕಾರ್ತಿಕೇಯನು ನಿನ್ನ ಅನಂತಾನಂತ ತೇಜಸ್ಸನ್ನು ಅಭಿವೃದ್ಧಿಪಡಿಸಲಿ

೯-೧೨. ಎಲ್ಲಾ ದೇವತೆಗಳಿಂದಲೂ ಪೂಜಿಸಲ್ಪಟ್ಟ ದೇವಸೇನಾಪತಿಯಾದ ಸ್ಕಂದನೂ ದ್ವಾದಶಾದಿತ್ಯರೂ, ಅಷ್ಟವಸುಗಳೂ ಏಕಾದಶರುದ್ರರೂ, ಸಾಧ್ಯರೆಂಬ ದೇವತೆಗಳೂ ಅಶ್ವಿನೀದೇವತೆಗಳೂ, ಭೃಗುವೂ ಆಂಗಿರಸರೂ, ವಿಶ್ವದೇವತೆಗಳೂ ಮೂರುಲೋಕದಲ್ಲಿಯೂ ಲೋಕಪಾಲಕರಾಗಿರುವ ಮರುದ್ಗಣಗಳೂ, ಚಂದ್ರ, ಸೂರ್ಯ, ಅಗ್ನಿ, ವಾಯು ಮೊದಲಾದ ದೇವತೆಗಳೂ, ಋಷಿಗಳೂ, ಯಕ್ಷರು, ಗಂಧರ್ವರು ರಾಕ್ಷಸರು, ಸಮುದ್ರಗಳು, ಕುಲಪರ್ವತಗಳು, ಮಹಾನದಿಗಳು,

ತೇಜಸ್ತಪಾಂಸಿ ಸತ್ಯಂ ಚ ಲಕ್ಷ್ಮೀಃ ಹ್ರೀಃ ಕೀರ್ತಿರೇವ ಚ ।
ಪ್ರವರ್ಧಯತು ತತ್ತೇಜೋ ಜಯ ಶಕ್ರ ಶಚೀಪತೇ　　　॥ ೧೨ ॥

ತವ ಚಾಪಿ ಜಯಾನ್ನಿತ್ಯಂ ತ್ವಿಹಸಂಪದ್ಯತೇ ಶುಭಂ ।
ಪ್ರಸೀದ ರಾಜ್ಞಾಂ ವಿಪ್ರಾಣಾಂ ಪ್ರಜಾನಾಮಪಿ ಸರ್ವಶಃ　　　॥ ೧೩ ॥

ತವ ಪ್ರಸಾದಾತ್ಪೃಥಿವೀ ನಿತ್ಯಂ ಸಸ್ಯವತೀ ಭವೇತ್ ।
ಶಿವಂ ಭವತು ನಿರ್ವಿಘ್ನಂ ಶಮ್ಯಂತಾಮೀತಯೋ ಭೃಶಂ　　　॥ ೧೪ ॥

ನಮಸ್ತೇ ದೇವದೇವೇಶ ನಮಸ್ತೇ ಬಲಸೂದನ ।
ನಮುಚಿಘ್ನ ನಮಸ್ತೇಸ್ತು ಸಹಸ್ರಾಕ್ಷ ಶಚೀಪತೇ　　　॥ ೧೫ ॥

ಸರ್ವೇಷಾಮೇವ ಲೋಕಾನಾಂ ತ್ವಮೇಕಾ ಪರಮಾ ಗತಿಃ ।
ತ್ವಮೇವ ಪರಮಃ ಪ್ರಾಣಃ ಸರ್ವಸ್ಯಾಸ್ಯ ಜಗತ್ಪತೇ　　　॥ ೧೬ ॥

---

ಎಲ್ಲಾ ವಿಧವಾದ ಭೂತಗಳು, ತೇಜಸ್ಸು, ತಪಸ್ಸು, ಸತ್ಯ, ಲಕ್ಷ್ಮೀ, ಹ್ರೀ, ಕೀರ್ತಿ ಮುಂತಾದುವೂ ಸಹ ನಿನ್ನ ತೇಜಸ್ಸನ್ನು ಅಭಿವೃದ್ಧಿಗೊಳಿಸಲು ಎಲೈ ಶಚೀಪತಿಯಾದ ಇಂದ್ರನೇ ನೀನು ಜಯಶೀಲನಾಗಿರು.

೧೩–೧೫. ನಿನ್ನ ವಿಜಯದಿಂದಲೂ ಸಹ ಇಲ್ಲಿ ನಮಗೆ ನಿತ್ಯವೂ ಶುಭವೇ ಉಂಟಾಗುತ್ತದೆ. ರಾಜರ ವಿಷಯದಲ್ಲಿಯೂ, ಬ್ರಾಹ್ಮಣರ ವಿಷಯದಲ್ಲಿಯೂ, ಪ್ರಜೆಗಳ ವಿಷಯದಲ್ಲಿಯೂ, ಸಹ ನಿತ್ಯವೂ ನೀನು ಪ್ರಸನ್ನನಾಗಿರು. ನಿನ್ನ ಅನುಗ್ರಹದಿಂದಲೇ ಭೂಮಿಯು ಯಾವಾಗಲೂ ಸಸ್ಯಸಮೃದ್ಧಿಯಿಂದ ಕೂಡಿರುತ್ತದೆ. ನಿನ್ನ ಅನುಗ್ರಹದಿಂದ ಇಲ್ಲಿ ನಮಗೆ ಮಂಗಳವೂ, ವಿಘ್ನನಾಶವೂ, ಉಂಟಾಗಲಿ. ಈ ಬಾಧೆಗಳೆಲ್ಲವೂ ಚೆನ್ನಾಗಿ ಶಾಂತಿಗೊಳ್ಳಲಿ, ಎಲೈ ದೇವಾಧಿದೇವನೇ, ಬಲಾಸುರ ನಾಶಕನೇ ನಿನಗೆ ಅನಂತ ನಮಸ್ಕಾರಗಳು, ಎಲೈ. ನಮುಚಿನಾಶಕನೇ, ಸಹಸ್ರ ನಯನನೇ, ಶಚೀಪತಿಯೇ, ನಿನಗೆ ಅನಂತ ನಮಸ್ಕಾರಗಳು.

೧೬–೧೭. ಎಲ್ಲಾ ಪ್ರಾಣಿಗಳಿಗೂ ನೀನೇ ಮುಖ್ಯ ನಿರ್ವಾಹಕನಾಗಿರುವೆ. ಜಗತ್ಪತಿಯಾದ ನೀನೇ ಎಲ್ಲರಿಗೂ ಜೀವನ ಸಾಧನನಾಗುತ್ತೀಯೆ, ಎಲೈ ಪುರಾಸುರ

ಪಾಶೋಽಹ್ಯಸಿ ಪಥಃ ಸ್ರಷ್ಟ್ವಂ ತ್ವಮನಲ್ಪಂ ಪುರಂದರ ।
ತ್ವಮೇವ ಮೇಘಸ್ತ್ವಂ ವಾಯುಸ್ತ್ವಮಗ್ನಿರ್ವೈದ್ಯುತೋಽಂಬರೇ ॥ ೧೭ ॥

ತ್ವಮತ್ರ ಮೇಧಾ ವಿಕ್ಷಿಪ್ತಾ ತ್ವಂ ಮೇ ಬಾಹುಃ ಪ್ರತರ್ದನಂ ।
ತ್ವಂ ವಜ್ರಮತುಲಂ ಘೋರಂ ಘೋಷವಾಂಸ್ತ್ವಂ ವಲಾಹಕಃ ॥ ೧೮ ॥

ಸ್ರಷ್ಟಾ ತ್ವಮೇವ ಲೋಕಾನಾಂ ಸಂಹರ್ತಾ ಚಾಪರಾಜಿತಃ ।
ತ್ವಂ ಜ್ಯೋತಿಃ ಸರ್ವಲೋಕಾನಾಂ ತ್ವಮಾದಿತ್ಯೋ ವಿಭಾವಸುಃ ॥ ೧೯ ॥

ತ್ವಂ ಮಹದ್ಭೂತಮಾಶ್ಚರ್ಯಂ ತ್ವಂ ರಾಜಾ ತ್ವಂ ಸುರೋತ್ತಮಃ ।
ತ್ವಂ ವಿಷ್ಣುಸ್ತ್ವಂ ಸಹಸ್ರಾಕ್ಷಸ್ತ್ವಂ ದೇವಸ್ತ್ವಂ ಪಾರಾಯಣಂ ॥ ೨೦ ॥

ತ್ವಮೇವ ಚಾಮೃತಂ ದೇವಸ್ತ್ವಂ ಮೋಕ್ಷಃ ಪರಮಾರ್ಚಿತಃ ।
ತ್ವಂ ಮುಹೂರ್ತಃ ಸ್ಥಿತಸ್ತ್ವಂ ಚ ಲವಸ್ತ್ವಂ ಚ ಪುನಃ ಕ್ಷಣಃ ॥ ೨೧ ॥

---

ಶತ್ರುವೇ ನೀನೇ ಎಲ್ಲಾ ಮಾರ್ಗಗಳನ್ನು ಸೃಷ್ಟಿಸುವ ಪಾಶವೆಂಬ ಉಪಕರಣರೂಪನಾಗಿರುವೆ. ನೀನೇ, ಆಕಾಶದಲ್ಲಿ ಮೇಘರೂಪನಾಗಿರುವೆ, ವಾಯುರೂಪಿಯೂ, ವಿದ್ಯುತ್ತೆಂಬ ಅಗ್ನಿರೂಪಿಯಾಗಿಯೂ ಆಕಾಶದಲ್ಲಿ ಪ್ರಕಾಶಿಸುತ್ತಿರುವೆ.

೧೮–೧೯. ಬಹುಮುಖವಾಗಿ ಪ್ರಸರಿಸಿರುವ ಮೇಧಾ ಎಂಬ ಪ್ರತಿಭಾವಿಶೇಷವೂ ನೀನೇ ಆಗಿರುತ್ತೀಯೆ, ನೀನೇ ನನ್ನ ಸಮರ್ಥವಾದ ಬಾಹುವಾಗಿರುವೆ. ಅನದೃಶವಾದ ವಜ್ರವೂ ನೀನೇ ಆಗಿದ್ದೀಯೆ, ಗರ್ಜಿತಧ್ವನಿಯಿಂದ ಕೂಡಿರುವ ಮೇಘವೂ ನೀನೇ ಆಗಿದ್ದೀಯೆ, ಲೋಕದ ಸೃಷ್ಟಿಕರ್ತನೂ ನೀನೇ, ಎಲ್ಲಾ ಲೋಕಗಳಿಗೂ ಪ್ರಕಾಶವಸ್ತುವಾಗಿರುವೆ. ನೀನೇ ಸೂರ್ಯರೂಪದಿಂದಲೂ ಅಗ್ನಿಯ ರೂಪದಿಂದಲೂ ಇರುವೆ. ಆಶ್ಚರ್ಯಕರವಾದ ಮಹಾವಸ್ತುವೂ ನೀನೇ ಆಗಿದ್ದೀಯೇ ರಾಜನೂ ಸುರಶ್ರೇಷ್ಠನೂ ಸಹ ನೀನೇ ಆಗಿರುವೆ

೨೦–೨೧. ಸರ್ವವ್ಯಾಪಕನಾದ ವಿಷ್ಣುವೂ ನೀನೇ, ಸಹಸ್ರಾಕ್ಷನೂ, ದೇವತೆಯೂ, ಪ್ರಾಪ್ಯವಸ್ತುವೂ ಸಹ ನೀನೇ ಆಗಿರುವೆ, ನೀನೇ ಅಮೃತಸ್ವರೂಪನೂ ಪರಮಪೂಜ್ಯವಾದ ಮೋಕ್ಷರೂಪನೂ ಆಗಿರುವೆ, ಮುಹೂರ್ತ, ಲವ, ಕ್ಷಣ,

ಶುಕ್ಲಸ್ತ್ವಂ ಬಹುಲಶ್ಚೈವ ಕಲಾಕಾಷ್ಠಾ ತ್ರುಟಿಸ್ತಥಾ ।
ಸಂವತ್ಸರರ್ತವೋ ಮಾಸಾಃ ರಜನ್ಯಶ್ಚ ದಿನಾನಿ ಚ ॥ ೨೨ ॥

ತ್ವಮುತ್ತಮಾ ಸ ಗಿರಿಚರಾ ವಸುಂಧರಾ
ಸಭಾಸ್ಕರಂ ಸತಿಮಿರಮಂಬರಂ ತಥಾ ।
ಸಹೋದಧಿಃ ಸತಿಮಿಂಗಿಲಸ್ತಥಾ
ಸಹೋರ್ಮಿವಾನ್ ಬಹುಮಕರೋ ಝಷಾಕುಲಃ ॥ ೨೩ ॥

ಮಹದ್ಯಶಾಸ್ತ್ವಮಿಹ ಸದಾ ಚ ಪೂಜ್ಯಸೇ
ಮಹರ್ಷಿಭಿರ್ಮುದಿತಮನಾ ಮಹರ್ಷಿಭಿಃ ।
ಅಭಿಷ್ಟುತಃ ಪಿಬಸಿ ಚ ಸೋಮಮಧ್ವರೇ
ಹುತಾನ್ಯಪಿ ಚ ಹವೀಂಷಿ ಭೂತಯೇ ॥ ೨೪ ॥

ತ್ವಂ ವಿಪ್ರೈಃ ಸತತಮಿಹೇಜ್ಯಸೇ ಫಲಾರ್ಥಂ
ಛೇದಾರ್ಥೇಷ್ವಷ್ಟಸು ಬಲೌಘ ಗೀಯಸೇ ತ್ವಂ ।

---

ಶುಕ್ಲಪಕ್ಷ, ಬಹುಲಪಕ್ಷ, ಕಲಾ, ಕಾಷ್ಠ, ತ್ರುಟಿ ಎಂಬ ಕಾಲಗಳ ಸೂಕ್ಷ್ಮಸ್ಥೂಲ ಸ್ವರೂಪನೂ ನೀನೇ ಆಗಿರುವೆ. ಸಂವತ್ಸರ, ಋತು, ಮಾಸ, ರಾತ್ರಿ, ಹಗಲು ಎಂಬ ಸ್ಥೂಲ ಕಾಲರೂಪನೂ ನೀನೇ ಆಗಿರುವೆ.

೨೩-೨೪. ಅನೇಕ ಸ್ಥಾವರ ಜಂಗಮಗಳಿಂದ ಕೂಡಿರುವ ಭವ್ಯವಾದ ಭೂಮಂಡಲವೂ ನೀನೇಆಗಿದ್ದೀಯೆ, ಸೂರ್ಯನನ್ನೂ ಅಂಧಕಾರವನ್ನೂ ಹೊಂದಿರುವ ಆಕಾಶವೂ ನೀನೇ ಆಗಿರುವೆ, ತಿಮಿಂಗಿಲ, ಮೊಸಳೆ, ಮೀನುಗಳು ಇವುಗಳಿಂದ ಕೂಡಿ ತರಂಗಪರಂಪರೆಯಿಂದ ಭೋರ್ಗರೆಯುವ ಮಹಾಸಮುದ್ರವೂ ನೀನೇ ಆಗಿರುವೆ. ಯಶಸ್ವಿಯಾಗಿಯೂ ಸಂತುಷ್ಟನಾಗಿಯೂ ಇರುವ ನೀನು ಮಹರ್ಷಿಗಳಿಂದ ಯಾವಾಗಲೂ ಪೂಜಿಸಲ್ಪಡುತ್ತೀಯೆ. ಆ ಮಹರ್ಷಿಗಳಿಂದಲೇ ಸ್ತೋತ್ರ ಮಾಡಲ್ಪಟ್ಟವನಾಗಿ ಯಜ್ಞಗಳಲ್ಲಿ ಸೋಮರಸವನ್ನೂ, ಹೋಮಮಾಡಲ್ಪಟ್ಟ ಹವಿಸ್ಸುಗಳನ್ನೂ ಜಗತ್ತಿನ ಅಭ್ಯುದಯಕ್ಕಾಗಿ ಸೇವಿಸುತ್ತೀಯೆ

ತ್ವದ್ದೇತೋರ್ಯಜನಪರಾಯಣಾ ದ್ವಿಜೇಂದ್ರಾಃ
ವೇದಾಂಗಾನಧಿಗಮಯಂತಿ ಸರ್ವವೇದ್ಯೈಃ || ೨೫ ||

ವಜ್ರಸ್ಯ ಭರ್ತಾ ಭುವನಸ್ಯ ಗೋಪ್ತಾ
ವೃತ್ರಸ್ಯ ಹರ್ತಾ ನಮುಚೇರ್ನಿಹಂತಾ ।
ಕೃಷ್ಣೇವಸಾನೋ ವಸನೇ ಮಹಾತ್ಮಾ
ಸತ್ಯಾನೃತೇ ಯೋ ವಿವಿನಕ್ತಿ ಲೋಕೇ || ೨೬ ||

ಯಂ ವಾಜಿನಂ ಗರ್ಭಮಪಾಂ ಸುರಾಣಾಂ
ವೈಶ್ವಾನರಂ ವಾಹನಮಭ್ಯುಪೈತಿ ।
ನಮಃ ಸದಾಸ್ಮೈ ತ್ರಿದಿವೇಶ್ವರಾಯ
ಲೋಕತ್ರಯೇಶಾಯ ಪುರಂದರಾಯ || ೨೭ ||

---

೨೫-೨೬. ನಿನ್ನನ್ನೇ ಉದ್ದೇಶಿಸಿ ತಮ್ಮ ಫಲಕ್ಕಾಗಿ ಬ್ರಾಹ್ಮಣರು ಯಾವಾಗಲೂ ಯಾಗಗಳನ್ನು ಮಾಡುತ್ತಾರೆ. ನಾನಾ ವಿಧವಾದ ಅರ್ಥವಾದ ವಾಕ್ಯಗಳಲ್ಲಿ ನೀನೇ ಗಾನಮಾಡಲ್ಪಡುತ್ತಿರುವೆ ನಿನಗಾಗಿಯೇ ಬ್ರಾಹ್ಮಣೋತ್ತಮರು ಯಜ್ಞಯಾಗಾದಿಗಳಲ್ಲಿ ನಿರತರಾಗಿರುವರು. ವೇದಗಳಿಂದ ವೇದಾಂಗಗಳನ್ನೂ ಹೊಂದುತ್ತಿರುವರು. ನೀನೇ ವಜ್ರಾಯುಧಕ್ಕೆ ಪ್ರಭುವಾಗಿಯೂ, ಜಗತ್ತಿಗೆ ರಕ್ಷಕನಾಗಿಯೂ ವೃತ್ರ, ನಮುಚಿ, ಇವರುಗಳಿಗೆ ನಾಶಕನಾಗಿಯೂ, ಇರುವೆ, ಕಪ್ಪಾದ ವಸ್ತ್ರಯುಗ್ಮವನ್ನು ಧರಿಸಿ ಲೋಕದಲ್ಲಿರುವ ಸತ್ಯಾಸತ್ಯಗಳಿಗೆ ವಿವೇಚಕನಾಗಿರುವೆ.

೨೭-೨೮. ದೇವತೆಗಳ ಮಧ್ಯದಲ್ಲಿ ಬಹಳ ವೇಗಶಾಲಿಯಾದ ಯಾವ ನಿನ್ನನ್ನು ಜಲದ ಗರ್ಭದಲ್ಲಿ ಉದಯಿಸಿದ ವೈಶ್ವಾನರಾಂಶವಾದ ದಿವ್ಯಾಶ್ವವು (ಉಚ್ಚೈಶ್ರವಸ್ಸು) ವಾಹನರೂಪದಿಂದ ಆಶ್ರಯಿಸಿದೆಯೋ ಅಂತಹ ಸ್ವರ್ಗಾಧಿಪನೂ ಲೋಕತ್ರಯನೂ, ಪುರಾಸುರನಾಶಕನೂ ಆದ ನಿನಗೆ ಸರ್ವಕಾಲದಲ್ಲಿಯೂ ವಂದನೆಯನ್ನರ್ಪಿಸುತ್ತೇವೆ. [1] ಜನ್ಮರಹಿತನೂ, ನಾಶರಹಿತನೂ, ಸ್ಥಿರನಾಗಿಯೂ (ವಯಸ್ಸಿನ ವಿಕಾರವಿಲ್ಲದೆ) ಏಕರೂಪನಾಗಿಯೂ, ವರಾಹರೂಪಿಯಾದ ಪುರಾಣ ಪುರುಷನಂತೆ

---

[1] ಈ ಪ್ರಕರಣದ ಶಬ್ದಗಳೆಲ್ಲವೂ ಸ್ತುತಿಗೆ ತಕ್ಕಂತೆ ಗೌಣಾರ್ಥಗಳಾಗಿಯೇ ಇವೆ.

ಅಜೋಽವ್ಯಯಃ ಶಾಶ್ವತ ಏಕರೂಪೋ
ವಿಷ್ಣುರ್ವರಾಹಃ ಪುರುಷಃ ಪುರಾಣಃ ।
ತ್ವಮಂತರಃ ಸರ್ವಹರಃ ಕೃಶಾನುಃ
ಸಹಸ್ರಶೀರ್ಷಾ ಶತಮನ್ಯುರೀಡ್ಯಃ ॥ ೨೮ ॥

ಕವಿಂ ಸಪ್ತಜಿಹ್ವಂ ತ್ರಾತಾರಮಿಂದ್ರಂ ಸವಿತಾರಂ ಸುರೇಶಂ ।
ಹೃದಯೋಭಿಶಕ್ರಂ ವೃತ್ರಹಣಂ ಸುಷೇಣ-
ಮಸ್ಮಾಕಂ ವೀರಾ ಉತ್ತರೇ ಭವಂತು ॥ ೨೯ ॥

ತ್ರಾತಾರಮಿಂದ್ರೇಂದ್ರಿಯ ಕಾರಣಾತ್ಮನ್
ಜಗತ್ಪ್ರಧಾನಂ ಚ ಹಿರಣ್ಯಗರ್ಭಂ ।
ಲೋಕೇಶ್ವರಂ ದೇವವರಂ ವರೇಣ್ಯಂ
ಜ್ಞಾನಂದರೂಪಂ ಪ್ರಣತೋಽಸ್ಮಿ ನಿತ್ಯಂ ॥ ೩೦ ॥

---

ವ್ಯಾಪಕನಾಗಿಯೂ, ಶತ್ರುನಾಶಕನಾಗಿಯೂ, ಅಗ್ನಿಯಂತೆ ಸರ್ವನಾಶಕನಾಗಿಯೂ ಸಾವಿರ ತಲೆಯುಳ್ಳ ವಿರಾಟಪುರುಷನಂತೆ ಮಾಹಾತ್ಮ್ಯಶಾಲಿಯಾಗಿಯೂ, ಶತಮನ್ಯು ಎಂಬ ಪ್ರಸಿದ್ಧನಾಮಧೇಯದಿಂದ ಪೂಜ್ಯನಾಗಿಯೂ ಇರುವೆ.

೨೯-೩೦. ಅತೀತವಾದ ಸಕಲವಸ್ತು ಜ್ಞಾನ ಉಳ್ಳವನಾಗಿಯೂ, ಅಗ್ನಿಗೂ ನಿಯಾಮಕನಾಗಿಯೂ ರಕ್ಷಕನಾಗಿಯೂ, ಐಶ್ವರ್ಯ ಶಾಲಿಯಾಗಿಯೂ, ಪ್ರಾಣಿಗಳ ಉತ್ಪತ್ತಿಗೆ ಅಥವಾ ಜ್ಞಾನಕ್ಕೆ ಕಾರಣನಾಗಿಯೂ ಸುರಾಧಿಪತಿಯೂ, ಶತ್ರು ಹೃದಯ ನಾಶಕನಾಗಿಯೂ, ವೃತ್ರವೈರಿಯಾಗಿಯೂ, ಸುಸಜ್ಜಿತವಾದ ಸೇನೆಯುಳ್ಳವನಾಗಿಯೂ ಇರುವ ನಿನಗೆ ನಮಸ್ಕಾರಗಳು. ನಿನ್ನ ಅನುಗ್ರಹದಿಂದ ನಮಗೆ ವೀರರಾದ ಸಂತಾನಗಳುಂಟಾಗಲಿ. ತ್ರಾತಾರಮಿಂದ್ರ ಎಂಬ ಋಕ್ಕಿಗೆ ಅಧಿದೇವತೆಯಾಗಿಯೂ ಇಂದ್ರಿಯಗಳ ಕಾರಣಗಳಿಗೂ ನಿಯಾಮಕನಾಗಿಯೂ, ಜಗತ್ತಿಗೆ ಪ್ರಧಾನ ಪುರುಷನಾಗಿಯೂ, ಹಿರಣ್ಯಗರ್ಭರೂಪಿಯಾಗಿಯೂ, ಲೋಕಪತಿಯಾಗಿಯೂ, ದೇವಶ್ರೇಷ್ಠನಾಗಿಯೂ, ಆಶ್ರಯಣೀಯನಾಗಿಯೂ, ಆನಂದ ರೂಪಿಯಾಗಿಯೂ ಇರುವ ನಿನ್ನನ್ನು ನಮಸ್ಕರಿಸುತ್ತೇನೆ. ಮಹಾತ್ಮನಾಗಿಯೂ ಸ್ವರ್ಗಪತಿಯಾಗಿಯೂ,

ಇಮಂ ಸ್ತವಂ ದೇವವರಸ್ಯ ಕೀರ್ತಯೇ-
ನ್ಮಹಾತ್ಮನಃ ತ್ರಿದಶಪತೇಃ ಸುಸಂಯತಃ ।
ಅವಾಪ್ಯ ಕಾಮಾನ್ಮನಸೋಽಭಿರಾಮಾನ್
ಸ್ವಲೋಕಮಾಯಾತಿ ಚ ದೇಹಭೇದೇ ॥ ೩೧ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ಶಕ್ರಸ್ತವೋ ನಾಮ
ಸಪ್ತಪಂಚಾಶದುತ್ತರಶತತಮೋಽಧ್ಯಾಯಃ

---

ಇರುವ ಇಂದ್ರನ ಈ ಸ್ತುತಿಯನ್ನು ಯಾರು ಪರಿಶುದ್ಧಾಂತಃಕರಣರಾಗಿದ್ದು ಪಠಿಸುತ್ತಾರೆಯೋ ಅವರು ಈ ಲೋಕದಲ್ಲಿರುವವರಿಗೆ ಎಲ್ಲಾ ಮನೋರಥಗಳನ್ನೂ ಹೊಂದಿ ದೇಹ ವಿಯೋಗವಾದ ನಂತರ ಸ್ವರ್ಗಲೋಕವನ್ನು ಹೊಂದಿ ಆನಂದಿಸುತ್ತಾರೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ
ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ
ಶಕ್ರಸ್ತವವೆಂಬ ನೂರ ಐವತ್ತೇಳನೆಯ ಅಧ್ಯಾಯವು ಮುಗಿದಿದೆ.



|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಅಷ್ಟಪಂಚಾಶದುತ್ತರಶತತಮೋಽಧ್ಯಾಯಃ

|| ರಾಮ ಉವಾಚ ||

ವಿಧಿನಾ ಪೂಜಯೇತ್ಕೇನ ಭದ್ರಕಾಲೀಂ ನರಾಧಿಪಃ |
ನವಮ್ಯಾಮಾಶ್ವಿನೇ ಮಾಸಿ ಶುಕ್ಲಪಕ್ಷೇ ನರೋತ್ತಮ || ೧ ||

|| ಪುಷ್ಕರ ಉವಾಚ ||

ಪೂರ್ವೋತ್ತರೇ ತು ದಿಗ್ಭಾಗೇ ಶಿಬಿರಾತ್ಸುಮನೋಹರೇ |
ಭದ್ರಕಾಲೀಗೃಹಂ ಕುರ್ಯಾಚ್ಚಿತ್ರವಸ್ತ್ರೈರಲಂಕೃತಂ || ೨ ||

---

### ನೂರ ಐವತ್ತೆಂಟನೇ ಅಧ್ಯಾಯ.

೧. ರಾಮನು ಪ್ರಶ್ನೆಮಾಡುತ್ತಾನೆ. ರಾಜನಾದವನು ಆಶ್ವಯುಜ ಮಾಸದ ಶುಕ್ಲಪಕ್ಷದ ನವಮಿಯಲ್ಲಿ ಭದ್ರಕಾಳಿಯನ್ನು ಪೂಜಿಸಬೇಕೆಂದು ಹೇಳಿರುವಿರಿ. ಆ ಪೂಜಾವಿಧಿಯ ಕ್ರಮವೇನು. ಈ ಪ್ರಶ್ನೆಗೆ ಉತ್ತರವಾಗಿ ಪುಷ್ಕರನು ಹೇಳುತ್ತಾನೆ

೨–೪. ರಾಜನಾದವನು ತನ್ನ ಸೇನಾನಿವೇಶಕ್ಕಿಂತ ಪೂರ್ವ ಅಥವಾ ಉತ್ತರ ದಿಗ್ಭಾಗದಲ್ಲಿ ರಮ್ಯವಾದ ಪ್ರದೇಶವನ್ನಾಶ್ರಯಿಸಿ ಅಲ್ಲಿ ಭದ್ರಕಾಲಿಯ ಗೃಹವನ್ನು

ಭದ್ರಕಾಲೀಂ ಪಟೇ ಕೃತ್ವಾ ತತ್ರ ಸಂಪೂಜಯೇದ್ದ್ವಿಜ ।
ಆಶ್ವಿನೇ ಶುಕ್ಲಪಕ್ಷೇ ತು ಅಷ್ಟಮ್ಯಾಂ ಪ್ರಯತಸ್ತತಃ ॥ ೩ ॥

ತತ್ರೈವಾಯುಧವರ್ಮಾದ್ಯಂ ಛತ್ರಂ ಕೇತುಂ ಚ ಪೂಜಯೇತ್ ।
ರಾಜಲಿಂಗಾನಿ ಸರ್ವಾಣಿ ತಥಾಸ್ತ್ರಾಣಿ ಚ ಪೂಜಯೇತ್ ॥ ೪ ॥

ಪುಷ್ಪೈಃ ಗಂಧೈಃ ಫಲೈರ್ಭಕ್ಷ್ಯೈರ್ಭೋಜ್ಯೈಶ್ಚ ಸುಮನೋಹರೈಃ ।
ಬಹುಭಿಶ್ಚ ವಿಚಿತ್ರಾಭಿಃ ಪ್ರೇಕ್ಷಾದಾನೈಸ್ತಥೈವ ಚ ॥ ೫ ॥

ರಾತ್ರೌ ಜಾಗರಣಂ ಕುರ್ಯಾತ್ತತ್ರೈವ ವಸುಧಾಧಿಪಃ ।
ಏವಂ ಸಂಪೂಜಯೇದ್ದೇವೀಂ ವರದಾಂ ಭಕ್ತವತ್ಸಲಾಂ । ೬ ॥

ಕಾತ್ಯಾಯನೀಂ ಕಾಮಗಮಾಂ ವರರೂಪಾಂ ವರಪ್ರದಾಂ ।
ಪೂಜಿತಾ ಸರ್ವಕಾಮೈಶ್ಚ ಸಾ ಯುನಕ್ತೀ ವಸುಧಾಧಿಪಂ ॥ ೭ ॥

---

ನಿರ್ಮಿಸಬೇಕು. ಆ ಪೂಜಾಗೃಹವನ್ನು ಚಿತ್ರವಸ್ತ್ರಗಳಿಂದ ಅಲಂಕರಿಸಬೇಕು. ಭದ್ರಕಾಲಿಯನ್ನು ಒಂದು ವಸ್ತ್ರದಲ್ಲಿ ಬರೆದು ಅಲ್ಲಿಟ್ಟು ಪೂಜಿಸಬೇಕು ಆ ಪೂಜೆಯನ್ನೂ ಆಶ್ವಯುಜ ಶುಕ್ಲಪಕ್ಷದ ಅಷ್ಟಮಿಯಲ್ಲಿ ಮಾಡಬೇಕು ಅಲ್ಲಿಯೇ ಆಯುಧಗಳು, ಛತ್ರಿ, ಧ್ವಜ ಮತ್ತು ಎಲ್ಲಾ ವಿಧವಾದ ರಾಜಚಿಹ್ನೆಗಳು, ಅಸ್ತ್ರಗಳು ಎಲ್ಲವನ್ನೂ ಇಟ್ಟು ಪೂಜಿಸಬೇಕು.

೫–೭. ಪುಷ್ಪಗಳಿಂದಲೂ, ಗಂಧಗಳಿಂದಲೂ, ನಾನಾ ವಿಧವಾದ ರಮ್ಯವಾದ ಭಕ್ಷ್ಯಭೋಜ್ಯ ಇವುಗಳಿಂದಲೂ, ನಾನಾವಿಧವಾದ ಉಪಚಾರ ಪ್ರದಾನದಿಂದಲೂ ಪೂಜಿಸಬೇಕು. ರಾತ್ರಿಯಲ್ಲಿ ಧೊರೆಯು ಅಲ್ಲಿಯೇ ಜಾಗರಣವನ್ನು ಮಾಡಬೇಕು ಈ ರೀತಿ ವರಪ್ರದಳೂ, ಭಕ್ತರಲ್ಲಿ ಪ್ರೀತಿಯುಳ್ಳವಳೂ, ಸ್ವೇಚ್ಛಾಮಾತ್ರ ಸಂಚಾರಿಣಿಯೂ, ಸುರೂಪಳೂ, ಆಗಿರುವ ಕಾತ್ಯಾಯಿನಿಯನ್ನು ಪೂಜಿಸಬೇಕು. ಹೀಗೆ ಪೂಜಿಸಲ್ಪಟ್ಟ ದೇವಿಯು ದೊರೆಗೆ ಅಭಿಮತವಾದ ಎಲ್ಲಾ ಮನೋರಥಗಳನ್ನೂ ಉಂಟುಮಾಡುವಳು

ಏವಂ ತು ಸಂಪೂಜ್ಯ ಜಗತ್ಪ್ರಧಾನಾಂ
ಯೊತ್ರಾ ತೇಃ ಕಾರ್ಯಾ ವಸುಧಾಧಿಪೇನ ।
ಪ್ರಾಪ್ನೋತಿ ಸಿದ್ಧಿಂ ಪರಮಾಂ ಮಹೇಶೋ
ಜನಸ್ತಥಾನ್ಯೋಽಪಿ ಹಿ ವಿತ್ತಶಕ್ತ್ಯಾ ॥ ೮ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ಭದ್ರಕಾಲೀಪೂಜಾನಾಮಾಷ್ಟ
ಪಂಚಾಶದುತ್ತರಶತತಮೋಽಧ್ಯಾಯಃ

---

೮. ಈ ರೀತಿ ಜಗದ್ವಂದ್ಯಳಾದ ದೇವಿಯನ್ನು ಪೂಜಿಸಿ ಅನಂತರ ದೊರೆಯು ವಿಜಯ ಯಾತ್ರೆಯನ್ನು ಕೈಗೊಳ್ಳಬೇಕು. ಅಂತಹ ದೊರೆಯು ಮಹಾಪ್ರಭುವಾಗಿ ಉತ್ತಮವಾದ ಸಿದ್ಧಿಯನ್ನೂ ಹೊಂದುತ್ತಾನೆ. ಸಾಮಾನ್ಯರಾದ ಇತರರೂ ಸಹ ತಮ್ಮ ದ್ರವ್ಯಶಕ್ತಿಗೆ ತಕ್ಕಂತೆ ನಡೆಸಬಹುದು. ಅವರೂ ಸಹ ಇದರ ಫಲವನ್ನು ಹೊಂದುತ್ತಾರೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ
ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ
ಭದ್ರಕಾಲಿಪೂಜೆಯೆಂಬ ನೂರ ಐವತ್ತೆಂಟನೆಯ
ಅಧ್ಯಾಯ ಮುಗಿದಿದೆ.



॥ ಓಂ ॥

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಏಕೋನಷಷ್ಟ್ಯುತ್ತರಶತತಮೋಽಧ್ಯಾಯಃ

॥ ರಾಮ ಉವಾಚ ॥

**ನೀರಾಜನವಿಧಿಂ ತ್ವತ್ತಃ ಶ್ರೋತುಮಿಚ್ಛಾಮಿ ಸತ್ತಮ ।**
**ಕಥಂ ಕಾರ್ಯಾ ನರೇಂದ್ರಸ್ಯ ಶಾಂತಿಃ ನೀರಾಜನೇ ಪ್ರಭೋ ॥ ೧ ॥**

॥ ಪುಷ್ಕರ ಉವಾಚ ॥

**ಪೂರ್ವೋತ್ತರೇ ತು ದಿಗ್ಭಾಗೇ ನಗರಾತ್ಸುಮನೋಹರೇ ।**
**ವಿಸ್ತೀರ್ಣಂ ಕಾರಯೇದ್ರಾಜಾ ಸುಮನೋಹರಮಾಶ್ರಮಂ ॥ ೨ ॥**

**ಕಟ್ಟೈರ್ಗುಪ್ತಂ ಕುಶಾಸ್ತೀರ್ಣಂ ಪತಾಕಾಧ್ವಜಶೋಭಿತಂ ।**
**ತೋರಣತ್ರಿತಯಂ ತತ್ರ ಪ್ರಾಙ್ಮುಖಂ ಕಾರಯೇಚ್ಛುಭಂ ॥ ೩ ॥**

---

### ನೂರ ಐವತ್ತೊಂಭತ್ತನೇ ಅಧ್ಯಾಯ.

೧. ರಾಮನು ಪ್ರಶ್ನೆಮಾಡುತ್ತಾನೆ. ಎಲೈ ಶ್ರೇಷ್ಠನೇ, ನೀರಾಜನವಿಧಿಯನ್ನು ನಿನ್ನಿಂದ ಕೇಳ ಬಯಸುತ್ತೇನೆ. ನೀರಾಜನವೆಂಬ ಶಾಂತಿಕರ್ಮವನ್ನು ರಾಜರು ಯಾವ ವಿಧಾನದಿಂದ ನಡೆಸಬೇಕು. ಇದಕ್ಕೆ ಉತ್ತರವಾಗಿ ಪುಷ್ಕರನು ಹೇಳುತ್ತಾನೆ.

೨-೩. ನಗರದ ಈಶಾನ್ಯ ದಿಕ್ಕಿನಲ್ಲಿ ರಮ್ಯವಾದ ಸ್ಥಳದಲ್ಲಿ ವಿಸ್ತಾರವಾಗಿಯೂ, ರಮ್ಯವಾಗಿಯೂ ಇರುವ ಆಶ್ರಮವನ್ನು ನಿರ್ಮಿಸಬೇಕು. ಅದನ್ನು ಹೊರಭಾಗದಲ್ಲಿ ಚಾಪೆಗಳಿಂದ ಗುಪ್ತವಾಗುವಂತೆ ಹೊದಿಸಬೇಕು. ಒಳಭಾಗದಲ್ಲಿ ದರ್ಭೆಗಳನ್ನು ಹಾಸಿರಬೇಕು. ಬಾವುಟಗಳಿಂದಲೂ, ಧ್ವಜಗಳಿಂದಲೂ ಅದನ್ನು ಅಲಂಕರಿಸಿ ಆ ಆಶ್ರಮಕ್ಕೆ ಪೂರ್ವಾಭಿಮುಖವಾದ ಮೂರು ಹೊರಬಾಗಿಲುಗಳನ್ನೂ ಇಡಬೇಕು.

**ಕಾರ್ಯಂ ಷೋಡಶಹಸ್ತಂತು ತೋರಣಂ ತು ಸಮುಚ್ಛ್ರಿತಂ ।**
**ವೈಪುಲ್ಯಂ ದಶಹಸ್ತಂ ತು ತತ್ರ ಕಾರ್ಯಂ ಭೃಗೂತ್ತಮ ॥ ೪ ॥**

**ತೋರಣಾದ್ದಕ್ಷಿಣೇ ಭಾಗೇ ತತ್ರ ಕಾರ್ಯಂ ಸಮಾಶ್ರಯಂ ।**
**ದೇವತಾರ್ಚಾ ಭವೇದ್ಯತ್ರ ತಥಾಗ್ನಿಹವನಕ್ರಿಯಾ ॥ ೫ ॥**

**ಅಷ್ಟಹಸ್ತಾಯತೋತ್ಸೇಧಮುಲ್ಮುಕಾನಾಂ ತು ವಾಮತಃ ।**
**ಕಾರ್ಯಂ ಭವತಿ ಶುಷ್ಕಾಣಾಂ ಕೂಟಂ ಭೃಗುಕುಲೋದ್ವಹ ॥ ೬ ॥**

**ಪಂಚರಂಗಕಸೂತ್ರೇಣ ಶತಗ್ರಂಥಿಂ ಮನೋರಮಾಂ ।**
**ಮಧ್ಯಮೇ ತೋರಣೇ ಕುರ್ಯಾಚ್ಛತಪಾಶೀಂ ತು ಮಧ್ಯಗಾಂ ॥ ೭ ॥**

**ಛಾದಯಿತ್ವಾ ಕುಶೈಸ್ತಾಂ ತು ಮುದಾ ಸಂಛಾದಯೇತ್ಪುನಃ ।**
**ತಸ್ಯಾಶ್ಚ ಲಂಘನಂ ವರ್ಜ್ಯಂ ಪ್ರಯತ್ನಾತ್ಸರ್ವಜಂತುಭಿಃ ॥ ೮ ॥**

---

೪–೫. ಆ ಹೊರಬಾಗಿಲುಗಳು ಹದಿನಾರು ಮೊಳ ಎತ್ತರವಿರಬೇಕು. ಅಗಲವು ಹತ್ತು ಮೊಳ ಇರಬೇಕು. ಆ ಹೊರಬಾಗಿಲಿನಿಂದ ಬಲಭಾಗದಲ್ಲಿ ಒಂದು ಮನೆಯನ್ನು ಮಾಡಬೇಕ. ಅಲ್ಲಿಯೇ ದೇವತಾಪೂಜೆ ಮತ್ತು ಅಗ್ನಿಪ್ರತಿಷ್ಠೆಯಿಂದ ಹೋಮಾದಿ ಕ್ರಿಯೆಗಳೂ ನಡೆಯಬೇಕು

೬–೭. ಅದರ ಎಡಭಾಗದಲ್ಲಿ ಎಂಟು ಮೊಳ ವಿಸ್ತಾರ ಮತ್ತು ಎತ್ತರವುಳ್ಳ ಒಣಗಿದ ಕಾಷ್ಠಗಳ ರಾಶಿಯನ್ನು ನಿರ್ಮಿಸಬೇಕು. ಅವು ಸ್ವಲ್ಪ ಸುಟ್ಟ ಕೊಳ್ಳಿಯಂತಿರಬೇಕು ಐದು ಬಣ್ಣವುಳ್ಳ ಸೂತ್ರದಿಂದ ರಮ್ಯವಾದ ನೂರು ಗ್ರಂಥಿಯನ್ನು ಮಾಡಿ ಮಧ್ಯದ ಹೆಬ್ಬಾಗಿಲಿನಲ್ಲಿ ಅಡ್ಡಲಾಗಿ ಇಡಬೇಕು. ಮಧ್ಯಭಾಗದ ಗ್ರಂಥಿಯನ್ನು ನೂರು ಸುತ್ತಿನಿಂದ ಕಟ್ಟಬೇಕು

೮–೯. ಹಾಗೆ ನೂರು ಸುತ್ತಿನಿಂದ ಸುತ್ತಿದ ಗ್ರಂಥಿಯ ಸ್ಥಲವನ್ನು ದರ್ಭೆಗಳಿಂದ ಸುತ್ತಿ ಪುನಃ ದರ್ಭೆಗಳಿಂದಲೇ ಮರೆಮಾಡಬೇಕು. ಯಾವ ಜಂತುಗಳೂ ಅದನ್ನು ದಾಟಬಾರದು. ಮುಂದೆ ಹೇಳುವಂತೆ ರಾಜನ ಆನೆಯೇ ಮೊದಲು ದಾಟಬೇಕು. ಸೂರ್ಯನು ಚಿತ್ತಾನಕ್ಷತ್ರವನ್ನು ಬಿಟ್ಟು ಸ್ವಾತಿಗೆ ಯಾವಾಗ

ನ ಲಂಘಿತಾ ಸಾ ಯಾವತ್ಸ್ಯಾತ್ಪ್ರಥಮಂ ರಾಜಹಸ್ತಿನಾ ।
ಚಿತ್ರಾಂ ತ್ಯಕ್ತ್ವಾ ಯದಾ ಸ್ವಾತೀಂ ಸವಿತಾ ಪ್ರತಿಪದ್ಯತೇ ॥ ೯ ॥

ತತಃ ಪ್ರಭೃತಿ ಕರ್ತವ್ಯಾ ಯಾವತ್ಸ್ವಾತೌ ರವಿಃ ಸ್ಥಿತಃ ।
ಆಶ್ರಮೇ ಪ್ರತ್ಯಹಂ ದೇವಾಃ ಪೂಜನೀಯಾ ದ್ವಿಜೋತ್ತಮ ॥ ೧೦ ॥

ಬ್ರಹ್ಮಾ ವಿಷ್ಣುಶ್ಚ ಶಂಭುಶ್ಚ ಶಕ್ರಶ್ಚೈವಾನಲಾನಿಲೌ ।
ವಿನಾಯಕಃ ಕುಮಾರಶ್ಚ ವರುಣೋ ಧನದೋ ಯಮಃ ॥ ೧೧ ॥

ವಿಶ್ವಾನ್ ದೇವಾನ್ ಮಹಾಭಾಗ ಉಚ್ಚೈಃಶ್ರವಸಮೇವ ಚ ।
ಅಷ್ಟೌ ಮಹಾಗಜಾಃ ಪೂಜ್ಯಾಃ ತೇಷಾಂ ನಾಮಾನಿ ಮೇ ಶೃಣು ॥ ೧೨ ॥

ಕುಮುದೈರಾವಣೌ ಪದ್ಮಃ ಪುಷ್ಪದಂತೋಽಥ ವಾಮನಃ ।
ಸುಪ್ರತೀಕಾಂಜನೌ ನೀಲ ಏತೇಷ್ಟೌ ದೇವಯೋನಯಃ ॥ ೧೩ ॥

ಪೂಜಾ ಕಾರ್ಯಾ ಗ್ರಹರ್ಕ್ಷಾಣಾಂ ತಥೈವ ಚ ಪುರೋಧಸಾ ।
ತತಸ್ತು ಜುಹುಯಾದ್ವಹ್ನೌ ಪುರೋಧಾಃ ಸುಸಮಾಹಿತಃ ॥ ೧೪ ॥

---

ಬರುವನೋ ಅಂತಹ ಸ್ವಾತಿಯಲ್ಲಿ ಸೂರ್ಯನಿರುವಾಗ ಮುಂದಿನ ವಿಧಾನಗಳನ್ನು ನಡೆಸಬೇಕು.

೧೦-೧೨ ಆ ಆಶ್ರಮದಲ್ಲಿ ಪ್ರತಿನಿತ್ಯವೂ ದೇವತೆಗಳನ್ನು ಪೂಜಿಸಬೇಕು. ಆ ದೇವತೆಗಳಾದರೂ ಬ್ರಹ್ಮ, ವಿಷ್ಣು, ಶಂಭು, ಇಂದ್ರ, ಅಗ್ನಿ, ವಾಯು, ವಿನಾಯಕ, ಷಣ್ಮುಖ, ವರುಣ, ಕುಬೇರ, ಯಮ, ವಿಶ್ವೇದೇವತೆಗಳು, ಉಚ್ಚೈಶ್ರವಸ್ಸು, ಅಷ್ಟದಿಗ್ಗಜಗಳು. ಇವರೆಲ್ಲರನ್ನೂ ಪೂಜಿಸಬೇಕು. ಆ ದಿಗ್ಗಜಗಳ ಹೆಸರನ್ನೂ ಹೇಳುತ್ತೇನೆ ಕೇಳು.

೧೩-೧೫. ಕುಮುದ, ಐರಾವಣ, ಪದ್ಮ, ಪುಷ್ಪದಂತ, ವಾಮನ, ಸುಪ್ರತೀಕ, ಅಂಜನ, ನೀಲ, ಈ ಎಂಟು ದಿಗ್ಗಜಗಳೂ ದೇವಪ್ರಕೃತಿಗಳೆಂದೇ ತಿಳಿಯಬೇಕು. ಮತ್ತು ಪುರೋಹಿತನು ಗ್ರಹ, ನಕ್ಷತ್ರಗಳಿಗೂ ಪೂಜೆಯನ್ನು ನೆರವೇರಿಸಬೇಕು. ಅನಂತರ ಆ ಪುರೋಹಿತನೇ ಶಾಂತಮನಸ್ಕನಾಗಿ ಅಗ್ನಿಯಲ್ಲಿ ಹೋಮವನ್ನೂ ಮಾಡಬೇಕು. ಇಷ್ಟದೇವತೆಗಳಿಗೆಲ್ಲರಿಗೂ ಅವರವರ ನಾಮ ಚಿಹ್ನೆಯಿಂದ ಕೂಡಿದ ಮಂತ್ರಗಳಿಂದಲೂ ಅಂತಹ ಮಂತ್ರಗಳಲ್ಲಿ ಚಿಹ್ನೆಗಳನ್ನು ಹೊಂದದಿರುವ ಇತರ ದೇವತೆಗಳಿಗೆ ಪ್ರಣವದಿಂದಲೂ ಹೋಮಮಾಡಬೇಕು.

ಯಥಾಭಿಮತದೇವಾನಾಂ ಮಂತ್ರೈಸ್ತಲ್ಲಿಂಗಸಂಜ್ಞಕಂ ।
ತಥಾ ಚ ಮಂತ್ರಹೀನಾನಾಂ ಪ್ರಣವೇನ ಮಹಾಭುಜ　　　　|| ೧೫ ||

ಸಮಿಧಃ ಕ್ಷೀರವೃಕ್ಷಾಣಾಂ ತಥಾ ಸಿದ್ಧಾರ್ಥಕಾನಿ ಚ ।
ಘೃತಂ ತಿಲಾಂಶ್ಚ ಧರ್ಮಜ್ಞ ತಥಾ ಚೈವಾಕ್ಷತಾನಿ ಚ　　　　|| ೧೬ ||

ಹುತ್ವಾ ಚ ಕಲಶಾನ್ ಕುರ್ಯಾತ್ಪ್ತೋದಕಾನ್ ಗಂಧಸಂಯುತಾನ್ ।
ಪೂಜಿತಾನ್ ಮಾಲ್ಯಗಂಧೈಶ್ಚ ವನಸ್ಪತಿವಿಭೂಷಿತಾನ್　　　　|| ೧೭ ||

ಪಂಚರಂಗಕಸೂತ್ರೇಣ ಕುರ್ಯಾದ್ವಸ್ತ್ರಗತಾಂಸ್ತಥಾ ।
ಭಲ್ಲಾತಶಾಲಿಸಿದ್ಧಾರ್ಥಾ ವಚಾಕುಷ್ಠಪ್ರಿಯಂಗವಃ　　　　|| ೧೮ ||

ತೋರಣಾತ್ಪಶ್ಚಿಮೇ ಭಾಗೇ ಕಲಶೈಃ ಪೂರ್ವಕಲ್ಪಿತೈಃ ।
ತತಃ ಸಂಸ್ನಾಪನೀಯಾಃ ಸ್ಯು ಮಂತ್ರಪೂತೈಃ ಗಜೋತ್ತಮಾಃ　　　　|| ೧೯ ||

ತುರಗಾಂಶ್ಚ ಮಹಾಭಾಗ ಚಾಲಂಕೃತ್ಯ ತತಸ್ತುತಾನ್ ।
ತತೋಭಿಷಿಕ್ತನಾಗಸ್ಯ ತಥಾ ತತ್ತುರಗಸ್ಯ ಚ　　　　|| ೨೦ ||

---

೧೬–೧೭. ಆ ಹೋಮಕ್ಕೆ ಹಾಲಿನಿಂದ ಕೂಡಿರುವ ಆಲ, ಅತ್ತಿ ಮುಂತಾದ ಮರಗಳ ಸಮಿತ್ತುಗಳನ್ನೂ, ಬಿಳಿಯ ಸಾಸವೆಯನ್ನೂ, ಆಜ್ಯ, ಎಳ್ಳು, ಅಕ್ಷತೆ, ಇವನ್ನು ಉಪಯೋಗಿಸಬೇಕು. ಹೋಮಮಾಡಿದನಂತರ ಕಲಶಗಳನ್ನು ಸ್ಥಾಪಿಸಬೇಕು. ಆ ಕಲಶಗಳು ಜಲದಿಂದ ತುಂಬಿಯೂ. ಗಂಧದಿಂದಲೂ, ಸುಗಂಧಿಯಾದ ಹೂಮಾಲಿಕೆಗಳಿಂದಲೂ ಪೂಜಿಸಲ್ಪಟ್ಟು ಮೇಲ್ಭಾಗದಲ್ಲಿ ಮಾವಿನ ಚಿಗುರುಗಳಿಂದ ಅಲಂಕರಿಸಲ್ಪಟ್ಟಿರಬೇಕು. ಐದು ವರ್ಣದ ಸೂತ್ರಗಳಿಂದ ಆ ಕಲಶಗಳಿಗೆ ವಸ್ತ್ರಗಳನ್ನೂ ಮಾಡಿ ಧರಿಸಬೇಕು.

೧೮–೨೦. ಗೇರುಬೀಜ, ಸಣ್ಣಭತ್ತ, ಬಿಳಿಯ ಸಾಸವೆ, ಬಜೆ, ಚಂಗಲ್ ಕೋಷ್ಠ, ನವಣೆ ಇವನ್ನು ಆ ಕಲಶಗಳಲ್ಲಿ ಹಾಕಬೇಕು. ಈ ರೀತಿ ಆ ಹೆಬ್ಬಾಗಿಲಿನಿಂದ ಪಶ್ಚಿಮದಿಕ್ಕಿನಲ್ಲಿ ಪ್ರತಿಷ್ಠಿಸಲಾಗಿರುವ ಕಲಶಗಳಿಂದ ಮಂತ್ರಪೂರ್ವಕವಾಗಿ ಆನೆಗಳನ್ನು ಸ್ನಾನಮಾಡಿಸಬೇಕು. ಇದೇ ರೀತಿ ರಾಜಾಶ್ವಗಳನ್ನೂ ಸ್ನಾನಮಾಡಿಸಿ ಅವುಗಳನ್ನೆಲ್ಲಾ ಆಭರಣಗಳಿಂದ ಅಲಂಕರಿಸಬೇಕು.

ಅನ್ನಪಿಂಡಂ ತತೋ ದೇಯಮಭಿಮಂತ್ರ್ಯ ಪುರೋಧಸಾ ।
ತಸ್ಯಾಭಿನಂದನೇ ರಾಜ್ಞೋ ವಿಜಯಃ ಪರಿಕೀರ್ತಿತಃ ॥ ೨೧ ॥

ತ್ಯಾಗೇ ಚ ತಸ್ಯ ವಿಜ್ಞೇಯಂ ಮಹದ್ಭಯಮುಪಸ್ಥಿತಂ ।
ನಿಷ್ಕ್ರಾಮಯೇತ್ತೋರಣೈಸ್ತು ತತೋ ಹಿ ಪ್ರಥಮಂ ಗಜಾನ್ ॥ ೨೨ ॥

ತತ್ರಾಪಿ ಪ್ರಥಮಂ ರಾಮ ಅಭಿಷಿಚ್ಯ ಗಜೋತ್ತಮಂ ।
ತಸ್ಯಾದೌ ಶತಸಾಶೀಂ ತು ನರಃ ಪಂಚನಖೋಪಿ ವಾ ॥ ೨೩ ॥

ಅಥಹ್ಯನ್ಯೋ ಲಂಘಯೇತ್ತಾಂ ರಾಜ್ಞೋ ಮರಣಮಾದಿಶೇತ್ ।
ದುರ್ಭಿಕ್ಷಂ ತತ್ರ ವಿಜ್ಞೇಯಂ ಗೋಖರೋಷ್ಟ್ರೈಶ್ಚ ಲಂಘನೇ ॥ ೨೪ ॥

ಲಂಘಯೇದ್ವಾಮಪಾದೇನ ಯದಿತಾಂ ನೃಪಕುಂಜರಃ ।
ರಾಜಾ ಪುರೋಹಿತಾಮಾತ್ಯರಾಜಪುತ್ರಹಿತಂ ಭವೇತ್ ॥ ೨೫ ॥

---

೨೧–೨೨. ಹೀಗೆ ಅಲಂಕರಿಸಲ್ಪಟ್ಟ ಆನೆ, ಕುದುರೆ ಇವುಗಳಿಗೆ ಪುರೋಹಿತನು ಅನ್ನದ ಉಂಡೆಯನ್ನು ಅಭಿಮಂತ್ರಿಸಿ ಕೊಡಬೇಕು. ಆ ಅನ್ನವನ್ನು ಅವು ಪ್ರೀತಿಯಿಂದ ಸೇವಿಸಿದಲ್ಲಿ ರಾಜನಿಗೆ ವಿಜಯವುಂಟಾಗುತ್ತದೆ. ಎಂದು ಹೇಳಲ್ಪಟ್ಟಿದೆ. ಅವು ಹಾಗೆ ಸ್ವೀಕರಿಸದೆ ಪರಿತ್ಯಾಗಮಾಡಿದಲ್ಲಿ ರಾಜನಿಗೆ ಮಹಾಭಯವು ಸನ್ನಿಹಿತವಾಗಿದೆ ಎಂದು ತಿಳಿಯಬೇಕು. ಅನಂತರ ಆ ಹೆಬ್ಬಾಗಿಲಿನಿಂದ ಮೊದಲು ಆನೆಗಳನ್ನು ಹೊರಕ್ಕೆ ಹೊರಡಿಸಬೇಕು. ಅದರಲ್ಲಿಯೂ ಮುಖ್ಯವಾದ ರಾಜಗಜವನ್ನು (ಪಟ್ಟದಾನೆ) ಅಭಿಷೇಕಮಾಡಿ ಮೊದಲು ಹೊರಡಿಸಬೇಕು ಅನಂತರ ಇತರ ಆನೆಗಳಿಗೆ ಅವಕಾಶ.

೨೩–೨೫. ಆ ಆನೆಯು ನೂರು ಗ್ರಂಥಿಗಳುಳ್ಳ ಆ ಸೂತ್ರವನ್ನು ದಾಟುವುದಕ್ಕಿಂತ ಮೊದಲು ಮನುಷ್ಯನೇ ಆಗಲಿ ಇತರ ಪಂಚನಖಗಳುಳ್ಳ ಪ್ರಾಣಿಯೇ ಆಗಲಿ ಅದನ್ನು ದಾಟಿದಲ್ಲಿ ರಾಜನಿಗೆ ಮರಣವೇ ಉಂಟಾಗುತ್ತದೆ ಎಂದು ಹೇಳಬೇಕು. ಹಸು, ಕತ್ತೆ, ಒಂಟೆ ಮುಂತಾದುವು ಮೊದಲು ದಾಟಿದಲ್ಲಿ ದೇಶದಲ್ಲಿ ದುರ್ಭಿಕ್ಷವುಂಟಾಗುತ್ತದೆ. ಆ ಪ್ರಧಾನವಾದ ಆನೆಯೂ ಸಹ ಅದನ್ನು ದಾಟುವಾಗ ಎಡಗಾಲನ್ನು ಮುಂದಿಟ್ಟು ದಾಟಿದ್ದೇ ಆದರೆ ರಾಜಪುರೋಹಿತರಿಗೂ ಮಂತ್ರಿಗಳಿಗೂ ರಾಜಪುತ್ರರಿಗೂ ಹಿತವುಂಟಾಗುತ್ತದೆ ಎಂದು ತಿಳಿಯಬೇಕು.

ರಾಜ್ಞಸ್ತು ಮರಣಂ ಬ್ರೂಯಾದಾಕ್ರಮೇತ್ತಂ ಯದಾಪರಃ ।
ರಾಜ್ಞೋಽಪಿ ಜಯಮಾಚಷ್ಟೇ ಲಂಘಯೇನ್ ದಕ್ಷಿಣೇನ ತಾಂ ॥ ೨೬ ॥

ರಾಜಹಸ್ತಿನಿ ನಿಷ್ಕ್ರಾಂತೇ [1]ಸಾತ್ವೆಯಾಸ್ಯಾತ್ತದಾ ಭವೇತ್ ।
ನಿಷ್ಕ್ರಾಮೇಯುಃ ತತಃ ಸರ್ವೇ ಪ್ರಾಙ್ಮುಖಾಸ್ತೋರಣೈರ್ಗಜಾಃ ॥ ೨೭ ॥

ತತೋಽಸ್ತ್ರಾಃ ಸುಮಹಾಭಾಗ ತತಸ್ತು ನರಸತ್ತಮ ।
ತತಃ ಛತ್ರಂ ಧ್ವಜಶ್ಚೈವ ರಾಜಲಿಂಗಾನಿ ಯಾನಿ ಚ ॥ ೨೮ ॥

ಆಶ್ರಮೇ ತಾನಿ ಸಂಸ್ಥಾಪ್ಯ ಪೂಜಯೇದಾಯುಧಾನಿ ಚ ।
ಪಂಚರಂಗಕಸೂತ್ರೇಣ ಯಾಸ್ತಾಃ ಪ್ರತಿಸರಾಃ ಕೃತಾಃ ॥ ೨೯ ॥

ದೂಷ್ಯಾದ್ದೂಷ್ಯೇತಿಮಂತ್ರೇಣ ನಿಬಧ್ನೀಯಾತ್ಪುರೋಹಿತಃ ।
ಸರ್ವೇಷಾಂ ನೃಪನಾಗಾನಾಂ ತುರಗಾಣಾಂ ಚ ಭಾರ್ಗವ ॥ ೩೦ ॥

ಸ್ವಗೃಹೇಷು ತತೋ ನೇಯಾಃ ಕುಂಜರಾಸ್ತುರಗೈಸ್ಸಹ ।
ಸ್ವಾತಿಸ್ಥಃ ಸವಿತಾ ಯಾವತ್ತಾವಚ್ಛಾಯಾಸು ಸಂಸ್ಥಿತಾನ್ ॥ ೩೧ ॥

---

೨೬–೨೭. ಇತರರು ಅದನ್ನು ಮೊದಲು ದಾಟಿದಲ್ಲಿ ರಾಜನಿಗೆ ಮರಣವುಂಟಾಗುತ್ತದೆ ಎಂದು ಹೇಳಬೇಕು. ಆ ಆನೆಯು ಬಲಗಾಲಿನಿಂದ ಮೊದಲು ದಾಟಿದ್ದೇ ಆದರೆ ಅದು ರಾಜನಿಗೆ ವಿಜಯಸೂಚಕವಾಗುತ್ತದೆ. ಆ ರಾಜಗಜವು ದಾಟಿ ಹೊರಟನಂತರ ಇತರ ಆನೆಗಳೆಲ್ಲವೂ ಪೂರ್ವಾಭಿಮುಖವಾಗಿ ಆ ಬಾಗಿಲಿನಿಂದ ಹೊರಗೆ ಹೊರಡಬೇಕು.

೨೮–೩೦ ಅನಂತರ ಅಸ್ತ್ರಗಳನ್ನೂ ಛತ್ರ, ಧ್ವಜ ಮುಂತಾದುವನ್ನೂ ರಾಜ ಬಿರುದಾವಳಿಗಳನ್ನೂ ಆ ಬಾಗಿಲಿನಿಂದ ಹೊರಕ್ಕೆ ತರಬೇಕು. ಆಶ್ರಮದಲ್ಲಿ ಆ ಆಯುಧಗಳನ್ನೆಲ್ಲಾ ಇಟ್ಟು ಪೂಜಿಸಬೇಕು. ಅನಂತರ ಐದು ಬಣ್ಣದ ಸೂತ್ರಗಳಿಂದ ಮಾಡಲ್ಪಟ್ಟಿದ್ದ ಕಂಕಣಗಳನ್ನು ಪುರೋಹಿತನು ದೂಷ್ಯಾದ್ದೂಷ್ಯ ಎಂಬ ಮಂತ್ರದಿಂದ ಧೊರೆಯ ಆನೆ ಕುದುರೆಗಳಿಗೆಲ್ಲಾ ಕಟ್ಟಬೇಕು.

೩೧–೩೩ ಅನಂತರ ಆ ಆನೆಗಳನ್ನೆಲ್ಲಾ ಕುದುರೆಗಳೊಡನೆ ಅವುಗಳ ವಾಸಸ್ಥಾನಕ್ಕೆ ಒಯ್ಯಬೇಕು. ಅಲ್ಲಿ ಅವುಗಳನ್ನು ನೆರಳಿನಲ್ಲಿ ಕಟ್ಟಿ ಸ್ವಾತೀನಕ್ಷತ್ರದಲ್ಲಿ

1 ಇಲ್ಲಿ ಪಾಠವು ಅಶುದ್ಧವಾಗಿದೆ.

ಪೂಜಯೇತ್ಸತತಂ ರಾಮ ನಾಕ್ರೋಶೇನ್ನ ಚ ತಾಡಯೇತ್ |
ರಾಜಚಿಹ್ನಾನಿ ಸರ್ವಾಣಿ ಪೂಜಯೇದಾಶ್ರಮೇ ಸದಾ || ೩೨ ||

ಪೂಜಯೇದ್ವರುಣಂ ನಿತ್ಯಂ ತಥಾಪ್ಸು ವಿಧಿವದ್ದ್ವಿಜ |
ಭೂತೇಜ್ಯಾ ಚ ತಥಾ ಕಾರ್ಯಾ ರಾತ್ರೌ ಬಲಿಭಿರುತ್ತಮೈಃ || ೩೩ ||

ಆಶ್ರಮಂ ರಕ್ಷಣೀಯಂ ಸ್ಯಾತ್ಪುರುಷೈಃ ಶಸ್ತ್ರಪಾಣಿಭಿಃ |
ವಸೇತಾವಾಶ್ರಮೇ ನಿತ್ಯಂ ಸಾಂವತ್ಸರಪುರೋಹಿತೌ || ೩೪ ||

ಅಶ್ವವೈದ್ಯಪ್ರಧಾನಾಶ್ಚ ತಥಾ ನಾಗಭಿಷಗ್ವರಃ |
ದೀಕ್ಷಿತೈಸ್ತೈಸ್ತಥಾ ಭಾವ್ಯಂ ಬ್ರಹ್ಮಚಾರಿಭಿರೇವ ಚ || ೩೫ ||

ಸ್ವಾತಿಂ ತ್ಯಕ್ತ್ವಾ ಯದಾ ಸೂರ್ಯೋ ವಿಶಾಖಾಂ ಪ್ರತಿಪದ್ಯತೇ |
ಅಲಂಕುರ್ಯಾದ್ದಿನೇ ತಸ್ಮಿನ್ ವಾಹನಾಂಶ್ಚ ವಿಶೇಷತಃ || ೩೬ ||

---

ಸೂರ್ಯನಿರುವವರಿಗೂ ಅವನ್ನು ಪೂಜಿಸಬೇಕು. ಅವನ್ನು ಗದರಿಸಬಾರದು, ಹೊಡೆಯಲೂ ಬಾರದು. ರಾಜನ ಬಿರುದಾವಳಿಗಳನ್ನೆಲ್ಲಾ ಆ ಆಶ್ರಮದಲ್ಲಿ ಯಾವಾಗಲೂ ಪೂಜಿಸುತ್ತಿರಬೇಕು. ನಿತ್ಯವೂ ವರುಣನನ್ನು ನೀರಿನಲ್ಲಿ ಯಥಾ ವಿಧಿಯಾಗಿ ಪೂಜಿಸಬೇಕು. ರಾತ್ರಿಯ ಕಾಲದಲ್ಲಿ ಭೂತಗಳನ್ನುದ್ದೇಶಿಸಿ ಉತ್ತಮವಾದ ಉಪಹಾರಾದಿಗಳಿಂದ ಪೂಜೆಯನ್ನೂ ನಡೆಸಬೇಕು.

೩೪–೩೬. ಅಲ್ಲಿರುವ ಆಶ್ರಮವನ್ನು ಶಸ್ತ್ರಧಾರಿಗಳಾದ ಪುರುಷರು ರಕ್ಷಿಸುತ್ತಿರಬೇಕು. ಜ್ಯೋತಿಷಿಕ ಮತ್ತು ಪುರೋಹಿತ, ಮುಖ್ಯನಾದ ಅಶ್ವವೈದ್ಯ, ಗಜವೈದ್ಯ ಇವರೆಲ್ಲರೂ ಆ ಆಶ್ರಮದಲ್ಲಿಯೇ ವಾಸಿಸುತ್ತಿರಬೇಕು. ಅವರು ಬ್ರಹ್ಮಚರ್ಯದಿಂದಲೂ, ಯಜ್ಞದೀಕ್ಷೆಯ ನಿಯಮದಿಂದಲೂ ಕೂಡಿರಬೇಕು. ಸ್ವಾತೀ ನಕ್ಷತ್ರವನ್ನು ಬಿಟ್ಟು ಸೂರ್ಯನು ಯಾವಾಗ ವಿಶಾಖಾ ನಕ್ಷತ್ರಕ್ಕೆ ಪ್ರವೇಶಿಸುತ್ತಾನೆಯೋ ಆ ದಿನದಲ್ಲಿ ಎಲ್ಲಾ ವಾಹನಗಳನ್ನೂ ವಿಶೇಷ ರೀತಿಯಿಂದ ಅಲಂಕರಿಸಬೇಕು.

ಪೂಜಿತಾ ರಾಜಲಿಂಗಾಶ್ಚ ಕರ್ತವ್ಯಾ ನರಹಸ್ತಗಾಃ ।
ಹಸ್ತಿನಂ ತುರಗಂ ಛತ್ರಂ ಖಡ್ಗಂ ವಾ ಪಂಚ ದುಂದುಭಿಂ ॥ ೩೭ ॥

ಧ್ವಜಂ ಪತಾಕಾಂ ಧರ್ಮಜ್ಞ ಕಾಲಜ್ಞಸ್ತ್ವಭಿಮಂತ್ರಯೇತ್ ।
ಅಭಿಮಂತ್ರ್ಯ ತತಃ ಸರ್ವಾನ್ ಕುರ್ಯಾತ್ಕುಂಜರಧೂರ್ಗತಾಂ ॥ ೩೮ ॥

ಕುಂಜರೋಪರಿಗೌ ಸ್ಯಾತಾಂ ಸಾಂವತ್ಸರಪುರೋಹಿತೌ ।
ಅಶ್ವವೈದ್ಯಪ್ರಧಾನಶ್ಚ ತಥಾ ನಾಗಭಿಷಗ್ವರಃ ॥ ೩೯ ॥

ತತೋಽಭಿಮಂತ್ರಿತಂ ರಾಜಾ ಸಮಾರುಹ್ಯ ತುರಂಗಮಂ ।
ನಿಷ್ಕ್ರಮ್ಯ ತೋರಣೇ ನಾಗಮಭಿಮಂತ್ರ್ಯ ಸಮಾರುಹೇತ್ ॥ ೪೦ ॥

ತೋರಣೇನ ವಿನಿಷ್ಕ್ರಮ್ಯ ಕುರ್ಯಾತ್ಸುರವಿಸರ್ಜನಂ ।
ಬಲಿಂ ವಿಸೃಜ್ಯ ವಿಧಿವದ್ರಾಜಾ ಕುಂಜರಧೂರ್ಗತಃ ॥ ೪೧ ॥

---

೩೭-೩೯. ಹಾಗೆ ಪೂಜಿಸಿರುವ ರಾಜನ ಬಿರುದುಗಳನ್ನೆಲ್ಲಾ ಸೇವಕರು ಕೈಯಲ್ಲಿ ಹಿಡಿದು ನಿಲ್ಲಬೇಕು. ಆಗ ಆನೆ, ಕುದುರೆ, ಛತ್ರಿ, ಖಡ್ಗ, ಐದು ದುಂದುಭಿಗಳು, ಧ್ವಜ, ಬಾವುಟ ಇವುಗಳನ್ನೆಲ್ಲಾ ಜ್ಯೋತಿಷಿಕನು ಮಂತ್ರಿಸಬೇಕು. ಹೀಗೆ ಅಭಿಮಂತ್ರಿಸಲ್ಪಟ್ಟ ಛತ್ರ ಚಾಮರಾದಿಗಳನ್ನೆಲ್ಲಾ ಆನೆಯ ಮೇಲೆ ಇಡಬೇಕು. ಜ್ಯೋತಿಷಿಕ ಮತ್ತು ಪುರೋಹಿತ ಇವರು ಆ ಆನೆಯ ಮೇಲೆ ಕೂಡಬೇಕು.

೪೦-೪೪ ಅನಂತರ ರಾಜನು ಅಭಿಮಂತ್ರಿಸಲ್ಪಟ್ಟ ಕುದುರೆಯನ್ನೇರಿ ಎರಡು ಹೆಬ್ಬಾಗಿಲನ್ನೂ ದಾಟಿ ಆನೆಯನ್ನು ಅಭಿಮಂತ್ರಿಸಿ ಅಲ್ಲಿ ಅದರ ಮೇಲೆ ಕೂಡಬೇಕು. ಆ ಆನೆಯ ಮೇಲೆ ಕುಳಿತು ಮತ್ತೊಂದು ಹೆಬ್ಬಾಗಿಲನ್ನು ದಾಟಿ ಅನಂತರ ಅಲ್ಲಿ ಪೂಜಿಸಲ್ಪಟ್ಟಿರುವ ದೇವತೆಗಳನ್ನು ಉದ್ವಾಸನ ಮಾಡಬೇಕು.

ಪೂಜಿತಾ ರಾಜಲಿಂಗಾಶ್ಚ ಕರ್ತವ್ಯಾ ನರಹಸ್ತಗಾಃ ।
ಹಸ್ತಿನಂ ತುರಗಂ ಛತ್ರಂ ಖಡ್ಗಂ ವಾ ಪಂಚ ದುಂದುಭಿಂ ॥ ೩೭ ॥

ಧ್ವಜಂ ಪತಾಕಾಂ ಧರ್ಮಜ್ಞಾ ಕಾಲಜ್ಞಸ್ತ್ವಭಿಮಂತ್ರಯೇತ್ ।
ಅಭಿಮಂತ್ರ್ಯ ತತಃ ಸರ್ವಾನ್ ಕುರ್ಯಾತ್ಕುಂಜರಧೂರ್ಗತಾಂ ॥ ೩೮ ॥

ಕುಂಜರೋಪರಿಗೌ ಸ್ಯಾತಾಂ ಸಾಂವತ್ಸರಪುರೋಹಿತೌ ।
ಅಶ್ವವೈದ್ಯಪ್ರಧಾನಶ್ಚ ತಥಾ ನಾಗಭಿಷಗ್ವರಃ ॥ ೩೯ ॥

ತತೋಽಭಿಮಂತ್ರಿತಂ ರಾಜಾ ಸಮಾರುಹ್ಯ ತುರಂಗಮಂ ।
ನಿಷ್ಕ್ರಮ್ಯ ತೋರಣೇ ನಾಗಮಭಿಮಂತ್ರ್ಯ ಸಮಾರುಹೇತ್ ॥ ೪೦ ॥

ತೋರಣೇನ ವಿನಿಷ್ಕ್ರಮ್ಯ ಕುರ್ಯಾತ್ಸುರವಿಸರ್ಜನಂ ।
ಬಲಿಂ ವಿಸೃಜ್ಯ ವಿಧಿವದ್ರಾಜಾ ಕುಂಜರಧೂರ್ಗತಃ ॥ ೪೧ ॥

---

೩೭-೩೯. ಹಾಗೆ ಪೂಜಿಸಿರುವ ರಾಜನ ಬಿರುದುಗಳನ್ನೆಲ್ಲಾ ಸೇವಕರು ಕೈಯಲ್ಲಿ ಹಿಡಿದು ನಿಲ್ಲಬೇಕು. ಆಗ ಆನೆ, ಕುದುರೆ, ಛತ್ರಿ, ಖಡ್ಗ, ಐದು ದುಂದುಭಿಗಳು, ಧ್ವಜ, ಬಾವುಟ ಇವುಗಳನ್ನೆಲ್ಲಾ ಜ್ಯೋತಿಷಿಕನು ಮಂತ್ರಿಸಬೇಕು. ಹೀಗೆ ಅಭಿಮಂತ್ರಿಸಲ್ಪಟ್ಟ ಛತ್ರ ಚಾಮರಾದಿಗಳನ್ನೆಲ್ಲಾ ಆನೆಯ ಮೇಲೆ ಇಡಬೇಕು. ಜ್ಯೋತಿಷಿಕ ಮತ್ತು ಪುರೋಹಿತ ಇವರು ಆ ಆನೆಯ ಮೇಲೆ ಕೂಡಬೇಕು.

೪೦-೪೪ ಅನಂತರ ರಾಜನು ಅಭಿಮಂತ್ರಿಸಲ್ಪಟ್ಟ ಕುದುರೆಯನ್ನೇರಿ ಎರಡು ಹೆಬ್ಬಾಗಿಲನ್ನೂ ದಾಟಿ ಆನೆಯನ್ನು ಅಭಿಮಂತ್ರಿಸಿ ಅಲ್ಲಿ ಅದರ ಮೇಲೆ ಕೂಡಬೇಕು. ಆ ಆನೆಯ ಮೇಲೆ ಕುಳಿತು ಮತ್ತೊಂದು ಹೆಬ್ಬಾಗಿಲನ್ನು ದಾಟಿ ಅನಂತರ ಅಲ್ಲಿ ಪೂಜಿಸಲ್ಪಟ್ಟಿರುವ ದೇವತೆಗಳನ್ನು ಉದ್ವಾಸನ ಮಾಡಬೇಕು.

ಧನ್ಯಾ ಯಶಸ್ಯಾ ರಿಪುನಾಶನೀ ಚ
ಸುಖಾವಹಾ ಶಾಂತಿರನುತ್ತಮಾ ಚ ।
ಕಾರ್ಯಾ ನೃಪೈಃ ರಾಷ್ಟ್ರವಿವೃದ್ಧಿಹೇತೋಃ
ಸರ್ವಪ್ರಯತ್ನೇನ ಭೃಗುಪ್ರವೀರ || ೪೭ ||

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ನೀರಾಜನಶಾಂತಿವರ್ಣನೋನಾಮ
ಏಕೋನಷಷ್ಟ್ಯುತ್ತರಶತತಮೋಽಧ್ಯಾಯಃ

---

ಧನಪ್ರದವೂ, ಯಶಸ್ಕರವೂ, ಶತ್ರುನಾಶಕವೂ, ಸುಖಕರವೂ ಆದ ಅತ್ಯುತ್ತಮವಾದ ಶಾಂತಿ. ಈ ಶಾಂತಿಯನ್ನು ದೇಶಾಭಿ ವೃದ್ಧಿಗಾಗಿ ಸರ್ವಪ್ರಯತ್ನದಿಂದಲೂ ಮಾಡಲೇಬೇಕು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ
ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ
ನಿರಾಜನಶಾಂತಿವರ್ಣನವೆಂಬ ನೂರ ಐವತ್ತೊಂಭತ್ತನೆಯ
ಅಧ್ಯಾಯವು ಮುಗಿದಿದೆ.



|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಷಷ್ಟ್ಯುತ್ತರಶತತಮೋಽಧ್ಯಾಯಃ

**|| ರಾಮ ಉವಾಚ ||**

**ಛತ್ರಾಣಾಂ ಕೇತುಕರಿಣಾಂ ಪತಾಕಾಖಡ್ಗಚರ್ಮಣಾಂ ।**
**ತಥಾ ದುಂದುಭಿಚಾಪಾನಾಂ ಬ್ರೂಹಿಮಂತ್ರಾನ್ಮಮಾನಘ || ೧ ||**

**|| ಪುಷ್ಕರ ಉವಾಚ ||**

**ಶೃಣು ಮಂತ್ರಾನ್ಮಹಾಭಾಗ ಭಗವಾನ್ಯಾನ್ ಪರಾಶರಃ ।**
**ಗಾಲವಾಯ ಪುರೋವಾಚ ಸರ್ವಧರ್ಮಭೃತಾಂ ವರಃ || ೨ ||**

---

### ನೂರ ಅರವತ್ತನೆಯ ಅಧ್ಯಾಯ.

೧. ಭಾರ್ಗವನು ಪ್ರಶ್ನೆಮಾಡುತ್ತಾನೆ:—ರಾಜನ ಛತ್ರಗಳಿಗೂ, ಧ್ವಜ, ಆನೆ, ಬಾವುಟ, ಖಡ್ಗ, ಗುರಾಣಿ, ಮತ್ತು ದುಂದುಭಿ, ಧನಸ್ಸು ಇವುಗಳಿಗೂ ಸಹ ವಿಧಿವಿಹಿತವಾದ ಮಂತ್ರಗಳಾವುವು ಎಂಬುದನ್ನು ದಯವಿಟ್ಟು ಹೇಳಬೇಕು. ಈ ಪ್ರಶ್ನೆಗೆ ಉತ್ತರವಾಗಿ ಪುಷ್ಕರನು ಹೇಳುತ್ತಾನೆ.

೨–೩. ಎಲೈ ಭಾಗ್ಯಶಾಲಿಯೇ ಕೇಳು. ಧಾರ್ಮಿಕಾಗ್ರೇಸರನಾಗಿಯೂ, ಪೂಜ್ಯನಾಗಿಯೂ ಇರುವ ಪರಾಶರಮುನಿಯು ಪೂರ್ವದಲ್ಲಿ ಗಾಲವನಿಗೆ ಯಾವ ಮಂತ್ರಗಳನ್ನು ಉಪದೇಶಮಾಡಿದನೋ ಅಂತಹ ಆ ಮಂತ್ರಗಳನ್ನು ಈಗ ನಿನಗೆ ಹೇಳುತ್ತೇನೆ.

|| ಪರಾಶರ ಉವಾಚ ||

ಯಥಾಂಬುದಃ ಛಾದಯತಿ ಶಿವಾಯೇಮಾಂ ವಸುಂಧರಾಂ |
ತಥಾಚ್ಛಾದಯ ರಾಜಾನಂ ವಿಜಯಾರೋಗ್ಯವೃದ್ಧಯೇ || ೩ ||

|| ಇತಿ ಛತ್ರಮಂತ್ರಃ ||

|| ಪರಾಶರ ಉವಾಚ ||

ಗಂಧರ್ವಕುಲರಾಜಸ್ತ್ವಂ ಮಾಭೂಯಾಃ ಕುಲದೂಷಕಃ |
ಬ್ರಾಹ್ಮಣಃ ಸತ್ಯವಾಕ್ಯೇನ ಸೋಮಸ್ಯ ವರುಣಸ್ಯ ಚ || ೪ ||

ಪ್ರಭಾವಶ್ಚ ಹುತಾಶಸ್ಯ ಭವಸ್ಯ ತ್ವಂ ತುರಂಗಮ |
ತೇಜಸಾ ಚೈವ ಸೂರ್ಯಸ್ಯ ಮುನೀನಾಂ ತಪಸಾ ತಥಾ || ೫ ||

ರುದ್ರಸ್ಯ ಬ್ರಹ್ಮಚರ್ಯೇಣ ಪವನಸ್ಯ ಬಲೇನ ಚ |
ಸ್ಮರ ತ್ವಂ ರಾಜಪುತ್ರೋsಸಿ ಕೌಸ್ತುಭಂ ಚ ಮಣಿಂ ಸ್ಮರ || ೬ ||

---

ಪರಾಶರರು ಹೇಳುತ್ತಾರೆ. ಮೇಘಪಙ್ಕ್ತಿಯು ಜಗತ್ತಿನ ಕ್ಷೇಮಕ್ಕಾಗಿ ಈ ಭೂಮಿಯನ್ನು ಹೇಗೆ ಆಚ್ಛಾದಿಸುತ್ತದೆಯೋ ಹಾಗೆಯೇ ವಿಜಯ ಮತ್ತು ಆರೋಗ್ಯ ಇವುಗಳ ಅಭಿವೃದ್ಧಿಗಾಗಿ ಈ ರಾಜನನ್ನೂ ನೀನು ಆಚ್ಛಾದಿಸಿ ರಕ್ಷಿಸು (ಎಂದು ಛತ್ರಿಯ ಮಂತ್ರದ ಅರ್ಥ.

|| ಇಲ್ಲಿಗೆ ಛತ್ರಮಂತ್ರ ಮುಗಿದಿದೆ ||

೪–೯. ಪರಾಶರರು ಅಶ್ವಮಂತ್ರವನ್ನು ಹೇಳುತ್ತಾರೆ. ಎಲೈ ಅಶ್ವವೇ, ಗಂಧರ್ವ ವಂಶಕ್ಕೆ ರಾಜನಾದ ನೀನು ಕುಲದೂಷಕನಾಗಿ ಆಗಬೇಡ. ಸತ್ಯಸಂಧನಾದ ಬ್ರಹ್ಮನ ವಾಕ್ಯದಿಂದ ನೀನು ಚಂದ್ರ, ವರುಣ, ಅಗ್ನಿ, ರುದ್ರ ಇವರ ಪ್ರಭಾವವನ್ನು ಹೊಂದಿದ್ದೀಯೆ ಮತ್ತು ಸೂರ್ಯನ ತೇಜಸ್ಸಿನಿಂದಲೂ, ಮಹರ್ಷಿಗಳ ತಪಸ್ಸಿನಿಂದಲೂ, ರುದ್ರದೇವನ ಬ್ರಹ್ಮಚರ್ಯದಿಂದಲೂ, ವಾಯುವಿನ ಬಲದಿಂದಲೂ ಸಹ ಕೂಡಿದ್ದೀಯೆ, ಸಮುದ್ರರಾಜಪುತ್ರನಾದ ನೀನು ನಿನ್ನ ಈ ಸ್ವರೂಪವನ್ನು ಸ್ಮರಿಸಿಕೋ ನಿನ್ನ ಸಹೋದರನಾದ ಕೌಸ್ತುಭ ಮಣಿಯನ್ನೂ ಸ್ಮರಿಸಿಕೋ. ಎಲೈ ಅಶ್ವವೇ ಯುದ್ಧವ್ಯಾಪಾರದಲ್ಲಿ ಆಸಕ್ತರಾದ ನಮ್ಮ ವಿಷಯದಲ್ಲಿ ನೀನು ಯಾವ ವಿಧವಾದ ಮನೋವಿಕಾರವನ್ನೂ ಹೊಂದದೆ ಆ ಯುದ್ಧದಲ್ಲಿ ಶತ್ರುಗಳನ್ನು ಜಯಿಸಿ

ಯಾಂ ಗತಿಂ ಬ್ರಹ್ಮಹಾ ಗಚ್ಛೇತ್ಪಿತೃಹಾ ಮಾತೃಹಾ ತಥಾ
ಭೂಮ್ಯರ್ಥೇऽನೃತವಾದೀ ಚ ಕ್ಷತ್ರಿಯಶ್ಚ ಪರಾಙ್ಮುಖಃ || ೭ ||

ಸೂರ್ಯಾಚಂದ್ರಮಸೌ ವಾಯುಃ ಯಾವತ್ಪಶ್ಯಂತಿ ದುಷ್ಕೃತಂ |
ವ್ರಜೇತ್ತೇಷಾಂ ಗತಿಂ ಕ್ಷಿಪ್ರಂ ತಚ್ಚ ಪಾಪಂ ಭವೇತ್ತವ || ೮ ||

ವಿಕೃತಿಂ ಯದಿ ಗಚ್ಛೇಸ್ತ್ವಂ ಯುದ್ಧೇಧ್ವನಿ ತುರಂಗಮ |
ರಿಪೂನ್ವಿಜಿತ್ಯ ಸಮರೇ ಸಹ ಭರ್ತ್ರಾ ಸುಖೀ ಭವ || ೯ ||

|| ಇತ್ಯಶ್ವಮಂತ್ರಃ ||

|| ಪರಾಶರ ಉವಾಚ ||

ಶಕ್ರಕೇತೋ ಮಹಾವೀರ ಸುಪರ್ಣಸ್ತ್ವಾಮುಪಾಶ್ರಿತಃ |
ಪತತ್ರಿರಾಟ್ ವೈನತೇಯಸ್ತಥಾ ನಾರಾಯಣಧ್ವಜಃ || ೧೦ ||

---

ಪ್ರಭುವಾದ ಧೊರೆಯೊಡನೆ ಸುಖಿಯಾಗಿರು, ಹಾಗಿಲ್ಲದೆ ಮನೋವಿಕಾರ ಹೊಂದಿ ನನಗೆ ಪ್ರತಿಕೂಲನಾದದ್ದೇ ಆದರೆ ಬ್ರಹ್ಮಹತ್ಯವನ್ನು ಮಾಡಿದವನು ಯಾವ ದುರ್ಗತಿಯನ್ನು ಹೊಂದುತ್ತಾನೆಯೋ ಹಾಗೆಯೇ ಪಿತೃಹತ್ಯ ಮಾಡಿದ ಮತ್ತು ಮಾತೃಹತ್ಯೆ ಮಾಡಿದ ಪುತ್ರನೂ, ಭೂಮಿಗಾಗಿ ಅನೃತವನ್ನು ಹೇಳಿದವನೂ, ಯುದ್ಧದಲ್ಲಿ ಪರಾಙ್ಮುಖನಾದ ಕ್ಷತ್ರಿಯನೂ ಸಹ ಯಾವ ದುರ್ಗತಿಯನ್ನು ಹೊಂದುತ್ತಾರೆಯೋ, ಅಂತಹ ದುರ್ಗತಿಯನ್ನು ಸೂರ್ಯ, ಚಂದ್ರ, ವಾಯು ಇವರುಗಳು ಸಾಕ್ಷಿಗಳಾಗಿರುವವರಿಗೂ ಆ ಪಾಪಿಗಳು ಅನುಭವಿಸಿಯೇ ಅನುಭವಿಸುವರೋ ಅಂತಹ ಅನಿವಾರ್ಯವಾದ ಪಾಪವು ನಿನಗೆ ಉಂಟಾದೀತು

|| ಇಲ್ಲಿಗೆ ಅಶ್ವಮಂತ್ರ ಮುಗಿದಿದೆ ||

೧೦-೧೨ ಪರಾಶರರು ಧ್ವಜಮಂತ್ರವನ್ನು ಹೇಳುತ್ತಾರೆ. ಎಲೈ ಶೂರನಾದ ಇಂದ್ರ ಧ್ವಜವೇ ನಿನ್ನ ಪುತ್ರರಾದ ಇತರ ಧ್ವಜಗಳನ್ನಾಶ್ರಯಿಸಿರುವ ಪಕ್ಷಿಶ್ರೇಷ್ಠ ನಾಗಿಯೂ, ವಿನಯತೆಯ ಪುತ್ರನಾಗಿಯೂ, ನಾರಾಯಣನ ಧ್ವಜವಾಗಿಯೂ, ಕಶ್ಯಪ ಪುತ್ರನಾಗಿಯೂ, ಅಮೃತವನ್ನು ಆಹರಣಮಾಡಿಯೂ, ಸರ್ಪಶತ್ರು ವಾಗಿಯೂ, ವಿಷ್ಣುವಾಹನನಾಗಿಯೂ, ಪ್ರಸಿದ್ಧಪರಾಕ್ರಮಿಯಾಗಿಯೂ, ವಾಯು

ಕಾಶ್ಯಪೇಯೋಽಮೃತಾಹರ್ತಾ ನಾಗಾರಿರ್ವಿಷ್ಣುವಾಹನಃ ।
ಅಪ್ರಮೇಯೋ ದುರಾಧರ್ಷೋ ರಣೇ ಚೈವಾರಿಸೂದನಃ　　॥ ೧೧ ॥

ಗರುತ್ಮಾನ್ ಮಾರುತಗತಿಃ ತ್ವಯಿ ಸನ್ನಿಹಿತಃ ಸ್ಥಿತಃ ।
ಸಾಶ್ವವರ್ಮಾಯುಧಾನ್ಯೋಧಾನ್ರಕ್ಷಾಸ್ಮಾಕಂ ಮಹದ್ರಿಪೂನ್　　॥ ೧೨ ॥

॥ ಇತಿ ಧ್ವಜಮಂತ್ರಃ ॥

॥ ಪರಾಶರ ಉವಾಚ ॥

ಕುಮುದೈರಾವಣೌ ಪದ್ಮಃ ಪುಷ್ಪದಂತೋಽಥ ವಾಮನಃ ।
ಸುಪ್ರತೀಕೋಂಽಜನೋ ನೀಲ ಏತೇಷ್ಟೌ ದೇವಯೋನಯಃ　　॥ ೧೩ ॥

ತೇಷಾಂ ಪುತ್ರಾಶ್ಚ ಪೌತ್ರಾಶ್ಚ ಧನಾನ್ಯಷ್ಟೌ ಸಮಾಶ್ರಿತಾಃ ।
ಭದ್ರೋ ಮಂದೋ ಮೃಗಶ್ಚೈವ ಗಜಃ ಸಂಕೀರ್ಣ ಏವ ಚ　　॥ ೧೪ ॥

ವನೇ ವನೇ ಪ್ರಸೂತಾಸ್ತೇ ಸ್ಮರಯೋನಿಂ ಮಹಾಗಜ ।
ಪಾಂತು ತ್ವಾಂ ವಸವೋ ರುದ್ರಾಃ ಆದಿತ್ಯಾಃ ಸಮರುದ್ಗಣಾಃ　　॥ ೧೫ ॥

---

ವೇಗಶಾಲಿಯೂ ಆಗಿರುವ ಗರುಡನು ನಿನ್ನಲ್ಲಿ ಯಾವಾಗಲೂ ಸನ್ನಿಹಿತನಾಗಿರುವನು. ಅಂತಹ ಮಹಾವೀರನ ಸಾನ್ನಿಧ್ಯವುಳ್ಳ ನೀನು ಕುದುರೆ ಕವಚ ಆಯುಧ ಮೊದಲಾದ ಯುದ್ಧ ಸಾಮಗ್ರಿಗಳಿಂದ ಕೂಡಿರುವ ನಮ್ಮ ಯೋಧರನ್ನು ಪ್ರಬಲರಾದ ಶತ್ರುಗಳ ದೆಸೆಯಿಂದ ರಕ್ಷಿಸು.

॥ ಇಲ್ಲಿಗೆ ಧ್ವಜಮಂತ್ರ ಮುಗಿದಿದೆ ॥

೧೩–೧೮. ಪರಾಶರರು ಗಜಮಂತ್ರವನ್ನು ಹೇಳುತ್ತಾರೆ. ಎಲೈ ಮಹಾ ಗಜವೇ, ಕುಮುದ, ಐರಾವಣ, ಪದ್ಮ, ಪುಷ್ಪದಂತ, ವಾಮನ, ಸುಪ್ರತೀಕ, ಅಂಜನ, ನೀಲ ಈ ಎಂಟು ದಿಗ್ಗಜಗಳೂ ದೇವತಾಂಶಕ್ಕೆ ಸೇರಿದವು. ಈ ದಿಗ್ಗಜಗಳ ಪುತ್ರ ಪೌತ್ರ ಪರಂಪರೆಗೆ ಸೇರಿದ ಭದ್ರ, ಮಂದ, ಮೃಗ ಇವುಗಳೂ ಆದ ಎಂಟು ಜಾತಿಯ ಗಜಗಳು ಧನಿಕರನ್ನು ಆಶ್ರಯಿಸಿ ಅಭಿವೃದ್ಧಿ ಹೊಂದುತ್ತಿವೆ. ಕಾಡಿನಲ್ಲಿ ಹುಟ್ಟಿ ಬೆಳೆದಿರುವ ಮಹಾಗಜಗಳೆಲ್ಲವೂ ಈ ಪರಂಪರೆಗೆ ಸೇರಿವೆ. ಆದುದರಿಂದ ಈ ಪರಂಪರೆಗೆ ಸೇರಿರುವ ನೀನು ನಿನಗೆ ಕಾರಣವಾದ ಮಹಾವಂಶ ವನ್ನು ಸ್ಮರಿಸಿಕೋ. ನಿನ್ನನ್ನು ಅಷ್ಟವಸುಗಳೂ ಏಕಾದಶ ರುದ್ರರೂ. ಮರುದ್ಗಣ ಗಳೊಡಗೂಡಿರುವ ದೇವತೆಗಳೂ ಎಲ್ಲರೂ ರಕ್ಷಿಸಲಿ, ನಿನ್ನ ಒಡೆಯನನ್ನೂ ನೀನು

ಭರ್ತಾರಂ ರಕ್ಷ ನಾಗೇಂದ್ರ ಸಮಯಃ ಪ್ರತಿಪಾಲ್ಯತಾಂ ।
ಅವಾಪ್ನುಹಿ ಜಯಂ ಯುದ್ಧೇ ಗಮನೇ ಸ್ವಸ್ತಿ ನೋ ವ್ರಜ ॥ ೧೭ ॥

ಶ್ರೀಸ್ತೇ ಸೋಮಾತ್ ಬಲಂ ವಿಷ್ಣೋಃ ತೇಜಃ ಸೂರ್ಯಾಜ್ಜವೋಽನಿಲಾತ್ ।
ಸ್ಥೈರ್ಯಂ ಮೇರೋಃ ಜಯಂ ರುದ್ರಾದ್ಯಶೋ ದೇವಾತ್ಪುರಂದರಾತ್ ॥೧೭॥

ಯುದ್ಧೇ ರಕ್ಷಂತು ನಾಗಾಸ್ತ್ವಾಂ ದಿಶಶ್ಚ ಸಹ ದೈವತೈಃ ।
ಅಶ್ವಿಭ್ಯಾಂ ಸಹ ಗಂಧರ್ವಾಃ ಪಾಂತು ತ್ವಾಂ ಸರ್ವತಃ ಸದಾ ॥ ೧೮ ॥

॥ ಇತಿ ಹಸ್ತಿಮಂತ್ರಃ ॥

॥ ಪರಾಶರ ಉವಾಚ ॥

ಹುತಭುಗ್ವಸವೋ ರುದ್ರಾಃ ವಾಯುಃ ಸೋಮೋ ಮಹರ್ಷಯಃ ।
ನಾಗಕಿನ್ನರಗಂಧರ್ವಯಕ್ಷಭೂತಗಣಗ್ರಹಾಃ ॥ ೧೯ ॥

ಪ್ರಮಥಾಸ್ತು ಸಹಾದಿತ್ಯೈಃ ಭೂತೇಶೋ ಮಾತೃಭಿಃ ಸಹ ।
ಶಕ್ರಸೇನಾಪತಿಃ ಸ್ಕಂದೋ ವರುಣಶ್ಚಾಶ್ರಿತಸ್ತ್ವಯಿ ॥ ೨೦ ॥

---

ರಕ್ಷಿಸು, ಈ ಕಾರ್ಯದಲ್ಲಿ ನೀನು ನಮಯ ನಿರೀಕ್ಷಣೆಯಿಂದ ಜಾಗರೂಕನಾಗಿರು ಯುದ್ಧದಲ್ಲಿ ನೀನು ಜಯವನ್ನು ಹೊಂದುತ್ತೀಯೆ. ನಿನ್ನ ವಿಜಯ ಪ್ರಸ್ಥಾನವು ನಮಗೆ ಶುಭಕರವಾಗಲಿ ಹೊರಡು, ನಿನಗೆ ಕಾಂತಿಯು ಚಂದ್ರನಿಂದಲೂ, ಬಲವು ವಿಷ್ಣುವಿನಿಂದಲೂ, ತೇಜಸ್ಸು ಸೂರ್ಯನಿಂದಲೂ, ವೇಗವು ವಾಯುವಿನಿಂದಲೂ, ಸ್ಥೈರ್ಯವು ಮೇರುಪರ್ವತದಿಂದಲೂ, ವಿಜಯವು ರುದ್ರನಿಂದಲೂ, ಯಶಸ್ಸು ದೇವಾಧಿಪನಾದ ಇಂದ್ರನಿಂದಲೂ ಸಹ ಬಂದು ಸೇರಲಿ. ಯುದ್ಧದಲ್ಲಿ ವ್ಯಾಪರಿಸಿದ ನಿನ್ನನ್ನು ದಿಗ್ಗಜಗಳೂ, ದಿಕ್ಪಾಲಕರೊಡಗೂಡಿದ ಅಷ್ಟ ದಿಕ್ಕುಗಳೂ ರಕ್ಷಿಸಲಿ. ಅಶ್ವಿನೀ ದೇವತೆಗಳೊಡಗೂಡಿದ ಗಂಧರ್ವರೂ ಸಹ ಎಲ್ಲಾ ಕಡೆಯಲ್ಲಿಯೂ ಯಾವಾಗಲೂ ನಿನ್ನನ್ನು ರಕ್ಷಿಸಲಿ.

॥ ಇಲ್ಲಿಗೆ ಗಜ ಮಂತ್ರವು ಮುಗಿದಿದೆ ॥

೧೯–೨೫. ಪರಾಶರರು ಪತಾಕಾಮಂತ್ರವನ್ನು ಹೇಳುತ್ತಾರೆ. ಎಲೈ ಪತಾಕೆಯೇ (ಬಾವುಟ) ಅಗ್ನಿ, ಅಷ್ಟವಸುಗಳು ಏಕಾದಶರುದ್ರರು, ವಾಯು, ಚಂದ್ರ,

**ಪ್ರದಹಂತು ರಿಪೂನ್ ಸರ್ವಾನ್ ರಾಜಾ ವಿಜಯಮೃಚ್ಛತು ।**
**ಯಾನಿ ಪ್ರಯುಕ್ತಾನ್ಯರಿಭಿಃ ದೂಷಣಾನಿ ಸಮಂತತಃ　॥ ೨೧ ॥**
**ಪತಂತೂಪರಿ ಶತ್ರೂಣಾಂ ಹತಾನಿ ತವ ತೇಜಸಾ ।**
**ಕಾಲನೇಮಿವಧೇ ಯದ್ವದ್ಯಚ್ಚ ತ್ರಿಪುರಪಾತನೇ　॥ ೨೨ ॥**
**ಹಿರಣ್ಯಕಶಿಪೋರ್ಯದ್ವದ್ವಧೇ ಸರ್ವಾಸುರೇಷು ಚ ।**
**ಶೋಭಿತಾಸಿ ತಥೈವಾದ್ಯ ಶೋಭಸ್ವ ಸಮಯಂ ಸ್ಮರ　॥ ೨೩ ॥**
**ನೀಲಾನ್ ಶ್ವೇತಾನಿಮಾನ್ ದೃಷ್ಟ್ವಾ ನಶ್ಯಂತ್ವಾಶು ನೃಪಾರಯಃ ।**
**ವ್ಯಾಧಿಭಿಃ ವಿವಿಧೈರ್ಘೋರೈಃ ಶಸ್ತ್ರೈಶ್ಚ ಯುಧಿ ನಿರ್ಜಿತಾಃ　॥ ೨೪ ॥**
**ಪೂತನಾರೇವತೀನಾಮ್ನಾ ಕಾಲರಾತ್ರೀತಿ ಪಠ್ಯತೇ ।**
**ದಹತ್ವಾಶು ರಿಪೂನ್ಸರ್ವಾನ್ ಪತಾಕೇ ತ್ವಾಮುಪಾಶ್ರಿತಾ　॥ ೨೫ ॥**

**॥ ಇತಿ ಪತಾಕಾಮಂತ್ರಃ ॥**

---

ಮಹರ್ಷಿಗಳು, ಸರ್ಪಗಳು, ಕಿನ್ನರರು ಗಂಧರ್ವರು, ಯಕ್ಷ, ಭೂತಗಣಗಳು, ಗ್ರಹಗಳು, ಪ್ರಮಥಗಣಗಳು, ಆದಿತ್ಯರು, ರುದ್ರದೇವ, ಸಪ್ತಮಾತೃಕೆಗಳು, ಇಂದ್ರ ಸೇನಾಪತಿಯಾದ ಷಣ್ಮುಖ, ವರುಣ ಇವರೆಲ್ಲರೂ ನಿನ್ನಲ್ಲಿ ಆಶ್ರಯಹೊಂದಿರುವರು, ಇವರೆಲ್ಲರೂ ಎಲ್ಲಾ ಶತ್ರುಗಳನ್ನೂ ನಾಶಮಾಡಲಿ, ರಾಜನು ವಿಜಯವನ್ನು ಹೊಂದಲಿ. ಶತ್ರುಗಳಿಂದ ಯಾವಯಾವ ಅನಿಷ್ಟಗಳು ಎಲ್ಲಾ ಕಡೆಯಲ್ಲಿಯೂ ಪ್ರಯೋಗಿಸಲ್ಪಡುವುವೋ, ಅವೆಲ್ಲವೂ ನಿನ್ನ ತೇಜಸ್ಸಿನಿಂದ ತಡೆಯಲ್ಪಟ್ಟು ಶತ್ರುಗಳ ಮೇಲೆಯೇ ಹಿಂದೆ ತಿರುಗಿಬೀಳಲಿ, ಕಾಲನೇಮಿಯನ್ನು ನಾಶಪಡಿಸುವಾಗಲೂ, ಇತರ ಅಸುರರನ್ನು ಸಂಹರಿಸುವಾಗಲೂ ಕೂಡ ನೀನು ಹೇಗೆ ಪ್ರಕಾಶದಿಂದ ಉಜ್ವಲರೂಪ ತಾಳಿದೆಯೋ ಈಗಲೂ ಸಹ ಅಂತಹ ಶೋಭೆಯನ್ನೇ ಹೊಂದು. ಸನ್ನಿಹಿತವಾಗಿರುವ ವಿಜಯ ಕಾಲವನ್ನು ಸ್ಮರಿಸಿಕೋ, ಎಲೈ, ಪತಾಕೆಯೇ, ಕಪ್ಪಾಗಿಯೂ, ಬಿಳುಪಾಗಿಯೂ ಇರುವ ನಿನ್ನ ಈ ಅವಯವಗಳನ್ನು ನೋಡಿ ನಮ್ಮ ರಾಜನ ಶತ್ರುಗಳೆಲ್ಲರೂ ನಾಶಹೊಂದಲಿ, ನಾನಾವಿಧವಾದ ವ್ಯಾಧಿಗಳಿಂದಲೂ ಭಯಂಕರಗಳಾದ ಶಸ್ತ್ರಗಳಿಂದಲೂ ಜಯಿಸಲ್ಪಟ್ಟು ಆ ಶತ್ರುಗಳು ನಾಶಹೊಂದಲಿ ಪೂತನಾ, ರೇವತೀ ಎಂಬ ಹೆಸರುಗಳಿಂದ ಯಾವ ಕಾಳರಾತ್ರಿಯು ನಿನ್ನನ್ನು ಆಶ್ರಯಿಸಿಕೊಂಡು ನಿಂತಿದೆಯೋ ಆ ಕಾಳರಾತ್ರಿಯು ಎಲ್ಲಾ ಶತ್ರುಗಳನ್ನೂ ಭಸ್ಮಮಾಡಲಿ.

ಇಲ್ಲಿಗೆ ಪತಾಕಾಮಂತ್ರವು ಮುಗಿದಿದೆ.

|| ಪರಾಶರ ಉವಾಚ ||

ಅಸಿರ್ವಿಶಸನಃ ಖಡ್ಗಸ್ತೀಕ್ಷ್ಣಧಾರೋ ದುರಾಸದಃ ।
ಶ್ರೀಗರ್ಭೋ ವಿಜಯಶ್ಚೈವ ಧರ್ಮಾಚಾರಸ್ತಥೈವ ಚ || ೨೬ ||

ಇತ್ಯಷ್ಟೌ[1] ತವ ನಾಮಾನಿ ಸ್ವಯಮುಕ್ತಾನಿ ವೇಧಸಾ ।
ನಕ್ಷತ್ರಂ ಕೃತ್ತಿಕಾ ತುಭ್ಯಂ ಗುರುರ್ದೇವೋ ಮಹೇಶ್ವರಃ || ೨೭ ||

ರೋಹಿಣ್ಯಾಶ್ಚ ಶರೀರಂ ತೇ ದೈವತಂ ತು ಜನಾರ್ದನಃ ।
ಪಿತಾ ಪಿತಾಮಹೋ ದೇವಃ ಸ ತ್ವಂ ಪಾಲಯ ಸರ್ವದಾ || ೨೮ ||

|| ಇತಿ ಖಡ್ಗಮಂತ್ರಃ ||

|| ಪರಾಶರ ಉವಾಚ ||

ವರ್ಮಪ್ರದಸ್ತ್ವಂ ಸಮರೇ ಧರ್ಮಸೈನ್ಯಾಯ ಮಾನದ ।
ರಕ್ಷಮಾಂ ರಕ್ಷಣೀಯೋಽಹಂ ತವಾನಘ ನಮೋಽಸ್ತು ತೇ || ೨೯ ||

|| ಇತಿ ವರ್ಮಮಂತ್ರಃ ||

---

೨೬-೨೮. ಪರಾಶರರು ಖಡ್ಗಮಂತ್ರವನ್ನು ಹೇಳುತ್ತಾರೆ. ಖಡ್ಗವೇ ಅಸಿ ವಿಶಸನ, ಖಡ್ಗ, ತೀಕ್ಷ್ಣಧಾರ, ದುರಾಸದ, ಶ್ರೀಗರ್ಭ, ವಿಜಯ, ಧರ್ಮಾಚಾರ ಎಂಬ ಎಂಟು ಹೆಸರುಗಳನ್ನು ನಿನಗಾಗಿ ಬ್ರಹ್ಮನು ಹೇಳಿರುವನು, ಕೃತ್ತಿಕೆಯೇ ನಿನಗೆ ನಕ್ಷತ್ರ, ಮಹೇಶ್ವರನೇ ನಿನಗೆ ಗುರು, ರೋಹಿಣಿಯೇ ನಿನ್ನ ಶರೀರ, ಜನಾರ್ದನನೇ ನಿನಗೆ ದೇವತೆ, ಪಿತಾಮಹನೆಂದು ಹೇಳಲ್ಪಡುವ ಬ್ರಹ್ಮನೇ ನಿನಗೆ ತಂದೆ, ಅಂತಹ ಪ್ರಭಾವಶಾಲಿಯಾದ ನೀನು ಯಾವಾಗಲೂ ಧೊರೆಯನ್ನು ರಕ್ಷಿಸು.

ಇಲ್ಲಿಗೆ ಖಡ್ಗಮಂತ್ರ ಮುಗಿದಿದೆ.

೨೯. ಪರಾಶರರು ಕವಚ ಮಂತ್ರವನ್ನು ಹೇಳುತ್ತಾರೆ. ಎಲೈ ಕವಚವೇ ಶತ್ರುಗಳ ಅಹಂಕಾರವನ್ನು ನಾಶಪಡಿಸುವ ನೀನು, ಯುದ್ಧದಲ್ಲಿ ಧರ್ಮವೆಂಬ ಸೈನ್ಯಕ್ಕೆ ಅಥವಾ ಧರ್ಮ ಸ್ಥಾಪನೆಗಾಗಿ ಹೊರಟ ಸೈನ್ಯಕ್ಕೆ ರಕ್ಷಕನಾಗಿರುವೆ. ಹಾಗೆ ಧರ್ಮ ಮಾರ್ಗದಲ್ಲಿ ಹೊರಟಿರುವ ನಾನೂ ಸಹ ನಿನ್ನಿಂದ ರಕ್ಷಿಸಲ್ಪಡತಕ್ಕವನು,

---

1 ಇಲ್ಲಿ ಹೇಳಿರುವ ಎಂಟು ನಾಮಗಳೂ ಅವಯವಾರ್ಥದಿಂದ ಬೇರ ಬೇರ ಗುಣಗಳನ್ನು ಖಡ್ಗದಲ್ಲಿ ಬೋಧಿಸುತ್ತವೆ.

|| ಪರಾಶರ ಉವಾಚ ||

ದುಂದುಭೇ ತ್ವಂ ಸಪತ್ನಾನಾಂ ಘೋಷಾದ್ಧೃದಯಕಂಪನಃ || ೩೦ ||
ತವ ಭೂಮಿಪಸೈನ್ಯಾನಾಂ ತಥಾ ವಿಜಯವರ್ಧನಃ ।

ಯಥಾ ಜೀಮೂತಘೋಷೇಣ ಹೃಷ್ಯಂತಿ ಶರವಾರಣಾಃ ।
ತಥಾ ಚ ತವ ಶಬ್ದೇನ ತ್ರಸ್ಯಂತ್ವಸ್ಮದ್ವಿಷೋ ರಣೇ || ೩೧ ||

|| ಇತಿ ದುಂದುಭಿಮಂತ್ರಃ ||

|| ಪರಾಶರ ಉವಾಚ ||

ಸರ್ವಾಯುಧ ಮಹಾಮಾತ್ರ ಸರ್ವದೇವಾರಿಸೂದನ ।
ಚಾಪ ತ್ವಂ ಸರ್ವದಾ ರಕ್ಷ ಸಾಕಂ ಶರವರೈಃ ಸದಾ || ೩೨ ||

|| ಇತಿ ಚಾಪಮಂತ್ರಃ ||

---

ನನ್ನನ್ನು ರಕ್ಷಿಸು. ಎಲೈ ಧರ್ಮಾವಲಂಬಿಯಾದ ನಿಷ್ಪಾಪನೇ ನಿನಗೆ ನಮಸ್ಕಾರಗಳು

೩೦ ೩೧. ಪರಾಶರರು ದುಂದುಭಿ ಮಂತ್ರವನ್ನು ಹೇಳುತ್ತಾರೆ ಎಲೈ ದುಂದುಭಿಯೇ (ಭೇರಿ) ನೀನು ನಿನ್ನ ಘೋಷದಿಂದ ಶತ್ರುಗಳ ಹೃದಯವನ್ನೆಲ್ಲಾ ನಡುಗಿಸುತ್ತೀಯೆ. ನಿನ್ನ ಧೊರೆಯ ಸೈನ್ಯಗಳಿಗೆ ವಿಜಯವನ್ನೂ ಉಂಟುಮಾಡುವೆ ಮೇಘದ ಧ್ವನಿಯುಂಟಾದ ಕೂಡಲೇ ಶರಗಳೆಂಬ (ಒಂದು ಜಾತಿಯ ಹುಲ್ಲು) ಆನೆಗಳು ಹೇಗೆ ಸಂತೋಷಹೊಂದುವುವೋ ಹಾಗೆಯೇ ಯುದ್ಧದಲ್ಲಿ ನಿನ್ನ ಶಬ್ದ ಮಾತ್ರದಿಂದ ನಮ್ಮ ಶತ್ರುಗಳೂ ಭಯಪಟ್ಟು ಓಡಲಿ. (ಇಲ್ಲಿ ಸಂತೋಷ ಭಯ ಗಳು ಬೇರೆ ಬೇರೆ ಧರ್ಮಗಳಾಗಿದ್ದರೂ ಕಾರಣಗಳಿಗೆ ನಿಯತವಾದ ಆಯಾಯ ಕಾರ್ಯ ಸಹ ಭಾವಮಾತ್ರದಲ್ಲಿ ಉಪಮಾನೋಪಮೇಯಭಾವವೆಂದುತಿಳಿಯಬೇಕು)

ಇಲ್ಲಿಗೆ ಭೇರಿಯ ಮಂತ್ರ ಮುಗಿದಿದೆ

೩೨ ಪರಾಶರರು ಚಾಪಮಂತ್ರವನ್ನು ಹೇಳುತ್ತಾರೆ. ಎಲ್ಲಾ ಆಯುಧ ಗಳಲ್ಲಿಯೂ ಪ್ರಾಧಾನ್ಯ ಹೊಂದಿರುವ ಮತ್ತು ದೇವ ಶತ್ರುಗಳನ್ನೆಲ್ಲಾ ನಾಶಪಡಿಸುವ ಎಲೈ ಧನುಸ್ಸೇ ನೀನು ಬಾಣಗಳೊಡಗೂಡಿ ಯಾವಾಗಲೂ ನಮ್ಮನ್ನು ರಕ್ಷಿಸು.

ಇಲ್ಲಿಗೆ ಚಾಪ ಮಂತ್ರ ಮುಗಿದಿದೆ.

॥ ಪುಷ್ಕರ ಉವಾಚ ॥

ಮಂತ್ರಾಸ್ತ್ವೈತೇಽಭಿಹಿತಾ ನೃವೀರ
ಸಮ್ಯಂತ್ರಣೇ ವೈಜಯಿಕಾ ಯಥಾವತ್ ।
ಏತೈಸ್ತು ಮಂತ್ರೈರಭಿಮಂತ್ರಿತಾನಾಂ
ಚಲತ್ಯಮೋಘಂ ಬಲಮಪ್ರವೃಷ್ಯಂ ॥ ೩೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ಮಂತ್ರಾಧ್ಯಾಯವರ್ಣನೋ ನಾಮ
ಷಷ್ಟ್ಯುತ್ತರಶತತಮೋಽಧ್ಯಾಯಃ

---

೩೩. ಅನಂತರ ಪುಷ್ಕರನು ಹೇಳುತ್ತಾನೆ. ಎಲೈ ವೀರನೇ ಪರಾಶರರು ಹೇಳಿರುವ ಈ ಮಂತ್ರಗಳನ್ನೆಲ್ಲಾ ನಿನಗೆ ಹೇಳಿರುತ್ತೇನೆ. ಯಥಾವಿಧಿಯಾಗಿ ಈ ಮಂತ್ರಗಳಿಂದ ಅಭಿಮಂತ್ರಿಸಿದಲ್ಲಿ ಈ ಮಂತ್ರಗಳು ವಿಜಯ ಪ್ರದವಾಗಿರುತ್ತವೆ. ಈ ಮಂತ್ರಗಳಿಂದ ಅಭಿಮಂತ್ರಿಸಲ್ಪಟ್ಟ ಆಯುಧ ಮೊದಲಾದುವನ್ನು ಹೊಂದಿರುವ ಸೈನ್ಯವು ಶತ್ರುಗಳಿಂದ ತಡೆಯಲಶಕ್ಯವಾಗಿಯೂ ಅಮೋಘ ಫಲವುಳ್ಳದ್ದಾಗಿಯೂ ಆಗುತ್ತದೆ.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ ಮಂತ್ರಾಧ್ಯಾಯ ವರ್ಣನವೆಂಬ ನೂರ ಅರವತ್ತನೆಯ ಅಧ್ಯಾಯವು ಮುಗಿದಿದೆ



॥ ಓಂ ॥

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಏಕಷಷ್ಟ್ಯುತ್ತರಶತತಮೋಽಧ್ಯಾಯಃ

**॥ ಪರಶುರಾಮ ಉವಾಚ ॥**

**ಶಾಂತಿಮಾಚಕ್ಷ್ವ ಮಾಂ ದೇವ ಘೃತಕಂಬಲಸಂಜ್ಞಿತಾಂ ।**
**ಕಾರ್ಯಾ ಯಾ ಪಾರ್ಥಿವೇಂದ್ರಾಣಾಂ ವಿಜಯಾಯ ಪುರೋಧಸಾ ॥ ೧ ॥**

**॥ ಪುಷ್ಕರ ಉವಾಚ ॥**

**ಪೂರ್ವೋತ್ತರೇ ತು ದಿಗ್ಭಾಗೇ ನಗರಾತ್ಸುಮನೋಹರೇ ।**
**ಪ್ರಾಗುದಕ್ಪ್ರವಣೇ ದೇಶೇ ಶಾಂತ್ಯಾಗಾರಂ ತು ಕಾರಯೇತ್ ॥ ೨ ॥**

**ತತಮತ್ಯಂತವಿಸ್ತೀರ್ಣಂ ನಾನಾವಸ್ತ್ರವಿಭೂಷಿತಂ ।**
**ಪುನರ್ವಸೌ ಗತೇ ಚಂದ್ರೇ ತತ್ರ ಯಾಯಾನ್ನರಾಧಿಪಃ ॥ ೩ ॥**

---

### ನೂರ ಅರವತ್ತೊಂದನೆಯ ಅಧ್ಯಾಯ.

ಪರಶುರಾಮನು ಪ್ರಶ್ನೆಮಾಡುತ್ತಾನೆ:—ಓ ಮಹಾತ್ಮನೇ ರಾಜರ ವಿಜಯಕ್ಕಾಗಿ ಪುರೋಹಿತನು ಮಾಡಬೇಕೆಂದು ಹೇಳಲಾಗಿರುವ ಘೃತಕಂಬಲ ವೆಂಬ ನಾಮಧೇಯವುಳ್ಳ ಶಾಂತಿಯ ಕ್ರಮವನ್ನು ಹೇಳಬೇಕು. ಈ ಪ್ರಶ್ನೆಗೆ ಉತ್ತರವಾಗಿ ಪುಷ್ಕರನು ಹೇಳುತ್ತಾನೆ.

೨-೩. ರಾಜನ ನಗರದಿಂದ ಈಶಾನ್ಯದಿಕ್ಕಿನಲ್ಲಿ ರಮ್ಯವಾದ ಸ್ಥಳವನ್ನು ಆರಿಸಿ ಪೂರ್ವದಿಕ್ಕಿನಿಂದ ಉತ್ತರದಿಕ್ಕಿಗೆ ತಗ್ಗಾಗಿರುವ ಪ್ರದೇಶದಲ್ಲಿ ಶಾಂತಿಗೋಸ್ಕರ ಗೃಹವೊಂದನ್ನು ನಿರ್ಮಿಸಬೇಕು. ಆ ಗೃಹವು ಉದ್ದವಾಗಿಯೂ ವಿಸ್ತಾರವಾಗಿಯೂ ಇದ್ದು ನಾನಾವಿಧವಾದ ವಸ್ತ್ರಗಳಿಂದ ಅಲಂಕರಿಸಲ್ಪಟ್ಟಿರಬೇಕು. ಚಂದ್ರನು ಪುನರ್ವಸೂ ನಕ್ಷತ್ರಕ್ಕೆ ಬಂದಾಗ ರಾಜನು ಆ ಶಾಂತಿಗೃಹವನ್ನು ಪ್ರವೇಶಿಸಬೇಕು.

ಪುರಸ್ಕೃತ್ಯ ಮಹಾಭಾಗ ಸಾಂವತ್ಸರಪುರೋಹಿತೌ ।
ಅಭಿಷೇಚನಿಕಾ ಮಂತ್ರಾ ಯೇ ಮಯಾಭಿಹಿತಾಃ ಪುರಾ ॥ ೪ ॥

ದೇವಾದಯಸ್ತು ತೇಷಾಂ ವೈ ಸ್ಥಾನಂ ತತ್ರ ಪ್ರಕಲ್ಪಯೇತ್ ।
ಗಂಧಮಂಡಲಕೈರ್ಮುಖ್ಯೈಃ ಯಥಾಸ್ಥಾನಂ ಪುರೋಹಿತಃ ॥ ೫ ॥

ಆವಾಹನಂ ತತಃ ಕುರ್ಯಾತ್ ಸ್ನಾತಾಸ್ತತ್ರ ಚ ಯೇಽಪಿತೇ ।
ದೇವಾದೀನಾಂ ತು ಸರ್ವೇಷಾಂ ಬ್ರಾಹ್ಮಣೈಃ ಸಹಿತಾ ದ್ವಿಜ ॥ ೬ ॥

ಆವಾಹಿತಾನಾಂ ಸರ್ವೇಷಾಂ ಗಂಧಮಾಲ್ಯಾನ್ನಸಂಪದಾ ।
ದೇವವತ್ಪೂಜನಂ ಕುರ್ಯಾತ್ತಥಾ ನೃಪಪುರೋಹಿತೌ ॥ ೭ ॥

ಏವಂ ಸಂಪೂಜನಂ ಕೃತ್ವಾ ಸೋಪವಾಸಾಸ್ತು ತೇ ತ್ರಯಃ ।
ಸ್ವಪ್ಯುಃ ತಾಂ ನಿಶಾಂ ತತ್ರ ಸರ್ವಏವ ಸಮಾಹಿತಾಃ ॥ ೮ ॥

---

೪–೫. ರಾಜನು ಆ ಶಾಂತಿಗೃಹಕ್ಕೆ ಹೋಗುವಾಗ ಜ್ಯೋತಿಷಿಕ ಮತ್ತು ಪುರೋಹಿತ ಇವರನ್ನು ಮುಂದಿಟ್ಟುಕೊಂಡು ಹೋಗಬೇಕು. ಹಿಂದೆ ನಾನು ಅಭಿಷೇಕಕ್ಕಾಗಿ ಯಾವಯಾವ ಮಂತ್ರಗಳನ್ನು ಹೇಳಿರುವೆನೋ, ದೇವತೆಗಳನ್ನೂ ಸಹ ಹೇಳಿರುವೆನೋ ಆಯಾಯ ದೇವತೆಗಳಿಗೆ ಆಯಾಯ ಮಂತ್ರಗಳಿಂದ ಆ ಶಾಂತಿಗೃಹದಲ್ಲಿ ಸ್ಥಾನಗಳನ್ನು ಕಲ್ಪಿಸಬೇಕು. ಆಯಾಯ ಸ್ಥಾನಕ್ಕೆ ತಕ್ಕಂತೆ ಪುರೋಹಿತನು ಮುಂಭಾಗದ ಸ್ಥಾನಗಳನ್ನು ಗಂಧದಿಂದ ಮಂಡಲಾಕಾರವಾಗಿ ಮಾಡಬೇಕು.

೬–೮. ಅನಂತರ ದೇವತೆಗಳನ್ನು ಆಯಾಯ ಸ್ಥಳದಲ್ಲಿ ಆವಾಹನ ಮಾಡಬೇಕು. ಮತ್ತು ಅಲ್ಲಿ ಸ್ನಾನಮಾಡಿ ಶುಚಿಯಾಗಿರುವ ಬ್ರಾಹ್ಮಣರೊಡನೆ ಆವಾಹಿತರಾದ ದೇವತೆಗಳಿಗೂ ಗಂಧಪುಷ್ಪಧೂಪದೀಪನೈವೇದ್ಯಾದಿಗಳಿಂದ ಪೂಜೆ ನಡೆಸುವಂತೆಯೇ ಅವರ ಪೂಜೆಯನ್ನೂ ರಾಜ ಮತ್ತು ಪುರೋಹಿತ ಇವರಿಬ್ಬರೂ ಮಾಡಬೇಕು. ಈ ರೀತಿ ಪೂಜಾಕಾರ್ಯವನ್ನು ನೆರವೇರಿಸಿ ರಾಜ ಮತ್ತು ಪುರೋಹಿತ ಮತ್ತು ಜ್ಯೋತಿಷಿಕ ಈ ಮೂವರೂ ಉಪವಾಸದಿಂದಿದ್ದು ಶಾಂತಮನಸ್ಕರಾಗಿ ಆ ರಾತ್ರಿ ಪೂರ್ತಿಯಾಗಿ ಅಲ್ಲೇ ಮಲಗಿರಬೇಕು.

ತತೋ ನೈಋತಕಂ ಕರ್ಮ ಪ್ರದೇಶೇ ತು ಪುರೋಹಿತಃ ।
ಕೃತ್ವಾ ತ್ರಿಭಾಗಶೇಷಾಯಾಂ ರಾತ್ರೌ ಕುರ್ಯಾತ್ತು ಶಾಂತಿಕಂ ॥ ೯ ॥

ಸ್ಮೃತ್ವಾ ದಶಗಣಾನತ್ರ ಸ್ನಾಪಯೇತ್ತಂ ನರಾಧಿಪಂ ।
ಪೂರ್ವಮೇವ ತಥಾ ಸ್ನಾನಂ ಸಿದ್ಧಾರ್ಥೋತ್ಸಾದಿತಂ ತಥಾ ॥ ೧೦ ॥

ಪೂರ್ಣೇನ ಘೃತಕುಂಭೇನ ಮಂತ್ರೇಣಾನೇನ ಸ ಕಾಲವಿತ್ ।
ಆಜ್ಯಂ ತೇಜಃ ಸಮುದ್ದಿಷ್ಟಂ ಆಜ್ಯಂ ತೇಜೋಹರಂ ಪರಂ ॥ ೧೧ ॥

ಆಜ್ಯಂ ಸುರಾಣಾಮಾಹಾರಮಾಜ್ಯೇ ಲೋಕಃ ಪ್ರತಿಷ್ಠಿತಃ ।
ತೇನಾಂತರಿಕ್ಷಂ ದಿವ್ಯಂ ವಾ ಧತ್ತೇ ಕಲ್ಮಷನಾಶನಂ ॥ ೧೨ ॥

ಸರ್ವೇ ತದಾಜ್ಯಸಂಸ್ಪರ್ಶಾತ್ ಪ್ರಣಾಶಮುಪಗಚ್ಛತು ।
ತತೋ ವಿರೂಕ್ಷಿತಂ ಸ್ನಾತಂ ಸ್ನಾನವೇದ್ಯಾಂ ನರಾಧಿಪಂ ॥ ೧೩ ॥

---

೯-೧೦ ಅನಂತರ ಆ ರಾತ್ರಿಯಲ್ಲೇ ಪುರೋಹಿತನು ವಿಹಿತವಾದ ಸ್ಥಲದಲ್ಲಿ ನೈಋತಕರ್ಮವನ್ನು ನೆರವೇರಿಸಿ ರಾತ್ರಿಯ ಮೂರನೆಯ ಎರಡು ಭಾಗ ಕಳೆದ ನಂತರ ಕೊನೆಯ ಮೂರನೆಯ ಭಾಗದಲ್ಲಿ ಈ ಶಾಂತಿಯನ್ನು ಮಾಡಬೇಕು. ಹಿಂದೆ ಹೇಳಿರುವ ಅಭಯಾ ಮೊದಲಾದ ಹತ್ತು ಗಣಗಳನ್ನೂ ಸ್ಮರಿಸಿ ರಾಜನಿಗೆ ಮೊದಲೇ ಸ್ನಾನಮಾಡಿಸಬೇಕು. ಆ ಸ್ನಾನವನ್ನೂ ಸಹ ಧೊರೆಯು ಬಿಳಿಯ ಸಾಸವೆಯಿಂದ ಮೈಯನ್ನು ತೊಳೆದುಕೊಂಡು ಮಾಡಬೇಕು.

೧೧-೧೨. ಅನಂತರ ಘೃತದಿಂದ ಪೂರ್ಣವಾದ ಕುಂಭದಿಂದ ಜ್ಯೋತಿಷಕನು ರಾಜನಿಗೆ ಸ್ನಾನಮಾಡಿಸಬೇಕು. ಕುಂಭಕ್ಕೆ ಘೃತವನ್ನು ತುಂಬಿ ಆ ಘೃತವನ್ನು ಈ ಮಂತ್ರದಿಂದ ಅಭಿಮಂತ್ರಿಸಬೇಕು. ಎಲೈ ಆಜ್ಯವೇ ನೀನು ತೇಜೋರೂಪಿಯಾಗಿರುವೆ. ಅಧಿಕವಾದ ತೇಜಸ್ಸನ್ನು ಕೊಡತಕ್ಕವನಾಗಿರುವೆ, ನೀನೇ ಸುರರಿಗೆ ಆಹಾರವಾಗಿರುವೆ. ಆಜ್ಯದಲ್ಲಿಯೇ ಲೋಕವು ಪ್ರತಿಷ್ಠಿತವಾಗಿದೆ. ಆದುದರಿಂದ ಈ ಆಜ್ಯದಿಂದಲೇ ಅಂತರಿಕ್ಷವೂ ದಿವ್ಯಲೋಕವೂ ಪಾಪನಾಶವನ್ನು ಹೊಂದಿವೆ.

೧೩-೧೪. ಎಲ್ಲರೂ (ಶತ್ರುಗಳು) ಆಜ್ಯಸ್ಪರ್ಶದಿಂದ ನಾಶಹೊಂದಲಿ, ಹೀಗೆ ಅಭಿಮಂತ್ರಿಸಿ ಅನಂತರ ಸ್ನಾನಮಾಡಿ ಸೌಮ್ಯರೂಪದಿಂದಿರುವ ರಾಜನನ್ನು ಜ್ಯೋತಿಷಿಕನೂ, ಪುರೋಹಿತನೂ ಸಹ ಪುರಸ್ಕರಿಸುತ್ತ ಬಂದು ಸ್ನಾನಕ್ಕಾಗಿ

ಗಚ್ಛೇತ್ತ್ರಂ ತು ಪುರಸ್ಕೃತ್ಯ ಸಾವಂತ್ಸರಪುರೋಹಿತೌ ।
ಸ್ನಾನವೇದೀ ತು ಕರ್ತವ್ಯಾ ಲಾಜಾಕುಸುಮಮುಂಡಿತಾ ॥ ೧೪ ॥

ಚತುರ್ಭಿಃ ಪೂರ್ಣಕುಂಭೈಸ್ತು ವಿದಿಕ್ಷು ಹ್ಯುಪಶೋಭಿತಾ ।
ಚತ್ವಾರಿ ತಸ್ಯಾಃ ಚರ್ಮಾಣಿ ಪ್ರಾಗ್ಗ್ರೀವಾಣಿ ಸಮಾಸ್ತರೇತ್ ॥ ೧೫ ॥

ವೃಷಸ್ಯ ದ್ವೀಪಿನಶ್ಚೈವ ಸಿಂಹಶಾರ್ದೂಲಯೋಸ್ತಥಾ ।
ಭದ್ರಾಸನಂ ನ್ಯಸೇದ್ರಾಮ ತೇಷಾಮುಪರಿ ಚರ್ಮಣಾಂ ॥ ೧೬ ॥

ಸ್ನಾಪಿನಂ ನೃಪತಿಂ ತತ್ರ ವಸ್ತ್ರೈರಾಚ್ಛಾದಯೇನ್ನೃಪೈಃ ।
ಕಾರ್ಪಾಸಿಕೈಸ್ತತಃ ಪಶ್ಚಾದಾವಿಕೈಃ ಕೃಮಿಜೈಸ್ತತಃ ॥ ೧೭ ॥

ತತಸ್ತು ಸರ್ಪಿಷಃ ಕುಂಭೈಃ ಪೂರ್ಣೈಸ್ತಮಭಿಷೇಚಯೇತ್ ।
ಕುಂಭಾಷ್ಟಕಂ ತು ಕರ್ತವ್ಯಂ ಅಷ್ಟಾವಿಂಶತಿರೇವವಾ ॥ ೧೮ ॥

---

ಮಾಡಿರುವ ವೇದಿಕೆಯಲ್ಲಿ ಕುಳ್ಳಿರಿಸಬೇಕು ಆ ಸ್ನಾನವೇದಿಕೆಯೂ ಸಹ ಅರಳು ಹೂವುಗಳು ಇವುಗಳಿಂದಲೂ ವಿದಿಕ್ಕುಗಳಲ್ಲಿ ನಾಲ್ಕು ಪೂರ್ಣಕುಂಭಗಳಿಂದಲೂ ಅಲಂಕರಿಸಲ್ಪಟ್ಟು ರಮ್ಯವಾಗಿರಬೇಕು

೧೫-೧೬. ಆ ವೇದಿಕೆಯ ಮೇಲೆ ಎತ್ತು, ಹುಲಿ, ಸಿಂಹ. ಶಾರ್ದೂಲ ಇವುಗಳ ನಾಲ್ಕು ಚರ್ಮಗಳನ್ನೂ ಕ್ರಮವಾಗಿ ಪೂರ್ವಾಭಿಮುಖವಾಗಿರುವಂತೆ ಹಾಸಬೇಕು. ಆ ಚರ್ಮಗಳ ಮೇಲೆ ರಾಜನ ಭದ್ರಾಸನವನ್ನು ಇಡಬೇಕು. ಅಲ್ಲಿ ಸುಖವಿಂದ ದೊರೆಯು ಕುಳಿತನಂತರ ಮುಂದೆ ಹೇಳುವ ವಸ್ತ್ರಗಳಿಂದ ಇತರ ರಾಜರುಗಳು ಆ ದೊರೆಯನ್ನು ಹೊದ್ದಿಸಿ ಆಚ್ಛಾದಿಸಬೇಕು.

೧೭-೧೮. ಮೊದಲು ನೂಲಿನ ವಸ್ತ್ರದಿಂದಲೂ ಅನಂತರ ಉಣ್ಣೆಯ ಬಟ್ಟೆಯಿಂದಲೂ ಅನಂತರ ರೇಷ್ಮೆಯ ವಸ್ತ್ರದಿಂದಲೂ ಹೊದ್ದಿಸಬೇಕು, ಅನಂತರ ತುಂಬಿರುವ ಘೃತಕುಂಭಗಳಿಂದ ದೊರೆಯನ್ನು ಅಭಿಷೇಕಮಾಡಬೇಕು. ಕುಂಭ ಗಳನ್ನು ಎಂಟು ಅಥವಾ ಇಪ್ಪತ್ತೆಂಟು ಅಥವಾ ನೂರಎಂಟು ಈರೀತಿ ಯಾವುದಾದ ರೊಂದು ಸಂಖ್ಯೆಯಲ್ಲಿ ಇಡಬಹುದು. ಆದರೆ ಹೆಚ್ಚಾಗಿ ಏರ್ಪಡಿಸಿದಷ್ಟು

**ಅಥವಾಷ್ಟಶತಂ ರಾಮ ವೃದ್ಧಿರೇಷಾ ಗುಣೋತ್ತರಾ ।**
**ತತೋಽಪನೀಯ ವಸ್ತ್ರಾಣಿ ತಸ್ಯಾಂ ವೇದ್ಯಾಂ ಪುರೋಹಿತಃ　　॥ ೧೯ ॥**

[1]**ಶೂಲೇನ ಮೃನ್ಮಯಂ ಬಿಂದ್ಯಾಚ್ಛತ್ರುಂ ಕ್ರೋಧಸಮನ್ವಿತಃ ।**
**ರಾಜ್ಞಸ್ತು ಕಲಶಂ ದತ್ವಾ ಸ್ವಯಂ ಸಾಂವತ್ಸರಸ್ತತಃ　　॥ ೨೦ ॥**

**ಅಭಿಷೇಚನಮಂತ್ರೇಣ ಸ್ವರ್ಚಿತಂ ಕಲ್ಪಿತಂ ದೃಢಂ ।**
**ಜ್ಯೋತಿಷ್ಮತೀಂ ತ್ರಾಯಮಾಣಾಮಭಯಾಮಪರಾಜಿತಾಂ　　॥ ೨೧ ॥**

**ಜೀವಾಂ ವಿಶ್ವೇಶ್ವರೀಂ ಪಾಠಾಂ ಸಮಂಗಾಮಭಯಾಂ ತಥಾ ।**
**ಸಹಾಂ ಚ ಸಹದೇವಾಂ ಚ ಪೂರ್ಣಕೋಶಾಂ ಶತಾವರೀಂ　　॥ ೨೨ ॥**

**ಅರಿಷ್ಟಿಕಾಂ ಶಿವಾಂ ಭದ್ರಾಂ ಕಲಶೇ ತತ್ರ ವಿನ್ಯಸೇತ್ ।**
**ಬ್ರಾಹ್ಮೀಂ ಕ್ಷೇಮಾಮಜಾಂ ಚೈವ ಸರ್ವಬೀಜಾನಿ ಕಾಂಚನಂ　　॥ ೨೩ ॥**

**ಮಂಗಲ್ಯಾಶ್ಚ ಯಥಾಲಾಭಂ ಸರ್ವೌಷಧ್ಯೋ ರಸಸ್ತಥಾ ।**
**ರತ್ನಾನಿ ಸರ್ವಗಂಧಾಶ್ಚ ಬಿಲ್ವಂ ಚ ಸವಿಕಂಕತಂ　　॥ ೨೪ ॥**

---

ಗುಣಕಾರಿಯಾಗುತ್ತದೆ. ಅನಂತರ ಆ ವಸ್ತ್ರಗಳನ್ನೆಲ್ಲಾ ವೇದಿಕೆಯ ಮೇಲೆ ತೆಗೆದಿಟ್ಟು ಪುರೋಹಿತನು ಎದುರಿಗೆ ಇಟ್ಟಿರುವ ಮಣ್ಣಿನ ಶತ್ರುಪ್ರತಿಕೃತಿಯನ್ನು ಕೋಪದಿಂದ ಕೂಡಿ ಶೂಲಾಯುಧದಿಂದ ಭೇದಿಸಿ ಕೆಡಹಬೇಕು.

೨೦-೨೪. ಅನಂತರ ಜ್ಯೋತಿಷಿಕನು ಅಭಿಷೇಕ ಮಂತ್ರದಿಂದ ಪೂಜಿಸಲ್ಪಟ್ಟು ದೃಢವಾಗಿಡಲ್ಪಟ್ಟಿರುವ ಕಲಶವನ್ನು ರಾಜನ ಕೈಯಲ್ಲಿ ಕೊಡಬೇಕು. ಆ ಕಲಶದಲ್ಲಿ ಈ ಓಷಧಿಗಳನ್ನು ಹಾಕಬೇಕು. ಜ್ಯೋತಿಷ್ಮತೀಲತೆ (ಕಂಗೊಂಗೆ) ನೀರಾಮೆ ಬಳ್ಳಿ, ಅಳಲೆಯ ಕಾಯಿ, ವಿಷ್ಣುಕ್ರಾಂತಿ, ಬಜೆ, ಹೀರೆ ಬಳ್ಳಿ, ಅಗುಳುಶುಂಠಿ, ಮುಟ್ಟಿದರೆ ಮುನಿಯಾ (ಅಥವಾ ಮಂಜಿಷ್ಠಾ), ಸಣ್ಣಗೋರಂಟಿ, ಸಹದೇವೀ ಬೇರು, ಆಷಾಢೀಬೇರು, ಬೇವು, ಕಿರುನೆಲ್ಲಿ, ಅಮೃತವಳ್ಳಿ, ಹೊನಗೊನ್ನೆ, ಬಲಾ ರಾಕ್ಷಸಿ, ಅಜವಾನ ಈ ಓಷಧಿಗಳನ್ನೂ ಎಲ್ಲಾ ವಿಧವಾದ ಬೀಜಗಳನ್ನೂ ಸುವರ್ಣವನ್ನೂ ಲಭಿಸುವಷ್ಟು ಮಂಗಲಕರವಾದ ಇತರ ಓಷಧಿ ವಿಶೇಷಗಳನ್ನೂ ಅವುಗಳ ರಸವನ್ನೂ ರತ್ನಗಳನ್ನೂ, ಸುಗಂಧಿ ದ್ರವ್ಯಗಳನ್ನೂ, ಬಿಲ್ವ ಪತ್ರೆಯನ್ನೂ, ಮುಳ್ಳು ಬೇಲದ ಪತ್ರೆಯನ್ನೂ ಸಹ ಆ ಕಲಶದಲ್ಲಿ ಹಾಕಬೇಕು.

---

1 ಇದರ ನಿರ್ಮಾಣವನ್ನು ಹಿಂದೆ ಹೇಳಿರುವುದಿಲ್ಲ

ಏವಂ ಸ್ನಾತೋ ಘೃತೇ ದೃಷ್ಟ್ವಾ ವದನಂ ತರ್ಪಣಂ ತಥಾ ।
ಮಂಗಳಾಲಂಭನಂ ಕೃತ್ವಾ ಧೌತವಾಸಾಃ ಸಮಾಹಿತಃ ॥ ೨೫ ॥

ಅಭ್ಯರ್ಚನಂ ತತಃ ಕುರ್ಯಾದ್ದೇವಾದೀನಾಂ ಪೃಥಕ್ಪೃಥಕ್ ।
ತೇಷಾಮೇವ ತತೋ ವಹ್ನೌ ಚತುರ್ಥ್ಯಂತೈಸ್ತು ನಾಮಭಿಃ ॥ ೨೬ ॥

ಓಂಕಾರಪೂರ್ವ್ವಂ ಜುಹುಯಾತ್ ಘೃತಂ ಬಹು ಪುರೋಹಿತಃ ।
ಆಯುಧಾಭ್ಯರ್ಚನಂ ಕಾರ್ಯಂ ವಾಹನಾಭ್ಯರ್ಚನಂ ತತಃ ॥ ೨೭ ॥

ರಾಜಚಿಹ್ನಾರ್ಚನಂ ಕೃತ್ವಾ ಹ್ಯಲಂಕೃತ್ಯ ಸ್ವಕಾಂ ತನುಂ ।
ಅನುಲೇಪನಮಾದದ್ಯಾದ್ಗಂಧದ್ವಾರೇತಿ ಮಂತ್ರತಃ ॥ ೨೮ ॥

ಶುಭಂ ವಸನಮಾದದ್ಯಾಚ್ಛ್ರೀ ಸೂಕ್ತೇನಾಭಿಮಂತ್ರಿತಂ ।
ಶ್ರಿಯಂ ಧಾತರ್ಮಯಿ ದೇಹಿ ಮಂತ್ರಃ ಸುಮನಸಾಂ ಭವೇತ್ ॥ ೨೯ ॥

---

೨೫-೨೬. ಈ ರೀತಿ ಸ್ನಾನಮಾಡಿ ಅನಂತರ ಆಜ್ಯಾವೇಕ್ಷಣವನ್ನೂ ತರ್ಪಣವನ್ನೂ ಮಾಡಿ ಮಂಗಳ ವಸ್ತುಗಳನ್ನು ಸ್ಪರ್ಶಮಾಡಿ ಶುಚಿಯಾದ ವಸ್ತ್ರವನ್ನು ಧರಿಸಿ ಶಾಂತ ಚಿತ್ತನಾಗಿದ್ದು ಆಯಾಯ ದೇವತೆಗಳ ಪೂಜೆಯನ್ನು ಬೇರೆ ಬೇರೆ ನಡೆಸಬೇಕು ಅನಂತರ ಆ ದೇವತೆಗಳಿಗಾಗಿ ಅವರವರ ಹೆಸರಿನ ಚತುರ್ಥೀ ವಿಭಕ್ತ್ಯಂತ ಪದದಿಂದ ಪುರೋಹಿತನು ಓಂಕಾರಪೂರ್ವಕವಾಗಿ ಹೆಚ್ಚಾದ ಆಜ್ಯವನ್ನು ಅಗ್ನಿಯಲ್ಲಿ ಹೋಮಮಾಡಬೇಕು

೨೭-೨೯. ಅನಂತರ ಆಯುಧಗಳ ಮತ್ತು ವಾಹನಗಳ ಪೂಜೆಯನ್ನು ನೆರವೇರಿಸಬೇಕು. ರಾಜನ ಬಿರುದಾವಳಿಗಳನ್ನೂ ಪೂಜಿಸಿ ಪುರೋಹಿತನು ತನ್ನನ್ನು ಅಲಂಕರಿಸಿ ಕೊಳ್ಳಬೇಕು. ಗಂಧದ್ವಾರಾ ಎಂಬ ಮಂತ್ರದಿಂದ ಚಂದನವನ್ನು ಸ್ವೀಕರಿಸಬೇಕು ಶ್ರೀ ಸೂಕ್ತದಿಂದ ಅಭಿಮಂತ್ರಿಸಿ ಶುಭ ವಸ್ತ್ರವನ್ನು ಸ್ವೀಕರಿಸಬೇಕು. ಹೂವುಗಳನ್ನು ಶ್ರಿಯಂ ಧಾತರ್ಮಯಿ ದೇಹಿ ಎಂಬ ಮಂತ್ರದಿಂದಲೂ ಅಲಂಕಾರಗಳನ್ನು ರಾಯಸ್ಪೋಷ ಎಂಬ ಮಂತ್ರದಿಂದಲೂ ಸ್ವೀಕರಿಸಬೇಕು.

ರಾಯಸ್ಪೋಷೇತಿ ಚ ತಥಾ ಮಂತ್ರೋಲಂಕರಣೇ ಸ್ಮೃತಃ ।
ತತೋಽನುಲಿಪ್ತಃ ಸುರಭಿಃ ಸ್ರಗ್ವೀ ರುಚಿರಭೂಷಣಃ  ॥ ೩೦ ॥

ಕೇಶವಾಭ್ಯರ್ಚನಂ ಕೃತ್ವಾ ವಹ್ನಿಸ್ಥಾನಂ ತತೋ ವ್ರಜೇತ್ ।
ವಹ್ನೇರುತ್ತರದಿಗ್ಭಾಗೇ ತತಃ ಪ್ರಾಗುಕ್ತಕರ್ಮಣಾಂ  ॥ ೩೧ ॥

ಸಿಹ್ಮಾಸನಂ ನ್ಯಸೇತ್ಪೃಷ್ಠೇ ಭವ್ಯಾಸ್ತರಣಸಂಯುತಂ ।
ತತಸ್ತು ರಾಮ ಚರ್ಮಾಣಿ ಪ್ರಾಗ್ಗ್ರೀವಾಣಿ ತು ವಿನ್ಯಸೇತ್  ॥ ೩೨ ॥

ವೃಷಸ್ಯ ವೃಷದಂಶಸ್ಯ ಕರೇಶ್ಚ ಪೃಷತಸ್ಯ ಚ ।
ತೇಷಾಮುಪರಿ ಸಿಹ್ಮಸ್ಯ ವ್ಯಾಘ್ರಸ್ಯ ಚ ತತಃಪರಂ  ॥ ೩೩ ॥

ಧ್ರುವಾ ದ್ಯೌರಿತಿ ಮಂತ್ರೇಣ ನೃಪಂ ತತ್ರೋಪವೇಶಯೇತ್ ।
ದರ್ಭಪಾಣಿಸ್ತತೋ ರಾಜಾ ತಥೈವ ಚ ಪುರೋಹಿತಃ  ॥ ೩೪ ॥

---

೩೦–೩೩. ಅನಂತರ ಗಂಧಾದಿಲೇಪನ ಹೊಂದಿ ಹೂಮಾಲಿಕೆಗಳಿಂದಲೂ ಸುಗಂಧಿದ್ರವ್ಯಗಳಿಂದಲೂ ಪರಿಮಳ ಹೊಂದಿ ರಮ್ಯಾಲಂಕಾರ ಶೋಭಿತನಾಗಿ ಕೇಶವನ ಪೂಜೆಯನ್ನು ಮಾಡಬೇಕು. ಅನಂತರ ಅಗ್ನಿಯ ಸ್ಥಳಕ್ಕೆ ಹೋಗಬೇಕು. ಅಲ್ಲಿ ಅಗ್ನಿಯ ಸ್ಥಳಕ್ಕಿಂತಲೂ ಉತ್ತರಭಾಗದಲ್ಲಿ ಹಿಂದೆ ಹೇಳಿರುವ ದೇವತೆಗಳ ಮತ್ತು ರಾಜ ಚಿಹ್ನೆಗಳ ಹಿಂಭಾಗದಲ್ಲಿ ಮಂಗಳಕರವಾದ ಆಸ್ತರಣವನ್ನಿಟ್ಟು ಅದರ ಮೇಲೆ ಸಿಂಹಾಸನವನ್ನಿಡಬೇಕು. ಆ ಸಿಂಹಾಸನದ ಮೇಲೆ ಮುಂದೆ ಹೇಳುವ ಚರ್ಮಗಳನ್ನು ಪೂರ್ವ ಶಿರಸ್ಕಗಳನ್ನಾಗಿ ಹಾಸಬೇಕು. ಎತ್ತಿನ ಚರ್ಮವನ್ನು ಅದರ ಮೇಲೆ ಬೆಕ್ಕಿನ ಚರ್ಮವನ್ನೂ ಅನಂತರ ಆನೆಯ ಚರ್ಮವನ್ನೂ ಅನಂತರ ಜಿಂಕೆಯ ಚರ್ಮವನ್ನೂ ಅವುಗಳ ಮೇಲೆ ಸಿಂಹದ ಚರ್ಮವನ್ನೂ ಅನಂತರ ಹುಲಿಯ ಚರ್ಮವನ್ನೂ ಹಾಸಬೇಕು.

೩೪–೩೬. ಧ್ರುವಾದ್ಯೌಃ ಎಂಬ ಮಂತ್ರದಿಂದ ದೊರೆಯನ್ನು ಅಲ್ಲಿ ಕೂರಿಸಬೇಕು. ದೊರೆಯು ದರ್ಭಪಾಣಿಯಾಗಿ ಕುಳಿತೊಡನೆಯೇ ಪುರೋಹಿತನೂ ದರ್ಭಹಸ್ತನಾಗಿ ಅಲ್ಲಿ ಕೂಡಬೇಕು. ಅವರಿಬ್ಬರ ಕೈಯಲ್ಲಿರುವ ದರ್ಭೆಗಳಿಗೂ ಅಗ್ರಭಾಗದಲ್ಲಿ ಬ್ರಾಹ್ಮಣನೊಬ್ಬನು ಗಂಟನ್ನು ಹಾಕಬೇಕು. ಅನಂತರ ಪುರೋ

ತಯೋರ್ಹಸ್ತಗತಾವಗ್ರೇ ದರ್ಭೌ ಸಂಗ್ರಥಯೇದ್ದ್ವಿಜಃ ।
ತತಃ ಪುರೋಧಾ ಜುಹುಯಾತ್ ಬ್ರಾಹ್ಮೈರ್ಮಂತ್ರೈಃ ಘೃತಂ ಶುಚಿಃ ॥

ರೌದ್ರವೈಷ್ಣವವಾಯವ್ಯಶಾಕ್ರಸೌಮ್ಯೈಃ ಸವಾರುಣೈಃ ।
ಬಾರ್ಹಸ್ಪತ್ಯೈಸ್ತತಃ ಕುರ್ಯಾತ್ತಂತ್ರಮುತ್ತರಸಂಜ್ಞಕಂ ॥ ೩೭ ॥

ದೈವಜ್ಞಃ ಪ್ರಯತಃ ಕುರ್ಯಾದ್ದೇವತಾನಾಂ ವಿಸರ್ಜನಂ ।
ಯಾಂತು ದೇವಗಣಾಃ ಸರ್ವೇ ಸಾನುಗಾಃ ಸಪರಿಚ್ಛದಾಃ ॥ ೩೭ ॥

ಆದಾಯ ಪಾರ್ಥಿವಾತ್ಪೂಜಾಂ ನಗರಾಗಮನಾಯ ಚ ।
ತತಸ್ತು ಪೂಜಯೇದ್ರಾಜಾ ಸಾಂವತ್ಸರಪುರೋಹಿತೌ ॥ ೩೮ ॥

ಧನೇನ ಬ್ರಾಹ್ಮಣಾನಾಂ ಚ ತತೋ ದದ್ಯಾಚ್ಚ ದಕ್ಷಿಣಾಂ ।
ಮಂಗಲಾಲಂಭನಂ ಕೃತ್ವಾ ಖಡ್ಗಪಾಣಿರ್ಗೃಹಾದ್ವ್ರಜೇತ್ ।
ಶಾಂತಿಘೋಷೇಣ ಮಹತಾ ರಾಜಾ ಕುಂಜರಗಸ್ತತಃ ॥ ೩೯ ॥

ಹಿತನು ಶುಚಿಯಾಗಿದ್ದು ಬ್ರಾಹ್ಮಣಮಂತ್ರಗಳಿಂದ ಆಜ್ಯಹೋಮವನ್ನು ಮಾಡಬೇಕು. ಅನಂತರ ರೌದ್ರ, ವೈಷ್ಣವ, ವಾಯವ್ಯ, ಶಾಕ್ರ, ಸೌಮ್ಯ, ವಾರುಣ, ಬಾರ್ಹಸ್ಪತ್ಯ ಈ ಮಂತ್ರಗಳಿಂದ ಉತ್ತರತಂತ್ರವೆಂಬ ಕರ್ಮವನ್ನು ಮಾಡಬೇಕು.

೩೭–೩೯. ಅನಂತರ ಜ್ಯೋತಿಷಿಕನು ಪರಿಶುದ್ಧನಾಗಿದ್ದು ದೇವತೆಗಳನ್ನೆಲ್ಲಾ ವಿಸರ್ಜಿಸಬೇಕು. ಎಲ್ಲಾ ದೇವತೆಗಳೂ ಅವರವರ ಪರಿವಾರ ಮತ್ತು ಪರಿಕರಗಳೊಡನೆ ಹೊರಡಲಿ. ಪುನಃ ನಗರದಲ್ಲಿ ಪೂಜಾದಿಕಾಲಗಳಲ್ಲಿ ಸಾನ್ನಿಧ್ಯಹೊಂದಲು ರಾಜನಿಂದ ಪೂಜೆಯನ್ನು ಹೊಂದಿ ಸಂತೋಷದಿಂದ ಎಲ್ಲರೂ ಹೊರಡಲಿ. ಹೀಗೆ ದೇವತೆಗಳನ್ನು ವಿಸರ್ಜನೆಮಾಡಿದನಂತರ ರಾಜನು ಜ್ಯೋತಿಷಿಕ ಮತ್ತು ಪುರೋಹಿತ|ಇವರಿಬ್ಬರನ್ನೂ ಧನಾದಿಗಳಿಂದ ಪೂಜಿಸಬೇಕು ಅನಂತರ ಬ್ರಾಹ್ಮಣರಿಗೆ ದಕ್ಷಿಣೆಯನ್ನೂ ಕೊಟ್ಟು ಮಂಗಳಕರವಾದ ಪೂರ್ಣಕುಂಭಾದಿಗಳನ್ನು ಸ್ಪರ್ಶಮಾಡಿ ಕೈಯಲ್ಲಿ ಖಡ್ಗವನ್ನು ಹಿಡಿದು ಆ ಶಾಂತಿಗೃಹದಿಂದ ಹೊರಟು ಶಾಂತಿಮಂತ್ರಗಳ ಘೋಷಣೆಯಿಂದ ಕೂಡಿ ಆನೆಯ ಮೇಲೆ ಕೂಡಬೇಕು.

ಶಾಂತಿರ್ಮಯಾ ತೇಽಭಿಹಿತಾ ನೃವೀರ
ಧನ್ಯಾ ಯಶಸ್ಯಾ ರಿಪುನಾಶನೀ ಚ ।
ಸುಖಾವಹಾ ರಾಷ್ಟ್ರವಿವೃದ್ಧಿಕರ್ತ್ರೀ
ಕಾರ್ಯಾ ನೃಪೈರ್ಧರ್ಮವಿವೃದ್ಧಿದಾ ಚ　　॥ ೪೦ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ಘೃತಕಂಬಲಶಾಂತಿಕಥನೋ ನಾಮ
ಏಕಷಷ್ಟ್ಯುತ್ತರಶತತಮೋಽಧ್ಯಾಯಃ

---

೪೦. ಎಲೈ ಮನುಜೋತ್ತಮನೇ ಧನಪ್ರದವಾಗಿಯೂ, ಯಶಸ್ಕರವಾಗಿಯೂ ಶತ್ರುನಾಶಕವಾಗಿಯೂ, ಸುಖಪ್ರದವಾಗಿಯೂ, ರಾಜ್ಯವೃದ್ಧಿಗೆ ಕಾರಣವಾಗಿಯೂ ಇರುವ ಈ ಶಾಂತಿಯನ್ನು ನಿನಗೆ ಹೇಳಿರುವೆನು. ಧರ್ಮಾಭಿವೃದ್ಧಿಗೆ ಸಾಧಕವಾದ ಈ ಶಾಂತಿಯನ್ನು ರಾಜರು ಮಾಡಿಯೇ ಮಾಡಬೇಕು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ
ಘೃತಕಂಬಲ ಶಾಂತಿಕಥನವೆಂಬ ನೂರ ಅರವತ್ತೊಂದನೆಯ
ಅಧ್ಯಾಯ ಮುಗಿದಿದೆ.

|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ದ್ವಿಷಷ್ಟ್ಯುತ್ತರಶತತಮೋಽಧ್ಯಾಯಃ

|| ರಾಮ ಉವಾಚ ||

**ಸಂವತ್ಸರಾಭಿಷೇಕಂ ಚ ಕಥಯಸ್ವ ಮಹೀಭೃತಃ ।**
**ತತ್ರ ಮೇ ಸಂಶಯೋ ದೇವ ತ್ವಂ ಹಿ ಸರ್ವಂ ವಿಪಶ್ಯಸಿ || ೧ ||**

|| ಪುಷ್ಕರ ಉವಾಚ ||

**ರಾಜಾಭಿಷೇಕನಕ್ಷತ್ರೇ ಪ್ರತಿಸಂವತ್ಸರಂ ದ್ವಿಜ ।**
**ಪೂರ್ವಾಭಿಷೇಕವಿಧಿನಾ ಕರ್ತವ್ಯಮಭಿಷೇಚನಂ || ೨ ||**

---

### ನೂರ ಅರವತ್ತೆರಡನೇ ಅಧ್ಯಾಯ.

ರಾಮನು ಪ್ರಶ್ನೆ ಮಾಡುತ್ತಾನೆ.—ಎಲೈ ಸರ್ವಜ್ಞನೇ, ರಾಜನಿಗೆ ನಡೆಯಬೇಕಾದ ಸಂವತ್ಸರಾಭಿಷೇಕವನ್ನು ನನಗೆ ಹೇಳು. ಅದರ ವಿಷಯದಲ್ಲಿ ನನಗೆ ಸಂಶಯ ಉಂಟಾಗಿದೆ. ಈ ಪ್ರಶ್ನೆಗೆ ಉತ್ತರವಾಗಿ ಪುಷ್ಕರನು ಹೇಳುತ್ತಾನೆ.

೨–೩. ರಾಜನು ಮೊದಲು ಯಾವ ನಕ್ಷತ್ರದಲ್ಲಿ ಅಭಿಷೇಕ ಹೊಂದಿರುವನೋ ಮುಂದಿನ ಪ್ರತಿವರ್ಷದಲ್ಲಿಯೂ ಆ ನಕ್ಷತ್ರದಲ್ಲಿ ಮೊದಲು ನಡೆದ ಅಭಿಷೇಕ ವಿಧಿಯನ್ನೇ ಅನುಸರಿಸಿ ಅಭಿಷೇಕವನ್ನು ಮಾಡಬೇಕು. ಈ ರೀತಿ ರಾಜನಿಗೆ ಪ್ರತಿ

ಧನ್ಯಂ ಯಶಸ್ಯಂ ರಿಪುನಾಶನಂ ಚ
ಸೌಭಾಗ್ಯದಂ ಪುಷ್ಟಿವಿವರ್ಧನಂ ಚ ।
ವರ್ಷಾಭಿಷೇಕಂ ನೃಪತೇಃ ಪ್ರದಿಷ್ಟಂ
ಸೌಖ್ಯಾವಹಂ ರಾಜ್ಯವಿವೃದ್ಧಿದಂ ಚ ॥ ೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ಸಂವತ್ಸರಾಭಿಷೇಕಾಧ್ಯಾಯೋ ನಾಮ
ದ್ವಿಷಷ್ಟ್ಯುತ್ತರಶತತಮೋಽಧ್ಯಾಯಃ

---

ವರ್ಷವೂ ನಡೆಯುವ ಅಭಿಷೇಕವು ಧನಪ್ರದವಾಗಿಯೂ, ಯಶಃಪ್ರದವಾಗಿಯೂ, ಶತ್ರುನಾಶಕವಾಗಿಯೂ, ಸೌಭಾಗ್ಯ ಪ್ರದವಾಗಿಯೂ, ಪುಷ್ಟಿಕರವಾಗಿಯೂ, ಸೌಖ್ಯ ಪ್ರದವಾಗಿಯೂ, ರಾಜಾಭಿವೃದ್ಧಿಗೆ ಕಾರಣವಾಗಿಯೂ ಆಗುತ್ತದೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ
ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನ ಉಪಾಖ್ಯಾನದಲ್ಲಿ
ಸಂವತ್ಸರಾಭಿಷೇಕಾಧ್ಯಾಯವೆಂಬ ನೂರ ಅರವತ್ತೆರಡನೆಯ
ಅಧ್ಯಾಯವು ಮುಗಿದಿದೆ



॥ ಓಂ ॥

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ತ್ರಿಷಷ್ಟ್ಯುತ್ತರಶತತಮೋಽಧ್ಯಾಯಃ

॥ ರಾಮಉವಾಚ ॥

ಭಗವನ್ ಸರ್ವಧರ್ಮಜ್ಞ ಸರ್ವಶಾಸ್ತ್ರವಿದಾಂ ವರ ।
ಯಾತ್ರಾಕಾಲವಿಧಾನಂ ಮೇ ಕಥಯಸ್ವ ಮಹೀಕ್ಷಿತಾಂ ॥ ೧ ॥

॥ ಪುಷ್ಕರ ಉವಾಚ ॥

ಯದಾ ಮನ್ಯೇತ ನೃಪತಿರಾಕ್ರಂದೇನ ಬಲೀಯಸಾ ।
ಪಾರ್ಷ್ಣಿಗ್ರಹೇಣಾಭಿಭೂತಂ ತದಾ ಯಾತ್ರಾಂ ಪ್ರಯೋಜಯೇತ್ ॥ ೨ ॥

ಪುಷ್ಟಾ ಯೋಽದ್ಯ ಭೃತಾ ಭೃತ್ಯಾಃ ಪ್ರಭೂತಂ ಚ ಬಲಂ ಮಮ ।
ಮೂಲರಕ್ಷಾ ಸಮರ್ಥೋಽಸ್ಮಿ ತದಾ ಯಾತ್ರಾಂ ಪ್ರಯೋಜಯೇತ್ ॥ ೩ ॥

---

### ನೂರ ಅರವತ್ತಮೂರನೆಯ ಅಧ್ಯಾಯ.

೧ ರಾಮನು ಪ್ರಶ್ನೆಮಾಡುತ್ತಾನೆ.—ಸರ್ವಧರ್ಮಜ್ಞನೂ, ಸರ್ವಶಾಸ್ತ್ರಜ್ಞನೂ, ಆದ ಎಲೈ ಪೂಜ್ಯನೇ, ರಾಜರು ತಮ್ಮ ವಿಜಯಯಾತ್ರೆಯನ್ನು ಯಾವ ಕಾಲದಲ್ಲಿ ಮಾಡಬೇಕೆಂಬುದನ್ನು ದಯವಿಟ್ಟು ಹೇಳು. ಇದಕ್ಕೆ ಉತ್ತರವಾಗಿ ಪುಷ್ಕರನು ಹೇಳುತ್ತಾನೆ.

೨-೪ ಯಾವಾಗ ಆಕ್ರಮಣಕ್ಕಾಗಿ ಬರುತ್ತಿರುವ ಆಕ್ರಂದನೆಂಬ ಬಲಿಷ್ಠನಾದ ಹಿಂಭಾಗದ ಶತ್ರುವಿನಿಂದ ತನಗೆ ಸೋಲು ಉಂಟಾಗಬಹುದೆಂದು ತೋರಿ ಬರುತ್ತದೆಯೋ ಆಗ ರಾಜನಾದವನು ತಾನಾಗಿ ವಿಜಯ ಯಾತ್ರೆಯನ್ನು ಕೈಗೊಳ್ಳಬೇಕು. ಅಂತಹ ವಿಜಯ ಯಾತ್ರೆಯನ್ನೂ ನಹ ನನ್ನ ಸೈನ್ಯದಲ್ಲಿರುವ ಭೃತ್ಯರು ಪುಷ್ಟಿಯಿಂದ ಕೂಡಿರುತ್ತಾರೆ. ತಕ್ಕಷ್ಟು ಹೆಚ್ಚಾಗಿಯೇ ಸೈನ್ಯವೂ ಸಿದ್ಧವಾಗಿದೆ.

ಪಾರ್ಷ್ಣಿಗ್ರಾಹಾಧಿಕಂ ಸೈನ್ಯಂ ಮೂಲೇ ನಿಕ್ಷಿಪ್ಯ ವಾ ವ್ರಜೇತ್ ।
ಚೈತ್ರಂ ವಾ ಮಾರ್ಗಶೀರ್ಷಂ ವಾ ಯಾತ್ರಾಂ ಯಾಯಾನ್ನರಾಧಿಪಃ ॥ ೪ ॥

ಚೈತ್ರ್ಯಾಂ ಸಸ್ಯಂ ಹಿ ನಂದಾದ್ಯಂ ಹಂತಿ ಪುಷ್ಟಿಂ ಚ ಶಾರದಂ ।
ಏತದೇವ ವಿಪರ್ಯಸ್ತಂ ಮಾರ್ಗಶೀರ್ಷ್ಯಾಂ ನರಾಧಿಪಃ ॥ ೫ ॥

ಶತ್ರೋರ್ವಾ ವ್ಯಸನೇ ಯಾಯಾತ್ಕಾಲ ಏವ ಸುದುರ್ಲಭಃ ।
ದಿವ್ಯಾಂತರಿಕ್ಷಕ್ಷಿತಿಜೈಃ ಉತ್ಪಾತೈಃ ಪೀಡಿತಂ ಭೃಶಂ ॥ ೬ ॥

ಷಡ್ವೃಕ್ಷಪೀಡನಾತ್ತಪ್ತಂ ಪೀಡಿತಂ ಚ ತಥಾ ಗ್ರಹೈಃ ।
ಪ್ರಜ್ವಲಂತಿ ತಥೈವೋಲ್ಕಾ ದಿಶಂ ಯಸ್ಯ ಪ್ರಪದ್ಯತೇ ॥ ೭ ॥

---

ಮೂಲ ಸ್ಥಾನವನ್ನೂ, ಮೂಲ ಸೈನ್ಯವನ್ನೂ, ರಕ್ಷಿಸಿಕೊಳ್ಳಲು ಸಮರ್ಥನಾಗಿದ್ದೇನೆ. ಎಂದು ತನಗೆ ಮನವರಿಕೆಯುಂಟಾದಲ್ಲಿ ಮಾತ್ರ ನಡೆಸಬೇಕು. ಅಂತಹ ಸಂದರ್ಭದಲ್ಲಿಯೂ ಸಹ ತನ್ನನ್ನು ಬೆನ್ನು ಹತ್ತಿ ಬರುತ್ತಿರುವ ಶತ್ರುವಿನ ಸೈನ್ಯಕ್ಕಿಂತಲೂ ಹೆಚ್ಚಾದ ಸೈನ್ಯವನ್ನು ತನ್ನ ಮೂಲ ಸ್ಥಾನದಲ್ಲಿ ಇಟ್ಟು ಹೊರಡಬೇಕು. ಇಂತಹ ವಿಜಯಯಾತ್ರೆಯನ್ನು ಚೈತ್ರಮಾಸದಲ್ಲಿಯಾಗಲಿ ಮಾರ್ಗಶೀರ್ಷಮಾಸದಲ್ಲಿಯಾಗಲಿ ಧೊರೆಯಾದವನು ಕೈಕೊಳ್ಳಬೇಕು

೫–೬. ಚೈತ್ರ ಶುದ್ಧ ಪೂರ್ಣಿಮೆಯಾದ ಮೇಲೆ ನಂದ ತಿಥಿಯಲ್ಲಿ ಪ್ರಯಾಣ ಮಾಡಿದಲ್ಲಿ ಅದು ಸರ್ವಸಸ್ಯನಾಶಕವಾಗುತ್ತದೆ. ಶರದೃತುವಿನ ನಂದ ತಿಥಿಯು ಪುಷ್ಟಿನಾಶಕವಾಗುತ್ತದೆ. ಇದಕ್ಕೆ ವ್ಯತ್ಯಸ್ತವಾದ ಶುಭಫಲವುಳ್ಳ ಮಾರ್ಗಶಿರ್ಷ ಪೂರ್ಣಿಮೆಯಲ್ಲಿಯೇ ಧೊರೆಯಾದವನು ವಿಜಯ ಯಾತ್ರೆ ಹೊರಡಬೇಕು. ಶತ್ರುವು ಮಂತ್ರಿ ಅಥವಾ ಪ್ರಧಾನಾಧಿಕಾರಿಗಳೊಡನೆ ಕಲಹದಿಂದ ವ್ಯಸನಿಯಾಗಿದ್ದಲ್ಲಿ ಆಗಲೇ ಯಾತ್ರೆಯನ್ನು ಕೈಗೊಳ್ಳಬೇಕು. ಇಂತಹ ಸಮಯವು ಬಹಳ ದುರ್ಲಭವಾದುದು ಮತ್ತು ಶತ್ರುವು ದಿವ್ಯ ಆಂತರಿಕ್ಷ, ಭೌಮ ಮೊದಲಾದ ಅಪಶಕುನ ಸೂಚಕಗಳಾದ ಉತ್ಪಾತಗಳಿಂದ ಪೀಡಿತನಾಗಿ ವ್ಯಥೆ ಪಡುತ್ತಿರುವ ಕಾಲದಲ್ಲಿಯೂ ಸಹ ಇಂತಹ ವಿಜಯ ಯಾತ್ರೆಯು ಪ್ರಶಸ್ತ.

೭–೮. ಕೃತ್ತಿಕೆಯೇ ಮೊದಲಾದ ಆರು ಕ್ರೂರನಕ್ಷತ್ರಗಳಿಂದಲೂ ಪ್ರತಿಕೂಲವಾಗಿರುವ ಗ್ರಹಗಳಿಂದಲೂ ತೊಂದರೆಗೆ ಸಿಕ್ಕಿರುವ ಶತ್ರುವಿನಮೇಲೆ ವಿಜಯ

ಭೂಕಂಪೋ ಯಾಂ ದಿಶಂ ಯಾತಿ ಯಾಂ ಚ ಕೇತುಃ ಪ್ರಧೂಮಯೇತ್ ।
ನಿರ್ಘಾತಃ ಶ್ರೂಯತೇ ಯತ್ರ ತಾಂ ಯಾಯಾದ್ವಸುಧಾಧಿಪಃ ॥ ೮ ॥

ಸ್ವಬಲವ್ಯಸನೋಪೇತಂ ತಥಾ ದುರ್ಭಿಕ್ಷಪೀಡಿತಂ ।
ಸಂಭೂತಾಂತರಕೋಪಂ ಚ ಕ್ಷಿಪ್ರಂ ಯಾಯಾದರಿಂ ನೃಪಃ ॥ ೯ ॥

ಯೂಕಾಮಕ್ಷಿಕಬಹುಲಂ ಬಹುವಿಘ್ನಂ ತಥಾ ಬಿಲಂ ।
ನಾಸ್ತಿಕಂ ಭಿನ್ನಮರ್ಯಾದಂ ತಥಾಮಂಗಲವಾದಿ ಚ ॥ ೧೦ ॥

---

ಯಾತ್ರೆಯನ್ನು ಕೈಗೊಳ್ಳಬೇಕು. ಯಾವ ದಿಕ್ಕಿನ ದೇಶದಲ್ಲಿ ಅಶುಭಸೂಚಕವಾದ ಕೊಳ್ಳಿಗಳು ಉರಿಯುವುವೋ ಮತ್ತು ಭೂಕಂಪವು ಯಾವ ದಿಕ್ಕಿನ ಕಡೆಯಲ್ಲಿ ಉಂಟಾಗುವುದೋ, ಕೇತುಗ್ರಹವು ಯಾವ ದಿಕ್ಕಿನಲ್ಲಿ ನೆಲಸಿ (ಅಥವಾ ಅಶುಭ ಸೂಚಕವಾದ ಕೇತುವು ಯಾವ ದಿಕ್ಕನ್ನು ಆಶ್ರಯಿಸಿ) ಹೊಗೆಯಿಂದ ಕವಿಯುವುದೋ, ಯಾವ ದಿಕ್ಕಿನಲ್ಲಿ ಅಪಶಕುನವಾದ ಸಿಡಿಲು ಕೇಳಿಬರುವುದೋ ಅಂತಹ ದಿಕ್ಕಿನಲ್ಲಿರುವ ಶತ್ರುವನ್ನು ಲಕ್ಷಿಸಿ ವಿಜಯಯಾತ್ರೆಯನ್ನು ಕೈಗೊಳ್ಳಬೇಕು

೯-೧೦. ತನ್ನ ಸೈನ್ಯದಲ್ಲಿ ಅಂತಃಕಲಹವನ್ನುಂಟುಮಾಡಿಕೊಂಡು ವ್ಯಾಕುಲನಾಗಿಯೂ ದೇಶದ ದುರ್ಭಿಕ್ಷದಿಂದ ಪೀಡಿತನಾಗಿಯೂ, ಅಂತಃಕಲಹದಿಂದ ಕೋಪಕ್ಕೆ ಗುರಿಯಾಗಿಯೂ ಇರುವ ಶತ್ರುವಿನ ವಿಷಯದಲ್ಲಿ ಜಾಗ್ರತೆಯಾಗಿಯೇ ಯುದ್ಧಪ್ರಯತ್ನವನ್ನು ಕೈಗೊಳ್ಳಬೇಕು. ಯಾವ ಶತ್ರುವಿನ ದುರ್ಗಸ್ಥಾನವಾದ ಬಿಲವು (ಗುಹೆಯೇ ಮೊದಲಾದ ಗುಪ್ತಸ್ಥಾನ) ಹೇನು ನೊಣ ಮುಂತಾದುವುಗಳಿಂದ ಕೂಡಿ ವಾಸಕ್ಕೆ ಅನರ್ಹವಾಗಿರುವುದೋ ಅನೇಕ ವಿಘ್ನಗಳಿಂದಲೂ ಕೂಡಿರುವುದೋ ಮತ್ತು ಯಾವ ದೊರೆಯು ನಾಸ್ತಿಕನಾಗಿಯೂ ಎಲ್ಲೆ ಮೀರಿ ನಡೆಯತಕ್ಕವನಾಗಿಯೂ, ಯಾವಾಗಲೂ ಅಶುಭವನ್ನೇ ಉಚ್ಚರಿಸುವವನಾಗಿಯೂ, ಜನಗಳನ್ನು ನಿರಾಕರಿಸಿರುವವನಾಗಿಯೂ ಮತ್ತು ನಿರಾಶನಾಗಿಯೂ ಇರುತ್ತಾನೆಯೋ ಅಂತಹವನನ್ನು ಜಯಿಸಬೇಕು.

**ಅಪೇತಪ್ರಕೃತಿಂ ಚೈವ ನಿರಾಶಂ ಚ ತಥಾ ಜಯೇತ್ ।**
**ವಿಷ್ಟಿನಾಯಕಕಂ ಸೈನ್ಯಂ ತಥಾ ಭಿನ್ನಪರಸ್ಪರಂ ।** ॥ ೧೧ ॥

**ವ್ಯಸನಾಸಕ್ತನೃಪತಿಂ ಬಲಂ ರಾಜಾ ನಿಯೋಜಯೇತ್ ।**
**ಗಚ್ಛೇತ್ತು ಪಶ್ಚಾದ್ಧರ್ಮಜ್ಞ ಪುರಸ್ತಾತ್ತು ವಿಗರ್ಹಿತೈಃ** ॥ ೧೨ ॥

**ಕ್ವ ಯಾಸಿ ತಿಷ್ಠ ಮಾಗಚ್ಛ ಕಿಂ ತತ್ರ ಗಮನಸ್ಯ ಚ ।**
**ಅನ್ಯೇ ಶಬ್ದಾಶ್ಚ ಯೇ ದೃಷ್ಟಾಸ್ತೇ ವಿಪತ್ತಿಕರಾ ಅಪಿ** ॥ ೧೩ ॥

**ಧ್ವಜಾದಿಷು ತಥಾ ಸ್ಥಾನಂ ಕ್ರವ್ಯಾದಾನಾಂ ವಿಗರ್ಹಿತಂ ।**
**ಸ್ಖಲನಂ ವಾಹನಾನಾಂ ಚ ವಸ್ತ್ರಸಂಗಸ್ತಥೈವ ಚ** ॥ ೧೪ ॥

**ವಿನಿರ್ಗತಶ್ಚ ದ್ವಾರಾದ್ಯೈಃ ಶಿರಸಶ್ಚಾಭಿಘಾತನಂ ।**
**ಛತ್ರಧ್ವಜಾದಿವಸ್ತ್ರಾಣಾಂ ಪತನಂ ಚ ತಥಾಶುಭಂ** ॥ ೧೫ ॥

೧೧-೧೩. ಯಾವ ದೊರೆಯು ಸ್ತ್ರೀ, ಮದ್ಯ, ಬೇಟೆ ಮೊದಲಾದ ವ್ಯಸನಗಳಲ್ಲೇ ನಿರತನಾಗಿ ಸೈನ್ಯವನ್ನು ಸರಿಯಾದ ಸ್ಥಿತಿಯಲ್ಲಿ ಇಟ್ಟಿರುವುದಿಲ್ಲವೋ, ಆ ಸೈನ್ಯವೂ ಕೂಡ ಅಭಿಮಾನವಿಲ್ಲದ ತನ್ನ ವೇತನಮಾತ್ರದಲ್ಲಿಯೇ ತೃಪ್ತನಾದ ನಾಯಕನನ್ನು ಹೊಂದಿಯೂ, ಪರಸ್ಪರ ಒಡಕಿನಿಂದಕೂಡಿಯೂ ಇರುತ್ತದೆಯೋ ಅಂತಹ ಸೈನ್ಯದ ವಿಷಯದಲ್ಲಿ ವಿಜಯಾಭಿಲಾಷೆಯುಳ್ಳದೊರೆಯು ಮೊದಲು ತನ್ನ ಸೈನ್ಯವನ್ನೇ ಕಳುಹಿಸಬೇಕು. ಅನಂತರ ತಾನು ಹಿಂದಿನಿಂದ ಹೋಗಬೇಕು. ಮತ್ತು ನಿಂದಿತರಾದ ಕೆಲವು ಪರಿವಾರವನ್ನು ಮೊದಲು ಕಳುಹಿಸಿ ತಮಗೆ ಎದಿರಾಗಿ ಬರಲು ಪ್ರಯತ್ನಿಸುತ್ತಿರುವ ಆ ದುರ್ಬಲಸೈನ್ಯವನ್ನು, ಎಲ್ಲಿ ಹೋಗುತ್ತೀರಿ, ನಿಲ್ಲಿರಿ ಹೋಗಬೇಡಿ, ಅಲ್ಲಿಹೋಗಿ ಏನು ಪ್ರಯೋಜನ ಇತ್ಯಾದಿ ಶಬ್ದಗಳಿಂದಲೂ, ಇತರ ಅಪಶಕುನಸೂಚಕವಾದ ವಿಪತ್ಕಾರಕ ಶಬ್ದಗಳಿಂದಲೂ, ಗದರಿಸಿ ತಡೆದು ನಿಲ್ಲಿಸಬೇಕು.

೧೪-೧೫. ಈ ಪ್ರಸಂಗದಲ್ಲಿ ಅಶುಭಕರವಾದ ಶಕುನಗಳನ್ನೂ ಹೇಳುತ್ತಾರೆ. ಧ್ವಜವೇ ಮೊದಲಾದ ಪ್ರಧಾನಸಾಮಗ್ರಿಗಳಮೇಲೆ ಮಾಂಸಾಹಾರಿಗಳಾದ ಹದ್ದು ಮೊದಲಾದಪಕ್ಷಿಗಳು ಕುಳಿತಲ್ಲಿ ಅದು ನಿಂದಿತವಾದ ಅಮಂಗಲ, ಮತ್ತು ರಥಾಶ್ವಾದಿ ವಾಹನಗಳು ಎಡವಿದಲ್ಲಿಯೂ ಮತ್ತು ಗಮನಕಾಲದಲ್ಲಿ ಪಾರ್ಶ್ವಭಾಗದಲ್ಲಿ ವಸ್ತ್ರವು

ದೃಷ್ಟ್ವಾ ನಿಮಿತ್ತಂ ಪ್ರಥಮಮಮಂಗಲ್ಯಂ ವಿನಾಶನಂ ।
ಕೇಶವಂ ಪೂಜಯೇದ್ವಿದ್ವಾಂಸ್ತಥೈವ ಮಧುಸೂದನಂ ॥ ೧೬ ॥

ದ್ವಿತೀಯೇ ತು ತಥಾ ದೃಷ್ಟೇ ಪ್ರತೀಪೇ ಪ್ರವಿಶೇದ್ಗೃಹಂ ।
ಅಥೇಷ್ಟಾನಿ ಪ್ರವಕ್ಷ್ಯಾಮಿ ಮಂಗಲ್ಯಾನಿ ತಥಾನಘ ॥ ೧೭ ॥

ಶ್ವೇತಾಃ ಸುಮನಸಃ ಶ್ರೇಷ್ಠಾ ಪೂರ್ಣಕುಂಭಂ ತಥೈವ ಚ ।
ಜಲಜಾನಿ ಚ ಮತ್ಸ್ಯಾನಿ ಮಾಂಸಂ ಮತ್ಸ್ಯಾಶ್ಚ ಭಾರ್ಗವ ॥ ೧೮ ॥

ಗಾವಸ್ತುರಂಗಮಾ ನಾಗಾಃ ಬದ್ಧ ಏಕಃ ಪಶುಸ್ತಥಾ ।
ತ್ರಿದಶಾಃ ಸುಹೃದೋ ವಿಪ್ರಾಃ ಜ್ವಲಿತಶ್ಚ ಹುತಾಶನಃ ॥ ೧೯ ॥

ಗಣಿಕಾಶ್ಚ ಮಹಾಭಾಗಾಃ ಪೂರ್ವಾಚಾರ್ಯಾಶ್ಚ ಗೋಮಯಂ ।
ರುಕ್ಮಂ ರೌಪ್ಯಂ ತಥಾ ತಾಮ್ರಂ ಸರ್ವರತ್ನಾನಿ ಚಾಪ್ಯಥ ॥ ೨೦ ॥

---

ಸಿಕ್ಕಿಕೊಂಡು ಉಂಟಾಗುವ ಗಮನದತಡೆಯೂ, ಮತ್ತು ಮನೆಯಿಂದ ಹೊರಡುವಾಗ ಬಾಗಿಲಿನ ಮೇಲುಭಾಗವು ತಲೆಗೆ ತಗುಲುವುದೂ, ಛತ್ರಧ್ವಜ ಇವುಗಳ ವಸ್ತ್ರಗಳು ಹಠಾತ್ತಾಗಿ ಕೆಳಗೆ ಬೀಳೋಣವೂ ಸಹ ಅಶುಭಸೂಚಕ ಚಿಹ್ನೆಗಳು.

೧೬-೧೭. ಇಂತಹ ಅಮಂಗಳಕರವಾದ ಅಪಶಕುನವನ್ನು ವಿನಾಶಕವನ್ನಾಗಿ ತಿಳಿದು ಅವು ಮೊದಲು ಕಂಡ ಒಡನೆಯೇ ಪ್ರಯಾಣದಿಂದ ಹಿಂತಿರುಗಿ ಕೇಶವನನ್ನೂ, ಮಧುಸೂದನನ್ನೂ ಆಯಾಯ ವಿಗ್ರಹಗಳಿಂದ ಪೂಜಿಸಬೇಕು. ಪುನಃ ಪ್ರಯಾಣಮಾಡುವಾಗ ಎರಡನೆಯ ಸಲವೂ ಇಂತಹ ಅಪಶಕುನಗಳು ಕಂಡು ಬಂದಲ್ಲಿ ಪ್ರಯಾಣವನ್ನು ನಿಲ್ಲಿಸಿ ಮನೆಗೆ ಹಿಂತಿರುಗಬೇಕು. ಈ ಸಂದರ್ಭದಲ್ಲಿ ಮಂಗಳಕರವಾದ ಶುಭಶಕುನಗಳನ್ನೂ ಹೇಳುತ್ತೇನೆ ಕೇಳು.

೧೮-೨೦. ಬಿಳಿಯ ಹೂವುಗಳು ಪ್ರಶಸ್ತ ಹಾಗೆಯೇ ಪೂರ್ಣಕುಂಭ, ಜಲದಲ್ಲಿ ಹುಟ್ಟಿದ ಮತ್ತು ಸ್ಥಲದಲ್ಲಿ ಹುಟ್ಟಿದ ಮತ್ಸ್ಯಗಳು, ಮಾಂಸ, ಹಸುಗಳು, ಕುದುರೆಗಳು, ಆನೆಗಳು, ಕಟ್ಟಿಹಾಕಿರುವಒಂಟಿಯಾದಹಸು, ದೇವತೆಗಳು, ಸ್ನೇಹಿತರು, ಬ್ರಾಹ್ಮಣರು, ಉರಿಯುತ್ತಿರುವಬೆಂಕಿ, ವೇಶ್ಯೆಯರು, ಪೂರ್ವಾಚಾರ್ಯರು, ಹಸುವಿನಸಗಣಿ, ಚಿನ್ನ, ಬೆಳ್ಳಿ, ತಾಮ್ರ, ರತ್ನಗಳು.

ಔಷಧಾನಿ ಚ ಸರ್ವಜ್ಞ ವಚಾ ಸಿದ್ಧಾರ್ಥಕೇ ತಥಾ ।
ನಿಬದ್ಧಯಾನಂ ಯಾನಂ ಚ ಭದ್ರಪೀಠಂ ತಥೈವ ಚ ॥ ೨೧ ॥

ಖಡ್ಗಂ ಛತ್ರಂ ಪತಾಕಾಂ ಚ ಮೃದಮಾಯುಧಮೇವ ಚ ।
ರಾಜಲಿಂಗಾನಿ ಸರ್ವಾಣಿ ಶವಂ ರುದಿತವರ್ಜಿತಂ ॥ ೨೨ ॥

ಘೃತಂ ದಧಿಪಯಶ್ಚೈವ ಫಲಾನಿ ವಿವಿಧಾನಿ ಚ ।
ಸ್ವಸ್ತಿಕಂ ವರ್ಧಮಾನಂ ಚ ನಂದ್ಯಾವರ್ತಂ ಸಕೌಸ್ತುಭಂ ॥ ೨೩ ॥

ನದ್ಯಶ್ಚ ಚಿತ್ರವಿನ್ಯಸ್ತಾಃ ಮಂಗಲ್ಯಾನ್ಯಪರಾಣಿ ಚ ।
ಅಕ್ಷತಾಶ್ಚ ತಥಾ ಮುಖ್ಯಾಃ ತಥಾ ದರ್ಪಣಮೇವ ಚ ॥ ೨೪ ॥

ಅಂಜನಂ ರೋಚನಂ ಚೈವ ಭೃಂಗಾರೋ ಮಾಕ್ಷಿಕಂ ತಥಾ ।
ಶಂಖ ಇಕ್ಷುಸ್ತಥಾ ಭಕ್ಷ್ಯಾ ವಾಚಶ್ಚೈವ ತಥಾ ಶುಭಾಃ ॥ ೨೫ ॥

ವಾದಿತ್ರಾಣಾಂ ಸುಖಃ ಶಬ್ದಃ ಗಂಭೀರಶ್ಚ ಮನೋಹರಃ ।
ಗಾಂಧಾರಷಡ್ಜ ಋಷಭಾಃ ಯಾನೇ ಶಸ್ತಾಸ್ತಥಾ ಸ್ವರಾಃ ॥ ೨೬ ॥

೨೧—೨೪ ಮತ್ತು ಔಷಧಗಳು, ಬಜೆ, ಬಿಳಿಯಸಾಸವೆ, ಎತ್ತು ಕುದುರೆಗಳಿಂದ ಕಟ್ಟಲ್ಪಟ್ಟಿರುವ ಯಾನ, ಮಂಗಲಪೀಠ (ಭದ್ರಾಸನ) ಖಡ್ಗ, ಛತ್ರಿ, ಧ್ವಜ, ಮಣ್ಣಿನಮುದ್ದೆ ಆಯುಧ, ರಾಜನ ಎಲ್ಲಾವಿಧವಾದ ಬಿರುದಾವಲಿಗಳು, ರೋದನಧ್ವನಿಇಲ್ಲದಿರುವ ಶವ, ಆಜ್ಯ, ಮೊಸರು, ಹಾಲು, ನಾನಾವಿಧವಾದ ಫಲಗಳು, ನೀರಿನಿಂದತುಂಬಿದ ಹೂಜಿ. ಬಾಡ್ಲಿ, ನಂದ್ಯಾವರ್ತದ ಹೂವು, ಕೌಸ್ತುಭವೆಂಬ ಹೂವು, ಚಿತ್ರದಲ್ಲಿ ಬರೆದಿರುವ ನದಿಗಳು, ಇತರ ಮಂಗಳ ದ್ರವ್ಯಗಳು, ಅಕ್ಷತೆಗಳು, ಕನ್ನಡಿ ಇವುಗಳೂ ಶುಭಕರಗಳು.

೨೫—೨೬. ಕಣ್ಣುಕಪ್ಪು, ಗೋರೋಚನ, ಚಿನ್ನದಬಟ್ಟಲು, ಜೇನು, ಶಂಖ, ಕಬ್ಬು, ಭಕ್ಷ್ಯಗಳು, ಶುಭಕರವಾದ ಮಾತುಗಳು, ಸುಖಕರವಾಗಿಯೂ ಗಂಭೀರವಾಗಿಯೂ, ಮನೋಹರವಾಗಿಯೂ ಇರುವ ವಾದ್ಯಧ್ವನಿ, ಗಾಂಧಾರ, ಷಡ್ಜ, ಋಷಭ, ಈ ಸ್ವರಗಳೂ ಸಹ ಗಮನಕಾಲದಲ್ಲಿ ಪ್ರಶಸ್ತಗಳು, ಪ್ರಯಾಣಕಾಲದಲ್ಲಿ

ವಾಯುಃ ಸಶರ್ಕರೋ ರೂಕ್ಷಃ ಸರ್ವದಿಗ್ಭ್ಯಃ ಸಮುತ್ಥಿತಃ ।
ಪ್ರತಿಲೋಮಸ್ತಥಾ ನೀಚೋ ವಿಜ್ಞೇಯೋ ಭಯಕೃದ್ದ್ವಿಜ ॥ ೨೭ ॥

ಅನುಕೂಲೋ ಮೃದುಃ ಸ್ನಿಗ್ಧಃ ಸುಖಸ್ಪರ್ಶಃ ಸುಖಾವಹಃ ।
ಖುಕ್ಷಾ ರೂಕ್ಷಸ್ವರಾಃ ಖಡ್ಗಾಃ ಕ್ರವ್ಯಾದಾಶ್ಚ ವಿಗರ್ಹಿತಾಃ ॥ ೨೮ ॥

ಮೇಘಾಃ ಶಸ್ತಾಃ ಘನಾಃ ಸ್ನಿಗ್ಧಾಃ ಗಜಬೃಂಹಿತಸನ್ನಿಭಾಃ ।
ಅನುಲೋಮಾ ತಡಿಚ್ಛಸ್ತಾ ಶಕ್ರಚಾಪಸ್ತಥೈವ ಚ ॥ ೨೯ ॥

ಅಪ್ರಶಸ್ತೇ ತಥಾ ಜ್ಞೇಯೇ ಪರಿವೇಷಪ್ರವರ್ಷಣೇ ।
ಅನುಲೋಮಾ ಗ್ರಹಾಃ ಶಸ್ತಾಃ ದಿಕ್ಪತಿಸ್ತು ವಿಶೇಷತಃ ॥ ೩೦ ॥

ಆಸ್ತಿಕ್ಯಂ ಶ್ರದ್ಧಧಾನತ್ವಂ ತಥಾ ಪೂಜ್ಯಾಭಿಪೂಜನಂ ।
ಶಸ್ತಾನ್ಯೇತಾನಿ ಧರ್ಮಜ್ಞ ಯಚ್ಚ ಸ್ಯಾನ್ಮನಸಃ ಪ್ರಿಯಂ ॥ ೩೧ ॥

---

ಮರಳಿನಿಂದ ಕೂಡಿ ಎಲ್ಲಾದಿಕ್ಕುಗಳಿಂದಲೂ ಎದ್ದ ಗಾಳಿಯು ಭಯಂಕರವಾಗಿಯೂ, ತನಗೆ ಎದುರಾಗಿಯೂ, ಬೀಸಿದಲ್ಲಿ ಅದು ಅಪಶಕನವೆಂದೂ, ಭಯವೆಂದೂ, ತಿಳಿಯಬೇಕು.

೨೮–೨೯. ಅನುಕೂಲವಾಗಿಯೂ, ಮೃದುವಾಗಿಯೂ, ಸುಖವಾದ ಸ್ಪರ್ಶ ಉಳ್ಳದ್ದಾಗಿಯೂ ಇರುವ ಮಂದ ಮಾರುತವು ಪ್ರಯಾಣ ಕಾಲದಲ್ಲಿ ಸುಖಕ ವೆಂದೂ ತಿಳಿಯಬೇಕು. ಭಯಂಕರ ಸ್ವರದಿಂದ ಕೂಡಿದ ಕರಡಿಗಳೂ, ಖಡ್ಗ ಮೃಗಗಳೂ, ಮಾಂಸಾಹಾರಿಯಾದ ಇತರ ವನಜಂತುಗಳೂ ಸಹ ನಿಂದಿತವಾದುವು ಸಾಂದ್ರವಾಗಿಯೂ, ವೃಷ್ಟ್ಯುನ್ಮುಖವಾಗಿಯೂ, ಆನೆಯ ಧ್ವನಿಯಂತೆ ಗಂಭೀ ಗರ್ಜಿತವುಳ್ಳದ್ದಾಗಿಯೂ ಇರುವ ಮೇಘಗಳು ಪ್ರಶಸ್ತವಾದುವು ಎದುರಾಗಿ ಬರ ಹಿಂಬಾಲಿಸಿ ಬರುವ ಮಿಂಚೂ. ಅಂತಹ ಇಂದ್ರಚಾಪವೂ ಸಹ (ಕಾಮನ ಬಿಲ್ಲು ಪ್ರಶಸ್ತವಾದುದು.

೩೦–೩೧. ಪರಿವೇಷವೂ. ಹೆಚ್ಚಾದ ಮಳೆಯೂ ಸಹ ಅಪ್ರಶಸ್ತಗಳೆಂದ ತಿಳಿಯಬೇಕು. ಗ್ರಹಗಳು ಅಭಿಮುಖವಾಗಿರದೆ ತನ್ನನ್ನು ಹಿಂಬಾಲಿಸುವಂತ ಗಮನದಿಂದ ಕೂಡಿದ್ದರೆ ಪ್ರಶಸ್ತಗಳು. ಹಾಗೆಯೇ ಅನುಕೂಲನಾದ ದಿ ತಿಯೂ ಬಹಳ ಮಟ್ಟಿಗೂ ಪ್ರಶಸ್ತನಾಗುತ್ತಾನೆ. ನಾಸ್ತಿಕತೆಯನ್ನು ತೊರೆ

ಮನಸಃ ತುಷ್ಟಿರೇವಾತ್ರ ಪರಮಂ ಜಯಲಕ್ಷಣಂ ।
ಏಕತಃ ಸರ್ವಲಿಂಗಾನಿ ಮನಸ್ತುಷ್ಟಿರಥೈಕತಃ ॥ ೩೨ ॥

ಯಾನೋತ್ಸುಕತ್ವಂ ಮನಸಃ ಪ್ರಹರ್ಷಃ
ಸುಸ್ವಪ್ನಲಾಭೋ ಮನಸಃ ಪ್ರಸಾದಃ ।
ಮಾಂಗಲ್ಯಲಬ್ಧಿಶ್ರವಣಂ ಚ ರಾಮ
ಜ್ಞೇಯಾನಿ ನಿತ್ಯಂ ವಿಜಯಾವಹಾನಿ ॥ ೩೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ಯಾತ್ರಾಶಕುನವರ್ಣನಂ ನಾಮ
ತ್ರಿಷಷ್ಟ್ಯುತ್ತರಶತತಮೋಽಧ್ಯಾಯಃ

---

ಆಸ್ತಿಕ್ಯ ಹೊಂದಿರುವಿಕೆ ದೇವಬ್ರಾಹ್ಮಣಾದಿಗಳಲ್ಲಿ ಶ್ರದ್ಧೆಯಿಂದ ಕೂಡಿರುವಿಕೆ. ಪೂಜ್ಯರನ್ನು ಪೂಜಿಸುವಿಕೆ. ತನ್ನ ಮನಸ್ಸಿಗೆ ಪ್ರಿಯವೆಂದು ತೋರುವ ಧರ್ಮ ಕಾರ್ಯವನ್ನು ನೆರವೇರಿಸುವಿಕೆ. ಇವೆಲ್ಲವೂ ಜಯಾಭಿಲಾಷೆಯುಳ್ಳ ರಾಜನಿಗೆ ಶುಭಸೂಚಕವಾನ ಶಕುನಗಳು, (ಆಸ್ತಿಕನೆಂದರೆ ದೇವರು ಮತ್ತು ಪರಲೋಕ. ಧರ್ಮಾಧರ್ಮಗಳು ಉಂಟೆಂಬ ಶಾಸ್ತ್ರಾರ್ಥದಲ್ಲಿ ನಂಬಿಕೆಯುಳ್ಳವನು, ಇಂತಹ ನಂಬಿಕೆ ಇಲ್ಲದವನು ನಾಸ್ತಿಕನು).

೩೨. ಈ ಸಂದರ್ಭದಲ್ಲಿ ಮನುಸ್ತುಷ್ಟಿಯೇ ಮುಖ್ಯವಾದ ಜಯಸಾಧನ, ಶುಭಶಕುನಗಳೆಲ್ಲವೂ ಒಂದು ಕಡೆಯಲ್ಲಿದ್ದರೆ. ಮನಸ್ತುಷ್ಟಿಯೊಂದು ಮತ್ತೊಂದು ಕಡೆಯಲ್ಲಿದ್ದು ವಿಜಯವನ್ನು ಗಳಿಸಲು ಮುಖ್ಯವಾದ ಸಹಕಾರಿಯಾಗುತ್ತದೆ. ಯಾನಾದಿಗಳ ಆರೋಹಣದಲ್ಲಿ ಉತ್ಸಾಹ, ಮನಸ್ಸಿನ ಸಂತೋಷ, ಒಳ್ಳೆಯ ಸ್ವಪ್ನಗಳ ಲಾಭ, ಕಲ್ಮಷವಿಲ್ಲದೆ ಇರುವ ಮನಸ್ಸಿನ ಸ್ವಚ್ಛತೆ, ಮಂಗಳಕರವಾದ ವಸ್ತುಗಳ ಲಾಭ ಮತ್ತು ಶಬ್ದಗಳ ಶ್ರವಣ ಇವೆಲ್ಲವೂ ವಿಜಯಾಭಿಲಾಷೆಯುಳ್ಳ ರಾಜನಿಗೆ ವಿಜಯ ಸೂಚಕವಾದ ಶುಭಶಕುನಗಳೆಂದು ತಿಳಿಯಬೇಕು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದ ಮಾರ್ಕಂಡೇಯ ಸಂವಾದದಲ್ಲಿ
ರಾಮನನ್ನು ಕುರಿತು ಪುಷ್ಕರೋಪಾಖ್ಯಾನದಲ್ಲಿ
ಯಾತ್ರಾಶಕುನ ವರ್ಣನವೆಂಬ ನೂರ ಅರವತ್ತಮೂರನೆಯ
ಅಧ್ಯಾಯವು ಮುಗಿದಿದೆ.

|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

### ಚತುಷ್ಷಷ್ಟ್ಯುತ್ತರಶತತಮೋಽಧ್ಯಾಯಃ

|| ಪುಷ್ಕರ ಉವಾಚ ||

**ತಿಷ್ಠತೋ ಗಮನೇ ಪ್ರಶ್ನೇ ಪುರುಷಸ್ಯ ಶುಭಾಶುಭಂ ।**
**ನಿವೇದಯಂತಿ ಶಕುನಾಃ ದೇಶಸ್ಯ ನಗರಸ್ಯ ಚ || ೧ ||**

**ಪಥಿ ಸಾಂಥೋ ನೃಪಸ್ಸೈನ್ಯೇ ಮರೀಚೋದ್ದಿಶ್ಯ ದೇವತಾಂ ।**
**ಸಾರ್ಥೇ ಪ್ರಧಾನಃ ಸಾಮ್ಯೇ ಚ ಜ್ಞಾತಿವಿದ್ಯಾವಯೋಧಿಕಃ || ೨ ||**

**ಸರ್ವಪಾಪಫಲೋ ದೀಪ್ತಃ ಶಾಂತಃ ಶುಭಫಲೋ ಮತಃ ।**
**ಷಟ್ಪ್ರಕಾರಾ ವಿನಿರ್ದಿಷ್ಟಾಃ ಶಕುನಾನಾಂ ಚ ದೀಪ್ತತಾ || ೩ ||**

### ನೂರ ಅರವತ್ತ ನಾಲ್ಕನೆಯ ಅಧ್ಯಾಯ.

೧–೨. ಕುಳಿತುಕೊಂಡಿರುವ ಮನುಷ್ಯನು ತನ್ನ ಗಮನ ವಿಷಯದಲ್ಲಿ ಪ್ರಶ್ನೆ ಮಾಡಿದ್ದೇ ಆದರೆ ದೇಶಕ್ಕೂ ನಗರಕ್ಕೂ ಆಗುವ ಶುಭಾಶುಭಗಳನ್ನು ಕೆಲವು ಶಕುನಗಳನ್ನು ಸೂಚಿಸುತ್ತವೆ. ಮಾರ್ಗದಲ್ಲಿ ಶುಭಾಶುಭಫಲಗಳಿಗೆ ಆ ಹಾದಿಕಾರನೂ ಸೈನ್ಯಗಳಲ್ಲಿ ಧೊರೆಯೂ ಗುಂಪು ಹೋಗುತ್ತಿರುವಾಗ ಅದರ ಪ್ರಧಾನಪುರುಷನೂ ಸಮಾನರಾದ ಜನರ ಸಮೂಹವೂ ಹೋಗುತ್ತಿದ್ದಲ್ಲಿ ವಿದ್ಯೆಯಿಂದ ಅಥವಾ ವಯಸ್ಸಿನಿಂದ ಅಧಿಕನಾದವನೂ ಅದರ ಫಲಕ್ಕೆ ಭಾಗಿಯಾಗುತ್ತಾನೆ.

೩–೪. ಪಾಪಫಲವಾದ ದುಃಖಕ್ಕೆ ಸೂಚಕವಾದ ಶಕುನಗಳೆಲ್ಲಾ ದೀಪ್ತಗಳೆಂದು ಹೇಳಲ್ಪಟ್ಟಿವೆ. ಅಥವಾ "ಸರ್ವಃ ಪಾಪಫಲೋ ದೀಪ್ತಃ" ಎಂಬ ಪಾಠಾನುಸಾರ ದುಃಖಫಲವುಳ್ಳ ಶಕುನಗಳೆಲ್ಲವೂ ದೀಪ್ತವೆಂದು ಹೇಳಲ್ಪಡುತ್ತವೆ.

ವೇಲಾ ದಿಗ್ದೇಶಕರಣಂ ಸತು ಜಾತಿ ವಿಭೇದಕಃ ।
ಪೂರ್ವಾ ಪೂರ್ವಾ ಚ ವಿಜ್ಞೇಯಾ ಸಾ ತೇಷಾಂ ಬಲವತ್ತರಾ ॥ ೪ ॥

ದಿವಾಚರೋ ರಾತ್ರಿಚರಃ ತಥಾ ರಾತ್ರೌ ದಿವಾಚರಃ ।
ಕ್ರೂರಸ್ಯ ವೇಲಾ ದೀಪ್ತಾ ಸ್ಯಾತ್ ಖಲರ್ಕ್ಷಾನಿಗ್ರಹಾದಿಷು ॥ ೫ ॥

ಧೂಮಿತಾ ಸಾ ತು ವಿಜ್ಞೇಯಾ ಯಾಂ ಗಮಿಷ್ಯತಿ ಭಾಸ್ಕರಃ ।
ಯಸ್ಯಾಂ ಸ್ಥಿತಃ ಸ ಜ್ವಲಿತಾ ಮುಕ್ತಾ ಚಾಂಗಾರಿಣೀ ಮತಾ ॥ ೬ ॥

ಏತಾಃ ತಿಸ್ರಃ ಸ್ಮೃತಾ ದೀಪ್ತಾಃ ಪಂಚ ಶಾಂತಾಸ್ತಥಾ ಪರಾಃ ।
ದೀಪ್ತಾಯಾಂ ದಿಶಿ ದಿಗ್ದೀಪ್ತಃ ಶಕುನಃ ಪರಿಕೀರ್ತಿತಃ ॥ ೭ ॥

---

ಶುಭಫಲವುಳ್ಳ ಶಕುನಗಳು ಶಾಂತವೆಂದು ಹೇಳಲ್ಪಡುತ್ತವೆ ಶಕುನಗಳು ಆರು ವಿಧವೆಂದು ಹೇಳಲ್ಪಟ್ಟಿವೆ. (ದೀಪ್ತ ಒಂದು ಮತ್ತು ಶಾಂತ ಐದು) ಆರು ರೀತಿಯೆಂದು ಹೇಳಲ್ಪಟ್ಟಿದೆ. ದೀಪ್ತತ್ವವೂ ಸಹ ಕಾಲ, ದಿಕ್ಕು, ದೇಶ, ಕ್ರಿಯಾ ಭೇದದಿಂದ ನಾನಾ ವಿಧವಾಗಿವೆ. ಇವುಗಳಲ್ಲಿ ಪೂರ್ವಪೂರ್ವದಲ್ಲಿರುವ ದಿಕ್ಕು, ಕಾಲ ಮೊದಲಾದ ನಿಮಿತ್ತಗಳಿಂದ ಉಂಟಾಗುವ ಫಲವು, ಮುಂದುಮುಂದಿನ ನಿಮಿತ್ತಗಳಿಗಿಂತಲೂ, ಅನಿಷ್ಟಫಲವುಂಟುಮಾಡುವ ವಿಷಯದಲ್ಲಿ ಪ್ರಬಲವಾಗುತ್ತವೆ.

೫-೬. ದುಷ್ಟನಕ್ಷತ್ರಗಳು ಮತ್ತು ಗ್ರಹಗಳು ಇವುಗಳ ನಿಮಿತ್ತದಿಂದ ಕ್ರೂರವಾದ ಕಾಲವು ವೇಲಾದೀಪ್ತವೆನಿಸುತ್ತದೆ ಅದೂ ಸಹ ರಾತ್ರಿಯಲ್ಲಿ ಸಂಚರಿಸುವ ಗ್ರಹಾದಿಗಳು ಹಗಲಿನಲ್ಲಿ ಚಲಿಸಿದರೂ, ಹಗಲಿನಲ್ಲಿ ಸಂಚರಿಸುವ ಗ್ರಹಾದಿಗಳು ರಾತ್ರಿಯಲ್ಲಿ ಸಂಚರಿಸುವುದರಿಂದಲೂ, ಉಂಟಾಗುತ್ತದೆ. ಯಾವ ದಿಕ್ಕನ್ನು ಸೂರ್ಯನು ಹೋಗಿ ಸೇರುತ್ತಿರುವನೋ ಆ ದಿಕ್ಕನ್ನು ಧೂಮಿತಾ ಎಂದು ತಿಳಿಯಬೇಕು. ಯಾವ ದಿಕ್ಕಿನಲ್ಲಿ ಸೂರ್ಯನಿರುವನೋ ಆ ದಿಕ್ಕನ್ನು ಜ್ವಲಿತಾ ಎಂದು ತಿಳಿಯಬೇಕು. ಯಾವ ದಿಕ್ಕನ್ನು ಬಿಟ್ಟು ಹೋಗುತ್ತಿರುವನೋ ಆ ದಿಕ್ಕನ್ನು ಮುಕ್ತಾ ಎಂದು ತಿಳಿಯಬೇಕು. ಈ ಮೂರು ಆಂತರಾಳಿಕ ಭೇದಗಳೂ ದಿಕ್ಕಿನ ಸಂಬಂಧದಿಂದುಟಾದ ದೀಪ್ತತೆಗಳು, ಉಳಿದ ಐದು ಶಾಂತಾ ಎಂಬ ಭೇದಕ್ಕೆ ಸೇರಿದುವು.

೭-೯. ಈ ರೀತಿ ದೀಪ್ತವಾಗಿರುವ ದಿಕ್ಕಿನಲ್ಲಿ ಉಂಟಾದ ಶಕುನವೂ ದೀಪ್ತವೆಂದು ಹೇಳಲಾಗಿದೆ ವನದಲ್ಲಿರುವ ಪ್ರಾಣಿಗಳು ಗ್ರಾಮದಲ್ಲಿಯೂ, ಗ್ರಾಮ

ಗ್ರಾಮ್ಯೇ ವನ್ಯೇ ವನೇ ಗ್ರಾಮ್ಯಸ್ತಥಾ ನಿಂದಿತಪಾದಪೇ ।
ದೇಶೇ ಚೈವಾಶುಭೇ ಜ್ಞೇಯೋ ದೇಶದೀಪ್ತೋ ದ್ವಿಜೋತ್ತಮ ॥ ೮ ॥

ಕ್ರಿಯಾದೀಪ್ತೋ ವಿನಿರ್ದಿಷ್ಟಃ ಸ್ವಜಾತ್ಯನುಚಿತಕ್ರಿಯಃ ।
ತತೋ ದೀಪ್ತಶ್ಚ ಕಥಿತೋ ಭಿನ್ನಭೈರವನಿಸ್ವನಃ ॥ ೯ ॥

ಪ್ರತಿದೀಪ್ತಸ್ತಥಾ ಜ್ಞೇಯಃ ಕೇವಲಂ ಮಾಂಸಭೋಜನಃ ।
ದೀಪ್ತಶಾಂತೋ ವಿನಿರ್ದಿಷ್ಟಃ ಸರ್ವಭೇದೈಃ ಪ್ರಕೀರ್ತಿತಃ ॥ ೧೦ ॥

ಗೋಶ್ವೋಷ್ಟ್ರಗರ್ದಭಶ್ವಾನಃ ಶಾರಿಕಾ ಗೃಹಗೋಧಿಕೇ ।
[1]ನಟಿಕೇಷಾಂಸಚಮಾರ್ದ್ಯೇ ಕಥಿತಾ ಗ್ರಾಮವಾಸಿನಃ ॥ ೧೧ ॥

ಅಜಾವಿಶುಕನಾಗೇಂದ್ರಖರಾಃ ಮಹಿಷವಾಯಸಾ ।
ಗ್ರಾಮ್ಯಾರಣ್ಯಾ ವಿನಿರ್ದಿಷ್ಟಾಃ ಸರ್ವೇಽನ್ಯೇ ವನಗೋಚರಾಃ ॥ ೧೨ ॥

ದಲ್ಲಿರುವ ಪ್ರಾಣಿಗಳು ವನದಲ್ಲಿಯೂ ಇದ್ದಲ್ಲಿ ಮತ್ತು ದುಷ್ಟವಾದ ಮರದಲ್ಲಿಯೂ, ಅಶುಭಕರವಾದ ಪ್ರದೇಶದಲ್ಲಿಯೂ ಉಂಟಾಗುವ ಅಪಶಕುನಗಳು ದೇಶದೀಪ್ತವೆಂದು ಹೇಳಲ್ಪಡುತ್ತವೆ. ಪ್ರಾಣಿಗಳಿಗೆ ತನ್ನ ಜಾತಿಗೆ ಅನುಚಿತವಾದ ವ್ಯಾಪಾರವು ಕಂಡು ಬಂದಲ್ಲಿ ಅದೇ ಕ್ರಿಯಾದೀಪ್ತವೆಂದು ಹೇಳಲ್ಪಡುತ್ತದೆ. ಈ ಕಾರಣದಿಂದ ಸೌಮ್ಯವಾದ ಧ್ವನಿಯುಳ್ಳ ಪ್ರಾಣಿಗಳಲ್ಲಿ ಭಯಂಕರವಾದ ಧ್ವನಿಯು ಕಂಡು ಬಂದಲ್ಲಿ ಅದೂ ಸಹ ಕ್ರಿಯಾದೀಪ್ತವೆಂದು ಹೇಳಲ್ಪಟ್ಟಿದೆ.

೧೦–೧೧. ಕೇವಲ ಮಾಂಸಭೋಜಕವಾದ ಪ್ರಾಣಿಯಿಂದ ಉಂಟಾಗುವ ಶಕುನವು ಪ್ರತಿದೀಪ್ತವೆನಿಸುತ್ತದೆ. ಈ ಭೇದಗಳ ಪರಸ್ಪರ ಸಾಂಕರ್ಯದಿಂದ ದೀಪ್ತಶಾಂತ ಮೊದಲಾದ ಭೇದಗಳೂ ಉಂಟಾಗುತ್ತವೆ. ಮಿಶ್ರಫಲಗಳಿಂದ ಕೂಡಿದ ಇಂತಹ ಶಕುನಿಗಳಿಗೆ ಬಲಾಬಲವನ್ನು ವಿಚಾರಮಾಡಿ ಪ್ರಬಲವಾದ ನಿಮಿತ್ತಕ್ಕೆ ತಕ್ಕಂತೆ ಫಲವನ್ನು ಹೇಳಬೇಕು. ಗೋವು, ಕುದುರೆ, ಒಂಟೆ, ಕತ್ತೆ, ನಾಯಿ, ಮೈನಾಪಕ್ಷಿ, ಹಲ್ಲಿ, ಗುಬ್ಬಚ್ಚಿ, ಮತ್ತು ಇವುಗಳಂತಿರುವ ಇತರ ಪ್ರಾಣಿಗಳು ಗ್ರಾಮವಾಸಿಗಳು,

೧೨–೧೩. ಆಡು, ಕುರಿ, ಗಿಣಿ, ಆನೆ, ಕತ್ತೆ, ಎಮ್ಮೆ, ಕಾಗೆ ಇವು ಗ್ರಾಮ್ಯವಾಗಿಯೂ, ಅರಣ್ಯವಾಗಿಯೂ ಹೇಳಲ್ಪಟ್ಟಿವೆ. ಉಳಿದವೆಲ್ಲವೂ, ವನ್ಯಪ್ರಾಣಿ

1 ಇಲ್ಲಿ ಚಟಕೇಷಾಂ ಎಂದು ಪಾಠವಿರಬೇಕೆಂದು ತೋರುತ್ತದೆ.

**ಮಾರ್ಜಾರಕ್ತ್ರೈಕೃಷೋ ಗ್ರಾಮ್ಯಸ್ತಥಾನ್ಯೋ ವನಗೋಚರ |**
**ಸರ್ವೇಷ್ವೇವೇತಿ ವಿಜ್ಞೇಯಾ ನಿತ್ಯಂ ರೂಪವಿಭೇದತಃ　　|| ೧೩ ||**

**ಶ್ರೀಕಂಠ ಶಿಖಿ ಚಕ್ರಾಹ್ವಾಃ ಯೋ ಚ ಹಾರೀತವಾಯಸಾಃ |**
**ಕುಲಾಲಕುಕ್ಕುಟಶ್ಯೇನ ಘಾಂಟವಂ [1]ಜಲವಾನರಾಃ　　|| ೧೪ ||**

**ಶಶಘ್ನು ಚಟಕಶ್ಯಾಮಾಶ್ಚಾಷಭಾಸಕಪಿಂಜಲಾಃ |**
**ತಿತ್ತಿರಿಃ ಶತಪತ್ರಶ್ಚ ಕಪೋತಾಶ್ಚ ತಥಾ ತ್ರಯಃ　　|| ೧೫ ||**

**ಖಂಜರೀಟಕದಾತ್ಯೂಹಶುಕಾಂಡೀವಹ ತಿಕ್ತಕಾಃ |**
**ಭಾರದ್ವಾಜಶ್ಚ ಸಾರಂಗಃ ಇತಿ ಜ್ಞೇಯಾ ದಿವಾಚರಾಃ　　|| ೧೬ ||**

**ವಲ್ಗುಲ್ಯುಲೂಕಃ ಶಶಕಾ ಶರಭೋತ್ಕ್ರೋಶಪಿಚ್ಛಿತಾ |**
**ಮೂಷಿಕಾ ಪಿಂಗಲೀ ಕಾಕಃ ಕಥಿತಾ ರಾತ್ರಿಚಾರಿಣಃ　　|| ೧೭ ||**

---

ಗಳೆಂದೇ ಹೇಳಬೇಕು. ರಕ್ತಪಾಯಿಗಳಾದ ಪ್ರಾಣಿಗಳಲ್ಲಿ ಬೆಕ್ಕು ಒಂದೇ ಗ್ರಾಮ್ಯವಾಗುತ್ತದೆ. ಉಳಿದವೆಲ್ಲವೂ ವನ್ಯಗಳೇ ಆಗುತ್ತವೆ. ಇದೇ ರೀತಿಯಾಗಿ ಎಲ್ಲಾ ಪ್ರಾಣಿಗಳಲ್ಲಿಯೂ ಅವುಗಳ ಅಸಾಧಾರಣ ಸಾಧಾರಣ ಸ್ವರೂಪ ಭೇದಗಳಿಂದ ಇದು ವನ್ಯ, ಇದು ಗ್ರಾಮ್ಯ ಎಂಬ ಬೇಧವನ್ನು ನಿರ್ಧರಿಸಬೇಕು. (ಈ ವಿಚಾರವು ದೇಶ ದೀಪ್ತ ಕ್ರಿಯಾದೀಪಗಳೆಂಬ ಶಕುನಗಳ ನಿಶ್ಚಯಕ್ಕಾಗಿ ಇಲ್ಲಿ ಪ್ರಾರಂಭಿಸಲ್ಪಟ್ಟಿದೆ).

೧೪–೧೬. ಶ್ರೀಕಂಠವೆಂಬ ಪಕ್ಷಿ, ನವಿಲು, ಚಕ್ರವಾಕ, ಹಸುಬನಹಕ್ಕಿ, ಕಾಗೆ, ಕುಂಬಾರಕೋಳಿ, ಗಿಡುಗ, ಘಾಂಟವೆಂಬ ಪಕ್ಷಿ, ವಂಜುಲ, ಕಪಿ, ಶಶಘ್ನವೆಂಬ ಕಾಡು ಹಕ್ಕಿ. ಗುಬ್ಬಚ್ಚಿ, ಶ್ಯಾಮಾ ಎಂಬ ಹಕ್ಕಿ, ಕಪ್ಪಾದ ಗರಿಯುಳ್ಳ ಚಾಷವೆಂಬ ಹಕ್ಕಿ, (ಶಕುನದ ಹಕ್ಕಿ) ಭಾಸಪಕ್ಷಿ, ಕಪಿಂಜಲ, ನೋರೆಹಕ್ಕಿ, ಶ್ರೇಷ್ಠ ಜಾತಿಯ ಗಿಣಿ, ಮರಕುಟುಕನ ಹಕ್ಕಿ, ಮೂರು ವಿಧವಾದ ಪಾರಿವಾಳಗಳು, ಖಂಜರೀಟ ಪಕ್ಷಿ, ನೀರುಕಾಗೆ, ಗಿಣಿ, ತಿಕ್ತಕವೆಂಬ ಹಕ್ಕಿ, ಭರದ್ವಾಜ ಪಕ್ಷಿ, ಮಳೆಗುಟಿಕಿನ ಹಕ್ಕಿ ಇವೆಲ್ಲವೂ ಹಗಲಿನಲ್ಲಿಯೇ ಸಂಚರಿಸತಕ್ಕವುಗಳೆಂದು ತಿಳಿಯಬೇಕು

೧೭–೧೯. ವಲ್ಗುಲಿ ಎಂಬ ಹಕ್ಕಿ, ಗೂಬೆ, ಮೊಲ, ಶರಭ, ಕುರವನಹಕ್ಕಿ, ಕರಿಯ ಹಕ್ಕಿ, ಇಲಿ, ಒಂದು ಬಗೆಯ ಕಾಗೆ ಇವು ರಾತ್ರಿಯಲ್ಲಿಯೇ ಸಂಚರಿಸತಕ್ಕ

---

1 ಇಲ್ಲಿ ಘಾಂಟವಂಜುಲ ವಾನರಾಃ ಎಂದು ಪಾಠವಿರಬೇಕೆಂದು ತೋರುತ್ತದೆ.

ಹಂಸಾಜಮೃಗಮಾರ್ಜಾರ ನಕುಲರ್ಕ್ಷಭುಜಂಗಮಾಃ ।
ವೃಕಶ್ಚ ಸಿಂಹವ್ಯಾಘ್ರೋಷ್ಟ್ರ ಶ್ವಸೂಕರತುರಂಗಮಾಃ ॥ ೧೮ ॥

ಶ್ವಾವಿತ್ಪೃಥುಕ ಗೋಮಾಯುಘೃತಕೋಕಿಲಸಾರಸಾಃ ।
ತುರಂಗಮೋ ದ್ವೀಪಿನರಾಶ್ಚೋರಾ ಉಭಯಚಾರಿಣಃ ॥ ೧೯ ॥

ರಣಪ್ರಸ್ಥಾನಯೋಃ ಸರ್ವೇ ಪುರಸ್ತಾತ್ಸಂಘಚಾರಿಣಃ ।
ಜಯಾವಹಾ ವಿನಿರ್ದಿಷ್ಟಾಃ ಪಶ್ಚಾದ್ವಿಜಯಕಾರಿಣಃ ॥ ೨೦ ॥

ಗೃಹೇ ಗ್ರಾಮ್ಯೋ ಯದಾ ಚಾಯಂ ವ್ಯಾಹರೇತ್ಪುರತಃ ಸ್ಥಿತಃ ।
ನೃಪಾವಮಾನಂ ವದತಿ ವಾಮಃ ಕಲಹಭೋಜನೇ ॥ ೨೧ ॥

ಯಾನೇ ತದ್ದರ್ಶನಂ ಧನ್ಯಂ ಸಪತಂಗಸ್ಯ ಚಾಪ್ಯಥ ।
ಚೋರೈರ್ದೋಷಮಥಾಖ್ಯಾತಿ ಮಯೂರೋ ಭಿನ್ನನಿಸ್ವನಃ ॥ ೨೨ ॥

---

ಪ್ರಾಣಿಗಳು ಹಂಸ, ಆಡು, ಜಿಂಕೆ, ಬೆಕ್ಕು, ಮುಂಗಿಸಿ, ಕರಡಿ, ಸರ್ಪಗಳು, ತೋಳ, ಸಿಂಹ, ಹುಲಿ, ಒಂಟೆ ನಾಯಿ, ಹಂದಿ, ಕುದುರೆ, ಮುಳ್ಳುಹಂದಿಯು ಮರಿ, ನರಿ, ಒಂದು ಬಗೆ ಕೋಗಿಲೆ, ಕೊಕ್ಕರೆ, ಕುದುರೆ, ಹುಲಿ, ಕಳ್ಳರು ಇವು ಗಳೆಲ್ಲರೂ ರಾತ್ರಿ ಮತ್ತು ಹಗಲಿನಲ್ಲಿಯೂ ಸಂಚರಿಸತಕ್ಕವರು.

೨೦-೨೨. ಯುದ್ಧದಲ್ಲಿಯೂ, ಯುದ್ಧಕ್ಕೆ ಹೊರಡುವಾಗಲೂ ಸಹ ಇವು ಮುಂಭಾಗದಲ್ಲಿ ಗುಂಪುಗುಂಪಾಗಿಬಂದಲ್ಲಿ ವಿಜಯಪ್ರದಗಳೆಂದು ಹೇಳಲ್ಪಟ್ಟಿವೆ. ಅನಂತರ ಉಂಟಾಗುವ ಜಯಕ್ಕೆ ಕಾರಣವಾಗುತ್ತವೆ. ಇವುಗಳಲ್ಲಿ ಗ್ರಾಮವಾಸಿಯೇ ಆದ ಪ್ರಾಣಿಯು ಮನೆಯಲ್ಲಿಯೇ ಎದುರಿಗೆ ನಿಂತು ಕೂಗಿದಲ್ಲಿ ಅದು ಧೊರೆಗೆ ಅವ ಮಾನವಾಗುವುದಕ್ಕೆ ಸೂಚಕವೆಂದು ತಿಳಿಯಬೇಕು. ಎಡಗಡೆಯಲ್ಲಿ ಕೂಗಿದಲ್ಲಿ ಜಗಳ ಮತ್ತು ಭೋಜನವನ್ನು ಸೂಚಿಸುತ್ತದೆ ಪ್ರಯಾಣಕಾಲದಲ್ಲಿ ಮತ್ತೊಂದು ಹಕ್ಕಿಯೊಡನೆ ಅದರ ದರ್ಶನ ಉಂಟಾದಲ್ಲಿ ಶುಭಕರವು. ಆ ಸಮಯದಲ್ಲಿ ನವಿಲು ಧ್ವನಿಮಾಡುತ್ತಾ ನಿಂತಲ್ಲಿ ಅದು ಮುಂದೆ ಕಳ್ಳರಿಂದ ಉಂಟಾಗುವ ಬಾಧಕವನ್ನು ಸೂಚಿಸುತ್ತದೆ.

ವಮತೇ ಕಪಿಲಃ ಶ್ರೇಷ್ಠಃ ತಥಾ ದಕ್ಷಿಣಸಂಸ್ಥಿತಃ ।
ಪೃಷ್ಠತೋ ನಿಂದಿತಫಲಃ ತಿತ್ತಿರಿಸ್ತತ್ರ ಶಸ್ಯತೇ　　॥ ೨೩ ॥

ಏಣಾ ವರಾಹಾಃ ಪೃಷತೋ ವಾಮಾ ಭೂತ್ವಾ ತು ದಕ್ಷಿಣಾಃ ।
ಭವಂತ್ಯರ್ಥಕರಾ ನಿತ್ಯಂ ವಿಪರೀತಾಃ ವಿಗರ್ಹಿತಾಃ　　॥ ೨೪ ॥

ವೃಕಾಶ್ಚ ಜಂಬುಕವ್ಯಾಘ್ರಸಿಂಹಮಾರ್ಜಾರಗರ್ದಭಾಃ ।
ವಾಂಛಿತಾರ್ಥಕರಾ ಜ್ಞೇಯಾ ದಕ್ಷಿಣಾದ್ವಾಮಭಾಗಗಾಃ　　॥ ೨೫ ॥

ಶಿವಾ ಶ್ಯಾಮಾ [1]ರಲಾಚ್ಛುಚ್ಛುಃ ಪಿಂಗಲಾ ಗೃಹಗೋಧಿಕಾಃ ।
ಸೂಕರೀ ಪರಪುಷ್ಟಾ ಚ ಪುಂನಾಮಾನಶ್ಚ ವಾಮತಃ　　॥ ೨೬ ॥

ಶ್ರೀಸಂಜ್ಞಾ ಚಾಷಭಷಕ ಕಪಿಶ್ರೀಕರ್ಣಛಿಕ್ಕರಾಃ ।
ಕಪಿಶ್ರೀಕರ್ಣಪಿಪ್ಪೀಕಾ ರುರುಶ್ಯೇನಾಶ್ಚ ದಕ್ಷಿಣಾಃ　　॥ ೨೭ ॥

---

೨೩–೨೫. ಅಂತಹ ಪ್ರಯಾಣ ಕಾಲದಲ್ಲಿ ನಾಯಿಯು ಬಲಭಾಗದಲ್ಲಿದ್ದು ವಮನಮಾಡಿದಲ್ಲಿ ಅದು ಒಳ್ಳೆಯ ಶಕುನ, ಹಿಂಭಾಗದಲ್ಲಿ ಹಾಗೆ ಮಾಡಿದಲ್ಲಿ ಶುಭ ಫಲಸೂಚಕವಲ್ಲ. ಆದರೆ ಸೋರೆಹಕ್ಕಿಯು ಹಾಗೆ ಮಾಡಿದಲ್ಲಿ ಶುಭಕರ. ಜಿಂಕೆಗಳು ಹಂದಿಗಳು, ಸಾರಂಗಗಳು, ಎಡಭಾಗದಲ್ಲಿದ್ದು ಬಲಭಾಗಕ್ಕೆ ನಡೆದಲ್ಲಿ ಈ ಶಕುನವು ಬಹುಮಟ್ಟಿಗೂ ಅರ್ಥಪ್ರದವಾಗುತ್ತದೆ ಬಲಭಾಗದಿಂದ ಎಡಭಾಗಕ್ಕೆ ನಡೆದಲ್ಲಿ ಅನಿಷ್ಟ ಫಲಕ್ಕೆ ಸೂಚಕವಾಗುತ್ತವೆ. ತೋಳ, ನರಿ, ಹುಲಿ, ಸಿಂಹ, ಬೆಕ್ಕು, ಕತ್ತೆ, ಇವುಗಳು ಬಲಭಾಗದಿಂದ ಎಡಭಾಗಕ್ಕೆ ನಡೆದಲ್ಲಿ ಇಷ್ಟಾರ್ಥಪ್ರಾಪ್ತಿಗೆ ಸೂಚಕವಾಗುತ್ತವೆ.

೨೬–೨೭. ಶ್ಯಾಮವರ್ಣವುಳ್ಳ ಛು. ಛು ಎಂದು ಧ್ವನಿಮಾಡುತ್ತಿರುವ ಹೆಣ್ಣು ನರಿ, ಮತ್ತು ಪಿಂಗಳವರ್ಣವುಳ್ಳ ಮನೆಯ ಹಲ್ಲಿ, ಹೆಣ್ಣು ಹಂದಿ, ಕೋಗಿಲೆ ಇವುಗಳೂ ಪುಂವರ್ಗವೂ ಸಹ ಎಡಗಡೆಯಿಂದ ನಡೆಯಬೇಕು. ಶ್ರೀ ಸಂಜ್ಞೆಯುಳ್ಳ ಪಕ್ಷಿವಿಶೇಷವೂ ಚಾಷವೆಂಬ ಕಪ್ಪಾದ ಪಕ್ಷಿಯೂ, ಬಗುಳುವ ನಾಯಿಯೂ ಕಪಿ, ಶ್ರೀಕರ್ಣ, ಛಿಕ್ಕುರಗಳೆಂಬ ಪ್ರಾಣಿಗಳೂ, ಇರುವೆಯ ಸಾಲೂ, ಸಾರಂಗವೂ, ಗಿಡುಗನೂ, ಸಹ ಬಲಗಡೆಗೆ ಹೋಗಬೇಕು.

---

[1] ಇಲ್ಲಿ ರಣಚ್ಛುಚ್ಛುಃ ಎಂದು ಪಾಠವಿರಬೇಕು

**ಜಾಹಕಾಹಿಂಶಶಕ್ರೋಡ ಗೋಧಾನಾಂ ಕೀರ್ತನಂ ಶುಭಂ |**
**ತತಃ ಸಂದರ್ಶನಂ ನೇಷ್ಟಂ ಪ್ರತೀಪಂ ವಾನರರ್ಕ್ಷಯೋಃ || ೨೮ ||**

**ಫಲಕೃತ್ಪೂರ್ವಶಕುನಃ ಪ್ರಸ್ಥಿತಸ್ಯ ಚ ಯೋನ್ವಹಂ |**
**ಭವೇತ್ತಸ್ಯ ಫಲಂ ವಾನ್ಯತ್ತದೇವ ದಿವಸಂ ಬುಧೈಃ || ೨೯ ||**

**ಮತ್ತಾ ಭಿಕ್ಷಾರ್ಥಿನೋ ಬಾಲಾ ವಿರಕ್ತಾಭಾಸ್ತಥೈವ ಚ |**
**ಸೀಮಂತನದ್ಯಂತರಿತಾ ವಿಜ್ಞೇಯಾ ನಿಷ್ಫಲಾ ದ್ವಿಜ || ೩೦ ||**

**ಏಕದ್ವಿತ್ರಿಚತುರ್ಭಿಸ್ತು ಶಿವಾ ಧನ್ಯಾ ತತೋ ಭವೇತ್ |**
**ಪಂಚಭಿಶ್ಚ ತಥಾ ಷಡ್ಭಿಃ ಅಧನ್ಯಾಃ ಪರಿಕೀರ್ತಿತಾಃ || ೩೧ ||**

**ಸಪ್ತಾಭಿಶ್ಚ ತಥಾ ಧನ್ಯಾ ನಿಷ್ಫಲಾ ಪರತೋ ಭವೇತ್ |**
**ನೃಣಾಂ ರೋಮಾಂಚಜನನೀ ವಾಹನಾನಾಂ ಭಯಪ್ರದಾ || ೩೨ ||**

---

೨೮-೨೯, ತುತ್ತೂರಿ, ಸರ್ಪ, ಮೊಲ, ಕಾಡು ಹಂದಿ, ಉಡು, ಇವುಗಳ ಸಂಕೀರ್ತನವು ಪ್ರಯಾಣ ಕಾಲದಲ್ಲಿ ಶುಭಕರ ಇವುಗಳ ದರ್ಶನ ಮಾತ್ರ ಶುಭ ಕರವಲ್ಲ. ಕಪಿ, ಕರಡಿ ಇವು ಎದುರಾಗಿ ಬಂದಲ್ಲಿಯೂ ಒಳ್ಳೆಯದಲ್ಲ ಪ್ರಯಾಣ ಹೊರಟವನಿಗೆ ಮೊದಲು ಉಂಟಾದ ಶಕುನವು ಸದ್ಯಃ ಫಲಪ್ರದವಾಗುತ್ತದೆ. ಅನಂತರ ಪ್ರತಿದಿನದಲ್ಲಿಯೂ ಆಗುವ ಶಕುನಗಳಿಗೆ ಅದೇ ದಿನದಲ್ಲಿ ಬೇರೆಯ ಬೇರೆಯ ಫಲಗಳೂ ಆಗಬಹುದೆಂದು ಪಂಡಿತರು ಹೇಳುತ್ತಾರೆ.

೩೦-೩೧. ಮದದಿಂದ ಕೂಡಿರುವವರು, ಭಿಕ್ಷಾರ್ಥಿಗಳು, ಬಾಲಕರು, ವಿರಕ್ತರಂತೆ ತೋರಿ ಬರುವವರು, ಇವರು ನಗರದ ಎಲ್ಲೆಯಲ್ಲಿರುವ ಜಲಾಶಯದ ಹೊರ ಭಾಗದಲ್ಲಿ ಕಾಣಿಸಿಕೊಂಡಲ್ಲಿ ಈ ಶಕುನಕ್ಕೆ ಯಾವ ಶುಭಾಶುಭ ಫಲವೂ ಇಲ್ಲ. ಒಂದು ಎರಡು ಮೂರು ನಾಲ್ಕು ಎಂಬ ಸಂಖ್ಯೆಯುಳ್ಳ ಜಲಾಶಯದಿಂದಾಚೆ ಬರುವ ಹೆಣ್ಣು ನರಿಯು ಶುಭಪ್ರದವಾಗಿರುತ್ತದೆ. ಒಂದನೆಯ ಮತ್ತು ಆರನೆಯ ಜಲಾಶಯಗಳ ನಂತರ ಅಶುಭಕರವಾಗುತ್ತದೆ. ಏಳು ಕಳೆದ ನಂತರ ಶುಭಕರ ವಾಗುತ್ತದೆ. ಅನಂತರ ಉಂಟಾಗುವ ಶಕುನಗಳು ನಿಷ್ಫಲಗಳಾಗುತ್ತವೆ.

೩೨-೩೪ ಜನಗಳಿಗೆ ರೋಮಾಂಚಉಂಟಾಗುವಷ್ಟು ಭಯಂಕರವಾಗಿ ವಾಹನಗಳಿಗೂ ಭಯವನ್ನುಂಟುಮಾಡುವ ಹೆಣ್ಣುನರಿಯು ಮುಖದಲ್ಲಿ ಅಗ್ನಿಜ್ವಾಲೆ

ಜ್ವಾಲಾನನಾ ಸೂರ್ಯಮುಖೀ ವಿಜ್ಞೇಯಾ ಭಯವರ್ಧಿನೀ ।
ಪ್ರಥಮಂ ಶಾರ್ಙ್ಗಕೇ ದೃಷ್ಟೇ ಶುಭೇದೇಶೇ ಶುಭಂ ವದೇತ್ ॥ ೩೩ ॥

ಸಂವತ್ಸರಂ ಮನುಷ್ಯಸ್ಯ ಹ್ಯಶುಭೇ ಚಾಶುಭಂ ತಥಾ ।
ಯಥಾವಿಧಿ ನರಃ ಪಶ್ಯನ್ ಶಕುನಂ ಪ್ರಥಮೋಽಹನಿ ॥ ೩೪ ॥

ಆತ್ಮನಶ್ಚ ತಥಾ ತೇನ ಜ್ಞಾತವ್ಯಂ ವತ್ಸರಂ ಫಲಂ ।
ಶಾರ್ಙ್ಗಕಂ ಚ ನರೋ ದೃಷ್ಟ್ವಾ ಭುಜಂಗಮಶಿರೋಗತಂ ॥ ೩೫ ॥

ಅವಶ್ಯಂ ತದವಾಪ್ನೋತಿ ಯತ್ಕಿಂಚಿನ್ಮನಸೇಚ್ಛತಿ ।
ವಿಶಂತಿ ಯೇನ ಮಾರ್ಗೇಣ ವಾಯಸಾ ಬಹವಃ ಪುರಂ ॥ ೩೬ ॥

ತೇನ ಮಾರ್ಗೇಣ ವೈ ತಸ್ಯ ಪುರಸ್ಯ ಗ್ರಹಣಂ ಭವೇತ್ ॥
ಸೇನಾಯಾಂ ಯದಿವಾಸಾರ್ಥೇ ನಿವಿಷ್ಟೋ ವಾಯಸೋ ಭವೇತ್ ॥ ೩೭ ॥

---

ಯನ್ನು ಕಕ್ಕುತ್ತಾ ಸೂರ್ಯನಂತೆ ಜ್ವಲಿಸಿದಲ್ಲಿ ಅದು ತನಗೂ ತನ್ನ ಸೈನ್ಯಕ್ಕೂ ಭಯಪ್ರದವೆಂದು ತಿಳಿಯಬೇಕು. ಮೊಟ್ಟಮೊದಲು ಶಾರ್ಙ್ಗಕವೆಂಬ ಪಕ್ಷಿವಿಶೇಷವು ಶುಭವಾದ ಸ್ಥಳದಲ್ಲಿ ಮನುಷ್ಯನಿಗೆ ಗೋಚರವಾದಲ್ಲಿ ವರ್ಷದವರಿಗೂ ಅವನಿಗೆ ಶುಭವೇ ಆದೀತು. ಅಶುಭವಾದಸ್ಥಳದಲ್ಲಿ ನೋಡಿದಲ್ಲಿ ಅಶುಭವೇ ಆದೀತು. ವರ್ಷದ ಮೊದಲನೆಯದಿನ ಯಥಾವಿಧಿಯಾಗಿ ಶಕುನವನ್ನು ನೋಡಿದವನಿಗೆ ತನಗೂ ತನ್ನ ಸಂಬಂಧಿಗಳಿಗೂ ಸಹ ಆಶಕುನದ ಫಲವು ಒಂದುವರ್ಷದವರಿಗೂ ಉಂಟಾಗುತ್ತದೆ ಎಂದು ತಿಳಿಯಬೇಕು.

೩೫-೩೬ ಸರ್ಪವನ್ನು ಹಿಡಿದುಕೊಂಡು ಅದರತಲೆಯಮೇಲೆ ಕುಳಿತಿರುವ ಶಾರ್ಙ್ಗಕವೆಂಬ ಪ್ರಾಣಿಯನ್ನು ನೋಡಿದವನು ತನಗೆ ಮನಸ್ಸು ಬಂದ ಫಲವನ್ನು ಹೊಂದುತ್ತಾನೆ. ಯಾವಾಮಾರ್ಗದಿಂದ ಗುಂಪಾದ ಕಾಗೆಗಳು ಪಟ್ಟಣವನ್ನು ಪ್ರವೇಶಿಸುತ್ತವೆಯೋ ಆಮಾರ್ಗದಿಂದಲೇ ಆಪಟ್ಟಣವು ಶತ್ರುಗಳಿಂದ ಆವರಿಸಲ್ಪಡುತ್ತದೆ.

೩೭-೩೮. ಸೇನಾಶಿಬಿರದಲ್ಲಿ ಕಾಗೆಯು ವಾಸಿಸುತ್ತಾ ರಾತ್ರಿಯಲ್ಲಿಯೂ ಅಲ್ಲಿಯೇ ಇದ್ದಲ್ಲಿ ಅದರಿಂದ ಹೆಚ್ಚಾದ ಭಯವುಂಟಾಗುತ್ತದೆ. ನೆರಳು, ಸೇನಾಂಗ,

**ನಾಸೋ ಭಯೋಯ ರಾತ್ರೌಸ್ಥೋ ಭಯಂ ವದತಿ ದುಸ್ತರಂ ।**
**ಛಾಯೋಂಗವಾಹನೋ ಪಾನಚ್ಛತ್ರವಸ್ತ್ರಾದಿಲುಂಠನೈಃ ॥ ೩೮ ॥**

**ಮೃತ್ಯುಸ್ತತ್ಪೂಜನೇ ಪೂಜಾ ತದ್ವಿಷ್ಠಾಕರಣೇ ಶುಭಂ ।**
**ಪ್ರೋಷಿತಾಗಮಕೃತ್ಕಾಕಃ ಕುರ್ವನ್ ದ್ವಾರಿ ಗತಾಗತಂ । ॥ ೩೯ ॥**

**ರಕ್ತಂ ದಗ್ಧಂ ಗೃಹೇ ದ್ರವ್ಯಂ ವಿಕ್ಷಿಪನ್ ವಹ್ನಿವೇದಕಃ ।**
**ನ್ಯಸೇದ್ರಜಃ ಪುರಸ್ತಾಚ್ಚೇನ್ನಿವೇದಯತಿ ಬಂಧನಂ ॥ ೪೦ ॥**

**ಪೀತದ್ರವ್ಯಂ ತಥಾ ರುಕ್ಮಂ ರೂಪ್ಯಂ ಶ್ವೇತಂ ತು ಭಾರ್ಗವಃ ।**
**ಯಚ್ಚೈವೋಪಲಭೇದ್ದ್ರವ್ಯಂ ತಸ್ಯ ಲಬ್ಧಿಂ ವಿನಿರ್ದಿಶೇತ್ ॥ ೪೧ ॥**

**ದ್ರವ್ಯಂ ಚೋಪನಯೇದ್ಯತ್ತು ತಸ್ಯ ಹಾನಿಂ ದ್ವಿಜೋತ್ತಮ ।**
**ಪುರತೋ ಧನಲಬ್ಧಿಃ ಸ್ಯಾದ್ರಾಮ ಮಾಂಸಸ್ಯ ಭಕ್ಷಣೇ ॥ ೪೨ ॥**

ವಾಹನಗಳು, ಪಾದರಕ್ಷೆ, ಛತ್ರಿ, ವಸ್ತ್ರ, ಮುಂತಾದುವುಗಳನ್ನು ಅಪಹರಿಸಿಯೂ, ನಾಶಪಡಿಸಿಯೂ ತೊಂದರೆಯುಂಟುಮಾಡಿದಲ್ಲಿ ಮೃತ್ಯುವೇ ಉಂಟಾಗುತ್ತದೆ. ಅವುಗಳನ್ನು ಪುರಸ್ಕರಿಸಿದಲ್ಲಿ ಒಳ್ಳೆಯದಾಗುತ್ತದೆ. ಅವುಗಳಮೇಲೆ ವಿಷ್ಠಿಸಿದಲ್ಲಿ ಶುಭವುಂಟಾಗುತ್ತದೆ.

೩೯–೪೧. ಕಾಗೆಯು ಬಾಗಿಲಿನ ಸಮೀಪದಲ್ಲಿ ಗಮನಾಗಮನಗಳನ್ನು ಮಾಡುತ್ತಿದ್ದಲ್ಲಿ ದೇಶಾಂತರಕ್ಕೆ ಪ್ರಯಾಣಮಾಡಿರುವವರು ಬರುತ್ತಾರೆಂಬುದನ್ನು ತಿಳಿಸುತ್ತದೆ. ಅಂತಹ ಕಾಗೆಯು ಕೆಂಪಾದ ವಸ್ತುವನ್ನಾಗಲಿ ಮನೆಯಲ್ಲಿ ಹಾಕಿದಲ್ಲಿ ಅದು ಮನೆಗೆ ಉಂಟಾಗುವ ಅಗ್ನಿಭಯಕ್ಕೆ ಸೂಚಕವಾಗುತ್ತದೆ. ಮುಂಭಾಗದಲ್ಲಿ ಧೂಳಿಯನ್ನು ಎರಚಿದಲ್ಲಿ ಅದು ಬಂಧನಕ್ಕೆ ಸೂಚಕವಾಗುತ್ತದೆ. ಅಲ್ಲದೆ ಹಳದಿಯಾದ ಹಿತ್ತಾಳೆ ಮೊದಲಾದುದನ್ನಾಗಲಿ, ಚಿನ್ನವನ್ನಾಗಲಿ, ಬೆಳ್ಳಿಯನಾಗಲಿ ಇತರ ಸದ್ವಸ್ತುವನ್ನಾಗಲಿ, ತಂದು ಹಾಕಿದಲ್ಲಿ ಅಂತಹ ದ್ರವ್ಯಲಾಭಕ್ಕೆ ಅದು ಸೂಚಕವಾಗುತ್ತದೆ.

೪೨–೪೪. ಕಾಗೆಯು ಮನೆಯಿಂದ ಯಾವವಸ್ತುವನ್ನು ಎತ್ತಿಕೊಂಡು ಹೋಗುತ್ತದೆಯೋಅಂತಹ ದ್ರವ್ಯದ ಹಾನಿಗೆ ಅದು ಸೂಚಕವಾಗುತ್ತದೆ. ಎದುರಿಗೆ

ಶ್ರೀಲಬ್ಧಿಃ ಸ್ಯಾನ್ಮೃಗಕ್ಷೇಪೇ ರಾಜ್ಯಂ ರತ್ನಾರ್ಪಣೇ ಮಹತ್ ।
ಯಾತುಃ ಕಾಕೋಽನುಕೂಲಸ್ಥಃ ಶ್ರೇಷ್ಠಃ ಕರ್ಣಸಮೋ ಭವೇತ್ ॥ ೪೩ ॥

ನನ್ವರ್ಥಸಾಧಕೋ ಜ್ಞೇಯಃ ಪ್ರತಿಕೂಲೋ ಭಯಾವಹಃ ॥ ೪೪ ॥

ಸಂಮುಖೋಽಭ್ಯೇತಿ ವಿತತಃ ಯಾತ್ರಾಘಾತಕರೋ ಭವೇತ್ ।
ವಾಮಃ ಕಾಕಃ ಸ್ಮೃತೋ ಧನ್ಯಃ ದಕ್ಷಿಣಸ್ತು ವಿನಾಶಕೃತ್ ॥ ೪೫ ॥

ವಾಮೋಽನುಲೋಮಗಃ ಶ್ರೇಷ್ಠಃ ಮಧ್ಯಮೋ ದಕ್ಷಿಣಃಸ್ಮೃತಃ ।
ಪ್ರತಿಲೋಮಗತಿರ್ವಾಮೋ ಗಮನಪ್ರತಿಷೇಧಕೃತ್ ॥ ೪೬ ॥

ನಿವೇದಯತಿ ಯಾತ್ರಾರ್ಥಮಭಿಪ್ರೇತಂ ಗೃಹೇ ರತಃ ।
ಏಕಾಕ್ಷಿಚರಣಸ್ತ್ವರ್ಕಂ[1] ವಕ್ಷ್ಯಮಾಣೋ ಭಯಾವಹಃ ॥ ೪೭ ॥

---

ಕುಳಿತು ಮಾಂಸವನ್ನು ಅದು ಭಕ್ಷಿಸಿದಲ್ಲಿ ಅದು ಧನಲಾಭಕ್ಕೆ ಸೂಚಕವಾಗುತ್ತದೆ. ಕಾಗೆಯು ತಾನು ಬೇಟೆಯಾಡಿದ ಯಾವುದಾದರೊಂದು ಪ್ರಾಣಿಯನ್ನು ತಂದು ಹಾಕಿದಲ್ಲಿ ಅದು ಲಕ್ಷ್ಮೀಪ್ರಾಪ್ತಿಗೆ ಸೂಚಕವಾಗುತ್ತದೆ. ರತ್ನವನ್ನು ತಂದುಹಾಕಿದಲ್ಲಿ ರಾಜ್ಯಲಾಭಕ್ಕೆ ಸೂಚಕವಾಗುತ್ತದೆ. ಮುಂದೆ ನಡೆಯುತ್ತಿರುವಾಗ ಕಾಗೆಯು ಕಿವಿಯ ಮಟ್ಟದಲ್ಲಿ ಅನುಸರಿಸಿ ಬಂದು ಅನಂತರ ಓಡಿಸಲ್ಪಟ್ಟಲ್ಲಿ ಅದು ಬಹುಮಟ್ಟಿಗೂ ಅರ್ಥಸಾಧಕವಾಗುತ್ತದೆ. ಎದುರಾಗಿ ಹಾಗೆ ಬಂದಲ್ಲಿ ಭಯಂಕರವಾಗುತ್ತದೆ.

೪೫–೪೬. ರಕ್ಕೆಯನ್ನು ವಿಸ್ತರಿಸುತ್ತಾ ಕಾಗೆಯು ಎದುರಾಗಿ ಬಂದಲ್ಲಿ ಅದು ಪ್ರಯಾಣಕ್ಕೆ ವಿಘ್ನಕಾರಿ ಎಂದೇ ತಿಳಿಯಬೇಕು. ಕಾಗೆಯು ಎಡಗಡೆಯಲ್ಲಿ ಒಳ್ಳೆಯದು. ಬಲಗಡೆಯಲ್ಲಿ ಅಶುಭಕರವಾಗುತ್ತದೆ. ಎಡಗಡೆಯಲ್ಲಿದ್ದರೂ ಅನುಸರಿಸಿ ಬರುತ್ತಿದ್ದಲ್ಲಿ ಬಹಳ ಪ್ರಶಸ್ತ ಬಲಗಡೆಯಲ್ಲಿ ಅನುಸರಿಸಿ ಬರುತ್ತಿದ್ದಲ್ಲಿ ಮಧ್ಯಮ ಫಲಕ್ಕೆ ಸೂಚಕವಾಗುತ್ತದೆ. ಎಡಗಡೆಯಲ್ಲಿ ಎದುರಾಗಿ ಬಂದಲ್ಲಿ ಅದು ಪ್ರಯಾಣ ನಿಷೇಧಕ್ಕೇ ಸೂಚಕವಾಗುತ್ತದೆ.

೪೭-೪೯. ಮನೆಯಲ್ಲಿಯೇ ಬಂದು ಕುಳಿತಿರುವ ಕಾಗೆಯು ಇಷ್ಟವಾದ ಪ್ರಯಾಣ ಫಲವನ್ನೇ ಸೂಚಿಸುತ್ತವೆ. ಸೂರ್ಯಾಭಿಮುಖವಾಗಿ ಒಂದೇ ಕಾಲಿನಿಂದ ನಿಂತು ಒಂದೇ ಕಣ್ಣಿನಿಂದ ನೋಡುತ್ತಾ ಕೂಗಿದಲ್ಲಿ ಅದು ಮುಂದಿನ ಭಯಕ್ಕೇ

---

1 ಇಲ್ಲಿ ವೀಕ್ಷಮಾಣಃ ಎಂದು ಪಾಠವಿರಬೇಕು.

ಕೋಟರೇ ವಾಸಮಾನಸ್ತು ಮಹಾನರ್ಥಕರೋ ಭವೇತ್ ।
ನ ಶುಭಃ ಸೂಕರೇ ಕಾಕಃ ಪಂಕಾಂತಃ ಸತು ದೃಶ್ಯತೇ ॥ ೪೮ ॥

ಅಮೇಧ್ಯಪೂರ್ಣವದನಃ ಕಾಕಃ ಸರ್ವಾರ್ಥಸಾಧಕಃ ।
ಜ್ಞೇಯಾಃ ಪತತ್ರಿಣೋಽನ್ಯೇಽಪಿ ಕಾಕವತ್ ಭೃಗುನಂದನ ॥ ೪೯ ॥

ಸ್ಕಂಧಾದೌ ರಾಮ ಸವ್ಯಸ್ಥಾಃ ಶ್ವಾನೋ ರಿಪುವಿನಾಶಕಾಃ ।
ಇಂದ್ರಸ್ಥಾನೇ ನರೇಂದ್ರಸ್ಯ ಪುರೇಶಸ್ಯ ತು ಗೋಪುರೇ ॥ ೫೦ ॥

ಅಂತರ್ಗೃಹೇ ಗೃಹೇಶಸ್ಯ ಮರಣಾಯ ಭವೇತ್ ಭೃಶಂ ।
ಯಸ್ಯ ವ್ರಜತಿ ವಾಮಾಂಗಂ ತಸ್ಯ ಸ್ಯಾದ್ದೀರ್ಘಸಿದ್ಧಯೇ ॥ ೫೧

ಭಯಾಯ ದಕ್ಷಿಣಂ ಚಾಂಗಂ ತಥಾ ಭುಜಮದಕ್ಷಿಣಂ ।
ಯಾತ್ರಾಘಾತಕರೋ ಯಸ್ತು ಹರ್ಷಂ ಪ್ರತಿಮುಖಾಗತಃ ॥ ೫೨ ॥

---

ಸೂಚಕವಾಗುತ್ತದೆ. ಪೊಟ್ಟರೆಯಲ್ಲಿಯೇ ಕುಳಿತು ಕೂಗಿದರೂ ಅನರ್ಥಕಾರಿಯಾಗುತ್ತದೆ. ಕಾಗೆಯು ಕೆಸರಿನ ಮೇಲೆ ನಿಂತಿರುವ ಹಂದಿಯ ಮೇಲೆ ಕುಳಿತಿದ್ದಲ್ಲಿ ಅದರ ದರ್ಶನವು ಶುಭಕರವಲ್ಲ. ಅಮೇಧ್ಯದಿಂದ ತುಂಬಿದ ಮುಖ ಉಳ್ಳ ಕಾಗೆಯನ್ನು ನೋಡಿದಲ್ಲಿ ಅದು ಎಲ್ಲಾ ಪ್ರಯೋಜನಗಳಿಗೂ ಸಾಧಕವಾಗುತ್ತದೆ. ಇಲ್ಲಿ ಕಾಗೆಗೆ ಹೇಳಿರುವಂತೆಯೇ ಇತರ ಪಕ್ಷಿಗಳಿಗೆ ಫಲಾ ಫಲಗಳನ್ನು ತಿಳಿಯಬೇಕು.

೫೦-೫೨. ಪ್ರಯಾಣಕಾಲದಲ್ಲಿ ನಾಯಿಗಳು ಎಡಭಾಗದಲ್ಲಿದ್ದು ಮುಖವನ್ನು ಹೆಗಲಿನ ಮೇಲೆ ಹಾಕಿಕೊಂಡಿದ್ದಲ್ಲಿ ಅವು ಶತ್ರುನಾಶಕ್ಕೆ ಸೂಚಕವಾಗುತ್ತವೆ. ರಾಜನ ಸ್ಥಾನದಲ್ಲಿ ಕುಳಿತಲ್ಲಿ ರಾಜನಿಗೂ, ನಗರದ್ವಾರದಲ್ಲಿ ಕುಳಿತರೆ ನಗರಾಧಿಪನಿಗೂ, ಮನೆಯ ಕೋಣೆಯಲ್ಲಿ ಕುಳಿತರೆ ಗೃಹ ಯಜಮಾನನಿಗೂ ಮರಣವು ತಪ್ಪದೆ ಉಂಟಾಗುತ್ತದೆ. ನಾಯಿಯ ಎಡಭಾಗವು ಚಲಿಸುತ್ತಿದ್ದುದನ್ನು ಕಂಡರೆ ಆ ಶಕುನವು ದೀರ್ಘ ಸಿದ್ಧಿಗೆ ಸೂಚಕವಾಗುತ್ತದೆ. ಬಲಭಾಗವೂ ಎಡಭುಜವೂ ಚಲಿಸಿದಲ್ಲಿ ಭಯಕ್ಕೆ ಸೂಚಕವಾಗುತ್ತದೆ. ಎದುರಿಗೆ ಬಂದ ನಾಯಿಯು ಸಂತೋಷವನ್ನು ಸೂಚಿಸಿದ್ದೇ ಆದರೆ ಅದು ಪ್ರಯಾಣಕ್ಕೆ ವಿಘ್ನಕಾರಿಯೇ ಆಗುತ್ತದೆ.

**ಮಾರ್ಗಾವರೋಧಕೋ ಮಾರ್ಗೇ ಚೋರಸ್ತುದತಿ ಭಾರ್ಗವ |**
**ಅಲಾತಾಸ್ಥಿಮುಖಃ ಪಾಪೋ ರಜ್ಜುಮೀನಮುಖಸ್ತಥಾ || ೫೩ ||**

**ಸೋಪಾನತ್ಕಮುಖೋ ಧನ್ಯಃ ಮಾಂಸಪೂರ್ಣಮುಖೋಽಪಿ ಚ |**
**ಅಮಂಗಲ್ಯಮಥ ದ್ರವ್ಯಂ ದೇಶಂ ಚೈವಾಶುಭಂ ತಥಾ || ೫೪ ||**

**ಅಪಮೂಲ್ಯಾಗ್ರತೋ ಯಾತಿ ಯಾತಸ್ಯ ನ ಭಯಂ ಭವೇತ್ |**
**ತಥಾಪಮೂಲ್ಯವ್ರಜತಿ ಶುಭಂ ದೇಶಂ ತಥಾ ಕ್ರಮಂ || ೫೫ ||**

**ಮಂಗಲ್ಯಂ ಚ ತಥಾ ದ್ರವ್ಯಂ ತಸ್ಯ ಸ್ಯಾದರ್ಥಸಿದ್ಧಯೇ |**
**ಏವಂ ಚ ರಾಮ ವಿಜ್ಞೇಯಾಸ್ತಥಾ ವೈ ಜಂಬುಕಾದಯಃ || ೫೬ ||**

**ಭಯಾಯ ಸ್ವಾಮಿನೋ ಜ್ಞೇಯಾ ಅನಿಮಿತ್ತಭಯಂ ಗವಾಂ |**
**ನಿಶಿ ಚೌರಭಯಾಯ ಸ್ಯಾದ್ದ್ವಿಕೃತಂ ಮೃತ್ಯವೇ ತಥಾ || ೫೭ ||**

---

೫೩-೫೪. ನಾಯಿಯು ದಾರಿಯಲ್ಲಿ ತಡೆದು ನಿಂತಲ್ಲಿ ಮುಂದೆ ದಾರಿಯಲ್ಲಿ ಕಳ್ಳರ ಭಯವುಂಟಾಗುತ್ತದೆ ಬಾಯಿನಲ್ಲಿ ಕೊಳ್ಳಿಯನ್ನಾಗಲಿ, ಮೂಳೆಯನ್ನಾಗಲಿ ಕಚ್ಚಿಕೊಂಡಿರುವ ಮತ್ತು ಹಗ್ಗ, ಮೀನು ಇವನ್ನು ಕಚ್ಚಿಕೊಂಡಿರುವ ನಾಯಿಯು ಅಶುಭಕರವಾದದ್ದು. ಬಾಯಿಯಲ್ಲಿ ಪಾದರಕ್ಷೆಯನ್ನು ಕಚ್ಚಿಕೊಂಡಾಗಲಿ, ಮಾಂಸದಿಂದ ತುಂಬಿದ ಮುಖದಿಂದಾಗಲಿ ಬರುವ ನಾಯಿಯು ಶುಭಕರವಾದದ್ದು. ಅಮಂಗಲವಾದ ದ್ರವ್ಯವನ್ನು ತರುವುದಾಗಲಿ, ಅಮಂಗಲಕರವಾದ ಸ್ಥಳದಿಂದ ಬರುವುದಾಗಲಿ ಅಶುಭಕರವೆಂದೇ ಹೇಳಬೇಕು.

೫೫-೫೬. ನಾಯಿಯು ಯಾವುದಾದರೊಂದು ಗೆಡ್ಡೆಗೆಣಸನ್ನು ಮೂಲದಿಂದ ಕಿತ್ತೊಗೆದು ಮುಂದೆ ಹೊರಟಲ್ಲಿ ಪ್ರಯಾಣ ಹೊರಟವನಿಗೆ ಭಯವಿಲ್ಲ. ಅದೇ ರೀತಿಯಲ್ಲಿ ಶುಭವಾದ ಪ್ರದೇಶಕ್ಕೆ ಹೊರಟರೂ, ಮಂಗಲದ್ರವ್ಯವನ್ನು ತೆಗೆದು ಕೊಂಡು ಬಂದರೂ ಸಹ ಅದು ಪ್ರಯಾಣಿಕನ ಅರ್ಥಸಿದ್ಧಿಗೆ ಸೂಚಕವಾಗುತ್ತದೆ. ಇದೇ ರೀತಿ ನರಿ ಮುಂತಾದ ಪಶುವಿಶೇಷಗಳ ಶಕುನವನ್ನೂ ತಿಳಿಯಬೇಕು.

೫೭-೫೮. ಹಸುಗಳಿಗೆ ಯಾವುದೊಂದು ಪ್ರಸಿದ್ಧ ನಿಮಿತ್ತವಿಲ್ಲದಿದ್ದರೂ ಭಯವು ಕಂಡುಬಂದಲ್ಲಿ ಅದು ಗೃಹಸ್ವಾಮಿಯ ಭಯಕ್ಕೇ ಸೂಚಕವೆಂದು ತಿಳಿಯ

ಶಿವಾಯ ಸ್ವಾಮಿನೋ ರಾತ್ರೌ ಬಲೀವರ್ದೋ ನದನ್ ಭವೇತ್ ।
ಉತ್ಸೃಷ್ಟವೃಷಭೋ ರಾಜ್ಞೋ ವಿಜಯಂ ಸಂಪ್ರಯಚ್ಛತಿ ॥ ೫೮ ॥

ಅಭಕ್ಷ್ಯಂ ಭಕ್ಷಯಂತಶ್ಚ ಗಾವೋ ನ್ಯಾಸಸ್ತಥಾಂಬಕಾನ್ ।
ತ್ಯಕ್ತಸ್ನೇಹಾಶ್ಚ ವತ್ಸೇಷು ಗವಾಂ ಕ್ಷಯಕರೋ ಮತಃ ॥ ೫೯ ॥

ಭೂಮಿಂ ಪಾದೈರ್ವಿನಿರ್ಹತ್ಯ ದೀನಾ ಭೂತಾ ವಿಕಾರಣಾತ್ ।
ಅನ್ಯೋನ್ಯಲಗ್ನಪುಚ್ಛಾಶ್ಚ ಗಾವೋ ಭಯಕರಾ ಮತಾಃ ॥ ೬೦ ॥

ಆದ್ರಾರ್ಙ್ಗಾ ಹೃಷ್ಟರೋಮಾಶ್ಚ ಪ್ರವಿಶಂತ್ಯಸ್ತಥಾ ಗೃಹಂ ।
ಶೃಙ್ಗಲಗ್ನ ಮೃದೋವಾಪಿ ವಿಜ್ಞೇಯಾ ಸ್ವಾಮಿವೃದ್ಧಯೇ ॥ ೬೧ ॥

ಮಹಿಷ್ಯಾದಿಷು ಚಾಪ್ಯೇತತ್ಸರ್ವಂ ವಾಚ್ಯಂ ವಿಜಾನತಾ ।
ನೇತ್ರನಾಸಾಪುಟಪ್ರೋಥಸ್ಕಂಧಸ್ಯಾಸನಮೂರ್ಧಸು ॥ ೬೨ ॥

---

ಬೇಕು. ರಾತ್ರಿಯಲ್ಲಿ ಆರೀತಿ ಆದಲ್ಲಿ ಅದು ಕಳ್ಳರ ಭಯಕ್ಕೆ ಸೂಚಕವಾಗುತ್ತದೆ ಮೂರ್ಛೆಯೇ ಮೊದಲಾದ ವಿಕಾರವನ್ನು ಹೊಂದಿದಲ್ಲಿ ಅದು ಮತ್ಯುವಿಗೇ ಸೂಚಕ ವಾಗುತ್ತದೆ. ರಾತ್ರಿಯಲ್ಲಿ ಎತ್ತು ಗುಟರೆ ಹಾಕಿದಲ್ಲಿ ಅದು ಗೃಹಸ್ವಾಮಿಯ ಶುಭಕ್ಕೆ ಸೂಚಕವಾಗುತ್ತದೆ. ವೃಷೋತ್ಸರ್ಜನದಿಂದ ಬಿಟ್ಟಿರುವ ಎತ್ತು ಹಾಗೆ ಗುಟರೆ ಹಾಕಿದಲ್ಲಿ ಅದು ದೊರೆಯ ವಿಜಯಕ್ಕೆ ಸೂಚಕವಾಗುತ್ತದೆ.

೫೯-೬೦. ಹಸುಗಳು ಅಭಕ್ಷ್ಯಭಕ್ಷಣ ಮಾಡುತ್ತಲೂ ಹುಲ್ಲನ್ನು ಮೇಯದೆ ಬಿಡುತ್ತಲೂ, ಕರುಗಳಲ್ಲಿ ಪ್ರೀತಿ ಇಲ್ಲದೆ ಇರುತ್ತಲೂ ಇದ್ದಲ್ಲಿ ಅಂತಹ ಗೋವುಗಳು ಭಯಕ್ಕೆ ಸೂಚಕವಾಗುತ್ತವೆ. ಭೂಮಿಯನ್ನು ಕಾಲುಗಳಿಂದ ಕೆರೆಯುತ್ತ ಯಾವ ಕಾರಣವೂ ಇಲ್ಲದೆ ಹಸುಗಳು ದೈನ್ಯದಿಂದಿದ್ದರೂ ಒಂದರ ಬಾಲಕ್ಕೆ ಮತ್ತೊಂದರ ಬಾಲವು ಸಂಬಂಧಿಸಿಕೊಂಡಿದ್ದರೂ ಸಹ ಅದೂ ಭಯಂಕರವಾದ ಅಪಶಕುನವೆಂದು ತಿಳಿಯಬೇಕು.

೬೧-೬೨. ಹಸುಗಳು ನೆನೆದ ಮೈಯ್ಯಿಂದ ಕೂಡಿ ರೋಮಾಂಚಹೊಂದಿ ಮನೆಗೆ ಪ್ರವೇಶಿಸಿದರೂ, ಕೊಂಬಿನಲ್ಲಿ ಅಂಟಿಕೊಂಡಿರುವ ಮಣ್ಣಿನೊಡನೆ ಮನೆಗೆ ಪ್ರವೇಶಿಸಿದರೂ ನಹ ಅದು ಗೃಹಸ್ವಾಮಿಗೆ ವೃದ್ಧಿಕರವೆಂದು ತಿಳಿಯಬೇಕು.

**ಹಯಾನಾಂ ಜ್ವಲನಂ ಶಸ್ತಮತೋನ್ಯತ್ರ ಪ್ರಶಸ್ಯತೇ ।**
**ಸರ್ವಾಂಗಜ್ವಲನಂ ನೇಷ್ಟಂ ತಥಾ ಧೂಮಸಮುದ್ಭವಃ ॥ ೬೩ ॥**

**ವಿಷ್ಫುಲಿಂಗೋದ್ಭವಶ್ಚೈವ ಶಕೃತ್ಯಾಂ ಶ್ವಸನಂ ತಥಾ ।**
**ಆರೋಹಣಂ ತಥಾನ್ಯೇನ ಸಪರ್ಯಾಣಸ್ಯ ವಾಜಿನಃ ॥ ೬೪ ॥**

**ಜಲೋಪವೇಶನಂ ನೇಷ್ಟಂ ಭೂಮೌ ಚ ಪರಿವರ್ತನಂ ।**
**ವಿಪತ್ಕಲ್ಪತರಂಗಸ್ಯ ಸ್ವತೋ ವಾಷ್ಯನಿಮಿತ್ತತಃ ॥ ೬೫ ॥**

**ಯವಸೋದಕಯೋಃ ದ್ವೇಷಸ್ವ್ರುಕಸ್ಮಾನ್ನೈವ ಶಸ್ಯತೇ ।**
**ಕ್ರೀತಃ ಕಾಕೈಃ ಕಪೋತೈರ್ವಾ ಶಾರಿಕಾಭಿಸ್ತುರಂಗಮಃ ॥ ೬೬ ॥**

**ಆತ್ಮನಃ ಸ್ವಾಮಿನೋ ವಾಪಿ ತದಾಮರಣವೇದಕಃ ।**
**ದುಃಖಾರ್ತಃ ಧ್ಯಾನಶೀಲಶ್ಚ ಸಾಶ್ರುನೇತ್ರೋ ಭಯಾವಹಃ ॥ ೬೭ ॥**

---

ಎಮ್ಮೆಗಳ ವಿಷಯದಲ್ಲಿಯೂ ಇದೇ ರೀತಿಯಾಗಿ ಶುಭಾಶುಭಗಳನ್ನು ಬುದ್ಧಿಶಾಲಿಗಳಾದವರು ಊಹಿಸಿ ತಿಳಿದುಕೊಳ್ಳಬೇಕು. ಕುದುರೆಗಳಿಗೆ ಕಣ್ಣು, ಮೂಗಿನ ರಂಧ್ರ, ಮೂಗಿನ ತುದಿ, ಹೆಗಲು, ತಲೆ, ಪೃಷ್ಠಭಾಗ ಈ ಸ್ಥಳಗಳಲ್ಲಿ ಉರಿಯು ಕಂಡಲ್ಲಿ ಒಳ್ಳೆಯದು ಇತರ ಸ್ಥಳದಲ್ಲಿ ಕಂಡರೂ ಪ್ರಶಸ್ತ. ಆದರೆ,

೬೩–೬೫. ಎಲ್ಲಾ ಅಂಗಗಳಲ್ಲಿಯೂ ಜ್ವಾಲೆಯುಂಟಾಗುವುದಾಗಲಿ, ಹೊಗೆ ಏಳುವುದಾಗಲಿ, ಶುಭಕರವಲ್ಲ. ಲದ್ದಿಯಲ್ಲಿ ಕಿಡಿ ಏಳುವುದೇ ಆಗಲಿ, ಹಬೆ ಆಡುವುದೇ ಆಗಲಿ ಮತ್ತು ಜೀನು ಹಾಕಿರುವ ತನ್ನ ಕುದುರೆಯ ಮೇಲೆ ಮತ್ತೊಬ್ಬನು ಏರುವುದೇ ಆಗಲಿ, ಜಲದಲ್ಲಿ ಎಮ್ಮೆಗಳಂತೆ ಮುಳುಗುವುದೇ ಆಗಲಿ, ನೆಲದಲ್ಲಿ ಹೊರಳಾಡುವುದೇ ಆಗಲಿ, ಕುದುರೆಗೆ ಒಳ್ಳೆಯದಲ್ಲ. ಸ್ವಾಭಾವಿಕವಾಗಿ ಆಗಲಿ, ಅಶುಭಸೂಚನಕ್ಕಾಗಲಿ, ಅನಿಷ್ಟಕರವಾದ ಸುಳಿಯುಂಟಾಗುವಿಕೆ, ಮತ್ತು ಹುಲ್ಲು, ನೀರು. ಇವುಗಳಲ್ಲಿ ದ್ವೇಷ ಇವು ಅಕಸ್ಮಿಕವಾಗಿ ಉಂಟಾದರೂ ಸಹ ಕುದುರೆಗಳಿಗೆ ಒಳ್ಳೆಯದಲ್ಲ.

೬೬–೬೮. ಕುದುರೆಯನ್ನು ಕ್ರಯಕ್ಕೆ ಕೊಂಡ ಒಡನೆಯೇ ಅದನ್ನು ಕಾಗೆ, ಕಪೋತ, ಮೈನಾ ಮೊದಲಾದ ಪಕ್ಷಿಗಳು ಆವರಿಸಿದಲ್ಲಿ ಅದು ಆ ಕುದುರೆಯ

ಜಿಹ್ವಯಾ ಲೇಢಿ ಚರಣಮಸಾವಪಿ ಭಯಂಕರಃ ।
ನಿರ್ನಿಮಿತ್ತಂ ಪತತಿ ವಾ ತದಾಸ್ಯಾನ್ನೃಷು ವೃದ್ಧಯೇ ॥ ೭೮ ॥

ವಾಮಪಾದೇನ ಚ ತಥಾ ವಿಲಿಖಂಶ್ಚ ವಸುಂಧರಾಂ ।
ಸ್ವೇನೈವ ವಾಮಪಾರ್ಶ್ವೇನ ದಿವಾ ವಾ ನ ಶುಭಪ್ರದಃ ॥ ೭೯ ॥

ಪ್ರವೇಪಮಾನಾ ಹ್ರೇಷಂತೇ ರೋದಂತೇ ಚ ಮುಹುರ್ಮುಹುಃ ।
ಶಕೃನ್ಮೂತ್ರೇ ವಿಮುಂಚಂತೋ ವೇದಯಂತಿ ಮಹದ್ಭಯಂ ॥ ೮೦ ॥

ಉತ್ತಿಷ್ಠಂತೋ ನಿಷೀದಂತಃ ಸಂಧ್ಯಾಯಾಂ ದೀನಮಾನಸಾಃ ।
ತ್ರಸ್ತಾಃ ಸಾಸ್ರಾಶ್ಚ ದೀನಾಶ್ಚ ಹೇಷಮಾಣಾ ಭಯಾವಹಾಃ ॥ ೮೧ ॥

ಹ್ರೇಷತಸ್ತು ಯದಾ ಜ್ವಾಲಾ ಜ್ಯೋತ್ಸ್ನಾ ವಾ ಮುಖತೋ ಭವೇತ್ ।
ತದಾ ವಿಜಯಮಾಖ್ಯಾತಿ ಸ್ವಾಮಿನೋ ಧ್ರುವಮೇವ ಹಿ ॥ ೮೨ ॥

---

ಅಥವಾ ಅದರ ಸ್ವಾಮಿಯ ಮರಣಕ್ಕೆ ಸೂಚಕವಾಗುತ್ತದೆ. ದುಃಖದಿಂದ ಕೂಡಿಯೂ, ಕಣ್ಣುಮುಚ್ಚಿಕೊಂಡು ಧ್ಯಾನನಿರತವಾಗಿಯೂ, ಕಣ್ಣಿನಲ್ಲಿ ನೀರು ಸುರಿಸುತ್ತಲೂ ಇರುವ ಕುದುರೆಯು ಭಯಂಕರವಾದ ದುಃಖಕ್ಕೆ ಕಾರಣವಾಗುತ್ತದೆ. ಯಾವ ಕುದುರೆಯು ಕಾಲನ್ನು ನಾಲಿಗೆಯಿಂದ ನೆಕ್ಕುತ್ತದೆಯೋ ಅದೂ ಸಹ ಭಯಕ್ಕೇ ಕಾರಣವಾಗುತ್ತದೆ. ಯಾವ ಕಾರಣವೂ ಇಲ್ಲದೆ ಕುದುರೆಯು ನೆಲಕ್ಕೆ ಬಿದ್ದಲ್ಲಿ ಅದು ಮನುಷ್ಯನ ವೃದ್ಧಿಗೆ ಕಾರಣವಾಗುತ್ತದೆ

೭೯–೮೦. ಎಡಗಾಲಿನಿಂದ ಭೂಮಿಯನ್ನು ಕೆರೆಯುತ್ತಾ ಮತ್ತು ಹಗಲಿನಲ್ಲಿ ಎಡಪಾರ್ಶ್ವದಿಂದಲೇ ಮಲಗುವ ಅಥವಾ ನಿಲ್ಲುವ ಕುದುರೆಯು ಶುಭದಾಯಕವಲ್ಲ. ಕುದುರೆಗಳು ನಡುಗುತ್ತಲೂ, ಬಾರಿಬಾರಿಗೂ ಕೆನೆಯುತ್ತಲೂ, ಅಳುತ್ತಲೂ, ಬಾರಿಬಾರಿಗೂ ಮಲಮೂತ್ರಗಳನ್ನು ವಿಸರ್ಜಿಸುತ್ತಲೂ ಇದ್ದಲ್ಲಿ ಅದು ಮಹಾ ಭಯಕ್ಕೇ ಸೂಚಕವೆಂದು ತಿಳಿಯಬೇಕು.

೮೧–೮೨. ಸಂಧ್ಯಾಕಾಲದಲ್ಲಿ ಏಳುತ್ತಲೂ, ಮಲುಗುತ್ತಲೂ, ದೈನ್ಯದಿಂದ ಕೂಡಿ, ಜೋಲುಕಿವಿಯಿಂದ ಕೂಡಿ, ಕಣ್ಣೀರುಬಿಡುತ್ತಾ, ಕೆನೆಯುತ್ತಾ ಕಾಲ ಕಳೆಯುವ ಕುದುರೆಗಳು ಭಯಪ್ರದಗಳಾಗುತ್ತವೆ. ಆದರೆ ಕೆನೆಯುವ ಕಾಲದಲ್ಲಿ

ದಕ್ಷಿಣೇನ ಪದಾ ಭೂಮಿಂ ವಿಕಿರನ್ ಜಯವರ್ಧನಃ ।
ರಾತ್ರೌ ದಕ್ಷಿಣಪಾರ್ಶ್ವೇನ ಪ್ರಸ್ವಪಂಶ್ಚ ನರೋತ್ತಮ ॥ ೭೩ ॥

ಆರೋಹಣಂ ನಚೇದ್ದದ್ಯಾತ್ಪ್ರತೀಪಂ ವಾ ಗೃಹಂ ವ್ರಜೇತ್ ।
ಯಾತ್ರಾವಿಘಾತಮಾಚಷ್ಟೇ ವಾಮಂ ಪಾದಂ ತಥಾ ಸ್ಪೃಶನ್ ॥ ೭೪ ॥

ಅನುಲೋಮಂ ಯದಾ ಯಾತಿ ಪುರಸ್ತಾತ್ಪ್ರತಿಹ್ರೇಷತೇ ।
ದಕ್ಷಿಣಂ ವಾ ತಥಾ ಪಾರ್ಶ್ವಂ ಮುಖೇನೋಪರಿ ಮಾರ್ಜತಿ ॥ ೭೫ ॥

ಪ್ರೇರಿತಸ್ತ್ವನುಕೂಲೇನ ಪವನೇನ ರಣೇ ಹಯಃ ।
ಹ್ರೇಷಮಾಣಃ ಪರಾನ್ ಯಾತಿ ತದಾ ಸ್ಯಾದ್ವಿಜಯಾವಹಃ ॥ ೭೬ ॥

ಗ್ರಾಮೇ ವ್ರಜತಿ ನಾಗಶ್ಚೇನ್ಮೈಥುನಂ ದೇಶಹಾ ಭವೇತ್ ।
ಪ್ರಸೂತಾ ನಾಗವನಿತಾ ಮತ್ತಾ ಚಾಂತಾಯ ಭೂಪತೇಃ ॥ ೭೭ ॥

---

ಮುಖದಿಂದ ಜ್ವಾಲೆಯಾಗಲಿ ಬೆಳದಿಂಗಳಿನಂತೆ ಬಿಳುಪಾದ ಕಾಂತಿಯಾಗಲಿ ಉಂಟಾದಲ್ಲಿ ಅಂತಹ ಕುದುರೆಗಳು ಸ್ವಾಮಿಯ ವಿಜಯಕ್ಕೆ ಸೂಚಕವಾಗುತ್ತದೆ. ಬಲಗಾಲಿನಿಂದ ಭೂಮಿಯನ್ನು ಕೆರೆಯುವ ಕುದುರೆಯು ವಿಜಯಕ್ಕೆ ಸಾಧಕ ವಾಗುತ್ತದೆ. ರಾತ್ರಿಯಲ್ಲಿ ಬಲಗಡೆಯಲ್ಲಿಯೇ ಮಲಗುವ ಕುದುರೆಯೂ ಸಹ ಶುಭಪ್ರದವೇ ಆಗುತ್ತದೆ.

೭೪-೭೬. ಕುದುರೆಯು ವಿಜಯ ಯಾತ್ರೆಗಾಗಿ ಹೊರಡುವವನಿಗೆ ಹತ್ತಲು ಅವಕಾಶವನ್ನೇ ಕೊಡದಿದ್ದರೂ, ಹಿಂದೆ ತಿರುಗಿ ಮನೆಗೇ ಓಡಿಬಂದರೂ, ಎಡಗಾಲನ್ನು ನೆಕ್ಕಿದರೂ ಸಹ ಅದು ಪ್ರಯಾಣ ವಿಘಾತಕ್ಕೆ ಸೂಚಕವೆಂದೇ ತಿಳಿಯಬೇಕು. ತಾನು ಹೋಗುವ ಮಾರ್ಗವನ್ನೇ ಅನುಸರಿಸಿ ಬಂದು ಮುಂಭಾಗದಲ್ಲಿ ಕೆನೆಯು ತ್ತಿದ್ದರೂ ತನ್ನ ಬಲಭಾಗವನ್ನು ಮುಖದಿಂದ ಮೇಲ್ಭಾಗದಲ್ಲಿ ನೆಕ್ಕುತ್ತಿದ್ದರೂ ಯುದ್ಧದಲ್ಲಿ ಅನುಕೂಲ ವಾಯುವಿನಿಂದ ಮುಂದೆ ಪ್ರೇರಿಸಲ್ಪಟ್ಟರೂ ಕೆನೆಯುತ್ತಾ ಶತ್ರುವಿಗೆ ಅಭಿಮುಖವಾಗಿ ನುಗ್ಗಿದರೂ ಸಹ ಅದು ಯುದ್ಧದಲ್ಲಿ ಜಯಕ್ಕೆ ಸಾಧಕ ವಾಗುತ್ತದೆ.

೭೭-೭೮. ಆನೆಯು ಗ್ರಾಮದಲ್ಲಿಯೇ ಹೆಣ್ಣಾನೆಯೊಡನೆ ಮೈಥುನವನ್ನು ಅನುಭವಿಸಿದಲ್ಲಿ ಅದು ದೇಶಕ್ಕೆ ಹಾನಿಕರವಾಗುತ್ತದೆ. ಗರ್ಭಿಣಿಯಾದ ಹೆಣ್ಣಾನೆಯು

ದಂತಭಂಗೇ ಶುಭೇ ದೇಶೇ ದ್ರುಮೇ ವಾ ಭಯಮೇವರ್ಧನಃ ।
ಕ್ರೂರೇಷು ವೇಲಾಲಗ್ನೇಷು ತಥಾ ರಾಮ ವಿಶೇಷತಃ ॥ ೭೮ ॥

ಗಂಡೂಷಧಾರಣಂ ಕೃತ್ವಾ ವಕ್ತ್ರಭಾಗೇ ತು ದಕ್ಷಿಣೇ ।
ಹಸ್ತಂ ಗೃಹೀತ್ವಾ ಹಸ್ತೇನ ನಾಗಸ್ಯಾನ್ಯಸ್ಯ ವಾ ಪುನಃ ॥ ೭೯ ॥

ಉಚ್ಚೈರ್ವಾ ಕರಮುನ್ನಮ್ಯ ವಿಷಾಣೇ ವಾಥ ದಕ್ಷಿಣೇ ।
ಗಂಭೀರಂ ಶ್ರೋತ್ರಮಧುರಂ ರಾಜ್ಞಸ್ತದ್ವಿಜಯಾವಹಂ ॥ ೮೦ ॥

ಅತೋಽನ್ಯಥಾ ವಿಪರ್ಯಸ್ತಂ ತ್ವಶುಭಂ ಪರಿಕೀರ್ತಿತಂ ।
ಆರೋಹಣಂ ನ ಚೇದ್ದದ್ಯಾತ್ಪ್ರತೀಪಂ ವಾ ಗೃಹಂ ವ್ರಜೇತ್ ॥ ೮೧ ॥

ಮದಂ ವಾ ವಾರಣೋ ಜಹ್ಯಾದ್ಯಾತ್ರಾಘಾತಕರೋ ಭವೇತ್ ।
ಗ್ರಾಹಗೃಹೀತೋ ದ್ವಿರದಃ ಸಂಗ್ರಾಹ್ಯಃ ಸಲಿಲಾಶಯಾತ್ ॥ ೮೨ ॥

ಉತ್ತರನ್ ವಿಜಯಾಯಸ್ಯಾದಗ್ರಾಹೋ ಭಯಮೇವರ್ಧನಃ ।
ಶಸ್ತ್ರಾಂಕುಶಪತಾಕಾನಾಂ ಭೂಮೌ ನಿಪತನಂ ಗಜಾತ್ ॥ ೮೩ ॥

---

ಗ್ರಾಮದಲ್ಲಿ ಪ್ರಸವಹೊಂದಿದರೂ, ಮದಹೊಂದಿದರೂ ಸಹ ಅದು ರಾಜನಿಗೇ ಮೃತ್ಯುಪ್ರದವಾಗುತ್ತದೆ. ಶುಭಕರವಾದ ಸ್ಥಳದಲ್ಲಾಗಲಿ, ಮರದಲ್ಲಿಯಾಗಲಿ ಆನೆಯಕೊಂಬು ಮುರಿದುಹೋದಲ್ಲಿ ಅದು ಮಹಾಭಯಕ್ಕೆ ಸೂಚಕವಾಗುತ್ತದೆ ಹಾಗೂ ಕ್ರೂರಕಾಲವಲ್ಲಿ ಮತ್ತು ಕ್ರೂರವಾದ ಲಗ್ನದಲ್ಲಿ ಅಂತಹ ದಂತ ಭಂಗ ಉಂಟಾದಲ್ಲಿ ವಿಶೇಷವಾದ ಭಯಕ್ಕೆ ಕಾರಣವಾಗುತ್ತದೆ.

೭೯–೮೦. ಆನೆಯು ಸೊಂಡಲಿನ ಬಲಭಾಗದ ರಂಧ್ರದಿಂದ ನೀರನ್ನು ಧರಿಸಿ ಇನ್ನೊಂದಾನೆಯ ಸೊಂಡಿಲನ್ನು ತನ್ನ ಸೊಂಡಲಿನಿಂದ ಹಿಡಿದುಕೊಂಡು ನಿಂತರೂ ಮತ್ತು ಸೊಂಡಿಲನ್ನು ಮೇಲಕ್ಕೆ ಎತ್ತಿಕೊಂಡು ನಿಂತರೂ, ಬಲಭಾಗದ ಕೊಂಬಿನ ಮೇಲೆ ಇಟ್ಟುಕೊಂಡು ಮಧುರವಾಗಿ ಧ್ವನಿಮಾಡಿದರೂ ಸಹ ಅದು ರಾಜನಿಗೆ ವಿಜಯಪ್ರದವೆಂದು ತಿಳಿಯಬೇಕು.

೮೧–೮೨. ಹೀಗಿಲ್ಲದೆ ಬೇರೇ ವಿಧವಾಗಿ ಅದರ ಚೇಷ್ಟೆಯು ಉಂಟಾದಲ್ಲಿ ಅದು ಅಶುಭಸೂಚಕವೇ ಆಗುತ್ತದೆ. ಆನೆಯು ಹತ್ತಲು ಅವಕಾಶಕೊಡದಿದ್ದರೂ

**ಲೋಷ್ಟಕಾಷ್ಠಕರೀಷಾಣಾಂ ಕ್ಷೇಪಣಂ ಚಾಪಿ ಯದ್ಭವೇತ್ ।**
**ಅನುಯಾತ್ರಂ ಜಯಾಯೈತತ್ಪ್ರತಿಯಾತ್ರಂ ನ ಶಸ್ಯತೇ || ೮೪ ||**

**ವಾರ್ಯಮಾಣೋ ಯದಾ ನಾಗಃ ಶತ್ರುಣಾಭಿಮುಖೋ ವ್ರಜೇತ್ ।**
**ತರತ್ಪ್ರಸುಪ್ತತಾರಂ ಚ ಯದಾ ತೇಜಃ ಪ್ರಶಂಕಿತಃ || ೮೫ ||**

**ಇಷ್ಟಾಂಸ್ತು ಯಸ್ತು ಭಕ್ಷ್ಯಾಂಶ್ಚ ತಥಾ ಸ್ಪೃಶತಿ ಹಸ್ತಿನೀಂ ।**
**ರಾಮ ಬೃಂಹಿತಘಂಟಾನಾಂ ಪ್ರತಿಶಬ್ದೇನ ಕುಪ್ಯತೇ || ೮೬ ||**

**ಕಕ್ಷ್ಯಾಯಾಂ ಬಧ್ಯಮಾನಾಯಾಂ ಯದಾ ಪ್ರೋಚ್ಚೈರ್ನದತ್ಯಪಿ ।**
**ಯಾತ್ರಾನುಗಶ್ಚ ಭವತಿ ಪ್ರಹೃಷ್ಟಶ್ಚೈವ ವಾರಣಃ || ೮೭ ||**

---

ಹಿಂದಕ್ಕೆ ತಿರುಗಿ ಮನೆಗೇಬಂದರೂ, ಬಹಳಮಟ್ಟಿಗೆ ಮದೋದಕವನ್ನು ತ್ಯಜಿಸಿದರೂ ಸಹ ಅದು ರಣಪ್ರಯಾಣಕ್ಕೆ ವಿಘಾತಕವೆಂದೇ ತಿಳಿಯಬೇಕು. ಆನೆಯು ಮೊಸಳೆಯಿಂದ ನೀರಿನಲ್ಲಿ ಹಿಡಿಯಲ್ಪಟ್ಟದ್ದೇ ಆದರೆ ಆ ಜಲಾಶಯದಿಂದ ಮೊಸಳೆಯೊಡನೆ ತಾನಾಗಿಯೇ ನೀರನ್ನು ದಾಟಿ ಮೇಲಕ್ಕೆ ಬಂದಲ್ಲಿ ವಿಜಯಕ್ಕೇ ಸೂಚಕವಾಗುತ್ತದೆ. ಮೊಸಳೆ ಇಲ್ಲದೆ ತಾನೇ ಬಂದಲ್ಲಿ ಭಯಕ್ಕೇ ಸೂಚಕವಾಗುತ್ತದೆ. ಯುದ್ಧಕ್ಕಾಗಿ ಹೊರಡುವಾಗ ಶಸ್ತ್ರಗಳು ಅಂಕುಶ, ಬಾವುಟ ಇವು ಆನೆಯಿಂದ ಕೆಳಗೆ ಹಾಕಲ್ಪಟ್ಟಲ್ಲಿ ಮತ್ತು ಮಣ್ಣಿನಹೆಂಟೆ, ಮರದಕೊಂಬೆ, ಬೆರಣಿ ಮುಂತಾದುವನ್ನು ಎರಚಿದರೂ ಸಹ ಅದು ಯಾತ್ರೆಗೆ ಅನುಸರಿಸುವ ರೀತಿಯಲ್ಲಿ ಮುಂದುಮುಂದೆ ಎರಚಲ್ಪಟ್ಟರೆ ವಿಜಯ ಸೂಚಕವಾಗುತ್ತದೆ. ಎದುರಾಗಿ ಎರಚಲ್ಪಟ್ಟರೆ ಪ್ರಶಸ್ತವಲ್ಲ. ಆನೆಯು ಯಾವಾಗ ಶತ್ರುವಿನಿಂದ ತಡೆಯಲ್ಪಟ್ಟರೂ, ಅವನಿಗೆ ಎದುರಾಗಿಯೇ ಧೈರ್ಯದಿಂದ ನುಗ್ಗುತ್ತದೆಯೋ, ಶತ್ರುವಿನ ಪರಾಕ್ರಮದಲ್ಲಿ ಶಂಕೆಗೊಂಡು ಕಣ್ಣುಗುಡ್ಡೆಯನ್ನು ತಿರುಗಿಸಿಯೂ ಸ್ತಬ್ಧವಾಗಿಯೂ ಮಾಡುತ್ತದೆಯೋ ಮತ್ತು ಇಷ್ಟವಾದ ಭಕ್ಷ್ಯಗಳನ್ನೂ ಮತ್ತು ಹೆಣ್ಣಾನೆಯನ್ನೂ ಸಹ ಮುಟ್ಟುತ್ತದೆಯೋ, ಶತ್ರುಗಜಗಳ ಘಂಟಾಧ್ವನಿಯಿಂದ ಕೋಪ ಹೊಂದುತ್ತದೆಯೋ, ಗಜಶಾಲೆಯಲ್ಲಿ ಕಟ್ಟಿದರೂ ಸಹ ಘಟ್ಟಿಯಾಗಿ ಗರ್ಜಿಸುತ್ತಿರುವುದೋ ವಿಜಯಯಾತ್ರೆಗೂ ಅನುಕೂಲವಾಗಿದ್ದು ಹರ್ಷ ಹೊಂದಿರುವುದೋ ಮತ್ತು,

ವಾಮಂ ದಕ್ಷಿಣಪಾದೇನ ಪಾದಮಾಕ್ರಮತೇ ತಥಾ ।
ದಕ್ಷಿಣಂ ಚ ತಥಾ ದಂತೇ ಪರಿಮಾರ್ಷ್ಟಿ ಕರೇಣ ಚೇತ್ ॥ ೮೮ ॥

ವೇಷ್ಟಯತ್ಯಥವಾ ಕರ್ಣೌ ತಥಾಸ್ತಬ್ಧೌ ಕರೋತಿ ಚ ॥
ಜಯಾಯ ರಾಜ್ಞೋ ಭವತಿ ಜನಯನ್ನಪಿ ಶೀಕರಂ ॥ ೮೯ ॥

ವಾಮಂ ತು ವೇಷ್ಟಯೇದ್ದಂತಂ ಪಾದಂ ವಾಮೇನ ದಕ್ಷಿಣಂ ।
ಪಾದಮಾಕ್ರಮಮಾಣಶ್ಚ ಪ್ರಸ್ಖಲನ್ನಿಪತನ್ನಪಿ ॥ ೯೦ ॥

ಅಗ್ರಹಸ್ತಂ ನೋದ್ಧರತಿ ಯದಾ ಚ ವಸುಧಾತಲಾತ್ ।
ಸಾಸುಶ್ಚ ಕಬಲದ್ವೇಷೀ ದೀನೋ ಭಯವಿವರ್ಧನಃ ॥ ೯೧ ॥

ನಿಃಶ್ವಾಸಂ ಪರಮಂ ಕುರ್ವನ್ ಶಾಂತಂ ವಿಕೃತಮೇವ ಚ ।
ಭಯಾವಹೋ ವಿನಿರ್ದಿಷ್ಟಃ ಪ್ರತಿಲೋಮಗತಿಸ್ತಥಾ ॥ ೯೨ ॥

ಕ್ಷೀರಪಾದಪಗುಲ್ಮಾನಾಂ ನಿಹನ್ತಾ ವಿಜಯಾವಹಃ ।
ತಥಾ ವಿಕಾಸಿತಾಕ್ಷಶ್ಚ ರಾಮ ಲಬ್ಧಪದೋಽಪಿ ಚ ॥ ೯೩ ॥

---

೮೮-೮೯. ಎಡಗಾಲನ್ನು ಬಲಗಾಲಿನಿಂದ ಮೆಟ್ಟುತ್ತದೆಯೋ ಮತ್ತು ಬಲ ಭಾಗದ ಕೊಂಬನ್ನು ಸೊಂಡಲಿನಿಂದ ಉಜ್ಜುತ್ತದೆಯೋ ಹಾಗೆಯೇ ಸೊಂಡಲಿನಿಂದ ಕಿವಿಯನ್ನು ಸುತ್ತುಹಾಕುತ್ತದೆಯೋ ಮತ್ತು ಕಿವಿಗಳನ್ನು ಚಲಿಸದಂತೆ ಮಾಡುತ್ತದೆಯೋ ಸೊಂಡಲಿನಿಂದ ನೀರಿನ ತುಂತುರುಗಳನ್ನು ಎರಚುತ್ತದೆಯೋ ಈ ಶಕುನಗಳೆಲ್ಲವೂ ರಾಜನ ವಿಜಯಕ್ಕೆ ಸೂಚಕವಾಗುತ್ತವೆ.

೯೦-೯೧. ಎಡಗಡೆಯ ದಂತವನ್ನು ಸೊಂಡಲಿನಿಂದ ಸುತ್ತುತ್ತಲೂ ಹಾಗೆಯೇ ಬಲಗಾಲನ್ನು ಎಡಗಾಲಿನಿಂದ ಮೆಟ್ಟುತ್ತಲೂ, ಎಡವುತ್ತಲೂ, ಬೀಳುತ್ತಲೂ ಸೊಂಡಲಿನ ತುದಿಯನ್ನು ಭೂಮಿಯಿಂದ ಮೇಲಕ್ಕೆ ಎತ್ತದೆಯೂ ಉಚ್ಛ್ವಾಸ ನಿಶ್ವಾಸಗಳಿಂದ ಕೂಡಿಯೂ ದೀನತೆಯಿಂದ ಕೂಡಿ ಕಬಲ (ಆಹಾರ) ವನ್ನೂ ಸ್ವೀಕರಿಸುವುದಿಲ್ಲವೋ ಈ ಲಕ್ಷಣಗಳೆಲ್ಲವೂ ಮುಂದೆ ಬರುವ ಭಯಕ್ಕೆ ಸೂಚಕವಾಗುತ್ತವೆ.

೯೨-೯೩. ಶಾಂತತೆಯಿಂದಲೂ ವಿಕಾರದಿಂದಲೂ ಹೆಚ್ಚು ಹೆಚ್ಚಾಗಿ ನಿಶ್ವಾಸೋಚ್ಛ್ವಾಸವನ್ನು ಬಿಡುತ್ತಾ ಹಿಮ್ಮೊಕವಾದ ಗಮನವುಳ್ಳ ಆನೆಯು ಭಯಪ್ರದ

ವೃಷೋಽಶ್ವಃ ಕುಂಜರೋ ವಾಪಿ ರಿಪುಸೈನ್ಯಂ ಯದಾ ವ್ರಜೇತ್ ।
ಪರಾಜಯಸ್ತತೋ ಜ್ಞೇಯಂ ಲಕ್ಷಣಂ ಭೃಗುನಂದನ ॥ ೯೪ ॥

ಖಂಡಮೇಘಾಭಿವೃಷ್ಟ್ಯಾ ಚ ಸೇನಾ ನಾಶಮವಾಪ್ನುಯಾತ್ ।
ಪ್ರತಿಕೂಲಗ್ರಹರ್ಕ್ಷಾರ್ಗ ಚ ತಥಾ ಸಂಮುಖಮಾಸತಾ ॥ ೯೫ ॥

ಯಾತ್ರಾಕಾಲೇ ರಣೇ ವಾಪಿ ಚ್ಛತ್ರಾದಿಪತನಾದ್ಭಯಂ ।
ವಿಜ್ಞೇಯಂ ಭೂಮಿಪಾಲಸ್ಯ ಘೋರಾಣಾಂ ದೀನತಾ ತಥಾ ॥ ೯೬ ॥

ನರಾಶ್ವನಾಗಾ ಹೃಷ್ಟಾಶ್ಚ ವಿಧೂಮೋಽಗ್ನಿಸ್ತಥಾ ಜ್ವಲನ್ ।
ಅನುಲೋಮಾ ಗ್ರಹಾಶ್ಚೈವ ವಿಜ್ಞೇಯಂ ಜಯಲಕ್ಷಣಂ ॥ ೯೭ ॥

ಆಯುಧಾನಾಂ ಪ್ರಜ್ವಲನಂ ಕೋಶಾದಪಿ ವಿನಿರ್ಗಮಃ ।
ಸಂಗ್ರಾಮಕಾಲೇ ವಿಜ್ಞೇಯಂ ವಿಜಯಸ್ಯ ತು ಲಕ್ಷಣಂ ॥ ೯೮ ॥

---

ವೆಂದೇ ಹೇಳಲ್ಪಟ್ಟಿದೆ. ಹಾಲಿರುವ ಮರದ ಪೊದರುಗಳನ್ನು ನಾಶಪಡಿಸುವ ಆನೆಯು ಜಯಪ್ರದವಾಗುತ್ತದೆ ಪ್ರಸನ್ನವಾಗಿ ಕಣ್ಣುಗಳನ್ನು ಅರಳಿಸುವ ಆನೆಯೂ ಚೆನ್ನಾಗಿ ಕಾಲುಗಳನ್ನು ಊರಿ ನಿಲ್ಲುವ ಆನೆಯೂ ಸಹ ವಿಜಯಪ್ರದವೆಂದೇ ಹೇಳಲ್ಪಟ್ಟಿದೆ.

೯೪-೯೬. ಎತ್ತು, ಕುದುರೆ, ಆನೆ ಇವುಗಳು ಯಾವುದಾದರೂ ಶತ್ರು ಸೈನ್ಯಕ್ಕೆ ಹೋಗಿ ಅಲ್ಲಿಯೇ ನೇರಿಕೊಂಡಲ್ಲಿ ಇದು ಪರಾಜಯ ಲಕ್ಷಣವಂದೇ ತಿಳಿಯಬೇಕು. ಮೇಘಗಳಿಂದುಂಟಾಗುವ ಖಂಡವೃಷ್ಟಿಯು ಸೈನ್ಯನಾಶಕ್ಕೆ ಸೂಚಕವಾಗುತ್ತದೆ. ಹಾಗೆಯೇ ವಿರುದ್ಧವಾದ ನಕ್ಷತ್ರ ಉಳ್ಕೋಣವೂ ಮತ್ತು ಎದುರಿಗೆ ಯುದ್ಧಮಾಡದೆ ಪರಾಙ್ಮುಕವಾಗುವಿಕೆಯೂ ಸಹ ಅಪಜಯಕ್ಕೆ ಕಾರಣವಾಗುತ್ತವೆ. ವಿಜಯ ಯಾತ್ರೆಯ ಕಾಲದಲ್ಲಿಯಾಗಲಿ, ಯುದ್ಧದಲ್ಲಿಯಾಗಲಿ ಛತ್ರಿ ಮೊದಲಾದವು ಕೆಳಕ್ಕೆ ಬಿದ್ದಲ್ಲಿಯೂ ಮತ್ತು ಕ್ರೂರವಾದ ಗಜಾಶ್ವಾದಿಗಳು ದೈನ್ಯಹೊಂದಿದರೂ ಸಹ ರಾಜನಿಗೆ ಭಯವೆಂದು ತಿಳಿಯಬೇಕು.

೯೭-೯೮. ಸೈನ್ಯದಲ್ಲಿರುವ ಭಟರು, ಕುದುರೆಗಳು, ಆನೆಗಳು ಇವುಗಳೆಲ್ಲವೂ ಸಂತೋಷದಿಂದಿರುವಿಕೆ, ಹೊಗೆ ಇಲ್ಲದೆ ಜ್ವಲಿಸುತ್ತಿರುವ ಅಗ್ನಿ, ಅನುಕೂಲವಾದ ಗ್ರಹಗತಿಗಳು, ಇವುಗಳೇ ಮುಖ್ಯವಾದ ಜಯಲಕ್ಷಣಗಳೆಂದು ತಿಳಿಯಬೇಕು.

ಕಾಕೈರ್ಯೋಧಾಭಿಭವನಂ ಕ್ರವ್ಯಾದೈರ್ಮಂಡಲಕ್ರಿಯಾ ।
ಸೈನ್ಯೋಪರ್ಯುಪಸೈನ್ಯೇನ ವಿಜ್ಞೇಯಂ ಭಯಲಕ್ಷಣಂ ॥ ೯೯ ॥

ಕಂಡೂತಿರ್ದಕ್ಷಿಣೇ ಹಸ್ತೇ ಛಾಯಾ ಚ ಶುಭಲಕ್ಷಣಾ ।
ಶೋಭಾ ಮನುಜಶಾರ್ದೂಲ ತತ್ಕಾಲಂ ವಿಜಯಾವಹಾ ॥ ೧೦೦ ॥

ಸೇನಾಂಗಸಂಸ್ಥೋಽಭಯಕೃದ್ದ್ವಿಜೇಂದ್ರಃ
ಕ್ರವ್ಯಾದ್ಭವೇದ್ವಾಪ್ಯಥಮಕ್ಷಿಕಾ ಚ ।
ಶುಭಾವಹಾಃ ಸ್ಯುಃ ಶತಪತ್ರ ಚಾಷ
ಮಯೂರಹಂಸಾಶ್ಚ ಸಜೀವಜೀವಾಃ ॥ ೧೦೧ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಽಪಾಖ್ಯಾನೇ
ಶಕುನವರ್ಣನೋನಾಮ ಚತುಃಷಷ್ಟ್ಯುತ್ತರಶತತಮೋಽಧ್ಯಾಯಃ

---

ಆಯುಧಗಳು ತಾನಾಗಿಯೇ ಜ್ವಲಿಸುವಿಕೆ, ಒರೆಯಿಂದ ಈಚೆಗೆ ಬರುವಿಕೆ, ಇವೆಲ್ಲವೂ ಯುದ್ಧಕಾಲದಲ್ಲಿ ಉಂಟಾಗುವ ವಿಜಯಲಕ್ಷಣಗಳೆಂದು ತಿಳಿಯಬೇಕು.

೯೯–೧೦೧. ಕಾಗೆಗಳಿಂದ ಯೋಧರಿಗೆ ಅಪಜಯವಾಗುವಿಕೆ, ಮಾಂಸಾಹಾರಿಗಳಾದ ಪಕ್ಷಿಗಳು ಮಂಡಲಾಕಾರವಾಗಿ ಗಗನದಲ್ಲಿ ಸೈನ್ಯದ ಪ್ರತಿಸೈನ್ಯದಂತೆ ಸಂಚರಿಸುವುದು. ಇವುಗಳು ಭಯಸೂಚಕವೆಂದು ತಿಳಿಯಬೇಕು, ಬಲಗೈಯ್ಯಿನಲ್ಲಿ ನವೆಯುಂಟಾಗುವಿಕೆ, ಶುಭಸೂಚಕವಾದ ಕಾಂತಿವಿಶೇಷ, ಶೋಭಾವಿಶೇಷ, ಇವೆಲ್ಲವೂ ಆ ಕಾಲದಲ್ಲಿ ಉಂಟಾಗುವ ವಿಜಯಕ್ಕೆ ಸೂಚಕವಾಗುತ್ತವೆ. ಗಜಾಶ್ವಾದಿ ಸೈನ್ಯಮಧ್ಯದಲ್ಲಿ ಇರುವ ಆನೆಯು ಮಾಂಸಾಹಾರಿಗಳಾದ ಪಕ್ಷಿಗಳಿಂದಲೂ, ನೊಣಗಳಿಂದಲೂ ಸುತ್ತುವರಿಯಲ್ಪಟ್ಟರೂ ಸಹ ಅದು ಅಭಯಪ್ರದವೆಂದೇ ತಿಳಿಯಬೇಕು. ಹೊಳೆಯಲ್ಲಿ ಆಡುವ ಕುಕ್ಕುಟೀ ಎಂಬ ಹಕ್ಕಿಯೂ ಚಾಷವೆಂಬ ಕಪ್ಪುಹಕ್ಕಿಯೂ, ನವಿಲೂ, ಹಂಸವೂ, ಚಕೋರವೂ ಸಹ ಯೋಧರಿಗೆ ವಿಜಯಪ್ರದಗಳಾಗಿಯೂ, ಶುಭಕರಗಳಾಗಿಯೂ ಆಗುತ್ತವೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ
ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ
ಶಕುನವರ್ಣನವೆಂಬ ನೂರ ಅರವತ್ತನಾಲ್ಕನೆಯ
ಅಧ್ಯಾಯವು ಮುಗಿದಿದೆ.

|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಪಂಚಷಷ್ಟ್ಯುತ್ತರಶತತಮೋಽಧ್ಯಾಯಃ

|| ಪುಷ್ಕರ ಉವಾಚ ||

**ಪ್ರಷ್ಟುರ್ದೇಶೇ ಶುಭೇ ವೇದ್ಯಂ ಶುಭಂ ಭವತಿ ಭಾರ್ಗವ |**
**ಅಶುಭೇ ವಾಶುಭಂ ರಾಮ ತನ್ಮೇ ನಿಗದತಃ ಶೃಣು || ೧ ||**

**ಶ್ಮಶಾನಸೂನಾಭವನಬಂಧನಾಗಾರವೇಶ್ಮಸು |**
**ರಥ್ಯಾಕರ್ದಮದುರ್ಗೇಷು ಶೂನ್ಯೇಷು ಭವನೇಷು ಚ | || ೨ ||**

**ಕಂಟಕಿದ್ರುಮಯುಕ್ತೇಷು ಶೀರ್ಣಪ್ರಾಕಾರವೇಶ್ಮಸು |**
**ವಲ್ಮೀಕವಮೂಷಿಕಾಸರ್ಪಸಕೀಟೇಷ್ವಶುಭಂ ವದೇತ್ || ೩ ||**

---

### ನೂರ ಅರವತ್ತೈದನೇ ಅಧ್ಯಾಯ.

೧–೩. ಪ್ರಶ್ನೆಮಾಡತಕ್ಕವನು ಶುಭವಾದ ಪ್ರದೇಶದಲ್ಲಿದ್ದಲ್ಲಿ ಅವನ ಪ್ರಶ್ನೆಗೆ ಶುಭವಾದ ಫಲವೇ ಲಭಿಸುತ್ತದೆ. ಅಶುಭವಾದ ಪ್ರದೇಶದಲ್ಲಿ ನಿಂತು ಪ್ರಶ್ನೆಮಾಡಿದಲ್ಲಿ ಅದಕ್ಕೆ ಅಶುಭವಾದ ಫಲವನ್ನೇ ಹೇಳಬೇಕು ಅದನ್ನೂ ನಾನು ಹೇಳುತ್ತೇನೆ, ಕೇಳು. ಶ್ಮಶಾನ ಪ್ರಾಣಿಗಳನ್ನು ಕೊಲ್ಲುವ ಸ್ಥಳ, ಬಂಧಿಸುವ ಶಾಲಾ ಅಥವಾ ಮನೆ, ಮಾರ್ಗ, ಕೆಸರಿನ ಪ್ರದೇಶ, ದುರ್ಗಸ್ಥಾನ, ಜನರಿಲ್ಲದ ಪಾಳುಮನೆ, ಮುಳ್ಳಿನ ಮರಗಳಿರುವ ಪ್ರದೇಶ, ಪ್ರಾಕಾರ ಮತ್ತು ಮನೆಗಳು ಹಾಳಾಗಿರುವ ಸ್ಥಳ, ಹುತ್ತವುಳ್ಳ ಸ್ಥಳ ಮತ್ತು ಇಲಿ ಸರ್ಪ, ಕ್ರಿಮಿಕೀಟಾದಿಗಳು ಇವುಗಳಿಂದ ಕೂಡಿದ ಸ್ಥಳ, ಇವುಗಳಲ್ಲಿ ನಿಂತು ಪ್ರಶ್ನೆಮಾಡಿದಲ್ಲಿ ಅಶುಭಫಲವನ್ನೇ ಹೇಳಬೇಕು.

ಮಾಂಸಸ್ಪೃಷ್ಟೋಪಲಿಪ್ತೇಷು ಸುಪ್ರಪುಷ್ಪೇಷು ವಿಶೇಷತಃ ।
ಪ್ರಶಸ್ತದ್ರುಮಯುಕ್ತೇಷು ವಿದ್ಯಾದ್ವಿಜಯಲಕ್ಷಣಂ ॥ ೪ ॥

ಸಶಾದ್ವಲೇಷು ತೀರೇಷು ಸರಿತಾಂ ಸರಸಾಮಪಿ ।
ಭವನೇಷು ವಿಚಿತ್ರೇಷು ಶುಭಂ ವಾಚ್ಯಂ ವಿಜಾನತಾ ॥ ೫ ॥

ಅಭ್ಯಕ್ತಂ ಶೋಚ್ಯಮಾನಂ ಚ ಮುಕ್ತಕೇಶಂ ತಥೈವ ಚ ।
ಭೂಮಿಷ್ಠಮುಪಸರ್ಪಂತಿ ತೇಷಾಂ ವಿದ್ಯಾದಶೋಭನಂ ॥ ೬ ॥

ಹೃಷ್ಟಶುಕ್ಲಾಂಬರೋಪೇತಾ ಸುಮನಸ್ಕಾಸ್ತಥೈವ ಚ ।
ದೈವಜ್ಞಮುಪಸರ್ಪಂತಿ ತೇಷಾಂ ವಿದ್ಯಾಚ್ಛುಭಂ ದ್ವಿಜಾಃ ॥ ೭ ॥

ಬಹವೋ ದಂಡಹಸ್ತಾಶ್ಚ ಕಾಷಾಯವಸನಾಸ್ತಥಾ ।
ಅಭ್ಯಕ್ತಮುಂಡಪತಿತಾಸ್ತಥಾ ಕ್ಲೀಬಾಶ್ಚ ಯೋಷಿತಃ ॥ ೮ ॥

---

೪-೬. ಮಾಂಸದ ಸಂಬಂಧವನ್ನು ಹೊಂದಿಯೂ, ಮಾಂಸದಿಂದ ಲೇಪಿಸಲ್ಪಟ್ಟೂ ಇರುವ ಮತ್ತು ಒಳ್ಳೆಯ ಹೂವುಗಳಿಂದ ಕೂಡಿ ರಮ್ಯವಾಗಿರುವ ಮರಗಳಿರುವ ಸ್ಥಳದಲ್ಲಿಯೂ ಕೇಳುವ ಪ್ರಶ್ನೆಯು ವಿಜಯಸಾಧಕವಾಗಿಯೇ ಆಗುತ್ತದೆ. ಹಸಿರು ಹುಲ್ಲು ಬೆಳೆದಿರುವ ನದಿಯ ಮತ್ತು ಸರೋವರಗಳ ತೀರಗಳಲ್ಲಿಯೂ, ವಿಚಿತ್ರವಾಗಿಯೂ, ರಮ್ಯವಾಗಿಯೂ ಇರುವ ಮನೆಗಳಲ್ಲಿಯೂ ಕೇಳುವ ಪ್ರಶ್ನೆಯು ಶುಭಫಲಕ್ಕೆ ಅರ್ಹವಾದುದು. ಯಾರು ಎಣ್ಣೆ ಹಾಕಿಕೊಂಡಿರುವ ಮತ್ತು ದುಃಖದಿಂದ ಮತ್ತು ತಲೆಯನ್ನು ಬಿಚ್ಚಿಕೊಂಡಿರುವ ಮತ್ತು ಭೂಮಿಯ ಮೇಲೆಯೇ (ಆಸನವಿಲ್ಲದೆ) ಕುಳಿತಿರುವ ನಿಮಿತ್ತಜ್ಞನನ್ನು ಪ್ರಶ್ನೆಕೇಳಲು ಬರುವರೋ ಅಂತಹವರಿಗೆ ಅಶುಭಕರವಾದ ಫಲವೇ ಉಂಟಾಗುತ್ತದೆ ಎಂದು ತಿಳಿಯಬೇಕು.

೭-೯. ಯಾವ ಪ್ರಾಶ್ನಿಕರು ಸಂತುಷ್ಟರಾಗಿಯೂ ಶುಭ್ರವಸ್ತ್ರಧಾರಿಗಳಾಗಿಯೂ, ಪ್ರಸನ್ನ ಮನಸ್ಕರಾಗಿಯೂ ಇದ್ದು ಜ್ಯೋತಿಷಕನ ಸಮೀಪಕ್ಕೆ ಬರುತ್ತಾರೆಯೋ ಅಂತಹ ದ್ವಿಜರು ಶುಭದ ಫಲವನ್ನು ಹೊಂದುತ್ತಾರೆ. ಬಹು ಜನ ಸಮುದಾಯದಿಂದ ಕೂಡಿ ದಂಡಧಾರಿಗಳಾಗಿಯೂ ಕಷಾಯವಸ್ತ್ರಧಾರಿಗಳಾಗಿಯೂ ತಲೆಗೆ ಎಣ್ಣೆ ಹಾಕಿಕೊಂಡಿರುವವರೂ, ಪತಿತರೂ, ನಪುಂಸಕರೂ, ಸ್ತ್ರೀಯರೂ

**ಶೃಂಖಲಾರಜ್ಜು ಹಸ್ತಾಶ್ಚ ಸಂಕ್ಲಿನ್ನಫಲಪಾಣಯಃ ।**
**ಪೃಚ್ಛಂತಸ್ತೇ ತು ವಿಜ್ಞೇಯಾ ನೃಷ್ಟಶೇಷಭಯಾವಹಾಃ ॥ ೯ ॥**

**ಶುಕ್ಲಾಂಬರಾಃ ಸುಪುಷ್ಪಾಶ್ಚ ತಥೈವ ಫಲಪಾಣಯಃ ।**
**ರತ್ನಹಸ್ತಾಃ ಶುಭಾ ಜ್ಞೇಯಾಸ್ತಥಾ ಮಂಗಲವಾದಿನಃ ॥ ೧೦ ॥**

**ವೇಲಾಃ ಸರ್ವಾಃ ಪ್ರಪಶ್ಯೇತ ಪೂರ್ವಾಹ್ಣೇ ಪರಿಪೃಚ್ಛತಃ ।**
**ಸಂಧ್ಯಯೋರಪರಾಹ್ಣೇ ಚ ನಿಶಾಯಾಂ ಚ ವಿಗರ್ಹಿತಾಃ ॥ ೧೧ ॥**

**ಶಾಂತಾಂ ದಿಶಮಥಾಸ್ಥಾಯ ಪೃಚ್ಛತಃ ಸಿದ್ಧಿಮಾದಿಶೇತ್ ।**
**ಉದೀಚೀಂ ಪ್ರಾಗುದೀಚೀಂ ಚ ಪೂರ್ವಾಂ ಚೈವ ವಿಶೇಷತಃ ॥ ೧೨ ॥**

**ಅಂಗುಷ್ಠನಖಪಾದೋರುಗುಲ್ಫಮುಷ್ಕಮುರಸ್ತನಾಃ ।**
**ಗಂಡಶೃಂಗಾಕ್ಷಿಕೌ ಕರ್ಣೌ ದನ್ತೋಷ್ಠಭುಜಮಸ್ತಕಂ ॥ ೧೩ ॥**

---

ಸರಪಣಿ ಅಥವಾ ಹಗ್ಗ ಮೊದಲಾದವುಗಳನ್ನು ಕೈಯಲ್ಲಿ ಧರಿಸಿಯೂ, ಕೊಳತು ನಾರುವ ಫಲಗಳನ್ನು ಕೈಯಿನಲ್ಲಿ ಹೊಂದಿಯೂ ಬಂದು ಪ್ರಶ್ನೆಮಾಡಿದಲ್ಲಿ ಅವರು ಮನುಷ್ಯರೆಲ್ಲರಲ್ಲಿಯೂ ಸಹ ಅತಿ ಭಯಂಕರವಾದ ಫಲವನ್ನು ಹೊಂದುತ್ತಾರೆ.

೧೦-೧೧. ಬಿಳಿಯ ವಸ್ತ್ರವನ್ನುಟ್ಟು ಪುಷ್ಪಧಾರಿಗಳಾಗಿಯೂ ಫಲದೊಡನೆ ಕೂಡಿರುವ ಅಥವಾ ರತ್ನಗಳೊಡನೆ ಕೂಡಿರುವ ಕೈಗಳುಳ್ಳವರಾಗಿ ಮಂಗಳಧ್ವನಿಗೈಯುತ್ತಾ ಯಾರು ಜ್ಯೋತಿಷಿಕನಲ್ಲಿ ಬರುತ್ತಾರೆಯೋ ಅವರು ಶುಭಫಲಭಾಗಿಗಳೆಂದು ತಿಳಿಯಬೇಕು. ದಿನದ ಪೂರ್ವಭಾಗದಲ್ಲಿ ಪ್ರಶ್ನೆಮಾಡಿದುದೇ ಆದರೆ ಆ ಕಾಲವೆಲ್ಲವನ್ನೂ ಸರಿಯಾಗಿ ಪರೀಕ್ಷಿಸಿ ನೋಡಬೇಕು. ಸಂಧ್ಯಾಕಾಲದಲ್ಲಿಯೂ ದಿನದ ಕೊನೆಯ ಭಾಗದಲ್ಲಿಯೂ ರಾತ್ರಿಯಲ್ಲಿಯೂ ಪ್ರಶ್ನೆಯು ನಿಂದಿತಫಲವಾಗುತ್ತದೆ.

೧೨-೧೪. ಶಾಂತವಾದ ದಿಕ್ಕಿಗೆ ಅಭಿಮುಖನಾಗಿ ಕುಳಿತು ಪ್ರಶ್ನೆ ಮಾಡುವವನಿಗೆ ಫಲಸಿದ್ಧಿಯುಂಟಾಗುತ್ತದೆ. ಎಂದು ಹೇಳಬೇಕು. ಉತ್ತರ ದಿಕ್ಕಿಗೂ ಈಶಾನ್ಯ ದಿಕ್ಕಿಗೂ ಅಭಿಮುಖನಾಗಿ ಕುಳಿತವನ ಪ್ರಶ್ನೆಯು ವಿಶೇಷವಾಗಿ ಶುಭಫಲ ಉಳ್ಳದ್ದೆಂದು ತಿಳಿಯಬೇಕು. ಅಂಗುಷ್ಠ, ಉಗುರು, ಕಾಲು, ತೊಡೆ, ಕಾಲಿನ

**ಗುರುಲುಗುರ್ಗುರುವಸ್ತಿಶ್ಚ ವಕ್ಷಃ ಕಕ್ಷೋರುಸಂಧಯಃ ।**
**ಪುನ್ನಾಮಾನ್ಯೇವಮಾದೀನೀ ಸ್ಪೃಶತಃ ಪೃಚ್ಛತಃ ಶುಭಃ ॥ ೧೪ ॥**

**ಕರ್ಣಪಾಳಿಭ್ರುವೌ ನಾಸಾಜಿಹ್ವಾಗ್ರೀವಾ ಕೃಕಾಟಿಕಾಃ ।**
**ನಾಭಿಶ್ರೋಣೀ ಸ್ಫಿಚೇ ಜಂಘೇ ಪಿಂಡಿಕಾಂಗುಲಯೋಽಪಿ ಚ ॥ ೧೫ ॥**

**ಪಾಣಿಪಾದಾಶ್ರಯಾ ರೇಖಾ ವಲಯಃ ಸರ್ವಸಂಧಿಷು ।**
**ಪಾರ್ಷ್ಣಿರಿತ್ಯೇವಮಾದೀನಿ ಸ್ತ್ರೀನಾಮಾನ್ಯಭಿನಿರ್ದಿಶೇತ್ ॥ ೧೬ ॥**

**ಶಿರೋ ಲಲಾಟಂ ಚಿಬುಕಂ ಮುಖಂ ಪೃಷ್ಠೋದರಂ ತ್ರಿಕಂ ।**
**ಜಠರಂ ವಸ್ತಿ ಶೀರ್ಷಂ ಚ ಮೇಹನಂ ಜಾನುನೀ ತಥಾ ॥ ೧೭ ॥**

**ಕರ್ಣಪೀಠೇಽಕ್ಷಿಕೂಟೇ ಚ ಪಾರ್ಶ್ವೇ ಚ ಹೃದಯಂ ತಥಾ ।**
**ನಪುಂಸಕಾನಿ ಜಾನೀಯುರಂಗವಿದ್ಯಾವಿಶಾರದಾಃ ॥ ೧೮ ॥**

---

ಗಂಟು, ಅಂಡಕೋಶ, ಎದೆ, ಸ್ತನಪ್ರದೇಶ, ಕಪಾಲ, ಗಡ್ಡದ ತುದಿ, ಕಣ್ಣು, ಹಲ್ಲು, ತುಟಿ, ಭುಜ, ತಲೆ, ಕುತ್ತಿಗೆ, ವಿಶಾಲವಾದ ನಾಭಿ, ಪಾರ್ಶ್ವ, ತೊಡೆಯ ಸಂಧಿಗಳು ಹೀಗೆಯೇ ಪುನ್ನಾಮಕಗಳಾದ ಅಂಗಗಳು ಇವನ್ನು ಸ್ಪರ್ಶ ಮಾಡುತ್ತಾ ಪ್ರಶ್ನೆ ಮಾಡುವವನಿಗೆ ಶುಭ ಫಲವೇ ಉಂಟಾಗುತ್ತದೆ.

೧೫–೧೬. ಹೀಗೆಯೇ ಕಿವಿಯಪ್ರದೇಶ ಹುಬ್ಬು, ಮೂಗು, ನಾಲಿಗೆ, ಕಂಠ, ಹೆಕ್ಕತ್ತು, ಹೊಕ್ಕಳು, ಕಟಿಭಾಗ, ಕುಂಡೆಯ ಮೇಲುಭಾಗ, ಮೊಣಕಾಲು, ನಾಭಿಯ ರಂಧ್ರ, ಬೆರಳುಗಳು, ಕೈಗಳಲ್ಲಿಯೂ, ಕಾಲುಗಳಲ್ಲಿಯೂ ಇರುವ ರೇಖೆಗಳು ಸಂಧಿಬಂಧಗಳಲ್ಲಿರುವ ಮಡಿಕೆಗಳು, ಪಾರ್ಶ್ವ ಇವೇ ಮೊದಲಾದ ಅವಯವಗಳನ್ನು ಸ್ತ್ರೀನಾಮಕಗಳನ್ನಾಗಿ ತಿಳಿಯಬೇಕು.

೧೭–೧೮. ತಲೆ, ಹಣೆ, ಗಡ್ಡ, ಮುಖ, ಪೃಷ್ಠಭಾಗ, (ಬೆನ್ನು) ಹೊಟ್ಟೆ ಬೆನ್ನೆಲುಬಿನ ಕೆಳಭಾಗ, ಜಠರ, ಕಿರಿಯ ಹೊಟ್ಟೆ, ತಲೆಯ ಹಿಂಭಾಗ, ಲಿಂಗ, ಮಂಡಿ, ಕಿವಿಗಳಿರುವ ಸ್ಥಳ, ಕಣ್ಣಿನ ಆಶ್ರಯ, ಪಾರ್ಶ್ವಭಾಗ, ಹೃದಯ ಇವೆಲ್ಲವೂ ನಪುಂಸಕಗಳೆಂದು ಅಂಗವಿದ್ಯಾಭಿಜ್ಞರು ತಿಳಿದಿದ್ದಾರೆ.

ಪುನ್ನಾಮಾನಂ ದೃಢಂ ಸ್ನಿಗ್ಧಮವಿಭಗ್ನಮಪೀಡಿತಂ ।
ಸಮಂ ಸಮಾಹಿತಂ ಚಾಂಗಂ ನೀರುಜಂ ಚ ಯದಾ ಸ್ಪೃಶೇತ್ ॥ ೧೯ ॥

ಯಮರ್ಥಮಭಿವೃಚ್ಛೇತ ತಸ್ಯ ಸಿದ್ಧಿಂ ವಿನಿರ್ದಿಶೇತ್ ।
ಶತ್ರುಣಾಪ್ಯುದಯೇ ಪ್ರಷ್ಟುಸ್ತಲ್ಲಗ್ನಸ್ಯ ತಥೋದಯೇ ॥ ೨೦ ॥

ಶತ್ರುರಾಶ್ಯುದಯೇ ಪ್ರಷ್ಟುಸ್ತೇಷಾಂ ವಾಪ್ಯಧಿಪೋದಯೇ ।
ಪರಾಜಯಂ ತು ವಕ್ತವ್ಯಂ ಸ್ವಲಗ್ನಸ್ಯಾಷ್ಟಮೋದಯೇ ॥ ೨೧ ॥

ಸ್ವರಾಶೇಶ್ಚ ಮಹಾಭಾಗ ತಥಾ ವಿದ್ಯಾದಶೋಭನಂ ।
ಸ್ವಲಗ್ನಸ್ಯೋದಯೇ ರಾಮ ಶತ್ರುರಾಶ್ಯುದಯೇ ತಥಾ ॥ ೨೨ ॥

ಲಗ್ನಾದ್ವಾರಾಶಿತೋ ವಾಪಿ ತ್ರಿಷಷ್ಠದಶಮೋದಯೇ ।
ಏಕಾದಶೋದಯೇ ವಾಪಿ ತೇಷಾಂ ವಾಪ್ಯಧಿಪೋದಯೇ ॥ ೨೩ ॥

---

೧೯–೨೧. ಇವುಗಳಲ್ಲಿ ಪುಂನಾಮಕಗಳಾದ ದೃಢವಾಗಿಯೂ, ನಯವಾಗಿಯೂ, ಭಂಗವಿಲ್ಲದೆ ಒಂದೇ ಸಮನಾಗಿಯೂ, ರೋಗವಿಲ್ಲದೆಯೂ ಇರುವ ಯಾವುದಾದರೊಂದು ಅಂಗವನ್ನು ಪ್ರಶ್ನೆಮಾಡುವವನು ಮರ್ದನಮಾಡದೆ ಮೃದುವಾಗಿ ಸ್ಪರ್ಶಮಾಡುತ್ತಾನೆಯೋ ಅವನು ಆಗ ಕೇಳುವ ಪ್ರಶ್ನೆಯೂ ಸಿದ್ಧಿಹೊಂದುತ್ತದೆ ಎಂದು ಹೇಳಬೇಕು ಪ್ರಶ್ನೆಮಾಡುವ ಲಗ್ನಕ್ಕೆ ಶತ್ರುವಾಗಿರುವವನ ಉದಯವುಂಟಾಗಿದ್ದರೂ ಆ ಲಗ್ನಕ್ಕೇ ಉದಯವುಂಟಾಗಿದ್ದರೂ, ಶತ್ರುರಾಶಿಯ ಉದಯವುಂಟಾಗಿದ್ದರೂ, ಆ ರಾಶಿಗಳ ಅಧಿಪತಿಯ ಉದಯವಾಗಿದ್ದರೂ, ಪ್ರಶ್ನಲಗ್ನಕ್ಕಿಂತ ಅಷ್ಟಮಲಗ್ನವು ಉದಯ ಹೊಂದಿದ್ದರೂ ನರಿಯೆ, ಪರಾಜಯವೇ ಉಂಟಾಗುತ್ತದೆ ಎಂದು ಫಲವನ್ನು ಹೇಳಬೇಕು.

೨೨–೨೩. ತನ್ನ ರಾಶಿಯ ಉದಯವಿದ್ದರೂ ಸಹ ಅಶುಭವೆಂದೇ ತಿಳಿಯಬೇಕು ಸ್ವಲಗ್ನವೂ, ಶತ್ರುರಾಶಿಯೂ ಉದಯ ಹೊಂದಿದಲ್ಲಿ ಲಗ್ನದಿಂದಾಗಲಿ, ರಾಶಿಯಿಂದಾಗಲಿ ಮೂರು, ಆರು, ಹತ್ತು, ಹನ್ನೊಂದನೆಯ ಲಗ್ನ ಮತ್ತು ರಾಶಿಗಳು ಉದಯ ಹೊಂದಿದ್ದಲ್ಲಿ ಆ ರಾಶಿಗಳ ಅಧಿಪತಿಗಳೂ ಉದಯ ಹೊಂದಿದ್ದಲ್ಲಿ ಪ್ರಶ್ನೆ ಮಾಡಿದವನ ಎಲ್ಲಾ ಇಷ್ಟವೂ ಸಿದ್ಧಿಸುತ್ತದೆ ಎಂದರಿಯಬೇಕು.

ಪ್ರೆಷ್ಟುಃ ಸರ್ವಾರ್ಥಸಂಪತ್ತಿರ್ವಿಜ್ಞೇಯೋ ಭೃಗುನಂದನ ।
ಲಗ್ನೇ ವಾ ತಚ್ಚತುರ್ಥೇ ವಾ ಸಪ್ತಮೇ ದಶಮೇಽಪಿ ವಾ ॥ ೨೪ ॥

ಪಂಚಮೇ ನವಮೇ ವಾಪಿ ಶಸ್ತಾಃ ಸೌಮ್ಯಗ್ರಹಾಃ ಸ್ಮೃತಾಃ ।
ತ್ರಿಷಟ್ ದಶಸಮಂ ಸ್ಥಾನೇ ಪಾಪಾಶ್ಚೈಕಾದಶೇ ಶುಭಾಃ ॥ ೨೫ ॥

ಸರ್ವಾರ್ಥಸಾಧಕಾ ಜ್ಞೇಯೋ ಪ್ರಷ್ಟುಃ ಭೃಗುಕುಲೋದ್ವಹ ।
ಸೌಮ್ಯಾ ಬಲಾಧಿಕಾ ಜ್ಞೇಯಾಃ ಪಾಪಾ ಹೀನಬಲಾಸ್ತಥಾ ॥ ೨೬ ॥

ಬಲವಚ್ಚ ತಥಾ ಲಗ್ನಂ ಪ್ರಶ್ನಕಾಲೇ ಶುಭಪ್ರದಂ ।
ಏವಂ ತು ಪ್ರಶ್ನಕಾಲೇನ ಶುಭಂ ವಿಜ್ಞಾಯ ಭೂಪತಿಃ ॥ ೨೭ ॥

ಯಾತ್ರಾ ರಾಮ ಶುಭಾ ಜ್ಞೇಯಾ ನಾನ್ಯಥಾ ತು ಕದಾಚನ ।
ಜಾತಕಂ ಚಾಥ ವಿಜ್ಞಾಯ ದಶಾಕಾಲೇ ಸುಶೋಭನೇ ॥ ೨೮ ॥

---

೨೪-೨೬. ಪ್ರಶ್ನಲಗ್ನದಲ್ಲಾಗಲಿ ಅದಕ್ಕಿಂತಲೂ ನಾಲ್ಕು, ಏಳು ಮತ್ತು ಹತ್ತನೆಯ ಮತ್ತು ಐದು, ಒಂಭತ್ತನೆಯ ಲಗ್ನದಲ್ಲಿಯೂ ಸಹ ಸೌಮ್ಯಗ್ರಹಗಳಿದ್ದರೂ ಪ್ರಶಸ್ತಗಳೆಂದು ತಿಳಿಯಬೇಕು. ಪಾಪಗ್ರಹಗಳು ಮೂರು, ಆರು, ಹತ್ತು ಈ ಲಗ್ನಗಳಲ್ಲಿ ಸಮವಾಗಿದ್ದರೂ, ಏಕಾದಶ ಲಗ್ನದಲ್ಲಿ ಪ್ರಶಸ್ತಗಳೇ ಆಗುತ್ತವೆ. ಹೀಗಿದ್ದಲ್ಲಿ ಅಂತಹ ಗ್ರಹಗಳು ಪ್ರಶ್ನೆಮಾಡುವವನಿಗೆ ಎಲ್ಲಾ ಮನೋರಥ ಪ್ರಾಪ್ತಿಗೂ ಸಾಧಕವಾಗುತ್ತವೆ. ಸೌಮ್ಯಗ್ರಹಗಳು ಅಧಿಕಬಲವುಳ್ಳವಾಗಿಯೂ, ಪಾಪಗ್ರಹಗಳು ಹೀನಬಲವುಳ್ಳವುಗಳಾಗಿಯೂ ಆಗುತ್ತವೆ.

೨೭-೨೮. ಹಾಗೂ ಪ್ರಶ್ನಕಾಲದ ಲಗ್ನವು ಬಲಿಷ್ಠವಾಗಿದ್ದಲ್ಲಿ ಶುಭಫಲವೇ ಉಂಟಾಗುತ್ತದೆ. ಈ ರೀತಿ ಪ್ರಶ್ನಕಾಲದ ಲಗ್ನದ ಬಲಕ್ಕೆ ತಕ್ಕಂತೆ ಶುಭಫಲವನ್ನು ವಿಚಾರಿಸಿ ದೊರೆಯಾದವನು ವಿಜಯಯಾತ್ರೆಯನ್ನು ಕೈಕೊಂಡಲ್ಲಿ ಅವನ ಯಾತ್ರೆಯು ಶುಭಕರವಾಗಿ ಆಗುತ್ತದೆ. ಹಾಗಿಲ್ಲದಿದ್ದರೆ ಅದು ಶುಭಪರ್ಯವಸಾಯಿ ಯಾಗಲಾರದು. ತನ್ನ ಜಾತಕವನ್ನೂ ವಿಚಾರಮಾಡಿ ಸರಿಯಾದ ದಶಾಸಮಯದಲ್ಲಿ ಅಷ್ಟವರ್ಗಬಲವಿರುವ ಶುದ್ಧವಾದ ಲಗ್ನದಲ್ಲಿ ವಿಜಯಯಾತ್ರೆಯು ಪ್ರಶಸ್ತ ವಾಗುತ್ತದೆ.

ಪರಸ್ಯ ದೈವೇತ್ವಶುಭೇ ದ್ವಿಜೇಂದ್ರ
ಯಾತ್ರಾ ಚ ದೇಯಾ ಸ್ವಶುಭಾಯ ನಿತ್ಯಂ ।
ಗ್ರಹಾದಿಪಾಕೇಷು ಶುಭೇಷು ಚೈವ
ದತ್ತಾ ಭವೇತ್ಕಾರ್ಯಕರೀ ಯಥಾವತ್ ॥ ೨೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ಅಂಗವಿದ್ಯಾಯೋಗೋನಾಮ
ಪಂಚಷಷ್ಟ್ಯುತ್ತರಶತತಮೋಽಧ್ಯಾಯಃ

---

೨೯. ಶತ್ರುವಿನ ದಶಾಕಾಲವು ದೈವಜ್ಞದೃಷ್ಟಿಯಿಂದ ಅಶುಭಕರವಾಗಿರುವುದನ್ನು ತಿಳಿದು ತನ್ನ ಗ್ರಹಗತಿಗಳು ಶುಭವಾಗಿರುವುದನ್ನೂ ನೋಡಿ ತನ್ನ ಕ್ಷೇಮಕ್ಕಾಗಿ ಯಾತ್ರೆಯನ್ನು ಸ್ವೀಕರಿಸಿದಲ್ಲಿ ಯಥಾಶಾಸ್ತ್ರವಾಗಿ ನಡೆಸಿದ ಆ ವಿಜಯ ಯಾತ್ರೆಯು ಶುಭಪ್ರದವಾಗಿಯೇ ಆಗುತ್ತದೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ
ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನ ಉಪಾಖ್ಯಾನದಲ್ಲಿ
ಅಂಗವಿದ್ಯಾಯೋಗವೆಂಬ ನೂರ ಅರವತ್ತೈದನೆಯ
ಅಧ್ಯಾಯವು ಮುಗಿದಿದೆ.



|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಷಟ್‌ಷಷ್ಟ್ಯುತ್ತರಶತತಮೋಽಧ್ಯಾಯಃ

|| ಶ್ರೀ ಮಾರ್ಕಂಡೇಯ ಉವಾಚ ||

ಗದ್ಯ—ಅಥ ಭಾರ್ಗವೋ ರಾಮೋ ವರುಣನಂದನಂ ಪುಷ್ಕರಂ ನಾಮ-ಪಪ್ರಚ್ಛ । ಭಗವನ್ ಜ್ಯೋತಿಶ್ಶಾಸ್ತ್ರಂ ಶ್ರೋತುಮಿಚ್ಛಾಮಿ । ತಮುವಾಚ ವಾರುಣಿಃ । ಪುರಾ ಸುರರ್ಷಿಗಣಮಧ್ಯಗತಮತಿ-ಶಯಂ, ಸರ್ವಜಗತ್ಪಾಲನಸಂಹಾರಕರಂ, ಶ್ರೀ ಬ್ರಹ್ಮಾಣಂ ಭೃಗುರ್ವಿಜ್ಞಾಪಯಾಮಾಸ । ಭಗವನ್ ಜ್ಯೋತಿಷಾಮಯನಂ ಶ್ರೋತುಮಿಚ್ಛಾಮಿ । ತಮುವಾಚ ಭಗವಾನ್ ಪಿತಾಮಹಃ ||

---

### ನೂರ ಅರವತ್ತಾರನೇ ಅಧ್ಯಾಯ.

ಅನಂತರ ಮಾರ್ಕಂಡೇಯರು ಹೇಳುತ್ತಾರೆ :—ಅನಂತರ ಭಾರ್ಗವರಾಮನು, ವರುಣಪುತ್ರನಾದ ಪುಷ್ಕರನನ್ನು ಪೂಜ್ಯನೇ. ಜ್ಯೋತಿಶ್ಶಾಸ್ತ್ರವನ್ನು ಕೇಳಲು ಅಪೇಕ್ಷೆಯುಂಟಾಗುತ್ತಿದೆ ಎಂದು ಪ್ರಶ್ನೆಮಾಡಿದನು. ಆಗ ಆ ರಾಮನನ್ನು ಕುರಿತು ಪುಷ್ಕರನು ಹೇಳುತ್ತಾನೆ. ಪೂರ್ವದಲ್ಲಿ ದೇವರ್ಷಿಗಳ ಮಧ್ಯದಲ್ಲಿ ದೇದೀಪ್ಯಮಾನನಾಗಿ ಬೆಳಗುತ್ತಿರುವ, ಸಕಲ ಜಗತ್ತಿಗೂ ರಕ್ಷಣಸಂಹಾರಕಾರ್ಯದಲ್ಲಿ ಸಮರ್ಥನಾದ ಚತುರ್ಮುಖನನ್ನು ಕುರಿತು ಭೃಗುಋಷಿಯು ಹೀಗೆ ವಿಜ್ಞಾಪಿಸಿದನು. ಪೂಜ್ಯನೇ, ಗ್ರಹಗಳ ಗಮನಾಗಮನಾದಿ ಮಾರ್ಗವನ್ನು ಅಥವಾ ಆ ಮಾರ್ಗಕ್ಕೆ ಸಿದ್ಧಾಯಕವಾಗಿರುವ ಜ್ಯೋತಿಶ್ಶಾಸ್ತ್ರವನ್ನು ಕೇಳಲು ಇಚ್ಛೆಪಡುತ್ತಿದ್ದೇನೆ. ಆಗ ಆ ಭೃಗುಋಷಿಯನ್ನು ಕುರಿತು ಪೂಜ್ಯನಾದ ಚತುರ್ಮುಖನು ಹೀಗೆ ಹೇಳಿದನು.

ಯದಾ ಮೇ ತ್ವಂ ಕಲ್ಪಾದೌ ಹೃದಯಾಜ್ಜಾತಸ್ತದಾ ಮಯಾ ತೇ ಶ್ಲೋಕಾನಾಂ ಚತುರ್ವಿಂಶತಿಲಕ್ಷಂ ಜ್ಯೋತಿರಯನಮುಕ್ತಂ । ತದೇವಾಸ್ಮಿನ್ ವಾರುಣೇ ಯಜ್ಞೇ ಮಹಾದೇವಶಾಪೇನ ಜ್ವಾಲಾಂ ಭಿತ್ವಾ ವಿನಿರ್ಗತಸ್ಯ ಜನ್ಮಾಂತರೋತ್ಪನ್ನಸ್ಯ ಅತಿಸಂಕ್ಷಿಪ್ತಂ ವಕ್ಷ್ಯಾಮಿ । ತಚ್ಛ್ರುತ್ವಾ ಸರ್ವಮೇವ ತೇ ಪೂರ್ವಜನ್ಮಾಭಿಹಿತಂ ಜ್ಯೋತಿಜ್ಞಾನಮಾವಿರ್ಭವಿಷ್ಯತಿ ॥

ಅಥ ಭಗವಾನ್ ಸಹಸ್ರರಶ್ಮಿಃ ವಿಮಲೋವಿಮಲಮಯೂಖಃ ಕ್ಷೇಮಾಯ ಶಿಖಿಪತ್ರಾಕಾರಃ ಸ್ತವಗ್ರಹಾಯ ಚಂದ್ರ ಇವ ದೃಷ್ಟಿಗಮ್ಯೋ ರಾಜ್ಯಸ್ಯಾಪ್ತಯೇ ಚಂದ್ರಮಾಃ ಸಮಾಗಮೇ ಗ್ರಹಾಣಾಮುದಙ್ಮಧ್ಯಗತಶ್ಚ ದೃಶ್ಯತೇ । ಯಥಾಸಂಭವಂ ಚ ನಕ್ಷತ್ರಾಣಾಂ ಸಮಾಗಮೇ ನಕ್ಷತ್ರಾದೀನ್ಯಪಿ ಶಸ್ಯಂತೇ ॥

---

ಯಾವ ಕಾಲದಲ್ಲಿ ನೀನು ಪ್ರಲಯಕ್ಕೆ ಮೊದಲು ನನ್ನ ಹೃದಯದಿಂದ ಹುಟ್ಟಿದೆಯೋ, ಆಗಲೇ ನಾನು ಇಪ್ಪತ್ತನಾಲ್ಕು ಲಕ್ಷ ಶ್ಲೋಕಗಳಿಂದ ಕೂಡಿದ ಜ್ಯೋತಿಶ್ಶಾಸ್ತ್ರವನ್ನು ನಿನಗೆ ಹೇಳಿದ್ದೆ, ಈ ವಾರುಣಯಜ್ಞದಲ್ಲಿ ಮಹಾದೇವನ ಶಾಪದಿಂದ ಅಗ್ನಿಜ್ವಾಲೆಯನ್ನು ಭೇದಿಸಿಕೊಂಡು ಹೊರಗೆ ಬಂದು ಜನ್ಮಾಂತರವನ್ನು ಹೊಂದಿರುವ ನಿನಗೆ ಹಿಂದೆ ಹೇಳಿದ ಆ ಜ್ಯೋತಿಶ್ಶಾಸ್ತ್ರವನ್ನೇ ಬಹಳ ಸಂಕ್ಷೇಪಮಾಡಿ ಈಗ ಹೇಳುತ್ತೇನೆ. ಇದನ್ನು ಕೇಳಿದ ನಿನಗೆ ಪೂರ್ವಜನ್ಮದಲ್ಲಿ ನನ್ನಿಂದ ಕೇಳಿರುವ ಜ್ಯೋತಿಶ್ಶಾಸ್ತ್ರದ ಜ್ಞಾನವೆಲ್ಲವೂ ಪುನಃ ಜ್ಞಾಪಕಕ್ಕೆ ಬರುತ್ತದೆ.

ಜಗತ್ಪೂಜ್ಯನಾದ ಸಹಸ್ರರಶ್ಮಿಯು (ಸೂರ್ಯನು) ಶುಭ್ರನಾಗಿಯೂ, ಶುಭ್ರಕಿರಣನಾಗಿಯೂ, ಜಗತ್ತಿನ ಕ್ಷೇಮಕ್ಕಾಗಿ ನವಿಲಿನ ಗರಿಯಂತೆ ಪ್ರಕಾಶಿಸುತ್ತಾ, ಸ್ತೋತ್ರಾರ್ಹವಾದ ಗ್ರಹಗಳಿಗಾಗಿ ಚಂದ್ರನಂತೆ ಸೌಮ್ಯನಾಗಿ ಕಾಣಿಸಿಕೊಳ್ಳುತ್ತಾನೆ. ಆ ಚಂದ್ರನೇ ರಾಜ್ಯಪ್ರಾಪ್ತಿಗಾಗಿ ಗ್ರಹಗಳ ಸಮಾಗಮ ಉಂಟಾದಾಗ ಉತ್ತರದಲ್ಲಿ ಮಧ್ಯದಲ್ಲಿರುವಂತೆ ತೋರುತ್ತಾನೆ. ಯಥಾಸಂಭವವಾಗಿ ನಕ್ಷತ್ರಗಳೊಡನೆ ಇವನು ಸಮಾಗಮಹೊಂದಿದಲ್ಲಿ ಅಂತಹ ನಕ್ಷತ್ರಗಳೂ ಪ್ರಾಯಶಃ ಪ್ರಶಸ್ತಗಳಾಗುತ್ತವೆ

ಅಥ ಯಸ್ಮಿನ್ ನಕ್ಷತ್ರೇ ಭೌಮ ಉದಯಂ ಪ್ರತಿಪದ್ಯತೇ ತಸ್ಮಾತ್ಸಪ್ತಾಷ್ಟನವಮರ್ಕ್ಷೇ ಪೂಷ್ಣೋ ಮುಖಂ ನಾಮ ವಕ್ರಂ ಕರೋತಿ|| ಯೇನಾಗ್ನಿಮಂತೋ ಬ್ರಾಹ್ಮಣಾ ಅಗ್ನಿಜೀವಿನಶ್ಚ ಪೀಡ್ಯಂತೇ || ದಶನ್ಯೈಕಾದಶದ್ವಾದಶೇऽಶ್ವಮುಖಂ ನಾಮ ಮರಣಕಾರಕಂ ಕರೋತಿ||

ತ್ರಯೋದಶಚತುರ್ದಶಯೋರ್ವ್ಯಾಲಾಖ್ಯಂ ವ್ಯಾಲವೃದ್ಧಿಕರಂ|| ಪಂಚದಶಷೋಡಶಯೋರುಧಿರಮುಖಂ ಸಂಗ್ರಾಮಸೂಚಕಂ | ಸಪ್ತದಶಾಷ್ಟಶತಯೋರಸಿಮುಖಂ ಚೌರಪ್ರಾಬಲ್ಯಕರಂ || ಅಥ ಬುಧೋ ಭರಣೀಕೃತ್ತಿಕಾರೋಹಿಣೀಷು ವಿಚರನ್ ಪ್ರಾಕೃತಾಂ ಗತಿಂ ಸುಭಿಕ್ಷಜನನೀಂ ವಿಚರತಿ| ಆಶ್ರೇಷಾರೌದ್ರಪಿತ್ರ್ಯೇಷು ಮಿಶ್ರಾಂ ಮಿಶ್ರಫಲದಾಂ | ಪುನರ್ವಸು ಪುಷ್ಯಭಾಗ್ಯಾರ್ಯಮ್ಣೇಷು ಸಂಕ್ಷಿಪ್ತಂ ಮಿಶ್ರಫಲದಾಮೇವ ||

---

ಯಾವ ನಕ್ಷತ್ರದಲ್ಲಿ ಅಂಗಾರಕನು ಉದಯಹೊಂದುತ್ತಾನೆಯೋ ಆ ನಕ್ಷತ್ರದಿಂದ ಏಳು, ಎಂಟು ಒಂಭತ್ತನೆಯ ನಕ್ಷತ್ರಗಳಲ್ಲಿ ಪೂಷ್ಣಃ ಮುಖವೆಂಬ ಬಾಯನ್ನು ಮಾಡಿಕೊಳ್ಳುತ್ತಾನೆ ಇದರಿಂದ ಅಗ್ನಿಶಾಲಿಗಳಾದ ಬ್ರಾಹ್ಮಣರೂ, ಅಗ್ನಿಜೀವಿಗಳೂ ಪೀಡಿಸಲ್ಪಡುತ್ತಾರೆ. ಹತ್ತು, ಹನ್ನೊಂದು, ಹನ್ನೆರಡನೆಯ ನಕ್ಷತ್ರಗಳಲ್ಲಿ ಅಶ್ವಮುಖವನ್ನು ಹೊಂದಿ ಮರಣಕಾರಕನಾಗಿ ಆಗುತ್ತಾನೆ.

ಹದಿಮೂರು ಹದಿನಾಲ್ಕನೆಯ ನಕ್ಷತ್ರಗಳಲ್ಲಿ ವ್ಯಾಲವೆಂಬ ವಕ್ತ್ರಧಾರಿಯಾಗುತ್ತಾನೆ. ಅದು ಸರ್ಪಗಳ ಅಭಿವೃದ್ಧಿಗೆ ಕಾರಣವಾಗುತ್ತದೆ. ಹದಿನೈದು ಮತ್ತು ಹದಿನಾರನೆಯ ನಕ್ಷತ್ರಗಳಲ್ಲಿ ರುಧಿರಮುಖವನ್ನು ಹೊಂದುತ್ತಾನೆ. ಅದು ಯುದ್ಧಕ್ಕೆ ಸೂಚಕವಾಗುತ್ತದೆ. ಹದಿನೇಳು, ಹದಿನೆಂಟನೆಯ ನಕ್ಷತ್ರಗಳಲ್ಲಿ ಅಸಿಮುಖವೆಂಬ ಮುಖವನ್ನು ಹೊಂದುತ್ತಾನೆ. ಅದು ಕಳ್ಳರ ಪ್ರಾಬಲ್ಯಕ್ಕೆ ಸಾಧಕವಾಗುತ್ತದೆ. ಅನಂತರ ಬುಧನು ಭರಣೀ, ಕೃತ್ತಿಕಾ, ರೋಹಿಣೀ ನಕ್ಷತ್ರಗಳಲ್ಲಿ ಪ್ರಾಕೃತಗತಿಯಿಂದ ನಂಚರಿಸಿ ಸುಭಿಕ್ಷವನ್ನುಂಟುಮಾಡುತ್ತಾನೆ. ಆಶ್ರೇಷಾ ಆರ್ದ್ರಾ ಮಖಾ ಈ ನಕ್ಷತ್ರಗಳಲ್ಲಿ ಮಿಶ್ರಗತಿಯನ್ನಾಶ್ರಯಿಸಿ ಮಿಶ್ರಫಲಪ್ರದನಾಗಿಯೂ, ಪುನರ್ವಸು, ಪುಷ್ಯ ಪೂರ್ವಫಲ್ಗುನಿ, ಉತ್ತರಾ ಇವುಗಳಲ್ಲಿ ನಂಕ್ಷೇಪದಿಂದ ನಂಚರಿಸಿ ಮಿಶ್ರಫಲವನ್ನೇ ಉಂಟುಮಾಡುತ್ತಾನೆ.

ಅಹಿರ್ಬುಧ್ನ್ಯ ಅಜಪೌಷ್ಣ ಶಕ್ರಾಗ್ನಿ ನಾಮ್ನಿ ತೀಕ್ಷ್ಣಾಂ ನಾಮ ವಿಗ್ರಹಕಾರಿಣೀಂ ಮೂಲಾದಿತ್ರಿತಯೇಸಂಯೋಗಾತ್ಕಾಂತಿಕೀರ್ತ್ಯಾದಿಪ್ರದಾಂ । ಶ್ರವಣಧನಿಷ್ಠಾವಾರುಣೀತ್ವಾಷ್ಟ್ರಾಣಿ ಘೋರಾಂ ಘೋರಫಲಾಂ ॥

ಜೀವಸ್ತ್ರಯೋದಶಭಿರ್ಮಾಸೈಃ ರಾಶಿಂವಿಚರನ್ ಶುಭೋ ಭವತಿ । ಅನ್ಯಥಾ ಕಷ್ಟಫಲಃ । ಅಥೋದಯಾಸ್ತಮಯಚಾರೈಃ ಶುಕ್ರಸ್ಯ ಯಮಾದ್ಯಂ ನಕ್ಷತ್ರಚತುಷ್ಟಯಮಾದ್ಯಂ ಮಂಡಲಂ ಸುಭಿಕ್ಷಜನನಂ । ರೌದ್ರಾದ್ಯ-ಮಪಿ ಚತುಷ್ಟಯಂ ದ್ವಿಜ ಭಯಪ್ರದಂ । ಶಕ್ರಾದ್ಯಂ ಪಂಚರ್ಕ್ಷಂ ರೋಗಜನನಂ । ಧನಿಷ್ಠಾದ್ಯಂ ಷಣ್ಣಕ್ಷತ್ರ ಮತಿವೃಷ್ಟಿಕರಮಿತಿ ॥

ಯದ್ದೇಶದ್ರವ್ಯಪುರುಷನಕ್ಷತ್ರೇಷುಸೌರೋ ವಿಚರತಿ ತತ್ಪೀಡಾಬಹ್ವ್ಯೋ ಭವಂತಿ । ಯಸ್ಯಾಂ ದಿಶಿ ಕೇತೋಃ ಶಿಖಾದೀಪ್ತಾ ಭವತಿ ತಂ ದೇಶಂ

---

ಉತ್ತರಾಭಾದ್ರಾ, ಪೂರ್ವಾಭಾದ್ರಾ, ರೇವತಿ, ಚಿತ್ರಾ, ಕೃತ್ತಿಕಾ, ಈ ನಕ್ಷತ್ರಗಳಲ್ಲಿ ತೀಕ್ಷ್ಣ ಎಂಬ ಕಲಹಕಾರಕವಾದ ಗತಿಯನ್ನು ಹೊಂದುತ್ತಾನೆ. ಮೂಲ, ಪೂರ್ವಾಷಾಢಾ, ಉತ್ತರಾಷಾಢಾ ನಕ್ಷತ್ರಗಳಲ್ಲಿ ಇವನ ಸಂಬಂಧವು ಕಾಂತಿಕೀರ್ತ್ಯಾದಿ ಫಲಗಳಿಗೇ ಕಾರಣವಾಗುತ್ತದೆ. ಶ್ರವಣ, ಧನಿಷ್ಠಾ, ಶತಭಿಷಾ, ಚಿತ್ರಾ ಈ ನಕ್ಷತ್ರಗಳಲ್ಲಿ ಘೋರಫಲಪ್ರದವಾದ ಘೋರವಾದ ಗತಿಯನ್ನೇ ಹೊಂದುತ್ತಾನೆ.

ಗುರುವು ಹದಿಮೂರು ತಿಂಗಳಲ್ಲಿ ಮುಂದಿನ ರಾಶಿಗೆ ಸಂಚರಿಸುತ್ತಾ ಶುಭಪ್ರದನಾಗುತ್ತಾನೆ. ಹಾಗಿಲ್ಲದಿದ್ದರೆ ಕ್ಲೇಶಫಲಕಾರನಾಗುತ್ತಾನೆ. ಉದಯಾಸ್ತಮಯಚಾರಗಳಿಂದ ಶುಕ್ರನು ಭರಣಿಯೇ ಮೊದಲಾದ ನಾಲ್ಕು ನಕ್ಷತ್ರಗಳಿಂದ ಕೂಡಿದ ಪ್ರಥಮಮಂಡಲದಲ್ಲಿ ಸುಭಿಕ್ಷಕಾರಕನಾಗುತ್ತಾನೆ. ಆದ್ರಾ ಮೊದಲುಗೊಂಡು ನಾಲ್ಕು ನಕ್ಷತ್ರಗಳಲ್ಲಿ ದ್ವಿಜರಿಗೆ ಭಯಕಾರಕನಾಗುತ್ತಾನೆ. ಚಿತ್ರಾ ನಕ್ಷತ್ರ ಮೊದಲು ಐದು ನಕ್ಷತ್ರಗಳಲ್ಲಿ ರೋಗಜನಕನಾಗುತ್ತಾನೆ. ಧನಿಷ್ಠಾ ನಕ್ಷತ್ರ ಮೊದಲು ಆರು ನಕ್ಷತ್ರದಲ್ಲಿ ಅತಿವೃಷ್ಟಿಕಾರಕನಾಗುತ್ತಾನೆ

ಯಾವದೊಂದು ದೇಶ, ದ್ರವ್ಯ, ಪುರುಷ ಇವುಗಳ ನಕ್ಷತ್ರದಲ್ಲಿ ಶನಿಯು ಸಂಚರಿಸುತ್ತಾನೆಯೋ, ಅಲ್ಲಿ ನಾನಾವಿಧವಾದ ಪೀಡೆಗಳು ಉಂಟಾಗುತ್ತವೆ. ಯಾವ ದಿಕ್ಕಿನಲ್ಲಿ ಕೇತುವಿನ ಶಿಖೆಯು ಪ್ರಕಾಶಮಾನವಾಗಿ ಜ್ವಲಿಸುವುದೋ ಆದಿಕ್ಕಿನಲ್ಲಿರುವ ದೇಶದ ಮೇಲೆ ದೊರೆಯು ವಿಜಯ ಯಾತ್ರೆಗಾಗಿ ದಂಡೆತ್ತಿ

ನೃಪತಿರಭಿಯುಂಜ್ಯಾತ್ । ಉಪರಾಗಃ ಶ್ವೇತರಕ್ತಪೀತಕೃಷ್ಣೋ ರಾಹೋ ಬ್ರಾಹ್ಮಣಕ್ಷತ್ರಿಯವಿಟ್ ಶೂದ್ರಪೀಡಾಂ ಕರೋತಿ ॥

ಅಗಸ್ತ್ಯಃ ಸ್ಫುರಣೋ ರೂಕ್ಷತಯೋಪಹತಃ ಶಿಖಿಶಿಖಾಸ್ತೋಭಯಾಯ । ಏವಂವಿಧಾಃ ಸಪ್ತರ್ಷಯಶ್ಚ । ಏವಂವಿಧೇತ್ರೈಲೋಕ್ಯಮಪಿ ಪೀಡ್ಯತೇ ಐಶಾನ್ಯಾಂ ದಿಶಿ ಕೃತ್ತಿಕಾಭಿಃ ಸಹೋದೇತಿ ಕುಮಾರಸ್ತಸ್ಮಿನ್ನೇವಂ ವಿಧೇ ಬಾಲಪೀಡಾ । ಜೀವಜ್ಞಸೌರಾಃ ಪೌರಾಃ । ಕುಜಶುಕ್ರೌ ಯಾಯಿಗ್ರಹೌ । ಚಂದ್ರಾರ್ಕೌ ಮಧ್ಯಮೌ ॥

ತತ್ರಾರ್ಕೇಣ ಸಹ ಗ್ರಹಾಣಾಮಸ್ತಮಯೋ ಭವತಿ । ಚಂದ್ರೇಣ ಸಹ ಸಮಾಗಮಃ । ಪರಸ್ಪರಂ ಯುದ್ಧಂ । ಉದಙ್ಮಾರ್ಗಗತಃ ಸುಪ್ರಭೋ ವಿಜಯೀ ಭವತಿ । ಯಾಯಿಗ್ರಹೇ ವಿಜಯಿನಿ ಸಬಲೇ ಚ ರಾಜಾ

ಹೊರಡಬೇಕು. ಗ್ರಹಣವು ಪಾಟಲ ವರ್ಣವಾಗಿಯೂ, ಹೊಂಬಣ್ಣವಾಗಿಯೂ, ಕಪ್ಪಾಗಿಯೂ, ರಾಹುವಿಗೆ ಉಂಟಾಗುತ್ತದೆ. ಆ ಗ್ರಹಣವು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಲ್ಲರಿಗೂ ಪೀಡಾಕರವಾಗುತ್ತದೆ

ಅಗಸ್ತ್ಯ ನಕ್ಷತ್ರವು ಬಹಳ ಉಜ್ವಲವಾಗಿ ಸ್ಫುರಿಸಿ ಅಗ್ನಿ ಶಿಖೆಯಂತೆ ಅಸ್ತ ಹೊಂದಿದಲ್ಲಿ ಜಗತ್ತಿನ ಭಯಕ್ಕೆ ಸೂಚಕವಾಗುತ್ತದೆ. ಸಪ್ತರ್ಷಿಗಳಲ್ಲಿಯೂ ಸಹ ಈ ರೀತಿಯಾದ ವಿಕಾರಗಳುಂಟಾಗುತ್ತವೆ. ಇದರಿಂದ ಮೂರು ಲೋಕಕ್ಕೂ ಪೀಡೆ ಯುಂಟಾಗುತ್ತದೆ. ಇದು ಈಶಾನ್ಯ ದಿಕ್ಕಿನಲ್ಲಿ ಕೃತ್ತಿಕಾ ನಕ್ಷತ್ರಗಳೊಡನೆ ಬಾಲನಾಗಿ ಉದಯ ಹೊಂದುತ್ತದೆ. ಅದರ ಬಾಲ್ಯಾವಸ್ಥೆಯಲ್ಲಿ ಈ ರೀತಿ ವಿದ್ಧನಾದಲ್ಲಿ ಸಣ್ಣ ಮಕ್ಕಳಿಗೆ ಪೀಡೆಯುಂಟಾಗುತ್ತದೆ. ಗುರು, ಬುಧ, ಶನಿಗಳು ಪೌರರೆಂದು ಹೇಳಲ್ಪಡು ತ್ತಾರೆ. ಕುಜ, ಶುಕ್ರರು, ಯಾಯಿಗ್ರಹಗಳು, ಚಂದ್ರಸೂರ್ಯರು ಮಧ್ಯಮರು.

ಇವರಲ್ಲಿ ಸೂರ್ಯನೊಡನೆಯೇ ಗ್ರಹಗಳಿಗೆ ಅಸ್ತ ಉಂಟಾಗುತ್ತದೆ. ಚಂದ್ರ ನೊಡನೆ ಪರಸ್ಪರ ಸಮಾಗಮವೂ ಗ್ರಹಗಳೊಡನೆ ಯುದ್ಧವೂ ಉಂಟಾಗುತ್ತದೆ. ಉತ್ತರಾಯಣಹೊಂದಿದ ಗ್ರಹವು ಬಹಳ ಪ್ರಭಾಶಾಲಿಯಾಗಿ ವಿಜಯಿಯಾಗುತ್ತದೆ. ಈ ರೀತಿ ಯಾಯಿಗ್ರಹವು ವಿಜಯ ಹೊಂದಿ ಬಲಶಾಲಿಯಾಗಿರುವಾಗ ರಾಜನು

ಪರಾನಭಿಯುಂಜೀತ। ಅನ್ಯಥಾ ಪೌರೇಷು ಬಲವತ್ಸು ಯಾಯಿನಾಂ ನಾಶಃ ಸ್ಯಾತ್ ॥

ಅಗಸ್ತ್ಯವದುಪಹತೇ ನಕ್ಷತ್ರೇ ತದ್ದೇಶದ್ರವ್ಯತಜ್ಜಾತಪುರುಷಪೀಡಾ। ವಾಯವ್ಯಾಂ ದಿಶಿ [1]ಭೂಚಲೋ ಯಾತಿ ತಾಂ ದಿಶಂ ರಾಜಾ ಯಾಯಾತ್। ಸನಿರ್ಘಾತೇ ದಿರ್ಘೇ ರಾಜಮರಣಂ ಸ್ಯಾತ್ । ಯಾಂ ದಿಶಮುಲ್ಕಾ ಯಾತಿ ತಾಂ ದಿಶಂ ನೃಪೋಯಾಯಾತ್ । ದಿವೋಲ್ಕಾ ಚಂದ್ರಾರ್ಕವಿನಿರ್ಗತಾ ಉದ್ಘಾತಿನ್ಯತಿ ಸ್ಥೂಲಾ ಸಸ್ಫುಲಿಂಗಾ ತತೋರ್ಧ್ವಗಾ ರಾಜಮೃತ್ಯವೇ ಸ್ಯಾತ್ ॥

ಬಹುವರ್ಣೇ ಪರಿವೇಷೇ ಪ್ರಜಾಪೀಡಾ ಸ್ಯಾತ್। ಯತಃ ಖಂಡಃ ಪರಿವೇಷಃ ಸ್ಯಾತ್ ತಾಂ ದಿಶಂ ನೃಪತಿರ್ಯಾಯಾತ್ । ಅತಿಭೀಮನಿರ್ಘಾತೋ ರಾಜಮೃತ್ಯವೇ । ಯಾಂ ಚ ದಿಶಂ ಯಾತಿ ತಾಂ ದಿಶಂ ರಾಜಾ

---

ಶತ್ರುವನ್ನು ಆಕ್ರಮಿಸಲು ಪ್ರಯತ್ನಿಸಬೇಕು ಹೀಗಲ್ಲದೆ ಪೌರಗ್ರಹಗಳಾದ ಗುರು, ಬುಧ, ಶನಿಗಳು ಪ್ರಬಲರಾಗಿದ್ದಲ್ಲಿ ಯಾಯಿಗ್ರಹಗಳಿಗೆ ದುರ್ಬಲತೆಯಿಂದ ನಾಶವೇ ಉಂಟಾದೀತು.

ಅಗಸ್ತ್ಯ ನಕ್ಷತ್ರದಂತೆ ಇತರ ನಕ್ಷತ್ರಗಳು ದೂಷಿತವಾದಲ್ಲಿ ಆ ದೇಶದಲ್ಲಿ ಉಂಟಾಗಿರುವ ಪದಾರ್ಥ ಮತ್ತು ಮನುಷ್ಯರಿಗೂ ಪೀಡೆಯುಂಟಾಗುತ್ತದೆ. ಯಾವ ದಿಕ್ಕಿನಲ್ಲಿ ಸಂಚರಿಸುತ್ತಾನೆಯೋ ಆ ದಿಕ್ಕಿಗೆ ಅಭಿ ಮುಖನಾಗಿ ರಾಜನು ವಿಜಯ ಯಾತ್ರೆಯನ್ನು ಸ್ವೀಕರಿಸಬೇಕು. ಹಗಲಿನಲ್ಲಿ ಸೂರ್ಯನಿಂದಲೂ, ರಾತ್ರಿಯಲ್ಲಿ ಆಕಾಶಭಾಗದಿಂದ ಚಂದ್ರನಿಂದಲೂ ಹೊರಟ ಉಲ್ಕಾ ಪಾತ್ರವು (ಕೊಳ್ಳಿ) ವಕ್ರ ವಕ್ರವಾಗಿಯೂ ಸ್ಥೂಲವಾಗಿಯೂ, ಕಿಡಿಗಳಿಂದ ಕೂಡಿಯೂ, ಪುನಃ ಊರ್ಧ್ವ ಮುಖವಾಗಿ ನಿರ್ಗಮಿಸಿದಲ್ಲಿ ಅದು ರಾಜನ ಮರಣಕ್ಕೆ ಕಾರಣವಾಗುತ್ತದೆ.

ಪರಿವೇಷವು ನಾನಾ ಬಣ್ಣದಿಂದ ಕೂಡಿ ಇದ್ದಲ್ಲಿ ಪ್ರಜೆಗಳಿಗೆ ಪೀಡೆ ಯುಂಟಾಗುತ್ತದೆ. ಪರಿವೇಷವು ಯಾವ ದಿಕ್ಕಿನ ಕಡೆಯಲ್ಲಿ ಖಂಡಿಸಲ್ಪಟ್ಟಿರುತ್ತದೆಯೋ ಆ ದಿಕ್ಕಿಗೆ ಅಭಿಮುಖನಾಗಿ ಧೊರೆಯು ಹೊರಡಬೇಕು. ಬಹಳ ಭಯಂಕರವಾದ ಸಿಡಿಲುಂಟಾದಲ್ಲಿ ರಾಜನ ಮೃತ್ಯುವಿಗೆ ಅದು ಸೂಚಕವಾಗುತ್ತದೆ. ಆ ಸಿಡಿಲು ಯಾವ ದಿಕ್ಕಿನಕಡೆಗೆ ಹೊಡೆಯುತ್ತದೆಯೋ ಆ ದಿಕ್ಕಿನ ಕಡೆಗೆ ಧೊರೆಯು

---

1 ಇಲ್ಲಿ ಭೂಸುತಃ ಎಂದಿದ್ದಲ್ಲಿ ಅಂಗಾರಕನೆಂದು ಹೇಳಬಹುದು. ಮೂಲಪಾಠವು ಅಶುದ್ಧವೆಂದ ತೋರುತ್ತದೆ.

ಯಾಯಾತ್ । ಗಂಧರ್ವನಗರಂ ಶಕ್ರೋದ್ಭೂತಂ ಮಹಾಭಯಾಯ ।
ರಾತ್ರಾವಿಂದ್ರಧನುಃ ಶ್ವೇತಂ ವ್ಯಭ್ರೇ ಚ ಮಹಾಭಯಾಯ ।

ಪ್ರತಿಸೂರ್ಯ ಉಪಗ್ದಕ್ಷಿಣೇನಾರ್ಕಾದ್ವಾತಕೃತ್ । ಉಭಯಸ್ಥಿತೋ ಮಹಾವರ್ಷಾಯ ಉಪರಿ ರಾಜಮೃತ್ಯವೇ । ತಥಾಧಸ್ತಾಜ್ಜನ ವಿನಾಶಾಯ । ಉಭಯಥಾ ಮಹಾಭಯಾಯ ಸರ್ವತಃ ತ್ರಿಭುವನ ಪೀಡಾವಹೋ ಭವತಿ । ಯಾ ದಿಗ್ದಾಹೇನ ದೀಪ್ತಾ ಸ್ಯಾತ್ತಾಂ ದಿಶಂ ರಾಜಾ ಯಾಯಾತ್॥ ಅತಿದೀಪ್ತೇ ಛಾಯಾವ್ಯಂಜಕೇ ರಾಜಮರಣಂ ವಿಂದ್ಯಾತ್ ।

---

ಹೊರಡಬೇಕು. ಗಂಧರ್ವನಗರವು (ಆಕಾಶದಲ್ಲುಂಟಾಗುವ ಮೇಘಗಳ ಸನ್ನಿವೇಶ) ಆಕಾಶದಲ್ಲಿ ಉದಯಿಸಿದ್ದೇ ಆದರೆ ಅದು ಹೆಚ್ಚಾದ ರಾಷ್ಟ್ರ ಭಯಕ್ಕೆ ಕಾರಣವಾಗುತ್ತದೆ. ರಾತ್ರಿಯಲ್ಲಿ ಮೇಘವಿಲ್ಲದಿದ್ದರೂ ಬಿಳುಪಾದ ಕಾಮನ ಬಿಲ್ಲು ಕಾಣಿಸಿಕೊಂಡಲ್ಲಿ ಅದೂ ಸಹ ಮಹಾಭಯಕ್ಕೆ ಕಾರಣವಾಗುತ್ತದೆ.

ಉತ್ತರ ದಿಕ್ಕಿನಲ್ಲಿ ಸೂರ್ಯನ ಬಲಭಾಗದಲ್ಲಿ ಪ್ರತಿಸೂರ್ಯ ಬಿಂಬವುಂಟಾದಲ್ಲಿ ಹೆಚ್ಚಾದ ವಾಯುವಿಗೆ ಅದು ಕಾರಣವಾಗುತ್ತದೆ. ಎರಡು ಪಾರ್ಶ್ವದಲ್ಲಿಯೂ ಉಂಟಾದಲ್ಲಿ ಹೆಚ್ಚಾಗಿ ಮಳೆಯುಂಟಾಗುತ್ತದೆ. ಮೇಲ್ಭಾಗದಲ್ಲಿ ಉಂಟಾದರೆ ರಾಜನಿಗೆ ಮೃತ್ಯುವುಂಟಾಗುತ್ತದೆ. ಕೆಳಭಾಗದಲ್ಲಿ ಉಂಟಾದಲ್ಲಿ ಜನಗಳ ನಾಶವುಂಟಾಗುತ್ತದೆ. ಮೇಲೆ ಮತ್ತು ಕೆಳಗೆ ಎರಡು ಕಡೆಯಲ್ಲೂ ಉಂಟಾದಲ್ಲಿ ಹೆಚ್ಚಾದ ಭಯಕ್ಕೆ ಕಾರಣವಾಗುತ್ತದೆ. ಎಲ್ಲಾ ಕಡೆಯಲ್ಲಿಯೂ ಉಂಟಾದಲ್ಲಿ ಮೂರು ಲೋಕಗಳಿಗೂ ಪೀಡೆಯುಂಟಾಗುತ್ತದೆ. ಯಾವ ದಿಕ್ಕಿನಲ್ಲಿ ಅಗ್ನಿಯ ದಾಹದಿಂದ ಪ್ರಕಾಶವುಂಟಾಗುತ್ತದೆಯೋ ಆ ದಿಕ್ಕಿಗೆ ಅಭಿಮುಖನಾಗಿ ದೊರೆಯು ಹೊರಡಬೇಕು. ಛಾಯೆಯು ತೋರುವಂತೆ ಹೆಚ್ಚಾದ ಜ್ವಾಲೆಯು ಕಂಡುಬಂದಲ್ಲಿ ರಾಜನಿಗೆ ಮರಣವೆಂದೇ ತಿಳಿಯಬೇಕು.

ಅಥವಾ ಧ್ರುವದಾರುಣೋಗ್ರಕ್ಷಿಪ್ರಚರಸಾಧಾರಣೇಷು ಯಥಾ ಸ್ವಕರ್ಮ ಧ್ರುವಾದಿಕರ್ಮಕ್ರಿಯಮಾಣಂ ಸಿದ್ಧಿಮುಪೈತಿ ॥ ವ್ಯತೀಪಾತವಿಷ್ಟಿ ವೈಧೃತಾಸ್ತಮಿತ ನಕ್ಷತ್ರೇಷು ನ ಕಿಂಚಿದಪಿ । ತಥಾಚಾರ್ಕಾನಲ ರಾಹುಧೂಮಿತಜ್ವಲಿತದಗ್ಧವಿಧ್ವೇಷು ನಕ್ಷತ್ರೇಷು । ತಥಾ ಚ ವಿವಿಧೋತ್ಪಾತಾಭಿಹತೇಷು । ಯತ್ರ ಯಸ್ಮಿನ್ನಕ್ಷತ್ರೇ ಪುರುಷಸ್ಯ ಜನ್ಮ ತನ್ನಕ್ಷತ್ರಂ ತಸ್ಮಾನ್ನಕ್ಷತ್ರಾಚ್ಚ ದಶಮಂ ತತ ಏಕೋನವಿಂಶಜ್ಜನ್ಮನಕ್ಷತ್ರಮಿತಿ ವಿಂದ್ಯಾತ್ ।

(ಸರ್ವಸ್ಮಾಜ್ಜನ್ಮನಕ್ಷತ್ರಾದ್ದ್ವಿತೀಯಂ ಸಂಪತ್ಕರಂ । ತೃತೀಯಂ ವಿಪತ್ಕರಂ, ಚತುರ್ಥಂ ಕ್ಷೇಮ್ಯಂ, ಪಂಚಮಂ ಪ್ರತ್ಯರಿ, ಷಷ್ಠಂ ಸಾಧಕಂ, ಸಪ್ತಮಂ ನೈಧನಂ, ಅಷ್ಟಮಂ ಮೈತ್ರಂ, ನವಮಂ, ಪರಮಮೈತ್ರಂ ಚೇತಿ) । ತತ್ರ ಸಂಪತ್ಕರಕ್ಷೇಮಸಾಧಕಮೈತ್ರಾತಿ

---

ಮತ್ತು ಧ್ರುವ, ದಾರುಣ, ಉಗ್ರ, ಕ್ಷಿಪ್ರ, ಚರ, ಸಾಧಾರಣಗಳೆಂಬ ನಕ್ಷತ್ರಗಳಲ್ಲಿ ತನ್ನ ಇಷ್ಟಕ್ಕೆ ತಕ್ಕಂತೆ ಧ್ರುವಾದಿ ಕಾರ್ಯಗಳನ್ನು ಮಾಡಿದಲ್ಲಿ ಸಿದ್ಧಿಯುಂಟಾಗುತ್ತದೆ. ವ್ಯತೀಪಾತ, ವಿಷ್ಟಿ, ವೈಧೃತ, ಅಸ್ತಂಗತ ನಕ್ಷತ್ರಗಳಲ್ಲಿ ಯಾವ ಸಿದ್ಧಿಯೂ ಉಂಟಾಗುವುದಿಲ್ಲ. ಸೂರ್ಯನ ಜ್ವಾಲೆಯಿಂದಲೂ, ರಾಹುವಿನಿಂದುಂಟಾದ್ರ ಹೊಗೆಯಿಂದಲೂ ನಕ್ಷತ್ರಗಳು ಸುಟ್ಟು ಬೂದಿಯಾದಲ್ಲಿ ಅಥವಾ ನಾನಾ ವಿಧವಾದ ಉತ್ಪಾತಗಳಿಂದ ನಾಶಹೊಂದಿದರೂ ಸಹ ಯಾವ ದೇಶದಲ್ಲಿ ಯಾವ ನಕ್ಷತ್ರದಲ್ಲಿ ಮನುಷ್ಯನು ಹುಟ್ಟುತ್ತಾನೆಯೋ ಆ ನಕ್ಷತ್ರ, ಮತ್ತು ಅದಕ್ಕೆ ಹತ್ತನೆಯ ನಕ್ಷತ್ರ ಮತ್ತು ಹತ್ತೊಂಭತ್ತನೆಯ ನಕ್ಷತ್ರವೂ ಅವನಿಗೆ ಜನ್ಮನಕ್ಷತ್ರವಾಗುತ್ತದೆ. ಎಂದು ತಿಳಿಯಬೇಕು.

ಎಲ್ಲಾ ಜನ್ಮನಕ್ಷತ್ರಗಳಿಂದಲೂ ಎರಡನೆಯ ನಕ್ಷತ್ರವು, ಸಂಪತ್ಕರ. ಮೂರನೆಯದು ವಿಪತ್ಕರ, ನಾಲ್ಕನೆಯದು ಕ್ಷೇಮಕಾರಿ, ಐದನೆಯದು ಶತ್ರುಸದೃಶ, ಆರನೆಯದು ಸಾಧಕ, ಏಳನೆಯದು ನೈಧನ, ಎಂಟನೆಯದು ಮೈತ್ರ, ಒಂಭತ್ತನೆಯದು ಪರಮಮೈತ್ರವೆಂದೂ ಹೇಳಲಾಗಿದೆ, ಇವುಗಳಲ್ಲಿ ಸಂಪತ್ಕರ, ಕ್ಷೇಮ, ಸಾಧಕ, ಮೈತ್ರ, ಪರಮಮೈತ್ರ ತಾರೆಗಳಲ್ಲಿ ಎಲ್ಲಾ ಕೆಲಸಗಳನ್ನೂ ಮಾಡಬೇಕು.

**ಮೈತ್ರೇಷು ಸರ್ವಾಣಿ ಕರ್ಮಾಣಿ ಕುರ್ಯಾತ್। ದಶಮರ್ಕ್ಷೇ ಚ।**
**ಯಥಾ ಕರ್ಮತ್ರೈಸುನಕ್ಷ ತಿಥಿಂ ರಿಕ್ತಾಂ ವಿನಾ ಕೃತಂ ॥ ಸೌಮ್ಯೇ**
**ದಿನಕೃತೇ ವತ್ಸ ಸಿದ್ಧಿಮಾಯಾತ್ಯಸಂಶಯಂ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ಜ್ಯೋತಿಃಶಾಸ್ತ್ರೇ ಶಾಸ್ತ್ರಶಾಖಾವರ್ಣನೋ ನಾಮ ಷಟ್‌ಷಷ್ಟ್ಯುತ್ತರಶತತಮೋಽಧ್ಯಾಯಃ**

---

ಹತ್ತನೆಯ ನಕ್ಷತ್ರದಲ್ಲಿಯೂ ಮಾಡಬಹುದು. ರಿಕ್ತತಿಥಿಯನ್ನು ಬಿಟ್ಟು ಒಳ್ಳೆಯ ನಕ್ಷತ್ರದಲ್ಲಿಯೂ ಬುಧವಾರದಲ್ಲಿಯೂ ಮಾಡಿದ ಕೆಲಸವು ನಿಸ್ಸಂಶಯವಾಗಿಯೂ ಸಿದ್ಧಿ ಹೊಂದುತ್ತದೆ.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ ಜ್ಯೋತಿಶ್ಶಾಸ್ತ್ರದ ಶಾಸ್ತ್ರಶಾಖಾವರ್ಣನವೆಂಬ ನೂರ ಅರವತ್ತಾರನೆಯ ಅಧ್ಯಾಯವು ಮುಗಿದಿದೆ



|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

# ದ್ವಿತೀಯಖಂಡೇ

---

## ಸಪ್ತಷಷ್ಟ್ಯುತ್ತರಶತತಮೋಽಧ್ಯಾಯಃ

|| ಪುಷ್ಕರ ಉವಾಚ ||

ಅಥ ಬ್ರಹ್ಮಾಣಂ ಭಗವಂತಂ ಭೃಗುರ್ವಿಜ್ಞಾಪಯಾಮಾಸ । ಭಗವನ್ ಜ್ಞಾತುಮುಡುಚಕ್ರಮಿಚ್ಛಾಮಿ । ತಮುವಾಚ ಭಗವಾನ್ । ವತ್ಸ ದ್ವಾದಶರಾಶಯೋ ಭಚಕ್ರಂ ತ್ರಿಂಶದ್ಭಾಗಾಶ್ಚರಾಶೇಃ । ಷಷ್ಟಿಃ ಲಿಪ್ತಶ್ಚಭಾಗಃ । ಷಷ್ಟಿಃ ವಿಲಿಪ್ತಾಶ್ಚಲಿಪ್ತಾಃ । ಷಷ್ಟಿಃ ಪರಾ ವಿಲಿಪ್ತಾ। ಷಷ್ಟಿಶ್ಚ ನಾಡಿಕಾ ಅಹೋರಾತ್ರಂ ಷಷ್ಟಿರ್ವಿನಾಡಿಕಾ । ತತ್ರಯಃ

---

## ನೂರ ಅರವತ್ತೇಳನೇ ಅಧ್ಯಾಯ.

ಪುಷ್ಕರನು ಹೇಳುತಾನೆ. ಪುನಃ ಪೂಜ್ಯನಾದ ಬ್ರಹ್ಮನನ್ನು ಕುರಿತು ಭೃಗ ಋಷಿಯು ಹೀಗೆ ವಿಜ್ಞಾಪಿಸಿದನು, ಪೂಜ್ಯನೇ ನಕ್ಷತ್ರಚಕ್ರವನ್ನು ತಿಳಿಯಲು ಆಶಿಸುತ್ತಿದ್ದೇನೆ, ಹೀಗೆ ಕೇಳಿದ ಭೃಗುವನ್ನು ಕುರಿತು ಪೂಜ್ಯನಾದ ಚತುರ್ಮುಖನು ಹೀಗೆ ಹೇಳಿದನು. ಎಲೈ ಮಗುವೇ ನಕ್ಷತ್ರಚಕ್ರವು ಹನ್ನೆರಡುರಾಶಿಗಳ ರೂಪದಲ್ಲಿದೆ ಪ್ರತಿಯೊಂದು ರಾಶಿಗೂ ಮೂವತ್ತು ಭಾಗಗಳಿವೆ, ಅದರ ಒಂದೊಂದು ಭಾಗವೂ ಅರವತ್ತು ವಿಲಿಪ್ತಗಳುಳ್ಳವು, ಅಂತಹ ವಿಲಿಪ್ತಗಳಿಗೂ ಅರವತ್ತು ಪರವಿಲಿಪ್ತಗಳಿವೆ, ಅರವತ್ತು ಘಳಿಗೆಗಳಿಗೆ ಅಹೋರಾತ್ರವಾಗುತ್ತದೆ. ಒಂದು ಘಳಿಗೆಗೆ ಅರವತ್ತು ವಿಘಳಿಗೆ ಇರುತ್ತದೆ. ಉಚ್ಛ್ವಾಸ ಉಂಟಾಗಲು ಎಷ್ಟುಕಾಲ ಬೇಕಾಗುತ್ತದೆಯೋ

ಕಾಲೇ ಪ್ರಾಣಃ ಸಾಪ್ಯೇತ್ರೇ ಲಿಪ್ತಾ । ತಸ್ಮಾದ್ಯಾವತಾಕಾಲೇನ ಪ್ರಾಣೋ ಭವತಿ ದಶಗುರ್ವಕ್ಷರಲಕ್ಷಣಸ್ತಾವತಾ ಕಾಲೇನ ಭಚಕ್ರ ಸ್ಯೇಕಾ ಕಲಾಭ್ಯುದೇತಿ ॥

ಸಕಲಂ ಭಚಕ್ರಂ ನಾಡಿಕಾಷಷ್ಟ್ಯೇತಿ । ತತ್ರಾದಾವೇವ ರಾಶಿರಜೋರಕ್ತ-ವರ್ಣಃ ಕಾಲಸ್ಯ ಮೂರ್ಧಾ ದಿವಾರಾತ್ರೌ ಗ್ರಾಮ್ಯಃ ಪ್ರಾಗ್ದ್ವಾರಃ ಚತುಷ್ಪಾತ್ ರಾತ್ರೌ ದಕ್ಷಿಣಸ್ಯಾಂ ದಿಶಿ ಬಲೀ ಚರಃ ಪೃಷ್ಠೋದಯಃ ಕ್ರೂರೋ ವಿಷಮಃ ಪುಮಾನ್ ಶನೈಶ್ಚರಸ್ಯ ನೀಚಃ। ವಿಂಶತಿ-ಸ್ತುಥಾಗತಸ್ಯೈವಾತಿ ನೀಚಃ। ಆದಿತ್ಯಸ್ಯೋಚ್ಚಃ ತಸ್ಯೈವದಶಮೋ ಭಾಗೇತ್ಯುಚ್ಚಃ ಅಂಗಾರಕ್ಷೇತ್ರಂ । ತಸ್ಯೈವತ್ರಿಕೋಣಮಿತಿ ॥

ವೃಷಃ ಶ್ವೇತವರ್ಣಃ ಮುಖಂ ಕಾಲಸ್ಯಾರಣ್ಯೋ ದಿವಾರಾತ್ರೌ ಗ್ರಾಮ್ಯೋ ದಕ್ಷಿಣದ್ವಾರಃ ಚತುಷ್ಪಾದ್ರಾತ್ರೌ ದಕ್ಷಿಣಸ್ಯಾಂ ದಿಶಿ ಬಲೀ ಸ್ಥಿರಃ

---

ಆ ಕಾಲಕ್ಕೆಭಚಕ್ರದಲ್ಲಿ ಲಿಪ್ತಾ ಎಂದು ಹೆಸರು, ಆದ್ದರಿಂದ ಎಷ್ಟುಕಾಲದಲ್ಲಿ ಹನ್ನೆರಡು ಗುರ್ವಕ್ಷರಗಳನ್ನು ಉಚ್ಚರಿಸಬಹುದೋ ಅಂತಹ ಕಾಲವು ಶ್ವಾಸೋಚ್ವಾಸರೂಪವಾದ ಪ್ರಾಣವೆನಿಸುತ್ತದೆ. ಅಷ್ಟುಕಾಲದಲ್ಲಿ ಭಚಕ್ರಕ್ಕೆ ಒಂದು ಕಲೆಯುಂಟಾಗುತ್ತದೆ.

ಕಲೆಗಳಿಂದ ಕೂಡಿದ ನಕ್ಷತ್ರ ಚಕ್ರವು ಅರವತ್ತು ನಾಡಿಕೆಗಳಿಂದಲೇ ಉಂಟಾಗುತ್ತದೆ. ಆ ರಾಶಿಗಳಲ್ಲಿ ಮೊದಲನೆಯದು ಮೇಷ ಕೆಂಪುಬಣ್ಣವುಳ್ಳದ್ದು, ಕಾಲಪುರುಷನ ತಲೆಯಭಾಗ, ಹಗಲು ರಾತ್ರಿಯಲ್ಲಿಯೂ ವ್ಯಾಪಿಸಿರುತ್ತದೆ. ಗ್ರಾಮ್ಯವಾದುದು, ಪೂರ್ವಾಭಿಮುಖವಾದುದು, ನಾಲ್ಕುಕಾಲುಗಳುಳ್ಳದ್ದು, ರಾತ್ರಿಯಲ್ಲಿ ದಕ್ಷಿಣದಿಕ್ಕಿನಲ್ಲಿ ಬಲಿಷ್ಠವಾಗಿ ಸಂಚರಿಸತಕ್ಕದ್ದು. ಹಿಂಭಾಗದಿಂದ ಅದರ ಉದಯ ಕ್ರೂರವಾದುದು ವಿಷಮವಾದದ್ದು, ಪುರುಷರಾಶಿ, ಶನಿಗೆ ಅದು ನೀಚಸ್ಥಾನ, ಅದರಲ್ಲಿಯೂ ಇಪ್ಪತ್ತು ಭಾಗ ಪರಮ ನೀಚಸ್ಥಾನ, ಸೂರ್ಯನಿಗೆ ಉಚ್ಚಸ್ಥಾನ ಅದರಲ್ಲಿಯೂ ಹತ್ತನೆಯಭಾಗವು ಪರಮೋಚ್ಚಸ್ಥಾನ, ಅಂಗಾರಕನಿಗೆ ಸ್ವಕ್ಷೇತ್ರ ಮತ್ತು ಅವನಿಗೆ ತ್ರಿಕೋಣವೆಂದೂ ಹೇಳಲಾಗಿದೆ. ಹನ್ನೆರಡು ಭಾಗ ಮೂಲ ತ್ರಿಕೋಣವೆಂದೂ ಹದಿನೆಂಟುಭಾಗ ಸ್ವಕ್ಷೇತ್ರವೆಂದೂ ತಾತ್ಪರ್ಯ

ವೃಷಭರಾಶಿಯು ಬಿಳಿಯವರ್ಣವುಳ್ಳದ್ದು. ಕಾಲಪುರುಷನಮುಖ, ಅರಣ್ಯವೇ ಸ್ಥಾನ ಹಗಲು ರಾತ್ರಿಯಲ್ಲಿಯೂ ವ್ಯಾಪ್ತಿಯುಳ್ಳದ್ದು. ಗ್ರಾಮ್ಯ, ದಕ್ಷಿಣಾಭಿಮುಖ

ಪೃಷ್ಠೋದಯಃ ಸಮಃ ಸೌಮ್ಯಃ ಸ್ತ್ರೀರಾಶಿಃ ಶುಕ್ರಕ್ಷೇತ್ರಂ ಚಂದ್ರ-
ಮಸಸ್ತ್ರಿಕೋಣಂ ತಸ್ಯೈವ ಚ ತೃತೀಯೆ ಭಾಗೆ ಚಾತ್ಯುಚ್ಚಮಿತಿ ॥

ಮಿಥುನಃ ಪುರುಷೋ ಗದಾಧಾರೀ ವೀಣಾಕರಾ ನಾರೀ ಚ ಹರಿತವರ್ಣಃ
ಕಾಲಸ್ಯ ಬಾಹೂ ಗ್ರಾಮ್ಯಃ ಪಶ್ಚಿಮದ್ವಾರೋ ದ್ವಿಪಾತ್ । ಪೂರ್ವ-
ಸ್ಯಾಂದಿಶಿ ದಿವಾ ಬಲೀ ದ್ವಿಃಸ್ವಭಾವಃ ಶೀರ್ಷೋದಯಃ ಕ್ರೂರೋ
ವಿಷಮಃ ಪುರುಷರಾಶಿಃ ಬುಧಕ್ಷೇತ್ರಮಿತಿ ॥

ಬಲೀ ಚರಃ ಪೃಷ್ಠೋದಯಃ ಕೀಟಃ ಸೌಮ್ಯಃ ಸಮಃ ಸ್ತ್ರೀರಾಶಿಃ ಚಂದ್ರ
ಕ್ಷೇತ್ರಂ ಭೌಮನೀಚಃ, ತಸ್ಯಾಷ್ಟವಿಂಶತ್ತಮೋ ಭಾಗೆ ಅತಿನೀಚೋ
ಜೀವೋಚ್ಚ ಸ್ತಸ್ಯಪಂಚಮೋ ಭಾಗೇऽತ್ಯುಚ್ಚ ಇತಿ ॥

---

ವಾದುದು. ನಾಲ್ಕು ಪಾದಗಳುಳ್ಳದ್ದು, ದಕ್ಷಿಣದಿಕ್ಕಿನಲ್ಲಿ ಬಲಿಷ್ಠವಾದುದು, ಸ್ಥಿರರಾಶಿ, ಹಿಂಭಾಗದಿಂದ ಉದಯ ಹೊಂದತಕ್ಕದ್ದು. ಸಮವಾದುದು ಮತ್ತು ಸೌಮ್ಯಪ್ರಕೃತಿ, ಸ್ತ್ರೀರಾಶಿ, ಶುಕ್ರನಕ್ಷೇತ್ರ. ಚಂದ್ರನಿಗೆ ಉಚ್ಚಸ್ಥಾನ ಮೊದಲನೆಯ ಮೂರು ಭಾಗಗಳು ಪರಮೋಚ್ಚಸ್ಥಾನ. ಉಳಿದ ಇಪ್ಪತ್ತೇಳು ಭಾಗಗಳು ಮೂಲತ್ರಿಕೋಣ.

ಮಿಥುನರಾಶಿಯು ಗದಾಧಾರಿಯಾದ ಪುರುಷ ಮತ್ತು ವೀಣಾಧಾರಿಯಾದ ಸ್ತ್ರೀ ಈ ಉಭಯರೂಪವುಳ್ಳದ್ದು. ಹಸಿರು ಬಣ್ಣ, ಕಾಲಪುರುಷನ ಬಾಹು, ಗ್ರಾಮ್ಯ, ಪಶ್ಚಿಮಾಭಿಮುಖ ಉಳ್ಳದ್ದು, ಎರಡು ಪಾದಗಳುಳ್ಳದ್ದು. ಪೂರ್ವ ದಿಕ್ಕಿನಲ್ಲಿ ಹಗಲಿನಲ್ಲಿ ಬಲಶಾಲಿಯಾಗಿರುತ್ತದೆ. ದ್ವಿಃಸ್ವಭಾವ ಉಳ್ಳದ್ದು. ಮೇಲ್ಭಾಗದಲ್ಲಿ ಉದಯವುಳ್ಳದ್ದು. ಕ್ರೂರ, ವಿಷಮಸ್ವಭಾವ, ಪುರುಷರಾಶಿ, ಬುಧನಕ್ಷೇತ್ರ.

ಕರ್ಕಾಟಕರಾಶಿಯು ಬಲಿಷ್ಠವಾದದ್ದು ಮತ್ತು ಚರರಾಶಿ. ಹಿಂಭಾಗದಿಂದ ಉದಯವುಳ್ಳದ್ದು. ಸೌಮ್ಯ, ಸಮಸ್ವಭಾವ, ಸ್ತ್ರೀರಾಶಿ, ಚಂದ್ರನಿಗೆ ಸ್ವಕ್ಷೇತ್ರ, ಅಂಗಾರಕನಿಗೆ ನೀಚಸ್ಥಾನ, ಕೊನೆಯ ಇಪ್ಪತ್ತೆಂಟನೆಯ ಭಾಗವು ಅತಿನೀಚಸ್ಥಾನ. ಗುರುವಿಗೆ ಉಚ್ಚಸ್ಥಾನ. ಅದರಲ್ಲಿಯೂ ಐದನೆಯಭಾಗ ಪರಮೋಚ್ಚಸ್ಥಾನ.

ಸಿಂಹಃ ಸಿಂಹಾಕಾರಃ ಪಾಂಡುವರ್ಣಃ ಕಾಲಸ್ಯೋದರಮಾರಣ್ಯಃ ಪ್ರಾಗ್ದ್ವಾರಃ
ಚತುಷ್ಪಾತ್ ದಕ್ಷಿಣಸ್ಯಾಂ ದಿಶಿ ರಾತ್ರೌ ಬಲೀ ಸ್ಥಿರಃ ಶೀರ್ಷೋದಯಃ
ಕ್ರೂರೋ ವಿಷಮಃ ಪುಮಾನ್ ಆದಿತ್ಯಕ್ಷೇತ್ರಂ ತತ್ತ್ರಿಕೋಣಮಿತಿ ॥

ಕನ್ಯಾರಾಶಿಃ ಕುಮಾರೀ ನೌಸ್ಥಾ ದೀಪಿಕಾಹಸ್ತಾ ವಿಚಿತ್ರವರ್ಣಾ ಕಾಲಸ್ಯ
ಕಟಿಃ ಗ್ರಾಮ್ಯೋ ದಕ್ಷಿಣದ್ವಾರಃ ಪೂರ್ವಸ್ಯಾಂ ದಿಶಿ ಬಲೀ ಸ್ಥಿರಃ
ಶೀರ್ಷೋದಯಃ ಸಮಃ ಸೌಮ್ಯಃ ಸ್ತ್ರೀರಾಶಿಃ ಶುಕ್ರಸ್ಯನೀಚಃ
ಸಪ್ತವಿಂಶತಿತಮೋ ಭಾಗೆ ತಸ್ಯೈವಾತಿ ನೀಚೋ ಬುಧಸ್ಯೋಚ್ಚಃ
ತಸ್ಯಪಂಚದಶೇ ಭಾಗೇಽತ್ಯುಚ್ಚೋ ಬುಧಕ್ಷೇತ್ರಂ ತತ್ತ್ರಿಕೋಣಮಿತಿ॥

---

ಸಿಂಹರಾಶಿಯು ಸಿಂಹದಂತಹ ಆಕಾರವುಳ್ಳದ್ದು. ಬಿಳಿಯ ಬಣ್ಣ. ಕಾಲ ಪುರುಷನ ಉದರಭಾಗ, ಅರಣ್ಯವೇ ಅದರ ಸ್ಥಾನ, ಪೂರ್ವಾಭಿಮುಖ, ನಾಲ್ಕು ಕಾಲುಗಳುಳ್ಳದ್ದು. ದಕ್ಷಿಣ ದಿಕ್ಕಿನಲ್ಲಿ ರಾತ್ರಿಯ ಕಾಲದಲ್ಲಿ ಬಲಿಷ್ಠವಾದದು. ಸ್ಥಿರಪ್ರಕೃತಿ ಮೇಲ್ಭಾಗದಿಂದ ಉದಯುಳ್ಳದ್ದು. ಕ್ರೂರ, ವಿಷಮಸ್ವಭಾವ, ಪುರುಷರಾಶಿ, ಸೂರ್ಯನಕ್ಷೇತ್ರ, ಅವನಿಗೇ ತ್ರಿಕೋಣವೂ ಆಗಿದೆ.

ಕನ್ಯಾರಾಶಿಯು ಕುಮಾರಿಯಂತಹ ಆಕಾರವುಳ್ಳದ್ದು. ದೋಣಿಯಲ್ಲಿ ಇರತಕ್ಕುದು. ದೀವಿಗೆಯನ್ನು ಹೊತ್ತಿರುವ ಕೈಗಳುಳ್ಳದ್ದು. ವಿಚಿತ್ರವಾದ ಬಣ್ಣ. ಕಾಲಪುರುಷನ ಸೊಂಟ, ಗ್ರಾಮ್ಯ, ದಕ್ಷಿಣಾಭಿಮುಖ, ಪೂರ್ವದಿಕ್ಕಿನಲ್ಲಿ ಬಲಿಷ್ಠವಾದುದು. ಸ್ಥಿರಪ್ರಕೃತಿ, ಮೇಲ್ಭಾಗದಿಂದ ಉದಯಹೊಂದತಕ್ಕದ್ದು. ಸಮಪ್ರಕೃತಿ, ಸೌಮ್ಯ, ಸ್ತ್ರೀರಾಶಿ. ಶುಕ್ರನಿಗೆ ನೀಚಸ್ಥಾನ, ಅದರಲ್ಲಿಯೂ ಇಪ್ಪತ್ತೇಳನೆಯ ಭಾಗದಲ್ಲಿ ಅತಿನೀಚನಾಗುತ್ತಾನೆ. ಬುಧನಿಗೆ ಉಚ್ಚಸ್ಥಾನ. ಅದರಲ್ಲಿಯೂ ಹದಿನೈದನೆಯ ಭಾಗದಲ್ಲಿ ಪರಮೋಚ್ಚನಾಗುತ್ತಾನೆ. ಬುಧನಕ್ಷೇತ್ರ, ಅವನಿಗೇ ತ್ರಿಕೋಣವೂ ಆಗಿರುತ್ತದೆ. ಹದಿನೈದು ಭಾಗವು ಉಚ್ಚವೆಂಗೂ ಉಳಿದ ಹದಿನೈದು ಭಾಗವು ಮೂಲತ್ರಿಕೋಣವೆಂದೂ ತಾತ್ಪರ್ಯ.

ತುಲಾ ವಣಿಕ್‌ಪುರುಷಃ ತುಲಾಧರಾಪಣವೀಥೀಗತಃ ಕೃಷ್ಣವರ್ಣಃ ಕಾಲಸ್ಯವಸ್ತಿಃ ಸ್ಥಿತೋ ಗ್ರಾಮ್ಯಃ ಪಶ್ಚಿಮದ್ವಾರೋ ದ್ವಿಧಾ ಪೂರ್ವಸ್ಯಾಂ ದಿಶಿ ಬಲೀ ಚರಃ ಶೀರ್ಷೋದಯಃ ಕ್ರೂರೋ ವಿಷಮಃ ಪುರುಷರಾಶಿಃ ಶುಕ್ರಕ್ಷೇತ್ರಂ ಆದಿತ್ಯನೀಚಃ ತಸ್ಯೈವ ದಶಮೋ ಭಾಗೇऽತಿನೀಚಃ। ಶನೈಶ್ಚರಸ್ಯೋಚ್ಚಃ ಶ್ಚೋರ್ಧ್ವಃ ತಸ್ಯೈವವಿಂಶತಿತಮೋ ಭಾಗೇऽತ್ಯುಚ್ಚಃ (ತಸ್ಯೈ[1]ವಾತಿನೀಚೋ) ಭೌಮಕ್ಷೇತ್ರಮಿತಿ ॥

ಧನ್ವೀ ನಾಮ ಧನುರ್ಧರಃ ಪುರುಷಃ ಹಯಪಶ್ಚಿಮಾರ್ಧಃ ಪಿಂಗಲಃ ಕಾಲಸ್ಯೋರುಃ ಗ್ರಾಮ್ಯಃ ಪ್ರಾಗ್ದ್ವಾರಃ ತಸ್ಯಪ್ರಾಗಧೋ ದ್ವಿಪಾತ್ ದ್ವಿತೀಯಮರ್ಧಂ ಚತುಷ್ಪಾತ್ ತಸ್ಯ ಪ್ರಥಮಮರ್ಧಂ ಪೂರ್ವಸ್ಯಾಂ ದಿಶಿ ದಿವಾ ಬಲೀ ಪಶ್ಚಿಮಾಂತಮರ್ಧಂ ರಾತ್ರೌ ದಕ್ಷಿಣಸ್ಯಾಂ ದಿಶಿ ಬಲವಾನ್ ದ್ವಿಸ್ವಭಾವಃ ಪೃಷ್ಠೋದಯಃ ಕ್ರೂರಃ ಪುಮಾನ್ ವಿಷಮಃ ಜೀವಕ್ಷೇತ್ರಂ ತತ್ತ್ರಿಕೋಣಮಿತಿ ॥

ತುಲಾರಾಶಿಯು ತಕ್ಕಡಿಯನ್ನು ಹಿಡಿದಿರುವ ವರ್ತಕನಂತಹ ಆಕಾರವುಳ್ಳದ್ದು ತಕ್ಕಡಿಯನ್ನು ಧರಿಸಿದೆ. ಅಂಗಡಿಯ ಬೀದಿಯೇ ಸ್ಥಾನ, ಕಪ್ಪು ಬಣ್ಣ, ಕಾಲ ಪುರುಷನ ನಾಭಿಸ್ಥಾನ ಕುಳಿತಿರುವ ಆಕಾರ ಗ್ರಾಮ್ಯ, ಪಶ್ಚಿಮಾಭಿಮುಖ, ಎರಡು ಕಡೆಗಳಲ್ಲಿಯೂ ಅಭಿಮುಖನಾಗಿರತಕ್ಕದ್ದು ಪೂರ್ವದಿಕ್ಕಿನಲ್ಲಿ ಬಲಿಷ್ಠವಾದುದು. ಚರರಾಶಿ, ಮೇಲ್ಭಾಗದಿಂದ ಉದಯವುಳ್ಳದ್ದು. ಕ್ರೂರ, ವಿಷಮ ಪ್ರಕೃತಿ, ಪುರುಷ ರಾಶಿ, ಶುಕ್ರನ ಪ್ರಭುತ್ವಕ್ಕೆ ಸೇರಿದುದು. ಸೂರ್ಯನಿಗೆ ನೀಚಸ್ಥಾನ, ಅದರಲ್ಲಿಯೂ ಹತ್ತನೆಯ ಭಾಗವು ಪರಮ ನೀಚಸ್ಥಾನ. ಶನಿಗೆ ಉಚ್ಚಸ್ಥಾನ, ಮೇಲ್ಮುಖ ಉಳ್ಳದ್ದು. ಅದೇ ಶನಿಗೆ ಇಪ್ಪತ್ತನೆಯ ಭಾಗವು ಪರಮೋಚ್ಚಸ್ಥಾನ, ಅಂಗಾರಕನಕ್ಷೇತ್ರ.

ಧನೂರಾಶಿಯು ಧನುರ್ಧಾರಿಯಾದ ಪುರುಷನ ಸ್ವರೂಪವುಳ್ಳದ್ದು. ಅದರ ಪಶ್ಚಿಮದ ಅರ್ಧಭಾಗವು ಕುದುರೆಯಂತಿದೆ. ಪಿಂಗಲವರ್ಣ ಕಾಲಪುರುಷನ ತೊಡೆಯ ರೂಪ, ಗ್ರಾಮ್ಯ, ಪೂರ್ವಾಭಿಮುಖ, ಅದರ ಪೂರ್ವಭಾಗದ ಅರ್ಧವು ಎರಡು ಕಾಲುಳ್ಳದ್ದು, ಉಳಿದ ಅರ್ಧವು ನಾಲ್ಕು ಪಾದ ಉಳ್ಳದ್ದು ಅದರ ಪೂರ್ವಾರ್ಧವು ಪೂರ್ವದಿಕ್ಕಿನಲ್ಲಿ ಹಗಲಿನಲ್ಲಿ ಬಲಶಾಲಿಯಾದುದು, ಪಶ್ಚಿಮ ಭಾಗದ ಅರ್ಧವು

1 ಈ ಗ್ರಂಥವು ತಪ್ಪಾಗಿ ಬಿದ್ದಿರಬೇಕೆಂದು ತೋರುತ್ತದೆ.

ಮಕರೋ ನಾಮ ಮೃಗಃ ಪೂರ್ವಾರ್ಧೇ ಮಕರಃ ಪಶ್ಚಾರ್ಧೇ ಮೃಗಃ ಪ್ರಾಗರ್ಧೇನಾರಣ್ಯೋ [1]ದ್ವಿತೀಯಾರ್ಧೇನಾಂಬುಚರಃ ಕಾಲಸ್ಯ ಜಾನುನೀ ಪೂರ್ವಾರ್ಧೇऽರ್ಧಚತುಷ್ಪಾತ್ ಪಶ್ಚಾರ್ಧೇನಕೀಟಃ ದಕ್ಷಿಣದ್ವಾರಃ ಪ್ರಾಗರ್ಧೇನ ರಾತ್ರೌ ದಕ್ಷಿಣಸ್ಯಾಂ ದಿಶಿ ಬಲೀ ಪಶ್ಚಿಮಾರ್ಧೇನ ಸಂಧ್ಯಾಯಾಂ ಪಶ್ಚಿಮಾಯಾಂ ದಿಶಿ ಚರಃ ನೀಚಂ ಬೃಹಸ್ಪತೇಃ ತಸ್ಯೈವಾಷ್ಟಾವಿಂಶತಿತಮೋ ಭಾಗೇತ್ಯುಚ್ಚಃ ಸೌರಕ್ಷೇತ್ರಮಿತಿ ||

ಕುಂಭೋನಾಮ ಪುರುಷಃ ಸ್ಕಂಧೇನ ರಿಕ್ತಕುಂಭಧರಃ ಪಿಂಗಲಃಕಾಲಸ್ಯ ಜಂಘೇ ದ್ವಿಪಾತ್ ಗ್ರಾಮ್ಯಃ ಪಶ್ಚಿಮದ್ವಾರಃ ಪೂರ್ವೇಣ ಚ ದಿವಾ ಬಲೀ ಶೀರ್ಷೋದಯಃ ಸ್ಥಿರಃ ಕ್ರೂರಃ ಪುಮಾನ್ ವಿಷಮಃ ಶನೈಶ್ಚರಕ್ಷೇತ್ರಂ ತತ್ರಿಕೋಣಮಿತಿ ||

---

ದಕ್ಷಿಣದಿಕ್ಕಿನಲ್ಲಿ ರಾತ್ರಿಯಲ್ಲಿ ಬಲಿಷ್ಠವಾದುದು. ದ್ವಿಸ್ವಭಾವ ರಾಶಿ, ಹಿಂಭಾಗದಿಂದ ಆವಿರ್ಭಾವವುಳ್ಳದ್ದು, ಕ್ರೂರಪ್ರಕೃತಿ, ಪುರುಷರಾಶಿ, ವಿಷಮಸ್ವಭಾವ, ಬೃಹಸ್ಪತಿಯ ಸ್ಥಾನ, ಮೊದಲನೆಯ ಹತ್ತು ಭಾಗ ಮೂಲತ್ರಿಕೋಣ, ಉಳಿದ ಇಪ್ಪತ್ತು ಭಾಗ ಸ್ವಕ್ಷೇತ್ರ.

ಮಕರರಾಶಿಯು ಮೃಗದ ಆಕಾರವುಳ್ಳದ್ದು. ಅದರ ಪೂರ್ವಾರ್ಧವು ಮೊಸಳೆಯಂತಿದೆ. ಉತ್ತರಾರ್ಧವು ಜಿಂಕೆಯಂತಿದೆ, ಪೂರ್ವಾರ್ಧದಿಂದ ಅರಣ್ಯ ಪ್ರಾಣಿ ಎರಡನೆಯ ಅರ್ಧದಿಂದ ಜಲಚರಪ್ರಾಣಿ ಕಾಲಪುರುಷನ ಮಂಡಿಗಳಾಗಿದೆ. ಪೂರ್ವಭಾಗದ ಅರ್ಧದಿಂದ ನಾಲ್ಕು ಪಾದಗಳುಳ್ಳದ್ದು. ಕೊನೆಯ ಭಾಗದಿಂದ ಕೀಟಜಂತು ದಕ್ಷಿಣಾಭಿಮುಖ, ಮೊದಲನೆಯ ಅರ್ಧಭಾಗದಿಂದ ರಾತ್ರಿಯಲ್ಲಿ ದಕ್ಷಿಣದಿಕ್ಕಿನಲ್ಲಿ ಬಲಿಷ್ಠವಾದದ್ದು ಎರಡನೆಯ ಅರ್ಧದಿಂದ ಸಂಧ್ಯಾಕಾಲದಲ್ಲಿ ಪಶ್ಚಿಮದಿಕ್ಕಿನಲ್ಲಿ ಬಲಿಷ್ಠವಾಗುತ್ತದೆ, ಚರರಾಶಿ, ಬೃಹಸ್ಪತಿಗೆ ನೀಚಸ್ಥಾನ ಅದರಲ್ಲಿಯೂ ಕೊನೆಯ ಕೊನೆಯ ಭಾಗವು ಅತಿ ನೀಚಸ್ಥಾನ ಅಂಗಾರಕನಿಗೆ ಉಚ್ಚಸ್ಥಾನ. ಅದರಲ್ಲೂ ಇಪ್ಪತ್ತೆಂಟು ಭಾಗಗಳು ಪರಮೋಚ್ಚಸ್ಥಾನ. ಶನಿಯ ಸ್ಥಾನ.

ಕುಂಭ ರಾಶಿಯು ಬರಿಯ ಗಡಿಗೆಯನ್ನು ಹೆಗಲಿನ ಮೇಲೆ ಧರಿಸಿರುವ ಪುರುಷನಂತಿದೆ. ಪಿಂಗಲವರ್ಣ, ಕಾಲಪುರುಷನ ಮೊಣಕಾಲು, ಎರಡು ಪಾದ

---

1 ಇಲ್ಲಿ ವ್ಯತ್ಯಾಸದಿಂದ ಪಾಠವಿರಬೇಕೆಂದು ತೋರುತ್ತದೆ.

**ಮೀನೋ ನಾಮ ದ್ವೌ ಮತ್ಸ್ಯೌ ಅನ್ಯೋನ್ಯಪುಚ್ಛಾದಿಮುಖೌ ॥ ಮತ್ಸ್ಯೌ ವರ್ಣೌ ಕಾಲಪಾದೌ ಕೀಟಃ ಉದೀಚಃ ಪಶ್ಚಿಮಸ್ಯಾಂ ದಿಶಿ ಸಂಧ್ಯಾಯಾಂ ಬಲೀ ಪೃಷ್ಠಪುಚ್ಛೋದಯೋ ದ್ವಿಃಸ್ವಭಾವಃ ಸೌಮ್ಯಃ ಸಮಃ ಸ್ತ್ರೀರಾಶಿಃ ಬುಧಸ್ಯ ನೀಚಂ ತಸ್ಯೈವ ಬುಧಸ್ಯ ಪಂಚದಶ ಭಾಗೇಽತಿನೀಚಂ ಶುಕ್ರಸ್ಯೋಚ್ಚಂ ತಸ್ಯೈವ ಸಪ್ತವಿಂಶತಿತಮೇ ಭಾಗೇಽತ್ಯುಚ್ಚಂ ಜೀವಕ್ಷೇತ್ರಮಿತಿ ॥**

---

ಗಳುಳ್ಳದ್ದು. ಗ್ರಾಮ್ಯ, ಪಶ್ಚಿಮಾಭಿಮುಖವಾಗಿದ್ದು, ಪೂರ್ವಭಾಗದಿಂದ ಹಗಲಿನಲ್ಲಿ ಬಲಿಷ್ಠವಾಗುತ್ತದೆ. ಮೇಲ್ಭಾಗದಿಂದ ಉದಯವುಳ್ಳದ್ದು ಸ್ಥಿರರಾಶಿ, ಕ್ರೂರಪ್ರಕೃತಿ, ಪುರುಷರಾಶಿ, ವಿಷಮಸ್ವಭಾವ, ಶನಿಯ ಕ್ಷೇತ್ರ, ಅವನ ತ್ರಿಕೋಣ ಮೊದಲಿನ ಇಪ್ಪತ್ತು ಭಾಗ ಮೂಲ ತ್ರಿಕೋಣ ಉಳಿದ ಹತ್ತು ಭಾಗಗಳು ಸ್ವಕ್ಷೇತ್ರವೆಂದು ತಾತ್ಪರ್ಯ

ಮೀನ ರಾಶಿಯು ಎರಡು ಮೀನುಗಳ ಆಕಾರವುಳ್ಳದ್ದು ಅವೂ ಸಹ ಒಂದರ ಬಾಲವು ಮತ್ತೊಂದರ ಮುಖಕ್ಕೆ ಸೇರಿ ದ್ವಂದ್ವವಾಗಿರುತ್ತದೆ. ಮೀನಿನಬಣ್ಣ ಕಾಲಪುರುಷನ ಪಾದ ಕೀಟರೂಪ, ಉತ್ತರಾಭಿಮುಖ, ಪಶ್ಚಿಮದಿಕ್ಕಿನಲ್ಲಿ ಸಂಧ್ಯಾಕಾಲದಲ್ಲಿ ಬಲಿಷ್ಠವಾಗುತ್ತದೆ ಪುಚ್ಛ ಮತ್ತು ಮುಖಭಾಗಗಳೊಡನೆಯೇ ಉದಯಹೊಂದುತ್ತದೆ. ದ್ವಿಃಸ್ವಭಾವರಾಶಿ ಸೌಮ್ಯಪ್ರಕೃತಿ, ಸಮಸ್ವಭಾವ ಸ್ತ್ರೀರಾಶಿ, ಬುಧನಿಗೆ ನೀಚಸ್ಥಾನ ಅವನಿಗೇ ಅದರ ಹದಿನೈದುಭಾಗಗಳು ಪರಮನೀಚಸ್ಥಾನ ಶುಕ್ರನಿಗೆ ಉಚ್ಚಸ್ಥಾನ, ಅದರಲ್ಲಿಯೂ ಇಪ್ಪತ್ತೆಂಟು ಭಾಗಗಳು ಪರಮೋಚ್ಚಸ್ಥಾನ, ಬೃಹಸ್ಪತಿಯ ಕ್ಷೇತ್ರ.

ಮೂವತ್ತು ಭಾಗಗಳುಳ್ಳ ಎಲ್ಲಾ ರಾಶಿಗಳಲ್ಲಿ ವಿಷಮ ಸಂಖ್ಯೆಯುಳ್ಳ ಮೇಷ, ಮಿಥುನ, ಸಿಂಹ, ತುಲಾ, ಧನಸ್ಸು, ಕುಂಭ ಇವುಗಳಲ್ಲಿ ಮೊದಮೊದಲನೆಯ ಅರ್ಧವು ಸೂರ್ಯ ಹೋರಾ ಎರಡನೆಯ ಅರ್ಧವು ಚಂದ್ರಹೋರಾ ಸಮಸಂಖ್ಯೆಯುಳ್ಳ ವೃಷಭ, ಕರ್ಕಾಟಕ, ಕನ್ಯಾ, ವೃಶ್ಚಿಕ, ಮಕರ, ಮೀನ ಈ ಆರು ರಾಶಿಗಳಲ್ಲಿ ಮೊದಲನೆಯ ಅರ್ಧವು ಚಂದ್ರ ಹೋರಾ, ಎರಡನೆಯ ಅರ್ಧವು ಸೂರ್ಯ ಹೋರಾ ಎಲ್ಲಾ ರಾಶಿಗಳಲ್ಲಿಯೂ ಮೂರನೆಯ ಭಾಗದ ಗಣನೆಯಿಂದ ಮೂರು ದ್ರೇಕ್ಕಾಣವಿರುತ್ತದೆ (ಆ ಭಾಗಗಳ ಕ್ರಮದಿಂದ ಪ್ರಥಮ ದ್ವಿತೀಯ ದ್ರೇಕ್ಕಾಣವೆಂದು ವ್ಯವಹಾರ) ಆ ದ್ರೇಕ್ಕಾಣಗಳಿಗೂ ಅಧಿಪತಿಗಳನ್ನು ಈ ರೀತಿ ತಿಳಿಯ

ಸರ್ವಸ್ಯೈವ ರಾಶೇರರ್ಧಂ ಹೋರಾ ತತ್ರ ವಿಷಮರಾಶಿಷು ಪ್ರಥಮಾ ಪ್ರಥಮಾಸೌರೀ ದ್ವಿತೀಯಾಚಾಂದ್ರೀ ಸಮರಾಶಿಷು ಚಾಂದ್ರೀ ದ್ವಿತೀಯಾ ಸೌರೀ ಸರ್ವರಾಶಿಷು ದ್ರೇಕ್ಕಾಣತ್ರಯಂ। ತೇ ಪ್ರಥಮ ಪಂಚಮ ನವಮರಾಶಿನಾಥಾಃ । ಪ್ರಾಗ್ದ್ವಾರಾಣಾಂ ರಾಶೀನಾಂ ಮೇಷಾದ್ಯಾ ನವಾಂಶಕಾಃ ದಕ್ಷಿಣದ್ವಾರಾಣಾಂ ಮಕರಾದ್ಯಾಃ ಪಶ್ಚಿಮದ್ವಾರಾಣಾಂ ತುಲಾದ್ಯಾಃ ಉತ್ತರದ್ವಾರಾಣಾಂ ಕುಲೀ- ರಾದ್ಯಾಃ ॥

ಸರ್ವಾದಿರ್ಯೋ ನವಾಂಶಕೋ ವರ್ಗೋತ್ತಮಃ । ಕರ್ಕಟ ವೃಶ್ಚಿಕ ಮೀನಾನಾಂ ಚರಮಾಂಶಾಃ ಗಂಡಾಂತಾಃ ರಾಶೌ ರಾಶೌ ದ್ವಾಭ್ಯಾಂ ದ್ವಾಭ್ಯಾಂ ದ್ವಾದಶ ದ್ವಾದಶಭಾಗಾಃ । ತ್ರಿಂಶಾಂಶಕಾಃ ಪಂಚ ಭೌಮಸ್ಯ, ತತಃ ಪಂಚ ಸೌರಸ್ಯ, ತತೋಽಷ್ಟೌ ಜೀವಸ್ಯ, ಸಪ್ತ ಬುಧಸ್ಯ, [1]ಅಷ್ಟೌ ಭೃಗೋಃ, ವಿಷಮೇ ರಾಶೌ ॥

ಬೇಕು. ಆ ರಾಶ್ಯಧಿಪತಿಯೇ ಪ್ರಥಮ ದ್ರೇಕ್ಕಾಣಕ್ಕೆ ಅಧಿಪತಿ. ಆ ರಾಶಿಯಿಂದ ಐದನೆಯ ರಾಶ್ಯಧಿಪತಿಯೇ ದ್ವಿತೀಯ ದ್ರೇಕ್ಕಾಣಕ್ಕೆ ಅಧಿಪತಿ ಆ ರಾಶಿಯಿಂದ ಒಂಭತ್ತನೆಯ ರಾಶ್ಯಧಿಪತಿಯೇ ತೃತೀಯ ದ್ರೇಕ್ಕಾಣಕ್ಕೆ ಅಧಿಪತಿ ಇನ್ನು ಮುಂದೆ ನವಾಂಶವನ್ನು ನಿರೂಪಿಸಿರುತ್ತಾರೆ ಮೇಷವೇ ಮೊದಲಾದ ರಾಶಿಗಳನ್ನು ಒಂಭತ್ತು ಭಾಗ ಮಾಡಿದಲ್ಲಿ ನವಾಂಶವಾಗುತ್ತದೆ. ಈ ರಾಶಿಗಳಲ್ಲಿ ಮೇಷ, ಸಿಂಹ ಧನಸ್ಸು ಎಂಬ ಪೂರ್ವಾಭಿಮುಖಗಳಾದ ರಾಶಿಗಳಿಗೆ ನವಾಂಶಗಳನ್ನು ಮೇಷಾದಿ ಯಿಂದ ಗಣನೆ ಮಾಡಬೇಕು. ಆರಾಶ್ಯಧಿಪತಿಗಳೇ ಕ್ರಮವಾಗಿ ನವಾಂಶಗಳಿಗೆ ಅಧಿಪತಿಗಳಾಗುತ್ತಾರೆ. ದಕ್ಷಿಣಾಭಿಮುಖಗಳಾದ ಮಕರ, ವೃಷಭ, ಕನ್ಯಾರಾಶಿ ಗಳಿಗೆ ಮಕರಾದಿಯಾಗಿ ಗಣನೆ ಮಾಡಬೇಕು. ಪಶ್ಚಿಮಾಭಿಮುಖಗಳಾದ ತುಲಾ, ಕುಂಭ, ಮಿಥುನಗಳಿಗೆ, ತುಲಾದಿಯಿಂದ ಗಣನೆ ಮಾಡಬೇಕು. ಉತ್ತರಾಭಿಮುಖ ಗಳಾದ ಕರ್ಕಾಟಕ, ವೃಶ್ಚಿಕ, ಮೀನಗಳಿಗೆ ಕರ್ಕಾಟಕಾದಿಯಾಗಿ ಗಣನೆ ಮಾಡಬೇಕು.

ಎಲ್ಲಾ ರಾಶಿಗಳಲ್ಲಿಯೂ ರಾಶಿಯ ಗ್ರಹಗಳ ಆಯಾಯ ಅಂಶವೇ ನವಾಂಶ ಕ್ರಮದಿಂದ ವರ್ಗೋತ್ತಮಾಂಶವಾಗುತ್ತದೆ. ಅಂದರೆ ಮೇಷಾದಿ ಚರರಾಶಿಗಳಲ್ಲಿ

1 ಇಲ್ಲಿ ಅಷ್ಟೌ ಎಂಬುದು ಅಪಪಾಠವೆಂದು ತೋರುತ್ತದೆ. ಪಂಚ ಎಂದಿರಬೇಕು.

**ಸಮರಾಶೌ ತು ¹ಅಷ್ಟೌ ಶುಕ್ರಸ್ಯ, ತತಃ ಸಪ್ತ ಬುಧಸ್ಯ, ತತೋಽಷ್ಟೌ ಜೀವಸ್ಯ, ಪಂಚ ಸೌರಸ್ಯ, ಪಂಚ ಭೌಮಸ್ಯ, ಏವಂ ಷಟ್ಪದಾರ್ಥೋಽ ಲಗ್ನಃ । ಸಃ ಸ್ವಸ್ವಾಮಿನಾ ಜೀವೇನ ಬುಧೇನ ಶುಕ್ರೇಣ ವಾ ಯುಕ್ತೋಽ ದೃಷ್ಟೋಽ ಬಲವಾನ್ ಭವತಿ । ಶೇಷೈರ್ಯುಕ್ತೋಽ ದೃಷ್ಟೋಽ ಹೀನ ಬಲಃ ಸ್ಯಾತ್ ॥**

---

ಮೊದಲನೆಯ ಅಂಶ ಸ್ಥಿರರಾಶಿಗಳಲ್ಲಿ ಐದನೆಯ ಅಂಶ, ದ್ವಿಸ್ವಭಾಗ ರಾಶಿಗಳಲ್ಲಿ ಒಂಭತ್ತನೆಯ ಅಂಶ ಈ ರೀತಿ ಮೇಷಾದಿಗ್ರಹಗಳ ಆಯಾಯ ಅಂಶವೇ ಈ ಸಂಖ್ಯೆಯಲ್ಲಿ ಸಿಲ್ಲುತ್ತದೆ ಎಂದು ತಾತ್ಪರ್ಯ. ಕರ್ಕಾಟಕ ವೃಶ್ಚಿಕ ಮೀನಗಳಲ್ಲಿ ವರ್ಗೋತ್ತಮಾಂಶವಾದರೂ, ಕೊನೆಯ ಅಂಶಗಳು ಗಂಡಾಂತವೆಂದು ಹೇಳಲ್ಪಡುತ್ತವೆ. ಪ್ರತಿಯೊಂದು ರಾಶಿಯಲ್ಲಿಯೂ ಹನ್ನೆರಡು ಭಾಗಗಳನ್ನಾಗಿ ವಿಭಾಗಿಸಿದಲ್ಲಿ ಇವೇ ದ್ವಾದಶಾಂಶಗಳು. ಆಯಾಯ ರಾಶ್ಯಧಿಪತಿಗಳು ಆಯಾಯ ಅಂಶಗಳಿಗೆ ಅಧಿಪತಿಗಳು' ಸೂರ್ಯ, ಚಂದ್ರ ಇವರಿಬ್ಬರ ಹೊರತು ಉಳಿದವರಿಗೆ ಪ್ರತಿಯೊಂದು ರಾಶಿಯಲ್ಲಿಯೂ ಎರಡೆರಡು ಭಾಗಗಳೂ, ಲಭಿಸುತ್ತವೆ. ರಾಶಿಯನ್ನು ಮೂವತ್ತು ಭಾಗ ಮಾಡಿದಲ್ಲಿ ತ್ರಿಶಾಂಶವಾಗುತ್ತದೆ. ಇವುಗಳಲ್ಲಿ ವಿಷಮಸಂಖ್ಯೆಯುಳ್ಳ ಮೇಷ, ಮಿಥುನ, ಸಿಂಹ, ತುಲಾ, ಧನಸ್ಸು, ಕುಂಭ ಈ ಆರುರಾಶಿಗಳಲ್ಲಿ ಮೊದಲಿನಿಂದ ಐದು ಅಂಶಗಳು ಅಂಗಾರಕನಿಗೆ, ಅನಂತರ ಐದು ಶನಿಗೆ, ಅನಂತರ ಎಂಟು ಗುರುವಿಗೆ ಅನಂತರ ಏಳು ಬುಧನಿಗೆ ಅನಂತರ ಐದು ಶುಕ್ರನಿಗೆ.

ಸಮ ಸಂಖ್ಯೆಯ ರಾಶಿಗಳಲ್ಲಿ ಶುಕ್ರನಿಗೆ ಐದು, ಅನಂತರ ಬುಧನಿಗೆ ಏಳು, ಅನಂತರ ಗುರುವಿಗೆ ಎಂಟು, ಶನಿಗೆ ಐದು, ಅಂಗಾರಕನಿಗೆ ಐದು, ಈ ರೀತಿ ತ್ರಿಶಾಂಶಗಳಿಗೆ ವಿಭಾಗವುಂಟಾಗಿದೆ. ಹೋರಾ ದ್ರೇಕ್ಕಾಣ, ನವಾಂಶ ದ್ವಾದಶಾಂಶ, ತ್ರಿಶಾಂಶಗಳೆಂಬ ಆರುಪದಾರ್ಥಗಳ ಗುಂಪೇ ಲಗ್ನವೆನಿಸುತ್ತದೆ. ಆ ಲಗ್ನವು ಲಗ್ನಾಧಿಪನಿಂದಾಗಲಿ, ಗುರು, ಬುಧ, ಶುಕ್ರ ಇವರಿಂದಲಾಗಲಿ ಕೂಡಿ ನೋಡಲ್ಪಟ್ಟಿದ್ದಲ್ಲಿ ಬಲಿಷ್ಠವಾಗುತ್ತದೆ. ಇತರರಿಂದ ಕೂಡಿ ನೋಡಲ್ಪಟ್ಟಿದ್ದರೆ ಹೀನ ಬಲವಾಗಿ ಆಗುತ್ತದೆ.

---

1 ಇಲ್ಲಿಯೂ ಪಂಚ ಎಂದಿರಬೇಕು

ಏವಂ ಚ ರಾಶಿಂ ಸಪ್ತಮಸ್ಥೋ ಗ್ರಹಃ ಸರ್ವದೃಷ್ಟ್ಯಾ ಪಶ್ಯತಿ, ಚತುರ್ಥಾ-ಷ್ಟಮಯೋಶ್ಚ ಸ್ಥಿತಾಃ ಪಾದೋನಯಾ ದೃಷ್ಟ್ಯಾ ಪಂಚಮ ನವಮಯೋಶ್ಚ ಅರ್ಧದೃಷ್ಟ್ಯಾ, ತೃತೀಯ ದಶಮಯೋಶ್ಚ ಪಾದದೃಷ್ಟ್ಯಾ, ಏಕ, ದ್ವಿ, ಅಷ್ಟದ್ವಾದಶೇ, ಸ್ಥಿತೋ ನ ಪಶ್ಯತೀತಿ ।

ತತ್ರಸ್ಥಂಗೃಹಮಧ್ಯೇಽರ್ಧಲಗ್ನಮುದಯಂ ವಿಲಗ್ನಕೇಂದ್ರಂ ತ್ರಿಕೋಣಂ। ಶರೀರಮಿತಿ ಲಗ್ನಸ್ಯಾಖ್ಯಾ । ಧಾನ್ಯಕುಟುಂಬಂ ಚ ದ್ವಿತೀಯಸ್ಯ, ಉಪಚಯಂ ಯೋಧಭ್ರಾತೃದುಶ್ಚಿಕ್ಯಾಖ್ಯಂ ತೃತೀಯಸ್ಯ, ಮಿತ್ರ ಗೃಹಂ ಹಿಬುಕಂ, ಸುಖವಾಹನಕೇಂದ್ರಪಾಲಕಾಖ್ಯಾಶ್ಚತುರ್ಥಸ್ಯ, ಪುತ್ರತ್ರಿಕೋಣಬುದ್ಧಿಸಂಜ್ಞಾಃ ಪಂಚಮಸ್ಯ, ಉಪಚಯಾರಿಸಂಜ್ಞೇ ಷಷ್ಠಸ್ಯ ॥

---

ಆ ಗ್ರಹಗಳ ದರ್ಶನವೂ ಸಹ ಈ ರೀತಿಯಾಗಿರುತ್ತದೆ. ರಾಶಿಗೆ ಏಳನೆಯ ರಾಶಿಯಲ್ಲಿರುವ ಗ್ರಹವು ದೃಷ್ಟಿಯ ಎಲ್ಲಾ ಅಂಶಗಳಿಂದಲೂ ನೋಡುತ್ತದೆ. ನಾಲ್ಕು ಮತ್ತು ಎಂಟನೆಯ ಸ್ಥಾನಗಳಲ್ಲಿರುವ ಗ್ರಹವು ದೃಷ್ಟಿಯ ಮುಕ್ಕಾಲುಭಾಗದ ಅಂಶದಿಂದಲೂ ಐದು ಮತ್ತು ಒಂಭತ್ತನೆಯ ಸ್ಥಾನದಲ್ಲಿರುವ ಗ್ರಹವು ದೃಷ್ಟಿಯ ಅರ್ಧಾಂಶದಿಂದಲೂ, ಮೂರು ಮತ್ತು ಹತ್ತನೆಯ ಸ್ಥಾನದಲ್ಲಿರುವ ಗ್ರಹವು ದೃಷ್ಟಿಯ ನಾಲ್ಕನೇ ಒಂದು ಭಾಗದಿಂದಲೂ, ನೋಡುತ್ತವೆ. ಒಂದು ಎರಡು, ಎಂಟು, ಹನ್ನೆರಡನೇ ಸ್ಥಾನಗಳಲ್ಲಿರುವ ಗ್ರಹವು ನೋಡುವುದೇ ಇಲ್ಲವೆಂದೂ ತಿಳಿಯಬೇಕು.

ಅಂತಹ ರಾಶಿಗಳ ಮಧ್ಯಭಾಗದಲ್ಲಿ ಅರ್ಧಾಂಶ ಸಂಬಂಧವಾದ ಕ್ಷಿತಿಜವೇ ಲಗ್ನ, ಇದಕ್ಕೆ ಉದಯ ವಿಲಗ್ನ, ಕೇಂದ್ರ, ತ್ರಿಕೋಣ ಎಂಬ ಸಂಜ್ಞೆಗಳಿವೆ. ಲಗ್ನಕ್ಕೆ ಶರೀರವೆಂದು ಹೆಸರು. ಅದಕ್ಕಿಂತ ಎರಡನೆಯ ಸ್ಥಾನಕ್ಕೆ ಧಾನ್ಯ ಕುಟುಂಬಸ್ಥಾನವೆಂದು ಹೆಸರು. ಮೂರನೆಯದಕ್ಕೆ ದುಶ್ಚಿಕ್ಯವೆಂದೂ ವ್ಯವ ಹಾರ, ಇದಕ್ಕೆ [1]ಉಪಚಯ ಗೃಹವೆಂದೂ ಸಂಜ್ಞೆ. ನಾಲ್ಕನೆಯದು ಮಿತ್ರಗೃಹ ವೆನಿಸುತ್ತದೆ. ಇದಕ್ಕೆ ಹಿಬುಕವೆಂದು ಸಂಜ್ಞೆ. ಇದು ಸುಖವಾಹನ ಕೇಂದ

---

1 ಆರು, ಹತ್ತು, ಹನ್ನೊಂದು, ಮೂರು ಈ ನಾಲ್ಕು ಸ್ಥಾನಗಳಿಗೂ ಉಪಚಯವೆಂಬ ಸಂಜ್ಞೆಯುಂಟು.

ಜಾಯಾಜಾಮಿತ್ರಾಸ್ತಮಾರ್ಗಚ್ಚ್ಯವನದ್ಯೂನಸಂಜ್ಞಾಃ, ಸಪ್ತಮಸ್ಯ, ಛಿದ್ರಾಯುಸಂಜ್ಞೇ ಚಾಷ್ಟಮಸ್ಯ, ಧರ್ಮತ್ರಿಕೋಣ ತ್ರಿತ್ರಿಕೋಣ ಛಿದ್ರಸಂಜ್ಞಾ ನವಮಸ್ಯ, ಕರ್ಮಕೇಂದ್ರಾಕಾಶಮೇಷೂರಣೋಪ-ಚಯಾಖ್ಯಾಪನಯಾ, ದಶಮಸ್ಯ ಉಪಚಯಾಯಲಾಭದ್ರವ್ಯಾಖ್ಯಾ ಏಕಾದಶಸ್ಯ, ರಿಪ್ಫ. ದ್ಯೂನಸಂಖ್ಯಯಾಖ್ಯಾ ದ್ವಾದಶಸ್ಯೇತಿ ||

ಸರ್ವೇಭ್ಯಃ ಕೇಂದ್ರಸಂಜ್ಞೇಭ್ಯಃ ದ್ವಿತೀಯಃ ಪಣಫರಃ ಸರ್ವಸ್ಮಾತ್ಪಣ-ಫರಾತ್ ದ್ವಿತೀಯ ಆಪೋಕ್ಲಿಮ ಇತಿ || ಆದಿತ್ಯಾಕ್ರಾಂತರಾಶೇಃ ದ್ವಿತೀಯೋ ವೇಶಿ, ದ್ವಾದಶೋ ಬೋಸಿ, ಉಭಯೋ ಉಭಯಚರೀ ಚಂದ್ರಾತ್ ದ್ವಿತೀಯಃ ಸುನಫಾ, ದ್ವಾದಶಶ್ಚಾನಫಾ, ಉಭಯೋರಪಿ ಲಗ್ನಶ್ಚ, ಸ್ವಾಮಿನಧುರುಧರಾ ಸಂಜ್ಞಾಸಮೇತೌ ||

---

ಪಾಲಕ ಎಂಬ ಸಂಜ್ಞೆಯನ್ನೂ ಹೊಂದುತ್ತದೆ. ಐದನೆಯದು ಪುತ್ರಸ್ಥಾನ, ಇದಕ್ಕೆ ಪುತ್ರತ್ರಿಕೋಣ, ಬುದ್ಧಿ, ಈ ಸಂಜ್ಞೆಗಳೂ ಇವೆ. ಆರನೆಯದು ಶತ್ರುಸ್ಥಾನ ಇದಕ್ಕೆ ಉಪಚಯ ಸಂಜ್ಞೆಯೂ ಉಂಟು.

ಜಾಯಾ. ಜಾಮಿತ್ರ, ಅಸ್ತಮಾರ್ಗ, ಚ್ಯವನ, ದ್ಯೂನ ಈ ಸಂಜ್ಞೆಗಳೆಲ್ಲಾ ಸಪ್ತಮ ಸ್ಥಾನಕ್ಕೆ ಅನುಬಂಧಿಸುತ್ತವೆ. ಛಿದ್ರ, ಆಯುಃ ಈ ಸಂಜ್ಞೆಗಳು ಅಷ್ಟಮ ಸ್ಥಾನಕ್ಕೂ, ಧರ್ಮ, ತ್ರಿಕೋಣ, ತ್ರಿತ್ರಿಕೋಣ, ಛಿದ್ರ ಈ ಸಂಜ್ಞೆಗಳು ಒಂಭತ್ತನೆಯ ಸ್ಥಾನಕ್ಕೂ, ಕರ್ಮ ಕೇಂದ್ರ, ಆಕಾಶ, ಮೇಷೂರಣ, ಉಪಚಯ, ಆಖ್ಯಾಪನಯ ಈ ಸಂಜ್ಞೆಗಳು ದಶಮ ಸ್ಥಾನಕ್ಕೂ, ಉಪಚಯ, ಲಾಭ, ಆಯ, ದ್ರವ್ಯ, ಈ ಸಂಜ್ಞೆಗಳು, ಏಕಾದಶ ಸ್ಥಾನಕ್ಕೂ ರಿಪ್ಫ, ದ್ಯೂನ, ಸಂಖ್ಯಯಾ ಎಂಬ ಸಂಜ್ಞೆಗಳು ಹನ್ನೆರಡನೆಯ ಸ್ಥಾನಕ್ಕೂ ಇವೆ.

ಕೇಂದ್ರಸಂಜ್ಞೆಯುಳ್ಳ ಎಲ್ಲಾ ರಾಶಿಗಳಿಗೂ ಅಂದರೆ ಲಗ್ನ, ಚತುರ್ಥ, ಸಪ್ತಮ ದಶಮಸ್ಥಾನಗಳು ಕೇಂದ್ರಗಳಾಗುತ್ತವೆ. ಅಂತಹ ಕೇಂದ್ರಗಳೆಲ್ಲಕ್ಕೂ ಎರಡನೆಯ ಸ್ಥಾನಗಳು ಪಣಫರ ಎಂಬ ಸಂಜ್ಞೆಯನ್ನು ಹೊಂದುತ್ತವೆ. ಅಂದರೆ ಲಗ್ನದಿಂದ ಎರಡನೆಯ ಮತ್ತು ಐದನೆಯ ಮತ್ತು ಎಂಟನೆಯ ಮತ್ತು ಹನ್ನೊಂದ ನೆಯ ಸ್ಥಾನಗಳು ಈ ಸಂಜ್ಞೆಯಿಂದ ವ್ಯವಹರಿಸಲ್ಪಡುತ್ತವೆ. ಎಂದು ತಾತ್ಪರ್ಯ. ಪಣಫರ ಸಂಜ್ಞೆಯುಳ್ಳ ಎಲ್ಲಾ ರಾಶಿಗಳ ಎರಡನೆಯ ರಾಶಿಗಳು ಆಪೋಕ್ಲಿಮ

ಅತ್ರ ಸಹಸ್ರರಶ್ಮಿರಾದಿತ್ಯಃ ನಾತ್ಯುಚ್ಚೋ ನ್ಯಗ್ರೋಧ ಪರಿಮಂಡಲಃ ಪೈತ್ತಿಕೋಽಸ್ಥಿಸಾರೋ ರಕ್ತಶ್ಯಾಮಃ ಪಾಪಃ ಪುರುಷಃ ಕ್ಷತ್ರಿಯಃ ಕಾಲಾತ್ಮಾ ರಾಜಾ ಪ್ರಾಗ್ದ್ವಾರೋ ದಕ್ಷಿಣಸ್ಯಾಂ ವಾ ದಿಶಿ ಉದಗಯನೇ ಕೃಷ್ಣಪಕ್ಷೇ ಚ ಬಲೀ ।

ಚಂದ್ರಮಾಃ ಸಹಸ್ರರಶ್ಮಿಃ ತತ್ರ ವರ್ತುಲಾಂಗಃ ದರ್ಶನೀಯಃ ಸ್ವಕ್ಷಃ ಕಫವಾತಾತ್ಮಾ ರುಧಿರಸಾರಃ ಗೌರಃ ಕ್ಷೀಣಃ ಪಾಪಃ ಪೂರ್ಣಃ ಸೌಮ್ಯಃ ಸ್ತ್ರೀಗ್ರಹಃ ವೈಶ್ಯಃ ಕಾಲಸ್ಯಮನಃ ರಾಜಾ ಪೂರ್ವೋತ್ತರಾಭಿಮುಖಃ ಉತ್ತರಸ್ಯಾಂ ದಿಶಿ ರಾತ್ರಾವುದಗಯನೇ ಶುಕ್ಲಪಕ್ಷೇ ಚ ಬಲವಾನಿತಿ ॥

---

ಎಂಬ ಸಂಜ್ಞೆಯನ್ನು ಹೊಂದುತ್ತವೆ. ಸೂರ್ಯನಿರುವ ರಾಶಿಯಿಂದ 2 ನೆಯ ರಾಶಿಗೆ ವೇಶಿ ಎಂದೂ, ಹನ್ನೆರಡನೆಯ ರಾಶಿಗೆ ವೋಸಿ[1] ಎಂದೂ ಹೆಸರು ಎರಡೂ ಇದ್ದಲ್ಲಿ ಉಭಯಚರೀ ಎಂದು ಸಂಜ್ಞೆ. ಚಂದ್ರನಿರುವ ರಾಶಿಗೆ ಎರಡನೆಯದು ಸುನಫಾ ಎಂದೂ ಹನ್ನೆರಡನೆಯದು ಅನಫಾ ಎಂದೂ ಹೆಸರು. ಆ ಸ್ಥಾನದ ಲಗ್ನಕ್ಕೂ ಅದೇ ಹೆಸರು. ಲಗ್ನಸ್ಥವಾದ ಎರಡು ಗ್ರಹಗಳ ಮಧ್ಯದಲ್ಲಿರುವ ಚಂದ್ರನಿಗೆ ಧುರಧುರಾ ಎಂಬ ಯೋಗವುಂಟಾಗುತ್ತದೆ. ಆ ಗ್ರಹಗಳೂ ಸಹ ಸೂರ್ಯನನ್ನು ಬಿಟ್ಟು ಕುಜಾದಿ ಪಂಚಗ್ರಹಗಳು

ಈ ಗ್ರಹಗಳಲ್ಲಿ ಸೂರ್ಯನು ಸಹಸ್ರಕಿರಣನಾಗಿಯೂ, ಅತ್ಯುಚ್ಚ ದೆಶೆಯನ್ನು ಹೊಂದದೆ, ಆಲದ ಮರದಂತೆ ವರ್ತುಲಾಕಾರವಾಗಿಯೂ, ಪಿತ್ತಪ್ರಕೃತಿಯಾಗಿಯೂ, ದೃಢವಾದ ಅಸ್ಥಿಯುಳ್ಳವನಾಗಿಯೂ ಕೆಂಪುಮಿಶ್ರವಾದ ಕಪ್ಪುಬಣ್ಣದಿಂದ ಕೂಡಿರುತ್ತಾನೆ. ಪಾಪಗ್ರಹ, ಪುರುಷ, ಕ್ಷತ್ರಿಯ ಜಾತಿ, ಕಾಲಪುರುಷನ ಆತ್ಮಸ್ಥಾನೀಯ, ರಾಜ, ಪೂರ್ವಾಭಿಮುಖ, ಉತ್ತರಾಯಣದಲ್ಲಿಯೂ, ದಕ್ಷಿಣದಿಕ್ಕಿನಲ್ಲಿಯೂ, ಕೃಷ್ಣಪಕ್ಷದಲ್ಲಿಯೂ ಬಲಿಷ್ಠನಾಗಿರುತ್ತಾನೆ.

ಚಂದ್ರನು ಸಹಸ್ರಕಿರಣನಾಗಿಯೂ, ದುಂಡಾದ ಅವಯವ ಉಳ್ಳವನಾಗಿಯೂ ರಮ್ಯವಾದ ಅವಯವ ಮತ್ತು ನೇತ್ರಸನ್ನಿವೇಶ ಉಳ್ಳವನಾಗಿಯೂ, ಕಫವಾತ ಪ್ರಚುರನಾಗಿಯೂ, ರಕ್ತಬಲದಿಂದ ಕೂಡಿಯೂ, ಬಿಳಿಯ ಬಣ್ಣವುಳ್ಳವನಾಗಿಯೂ, ಇರುತ್ತಾನೆ. ಇವನು ಕ್ಷೀಣನಾಗಿದ್ದಲ್ಲಿ ಪಾಪಗ್ರಹ, ಪೂರ್ಣನಾಗಿದ್ದಲ್ಲಿ ಸೌಮ್ಯ

---

1 ಈ ಸಂಜ್ಞೆಯು ಫಲದೀಪಿಕೆಯಲ್ಲಿ ಬೇರೆ ವಿಧವಾಗಿ ನಿರೂಪಿಸಲ್ಪಟ್ಟಿದೆ

**ಭೌಮೋ ನವರಶ್ಮಿಃ ಹ್ರಸ್ವಃ ಪಿಂಗಾಕ್ಷಃ ಕಪಿಲಃ ಪೈತ್ತಿಕೋ ಮಜ್ಜಾಸಾರೋ ರಕ್ತಗೌರಃ ಪಾಪಃ ಪುರುಷಗ್ರಹಃ ಕ್ಷತ್ರಿಯಃ ಕಾಲಸ್ಯಸತ್ವಂ ಸೇನಾನೀಃ ದಕ್ಷಿಣಾಭಿಮುಖೋ ವಕ್ರೇದಕ್ಷಿಣಸ್ಯಾಂ ದಿಶಿ ಕೃಷ್ಣಪಕ್ಷೇ ರಾತ್ರೌ ಚ ಬಲವಾನಿತಿ ||**

**ಬುಧೋಷ್ಟರಶ್ಮಿಃ ಮಧ್ಯಮರೂಪಃ ಪ್ರಮಾಣಪ್ರಕೃತಿಃ ತ್ವಕ್ಸಾರಃದೂರ್ವಾಶ್ಯಾಮಃ ಸೌಮ್ಯಃ ನ್ಯಗ್ರೋಧಸಮೋತಪ್ರಕೃತಿರ್ಭವತಿ ನಪುಂಸಕಃ ಶೂದ್ರಃ ಕಾಲಸ್ಯವಾಕ್ ಯುವರಾಜಃ ಉದಙ್ಮುಖಃ ಉತ್ತರಸ್ಯಾಂ ದಿಶಿ ಸರ್ವಕಾಲಂ ವಕ್ರೇ ಶುಕ್ಲಪಕ್ಷೇ ಚ ಬಲವಾನಿತಿ ||**

---

ಗ್ರಹ, ಸ್ತ್ರೀಗ್ರಹ, ವೈಶ್ಯಜಾತಿ, ಕಾಲಪುರುಷನ ಮನಸ್ಸು ರಾಜನು ಪೂರ್ವ ಮತ್ತು ಉತ್ತರ ದಿಕ್ಕುಗಳಿಗೆ ಅಭಿಮುಖನಾಗಿರುವನು ಉತ್ತರ ದಿಕ್ಕಿನಲ್ಲಿ ರಾತ್ರಿಯಲ್ಲಿ ಉತ್ತರಾಯಣದಲ್ಲಿ ಶುಕ್ಲಪಕ್ಷದಲ್ಲಿ ಬಲಶಾಲಿಯಾಗಿರುತ್ತಾನೆ.

ಅಂಗಾರಕನು ಒಂಭತ್ತು ಕಿರುಣಗಳುಳ್ಳವನು ಕುಳ್ಳಾದ ಆಕಾರ ಹೊಂಬಣ್ಣದ ಕಣ್ಣು, ಕಪಿಲವರ್ಣ, ಪಿತ್ತಪ್ರಕೃತಿ ಮಜ್ಜಾ ಎಂಬ ದೇಹಧಾತುವಿನ ಪ್ರಾಚುರ್ಯ ಉಳ್ಳವನು ಕೆಂಪು ಬಿಳುಪು ಮಿಶ್ರವಾದ ದೇಹ, ಪಾಪಗ್ರಹ, ಕ್ಷತ್ರಿಯ ಜಾತಿ, ಕಾಲಪುರುಷನ ಪೌರುಷಸ್ವರೂಪನಾಗಿರುವನು. ಸೇನಾಪತಿ ದಕ್ಷಿಣಾಭಿ ಮುಖ, ವಕ್ರಸ್ವಭಾವ, ದಕ್ಷಿಣ ದಿಕ್ಕಿನಲ್ಲಿ ಕೃಷ್ಣಪಕ್ಷದಲ್ಲಿಯೂ ರಾತ್ರಿಯಲ್ಲಿಯೂ, ಬಲಶಾಲಿಯಾಗಿರುತ್ತಾನೆ

ಬುಧನು ಎಂಟು ಕಿರಣಗಳುಳ್ಳವನು ಮಧ್ಯಮವಾದ ದೇಹ ರೂಪವುಳ್ಳವನು ದೇಹ ಪ್ರಮಾಣಕ್ಕೆ ತಕ್ಕ ಸ್ವಭಾವವುಳ್ಳವನು ದೃಢವಾದ ಚರ್ಮವುಳ್ಳವನು ಗರಿಕೆಯಂತೆ ಶ್ಯಾಮವರ್ಣವುಳ್ಳವನು, ಸೌಮ್ಯಗ್ರಹ, ಆಲದ ಮರದೊಡನೆ ಕೂಡಿದ ದೇಹವುಳ್ಳವನು. ನಪುಂಸಕ, ಶೂದ್ರ ಜಾತಿ, ಕಾಲಪುರುಷನಿಗೆ ವಾಗ್ರೂಪನಾಗಿರುವನು, ಯುವರಾಜ, ಉತ್ತರಾಭಿಮುಖನಾಗಿರುವನು, ಉತ್ತರದಿಕ್ಕಿನಲ್ಲಿ ಯಾವಾಗಲೂ ವಕ್ರನಾಗಿರುವಾಗಲೂ ಶುಕ್ಲಪಕ್ಷದಲ್ಲಿಯೂ ಬಲಿಷ್ಠನಾಗಿರುವನು.

ಸೌರಃ ಸಪ್ತರಶ್ಮಿಃ ಕೃಷ್ಣೋ ದೀರ್ಘೋ ವಾತಪ್ರಕೃತಿಃ ಪಾಪೋ ನಪುಂಸಕಃ ಕುಲಸ್ಯ ದುಃಖಂ ಪ್ರೇಷ್ಯಃ ಪಾರ್ಥಿವಾಭಿಮುಖಃ ತಸ್ಯಾ ಮೇವ ದಿಶಿ ರಾತ್ರೌ ವಕ್ರೇ ಶುಕ್ಲಪಕ್ಷೇ ಚ ಬಲವಾನಿತಿ ॥

ಸರ್ವೇ ಚ ಗ್ರಹಾಃ ಸ್ವಸಂವತ್ಸರೇ ಸ್ವಾಯನೇ ಸ್ವರ್ತೌ ಸ್ವಮಾಸೇ ಸ್ವಪಕ್ಷೇ ಸ್ವಹೋರಾಯಾಂ ಸ್ವವರ್ಗೇ ಬಲವಂತೋ ಭವಂತಿ ವರ್ಗೋತ್ತ ಮಸ್ಥಃ ಸ್ವೋಚ್ಚಸ್ಥಃ ಸ್ವತ್ರಿಕೋಣಸ್ಥಶ್ಚ ಗ್ರಹಯುದ್ಧೇ ಚ ಜಯೀ ರಶ್ಮಿವಪುರ್ಧರಶ್ಚ ಬಲವಾನ್ಭವತಿ ॥

ಆದಿತ್ಯಸ್ಯ ಚಂದ್ರಾಂಗಾರಕಜೀವಾ ಮಿತ್ರಾಣಿ ಬುಧಃ ಸಮಃ ಶುಕ್ರಸೌ-ರಾವರೀ ॥ ಚಂದ್ರಸ್ಯ ಸೂರ್ಯಬುಧೌ ಮಿತ್ರೇ ಶೇಷಾಃ ಸಮಾಃ ॥ ಭೌಮಸ್ಯ ಜೀವೇಂದೂಷ್ಣಕರಾಃ ಸುಹೃದಃ ಜ್ಞೋಽರಿಃ ಸಿತಾರ್ಕಜೌ ಸಮೌ, ಬುಧಸ್ಯ ಸೂರ್ಯಸಿತೌ ಮಿತ್ರೇ, ಹಿಮಗುಃ ಶತ್ರುಃ ಭೌಮ ಜೀವ ಶನೈಶ್ಚರಾಃ ಸಮಾಃ ॥

---

ಶನಿಯು ಏಳು ಕಿರಣಗಳುಳ್ಳವನು, ಕಪ್ಪುಬಣ್ಣ, ದೀರ್ಘವಾದ ದೇಹ. ವಾತ ಪ್ರಕೃತಿ, ಪಾಪಗ್ರಹ, ನಪುಂಸಕ, ಕಾಲಪುರುಷನ ದುಃಖ ಸ್ವರೂಪ, ಭೃತ್ಯ ಪಶ್ಚಿ ಮಾಭಿಮುಖ ಪಶ್ಚಿಮದಿಕ್ಕಿನಲ್ಲಿ ರಾತ್ರಿಯಲ್ಲಿಯೂ ವಕ್ರನಾಗಿರುವಾಗ ಶುಕ್ಲಪಕ್ಷ ದಲ್ಲಿಯೂ ಬಲಶಾಲಿಯಾಗಿರುವನು.

ಎಲ್ಲಾ ಗ್ರಹಗಳೂ ಸಹ ತಮ್ಮ ತಮ್ಮ ಸಂವತ್ಸರದ ಮತ್ತು ಅಯನ ಮತ್ತು ಋತು ಮತ್ತು ಮಾಸ ಮತ್ತು ಪಕ್ಷ ಮತ್ತು ದಿನ ಮತ್ತು ಹೋರಾ ಮತ್ತು ವರ್ಗ ಇವುಗಳನ್ನು ಹೊಂದಿದ್ದಲ್ಲಿ ಬಲಿಷ್ಠವಾಗುತ್ತವೆ. ಎಲ್ಲವೂ ಸ್ವಕೀಯವೇ ಆಗಿದ್ದಲ್ಲಿ ಬಲಿಷ್ಠವಾಗಿರುತ್ತವೆ ಎಂದು ತಾತ್ಪರ್ಯ ಮತ್ತು ವರ್ಗೋತ್ತಮ ಸ್ಥಾನದಲ್ಲಿಯೂ ತನ್ನ ಉಚ್ಚಸ್ಥಾನದಲ್ಲಿಯೂ ತನ್ನ ತ್ರಿಕೋಣ ಸ್ಥಾನದಲ್ಲಿಯೂ ಇರುವ ಗ್ರಹವು ಬಲಿಷ್ಠವಾಗುತ್ತದೆ. ಗ್ರಹಯುದ್ಧಸಮಯದಲ್ಲಿ ಜಯಶಾಲಿಯಾಗಿ ತನ್ನ ಕಿರಣ ಗಳೊಡನೆ ಕೂಡಿದ್ದಲ್ಲಿ (ಮಂದರಶ್ಮಿಯಾಗದೆ ಇದ್ದಲ್ಲಿ) ಅವೂ ಬಲಶಾಲಿಯಾಗುತ್ತದೆ

ಸೂರ್ಯನಿಗೆ ಚಂದ್ರ, ಅಂಗಾರಕ ಗುರು ಇವರು ಮಿತ್ರರಾಗುತ್ತಾರೆ. ಬುಧನ ಸಮನಾಗುತ್ತಾನೆ ಶುಕ್ರಶನಿಗಳು ಶತ್ರುಗಳು. ಚಂದ್ರನಿಗೆ ಸೂರ್ಯ, ಬುಧ ಇವರು ಮಿತ್ರರು ಉಳಿದವರೆಲ್ಲರೂ (ಅಂಗಾರಕ, ಗುರು, ಶುಕ್ರ, ಶನಿ) ಸಮವಾಗ

ಜೀವಸ್ಯ ಸೂರ್ಯೇಂದು ಭೌಮಾ ಮಿತ್ರಾಣಿ ರವಿಸುತೋ ಮಧ್ಯಃ ಸೌಮ್ಯ ಸಿತಾವರೀ,|| ಶುಕ್ರಸ್ಯ ಬುಧಸೌರೌ ಮಿತ್ರೇ ಭೌಮಜೀವೌ ಮಧ್ಯಸ್ಥೌ ಸೂರ್ಯೇಂದೂ ಅರೀ । ಸೌರಸ್ಯ ಬುಧಶುಕ್ರೌ ಮಿತ್ರೇ ಜೀವೋ ಮಧ್ಯಸ್ಥಃ । ಆದಿತ್ಯೇಂದುಕುಜಾ ರಿಪವಃ || ತತ್ಕಾಲೇಚ ಗ್ರಹಾದ್ಗ್ರಹೋ ದ್ವಿತೀಯ ತೃತೀಯತಾಮೇತಿ, ಮಧ್ಯಶ್ಚಾರಿತಾಂ ಅರಿರಮಿತ್ರತಾಂ ||

ತತ್ರ ಗರ್ಭಃ ಪ್ರಥಮಮಾಸಿ ಕಲಲಂ ಭವತಿ, ದ್ವಿತೀಯೆ ಘನೀ ಭವತಿ, ತೃತೀಯೇऽವಯವಾಶ್ಚಾಸ್ಯ ಭವಂತಿ, ಚತುರ್ಥೇऽಸ್ಥೀನಿ, ಪಂಚಮೇ ತ್ವಕ್, ಷಷ್ಠೇ ಬಲಂ ಸಪ್ತಮೇ ಲೋಮಾನಿ, ಅಷ್ಟಮೇ ಜ್ಞಾತ್ ನವಮೇ ಉದ್ವೇಗಃ, ದಶಮೇ ಪ್ರಸವಃ, ತತ್ರಾಸ್ಯಮಾಸಕ್ರಮೇಣ, ಶುಕ್ರಾಂಗಾರಕ ಬೃಹಸ್ಪತಿ ದಿವಾಕರ ಚಂದ್ರ ಸೌರ ಬುಧಾವಾ ||

---

ತ್ತಾರೆ. ಅಂಗಾರಕನಿಗೆ ಗುರು, ಚಂದ್ರ, ಸೂರ್ಯ ಇವರು ಮಿತ್ರರು, ಬುಧನು ಶತ್ರುವಾಗುತ್ತಾನೆ. ಶುಕ್ರ, ಶನಿಗಳು ಸಮವಾಗುತ್ತಾರೆ. ಬುಧನಿಗೆ ಸೂರ್ಯ, ಶುಕ್ರ ಇವರು ಮಿತ್ರರು, ಚಂದ್ರನು ಶತ್ರು, ಅಂಗಾರಕ, ಗುರು ಶನಿಗಳು ಸಮವಾಗುತ್ತಾರೆ.

ಗುರುವಿಗೆ ಸೂರ್ಯ ಚಂದ್ರರು ಮತ್ತು ಅಂಗಾರಕನೂ ಮಿತ್ರರಾಗುತ್ತಾರೆ. ಶನಿಯು ಮಧ್ಯಸ್ಥನಾಗುತ್ತಾನೆ. ಬುಧ ಶುಕ್ರರು ಶತ್ರುಗಳಾಗುತ್ತಾರೆ ಶುಕ್ರನಿಗೆ ಬುಧ ಮತ್ತು ಶನಿಗಳು ಮಿತ್ರರಾಗುತ್ತಾರೆ. ಅಂಗಾರಕ ಮತ್ತು ಗುರು ಇವರು ಮಧ್ಯಸ್ಥರು ಸೂರ್ಯಚಂದ್ರರು ಶತ್ರುಗಳಾಗುತ್ತಾರೆ. ಶನಿಗೆ ಬುಧ ಶುಕ್ರರು ಮಿತ್ರರು ಗುರುವು ಮಧ್ಯಸ್ಥನು, ಸೂರ್ಯ ಚಂದ್ರ ಅಂಗಾರಕ ಇವರು ಶತ್ರುಗಳಾಗುತ್ತಾರೆ. ಈ ಗ್ರಹಗಳು ತಾತ್ಕಾಲಿಕವಾಗಿ ಎರಡನೆಯದು ಮೂರನೆಯದಾಗಿಯೂ ಆಗುವುದುಂಟು, ಮಧ್ಯಸ್ಥಗ್ರಹವು ಶತ್ರುವೂ ಆಗುವುದುಂಟು, ಶತ್ರುವೂ ಮಿತ್ರನಾಗುವುದುಂಟು.

ಗ್ರಹಗಳ ಬಲಾಬಲಗಳಿಂದ ಚೇತನನಿಗೆ ಉಂಟಾಗುವ ಶುಭಾಶುಭಗಳನ್ನು ಗರ್ಭೋತ್ಪತ್ತಿಕಾಲಕ್ರಮದಿಂದ ನಿರೂಪಿಸುತ್ತಾರೆ. ಆಧಾನವಾದ ನಂತರ ಮೊದಲನೆಯ ತಿಂಗಳಿನಲ್ಲಿ ಗರ್ಭವು (ಶುಕ್ಲಶೋಣಿತಗಳ ಸಂಮಿಶ್ರಣದಿಂದ) ಕಲಲವೆಂಬ ರೂಪವನ್ನು ಹೊಂದುತ್ತದೆ ಎರಡನೆಯ ತಿಂಗಳಲ್ಲಿ ಅದು ಘನೀಭೂತವಾಗುತ್ತದೆ.

ಲಗ್ನಾಧಿಪತಿ ಚಂದ್ರಾರ್ಕಾಃ ಪತಯಃ ಆಧಾನಕಾಲೀಯಃ ಕಲುಷೋ ಭವತಿ ಸಃ ಸ್ವಮಾಸೇ ಗರ್ಭಪೀಡಾಂ ಕರೋತಿ ॥ ಯೋಽನ್ಯಗ್ರಹ ವಿಜಿತಃ ಕೇತೂಲ್ಕಾಭಿಹತಃ ಸಃ ಸ್ವಮಾಸೇ ಗರ್ಭಪಾತಾಯ ಭವತಿ ಜನ್ಮ ಲಗ್ನಪಂಚಮಷಷ್ಠಸಪ್ತಮಾಷ್ಟಮನವಮೇಷು ಚಂದ್ರಮಾಃ ಪಾಪಯುತಃ ಸೌಮ್ಯದೃಗ್ಯೋಗವರ್ಜಿತೋ ಸಾ ತಸ್ಯ ಮರಣಾಯ ಭವತಿ ॥

---

ಮೂರನೆಯ ಮಾಸದಲ್ಲಿ ಆ ಗರ್ಭಕ್ಕೆ ಅವಯವಗಳು ಅಂಕುರಿಸುತ್ತವೆ. ನಾಲ್ಕನೆಯ ತಿಂಗಳಲ್ಲಿ ಮೂಳೆಗಳು ಉಂಟಾಗುತ್ತವೆ. ಐದನೆಯ ತಿಂಗಳಲ್ಲಿ ಚರ್ಮವು ಹುಟ್ಟುತ್ತದೆ. ಆರನೆಯ ತಿಂಗಳಲ್ಲಿ ಬಲವುಂಟಾಗುತ್ತದೆ. ಏಳನೆಯ ತಿಂಗಳಲ್ಲಿ ಕೂದಲುಗಳು ಹುಟ್ಟುತ್ತವೆ. ಎಂಟನೆಯ ತಿಂಗಳಲ್ಲಿ ಹಸಿವು ಒಂಭತ್ತನೆಯ ತಿಂಗಳಲ್ಲಿ ಸುಖ ದುಃಖಜ್ಞಾನವೂ ಉಂಟಾಗಿ ಹತ್ತನೆಯ ತಿಂಗಳಲ್ಲಿ ಪ್ರಸವವುಂಟಾಗುತ್ತದೆ. (ಇಲ್ಲಿ ಬೃಹಜ್ಜಾತಕಾರರ ರೀತಿಯಿಂದ ಬಲ ಮತ್ತು ರೋಮಗಳು ಆರನೆಯ ತಿಂಗಳಲ್ಲಿ ಉಂಟಾಗುತ್ತವೆ ಎಂದೂ ಏಳನೆಯ ತಿಂಗಳಲ್ಲಿ ಚೈತನ್ಯವು ಮೂಡುತ್ತದೆ ಎಂದೂ ಮತಭೇದವು ಕಂಡುಬರುತ್ತದೆ. ಯವನೇಶ್ವರ ಗ್ರಂಥದಿಂದಲೂ ಸ್ವಲ್ಪಮಟ್ಟಿನ ಮತಭೇದವನ್ನು ಬೃಹಜ್ಜಾತಕದಲ್ಲಿ ನಿರೂಪಿಸಲಾಗಿದೆ ಇಂತಹ ಗರ್ಭಕ್ಕೆ ಪ್ರಥಮಾದಿ ಮಾಸಕ್ರಮದಿಂದ ಆಯಾಯ ಅವಯವಗಳ ಉತ್ಪತ್ತಿಗೆ ತಕ್ಕಂತೆ ಶುಕ್ರ, ಅಂಗಾರಕ, ಬೃಹಸ್ಪತಿ, ಸೂರ್ಯ, ಚಂದ್ರ, ಶನಿ, ಬುಧರು ಅಧಿಪತಿಗಳಾಗುತ್ತಾರೆ. ಈ ರೀತಿ ಮೊದಲಿನ ತಿಂಗಳಿಂದ ಏಳು ತಿಂಗಳವರಿಗೂ ಈ ಏಳು ಗ್ರಹಗಳ ಪ್ರಭುತ್ವದಿಂದ ಆಯಾಯ ಅವಯವಗಳು ಉತ್ಪನ್ನವಾಗುತ್ತವೆ.)

ಅನಂತರ ಎಂಟು ಒಂಭತ್ತು ಹತ್ತನೆಯ ತಿಂಗಳುಗಳಲ್ಲಿ ಆಧಾನಕಾಲದಲ್ಲಿನ ಲಗ್ನಕ್ಕೆ ಯಾರು ಅಧಿಪತಿಯಾಗಿರುವರೋ ಅಂತಹ ಗ್ರಹ ಮತ್ತು ಚಂದ್ರ, ಸೂರ್ಯ ಈ ಮೂವರು ಕ್ರಮೇಣ ಅಧಿಪತಿಗಳಾಗುತ್ತಾರೆ, ಎಂಟನೆಯ ತಿಂಗಳಿಗೆ ಅಧಿಪತಿಯಾದ ಆಧಾನಲಗ್ನಾಧಿಪತಿಯು ಆಧಾನಕಾಲದಲ್ಲಿ ಅಸ್ಪಷ್ಟನಾಗಿ ಮಲಿನನಾಗಿದ್ದಲ್ಲಿ ಅವನು ತನ್ನ ಮಾಸದಲ್ಲಿ ಆಗರ್ಭಕ್ಕೆ ಪೀಡೆಯನ್ನುಂಟುಮಾಡುತ್ತಾನೆ. ಹೀಗೆಯೇ ಇತರ ಗ್ರಹಗಳೂ ಆಧಾನಕಾಲದಲ್ಲಿ ಯಾವಗ್ರಹವು ಗ್ರಹಯುದ್ಧದಲ್ಲಿ ಸೋಲು ಪರಾಜಯಹೊಂದಿಯಾಗಲಿ ಕೇತುಗ್ರಹ ಮತ್ತು ಉಲ್ಕಾಪಾತ ಇವುಗಳಿಂದ ಆಕ್ರಮಿಸಲ್ಪಟ್ಟಾಗಲಿ ನಿಸ್ತೇಜಸ್ಕವಾಗಿದಲ್ಲಿ ಅಂತಹ ಪರಾಜಿತಗ್ರಹವು ತನ್ನ ಮಾಸದಲ್ಲಿ ಗರ್ಭಸ್ರಾವಕ್ಕೆ ಅಥವಾ ಪಾತಕ್ಕೆ ಕಾರಣವಾಗುತ್ತದೆ. ಜನ್ಮಲಗ್ನಕ್ಕೆ ಐದು, ಆರು,

ಲಗ್ನಚತುರ್ಥಸಪ್ತಮಾಷ್ಟಮೇಷು ಪಾಪದ್ವಯಮಧ್ಯಗತಶ್ಚ ಷಷ್ಠಾಷ್ಟಮಯೋಃ ಪಾಪದೃಷ್ಟೋಽಪಿ ಷಷ್ಠಾಷ್ಟಮಯೋರನ್ಯತಮೇ ಬುಧಜೀವಶುಕ್ರಾಣಾಮನ್ಯತಮೇನ ವಕ್ರಿಣಾ ಪಾಪೇನ ದೃಷ್ಟಃ ಸೌಮ್ಯಗ್ರಹೇಣ ಚಾದೃಷ್ಟೋ ಮರಣಾಯ ||

ಲಗ್ನಪಶ್ಚಾಂತೇ ಪಾಪಯುತಶ್ಚ ಯತ್ರ ತತ್ರ ರಾಶೌ ನವಮೋಂಶಃ ಪಾಪ ಸಂಧ್ಯಾಯಾಂ ಚಂದ್ರಹೋರಾ ಚ । ಚತ್ವಾರ್ಯಪಿ ಚ ಕೇಂದ್ರಾಣಿ ಯಮಾರ್ಕಚಂದ್ರಭೌಮಸೌರಾವೇತರೇ ಭಚಕ್ರಪೂರ್ವಾರ್ಧೇಽಪಾಪಾಃ ಪಶ್ಚಾರ್ಧೇ ಸೌಮ್ಯಾಃ ಕರ್ಕಟವೃಶ್ಚಿಕಾನ್ಯತಮೋದಯೇ ಚ ಕೇಂದ್ರಾಷ್ಟಮೇನೇತಿ ||

---

ಏಳು ಎಂಟು ಒಂಭತ್ತನೆಯ ಸ್ಥಾನಗಳಲ್ಲಿ ಚಂದ್ರನು ಪಾಪಗ್ರಹಗಳಿಂದ ಕೂಡಿದ್ದರೂ ಅಥವಾ ಸೌಮ್ಯಗ್ರಹಗಳ ದೃಷ್ಟಿಗೋಚರನಾಗದಿದ್ದರೂ ಸಹ ಆ ಗರ್ಭಕ್ಕೆ ಮರಣವನ್ನುಂಟುಮಾಡುತ್ತಾನೆ.

ಲಗ್ನಕ್ಕಿಂತ ನಾಲ್ಕು, ಏಳು, ಎಂಟು ಈ ಸ್ಥಾನಗಳಲ್ಲಿ ಚಂದ್ರನು ಎರಡು ಪಾಪಗ್ರಹಗಳ ಮಧ್ಯದಲ್ಲಿದ್ದರೂ ಮತ್ತು ಆರು ಎಂಟನೆಯ ಸ್ಥಾನಗಳಲ್ಲಿ ಪಾಪಗ್ರಹಗಳ ದೃಷ್ಟಿಯನ್ನು ಹೊಂದಿದ್ದರೂ, ಆರು ಮತ್ತು ಎಂಟು ಈ ಸ್ಥಾನಗಳಲ್ಲಿ ಯಾವುದಾದರೊಂದು ಸ್ಥಾನದಲ್ಲಿರುವ ವಕ್ರತೆಯಿಂದ ಪಾಪಿಗಳಾಗಿರುವ ಬುಧ, ಗುರು, ಶುಕ್ರ ಇವರಲ್ಲಿ ಯಾರಾದರೂ ಒಬ್ಬರಿಂದ ನೋಡಲ್ಪಟ್ಟಿದ್ದರೂ ಸೌಮ್ಯಗ್ರಹಗಳ ದೃಷ್ಟಿಗೆ ಗೋಚರವಾಗದೆಯೂ ಇದ್ದಲ್ಲಿ ಮರಣಕಾರಕನಾಗುತ್ತಾನೆ.

ಸಂಧ್ಯಾಕಾಲದಲ್ಲಿ ಜನನವಾದಲ್ಲಿ ಆ ಕಾಲದ ಲಗ್ನದ ಹೋರೆಯು ಚಂದ್ರಹೋರೆಯಾಗುತ್ತದೆ. ಆ ಸಮಯದಲ್ಲಿ ಸಂಭವಾನುಸಾರಲಗ್ನದ ಪಶ್ಚಾದ್ಭಾಗವನ್ನು ಹೊಂದಿರುವ ಪಾಪಗ್ರಹಗಳು ಯಾವ ರಾಶಿಯಲ್ಲಿರುತ್ತವೆಯೋ ಆ ರಾಶಿಯ ಅಂತ್ಯನವಾಂಶದಲ್ಲಿ ಪಾಪಗ್ರಹಗಳಿದ್ದಲ್ಲಿ ಹುಟ್ಟಿದ ಶಿಶುವಿಗೆ ಮರಣವುಂಟಾಗುತ್ತದೆ. ಮತ್ತು ಸೂರ್ಯ, ಚಂದ್ರ, ಅಂಗಾರಕ, ಶನಿ ಇವರು ನಾಲ್ಕುಕೇಂದ್ರಗಳನ್ನು (ಲಗ್ನ, ಚತುರ್ಥ, ಸಪ್ತಮ. ದಶಮ) ಪ್ರತ್ಯೇಕವಾಗಿ ಆಕ್ರಮಿಸಿದ್ದರೂ ಮತ್ತು ಭಚಕ್ರದ ಪೂರ್ವಾರ್ಧದಲ್ಲಿ ಪಾಪಗ್ರಹಗಳಿದ್ದು ಉತ್ತರಾರ್ಧದಲ್ಲಿ ಸೌಮ್ಯಗ್ರಹಗಳಿದ್ದರೂ, ಕರ್ಕಾಟಕ ಮತ್ತು ವೃಶ್ಚಿಕಗಳಲ್ಲಿ ಯಾವುದಾದರೊಂದು ಉದಯಹೊಂದಿ ಕೇಂದ್ರ ಮತ್ತು ಅಷ್ಟಮದಲ್ಲಿದ್ದರೂ ಸಹ ಹುಟ್ಟಿದ ಶಿಶುವಿಗೆ ಮರಣ ಉಂಟಾಗುತ್ತದೆ.

ಪಾಪೈಃ ಕ್ಷೀಣಚಂದ್ರೋದಯೇ ಚ[1] ಲಗ್ನಾನ್ಯಧರ್ಮಾಷ್ಟಮಸ್ಥೈಃ ಚಂಪ್ರ ಶನ್ಯೈಶ್ಚರಾರ್ಕಭೌಮ್ಯೈಃ ಜೀವೇ ಚ ಬಲಹೀನೇ ಚಂದ್ರಗ್ರಹೇಣ[2] ಕಾಲಃ ಸಕ್ರೂರೇ ಚಂದ್ರೇ ಲಗ್ನಗೇ ಭೌಮೇಽಷ್ಟಮೇ ಮಾತ್ರಾ ಸಹ ಮ್ರಿಯತೇ ಏವಂವಿಧೇರ್ಕೇ ಶಸ್ತ್ರೇಣ ||

ಏಕಮರಿಷ್ಟಾನ್ಯಷ್ಟವರ್ಷಾಂತರೇ ವಿದ್ಯಾತ್ | ಅಥ ತಾತ್ಕಾಲಿಕಸ್ಯ ಗ್ರಹಸ್ಯ ರಾಶಿಭಾಗಲಿಪ್ತಾ ಅಷ್ಟಶತಾಧಿಕ ಸಹಸ್ರಸಂಖ್ಯಾ ಹರಣಂ ಕಾರ್ಯಾ| ಭಗಣಾನಾಂ ದ್ವಾದಶಾವಶೇಷೇ ಮಾಸದಿನಘಟಿಕಾ ಭವಂತಿ|| ಲಗ್ನಾದ್ದ್ವಾದಶಸ್ಥಃ ಸರ್ವಮಪಹರತಿ ಏಕಾದಶಸ್ಥೋ ಅರ್ಧಂ ದಶಮಸ್ಥಃ ತ್ರ್ಯಂಶಂ ನವಮಸ್ಥಶ್ಚ ಚತುರ್ಥಂ ಅಷ್ಟಮಸ್ಥಃ ಪಂಚಮಂ ಸಪ್ತಮಸ್ಥಃ ಷಷ್ಠಮೇವಂ ಪಾಪಃ| ಸೌಮ್ಯಸ್ತದರ್ಧಂ ಬಹುಷ್ವೇ-ಕರ್ಕ್ಷಗೇಷು ಬಲವಾನೇವೈಕೋಂಗಾರಕವರ್ಜಂ ಶತ್ರುಸೌರವ-ರ್ಜಿತಾ ವಸ್ತುಮಿತಾಶ್ಚ (ಸರ್ವೇಶ್ವರೀವೇಧಂ[3]) ||

---

ಚಂದ್ರನು ಕ್ಷೀಣನಾಗಿದ್ದು ಪಾಪಗ್ರಹಗಳಿಂದ ಕೂಡಿ ಲಗ್ನದಲ್ಲಿದ್ದಲ್ಲಿ ಶನಿ ಸೂರ್ಯ ಅಂಗಾರಕರು ಹನ್ನೆರಡು, ಒಂಭತ್ತು, ಎಂಟು, ಈ ಸ್ಥಾನಗಳಲ್ಲಿ ಕ್ರಮವಾಗಿದ್ದಲ್ಲಿ ಗುರುವು ದುರ್ಬಲನಾಗಿದ್ದಲ್ಲಿಯೂ ಮತ್ತು ಇಂತಹ ಪಾಪಗ್ರಹಗಳೊಡನೆ ಚಂದ್ರನು ರಾಹುಗ್ರಸ್ಥನಾಗಿರುವಾಗಲೂ ಸಹ ಮತ್ತು ಲಗ್ನದಲ್ಲಿ ಚಂದ್ರನಿರುವಾಗ ಕ್ರೂರಗ್ರಹಗಳಿಂದ ಕೂಡಿ ಎಂಟನೆಯಸ್ಥಾನದಲ್ಲಿ ಅಂಗಾರಕನಿದ್ದರೂ ಸಹ ಆಶಿಶುವು ತಾಯಿಯೊಡನೆ ಮರಣಹೊಂದುತ್ತದೆ. ಇಂತಹ ಪಾಪಗ್ರಹಯೋಗವು ಸೂರ್ಯನಿಗೆ ಇದ್ದಲ್ಲಿ (ಶನಿ ಅಥವಾ ಬುಧ ಇವರೊಡನೆ ಕೂಡಿದ ಸೂರ್ಯನು ಲಗ್ನದಲ್ಲಿದ್ದು ರಾಹುಗ್ರಸ್ತನಾಗಿರುವಾಗ ಕುಜನು ಎಂಟನೆಯ ಸ್ಥಾನದಲ್ಲಿದ್ದಲ್ಲಿ ಎಂದು ತಾತ್ಪರ್ಯ) ಶಸ್ತ್ರದಿಂದ ಮರಣವು ಉಂಟಾಗುತ್ತದೆ.

ಮೇಲೆ ಹೇಳಿದ ಬಾಲಾರಿಷ್ಟಾದಿ ದೋಷಗಳು ಶಿಶುವಿನ ಅಷ್ಟಮ ವರ್ಷ ಪರ್ಯಂತವಾಗಿ ಫಲಕೊಡುವುವು ಅಲ್ಲಿಂದ ಮುಂದಿನ ಆಯುರ್ದಾಯವನ್ನು ಈ ರೀತಿ ಗಣಿತದಿಂದ ಸಾಧಿಸಬೇಕು. ಜಾತಕದ ರಾಶಿಕುಂಡಲಿಯಲ್ಲಿರುವ ಗ್ರಹಸ್ಥಾನಗಳನ್ನೂ ಸ್ಫುಟಗಣಿತದಿಂದ ಕಂಡುಹಿಡಿದು ಅದರಿಂದ ಮಯ ಯವನಾದಿಗಳ ಅಭಿಪ್ರಾಯದಂತೆ ಪೈಂಡಾಯುರ್ದಾಯವನ್ನು ಈ ರೀತಿ ಆನಯನ ಮಾಡಬೇಕು.

---

1 ಇಲ್ಲಿ ಲಗ್ನವ್ಯಯ ಧರ್ಮಾಷ್ಟಮಸ್ಥೈಃ ಎಂದು ಪಾಠವಿರಬೇಕು. 2 ಇಲ್ಲಿ ಚ ಎಂದಿರಬೇಕು.
3 ಮೂಲದಲ್ಲಿನ ಈ ಪಾಠವು ಹೆಚ್ಚಾಗಿಯೂ, ಅಸ್ಪಷ್ಟವಾಗಿಯೂ ತೋರುತ್ತದೆ

**ವರ್ಗೋತ್ತಮ ಸ್ವರಾಶಿದ್ರೇಕ್ಕಾಣಾಂಶಗತಶ್ಚ ದ್ವಿಗುಣಂ ಹಾನಿವೃದ್ಧೀವಾ**
**ಏಕಾಮೇವ ಮಹತೀಂ ಪ್ರಯಚ್ಛತಿ ಏವಂ ನಿರ್ಣೀತಮಾಯುರ್ಯೋ**

---

ಇಷ್ಟಗ್ರಹದಿಂದ ಅದರ ಉಚ್ಚಧ್ರುವಕವನ್ನು ಶೋಧಿಸಿ, ಬಂದ ರಾಶಿಭಾಗಲಿಪ್ತಿಗಳನ್ನು ಆಯಾ ಗ್ರಹಕ್ಕೆ ಉಕ್ತವಾಗಿರುವ ಪೈಂಡಾಯುಃ ಪರಮ ವತ್ಸರಗಳಿಂದ ಗುಣಿಸಿ, ಒಂದುಸಾವಿರ ಎಂಟುನೂರರಿಂದ ಭಾಗಿಸಿದರೆ ಬರುವ ಲಬ್ಧವು ವರ್ಷಾತ್ಮಕವಾದ ಆಯುರ್ದಾಯವೆನಿಸಿಸುವುದು.

ಭಿನ್ನರಾಶಿಯನ್ನು ಹನ್ನೆರಡರಿಂದ ಗುಣಿಸಿ, ತಿಂಗಳನ್ನೂ, ಮೂವತ್ತರಿಂದ ಗುಣಿಸಿದಿನವನ್ನು ಹಾಗೆಯೇ ಅರವತ್ತರಿಂದ ಗುಣಿಸಿ ಘಟಿಕಾದಿಗಳನ್ನೂ ನಿರ್ಧರಮಾಡಿಕೊಳ್ಳಬೇಕು. ಹಾಗೆ ಬಂದ ಆಯುರ್ದಾಯದಲ್ಲಿ, ಪಾಪಗ್ರಹವು ಲಗ್ನಾಪೇಕ್ಷಯಾ ಹನ್ನೆರಡನೆಯ ಭಾಗದಲ್ಲಿದ್ದರೆ, ಅದರ ಆಯುರ್ದಾಯವು ಸರ್ವಶೂನ್ಯವಾಗುವುದು. ಹಾಗೆಯೇ ಹನ್ನೊಂದು, ಹತ್ತು, ಒಂಭತ್ತು, ಎಂಟು, ಏಳು, ಆರು, ಈ ಸ್ಥಾನಗಳಲ್ಲಿದ್ದರೆ ಕ್ರಮವಾಗಿ ಪಾಪಗ್ರಹಗಳು ಅರ್ಧ, ಮೂರನೆಯ ಒಂದುಭಾಗ, ನಾಲ್ಕನೆಯ ಒಂದುಭಾಗ, ಐದನೆಯ ಒಂದುಭಾಗ, ಆರನೆಯ ಒಂದುಭಾಗ, ಹೀಗೆ ತಮ್ಮ ಆಯುರ್ದಾಯವರ್ಷಗಳಲ್ಲಿ ಕಡಿಮೆಯಾಗಿ ಕೊಡುತ್ತವೆ. ಶುಭಗ್ರಹಗಳು ಮೇಲೆ ಹೇಳಿದ ಸ್ಥಾನಗಳಲ್ಲಿದ್ದರೆ ಪಾಪಗ್ರಹಗಳ ಅರ್ಧದಷ್ಟು ಫಲವನ್ನು ಅವು ಕಳೆದುಕೊಡುತ್ತವೆ. ಆದರೆ ಒಂದೇ ಸ್ಥಾನದಲ್ಲಿ ಅನೇಕ ಗ್ರಹಗಳಿದ್ದರೆ, ಅದರಲ್ಲಿ ಬಲಿಷ್ಠವಾದ ಗ್ರಹವೊಂದು ಮಾತ್ರ ತನಗೆ ಉಕ್ತವಾಗಿರುವಷ್ಟು ವರ್ಷಗಳನ್ನು ಕಳೆದುಕೊಡುತ್ತದೆ. ಮಿಕ್ಕ ಗ್ರಹಗಳಿಗೆ ಹರಣವಿಲ್ಲ. ಇದಕ್ಕೆ ಚಕ್ರಾರ್ಧಹರಣವೆಂದು ಹೆಸರು. ಇನ್ನು ಶತ್ರುಕ್ಷೇತ್ರಹರಣಮಾಡಬೇಕು. ಕುಜನೊಬ್ಬನನ್ನು ಬಿಟ್ಟು ಉಳಿದ ಗ್ರಹಗಳು ಶತ್ರುಕ್ಷೇತ್ರದಲ್ಲಿದ್ದರೆ ಆ ಗ್ರಹಗಳ ಆಯುರ್ದಾಯದಲ್ಲಿ ಮೂರನೆಯ ಒಂದು ಭಾಗವು ಕಮ್ಮಿಯಾಗುವುದು. ಮತ್ತು ಬುಧಶುಕ್ರರನ್ನು ಬಿಟ್ಟು ಉಳಿದ ಗ್ರಹಗಳು ಅಸ್ತರಾಗಿದ್ದರೆ, ಅವರ ಆಯುರ್ದಾಯದಲ್ಲಿ ಅರ್ಧಭಾಗವು ನ್ಯೂನವಾಗುತ್ತದೆ.

ಸತ್ಯಾಚಾರ್ಯರ ಅಭಿಪ್ರಾಯದಂತೆ ಗ್ರಹಗಳಿಂದ ಅಂಶಾಯುರ್ದಾಯವನ್ನು ಆನಯನ ಮಾಡಬೇಕಾದರೆ ಹಿಂದೆ ಹೇಳಿದ ಹರಣದಂತೆ, ಬಲಿಷ್ಠವಾದ ಗ್ರಹಗಳಿಗೆ ಭರಣವನ್ನೂ ಕಂಡುಹಿಡಿಯಬೇಕು. ಗ್ರಹವು, ವರ್ಗೋತ್ತಮ, ಸ್ವಕ್ಷೇತ್ರ,

---

(ವಿ. ಸೂ. ಇಲ್ಲಿ ಪೈಂಡಾಯುಷ್ಪಂವತ್ಸರಗಳನ್ನು ಗ್ರಂಥಕಾರರು ಹೇಳಿಲ್ಲ ಅದನ್ನು ಫಲಗ್ರಂಥಗಳಿಂದ ತಿಳಿದುಕೊಳ್ಳಬೇಕು)

**ವದ್ಯೇನ ಗ್ರಹೇಣ ದತ್ತಂ ತಾವತ್ಕಾಲಂ ತದಂಶಾಜ್ಞೇಯಾ ಲಗ್ನಾ-ದ್ದಶಾ ಚ ಗ್ರಹವದ್ಬಲವಾಂಶ್ಚ ಲಗ್ನಂ ಭಕ್ತರಾಶಿ ತುಲ್ಯಾನಿ ವರ್ಷಾಣ್ಯನ್ಯಾನಿ ಪ್ರಯಚ್ಛತಿ । ದಶಾ ಚ ಲಗ್ನಾರ್ಕ ಚಂದ್ರಾಣಾಂ ಬಲವತಃ ಪ್ರಥಮಾ ಭವತಿ ತತಸ್ತತ್ಕಂಟಕಸ್ಥಾನಂ ಬಲವತ್ಕ್ರಮೇಣೈವ ತತಃ ಫಣಪರಗತಾನಾಂ ತತ ಆಪೋಕ್ಲಿಮಗತಾನಾಮಿತಿ ॥**

ಸ್ವದ್ರೇಕ್ಕಾಣ ಇವುಗಳಲ್ಲಿದ್ದರೆ ಗ್ರಹದತ್ತವಾದ ಆಯುಸ್ಸು ದ್ವಿಗುಣಿತವಾಗಿ ಬರುವುದು ಹೀಗೆಯೇ ಉಚ್ಚಾದಿರಾಶಿಗಳಲ್ಲಿದ್ದು ಗ್ರಹ ಅತ್ಯಂತ ಬಲಿಷ್ಠವಾಗಿದ್ದರೆ ತ್ರಿಗುಣಿತವಾ ಆಯುರ್ದಾಯವು ಲಭಿಸುವುದು. ಹಿಂದೆ ಹೇಳಿದಂತೆ ಈ ಅಂಶಾಯುರ್ದಾಯ ದಲ್ಲಿಯೂ ಹರಣಾದಿಗಳುಂಟು. ಒಂದೇ ಗ್ರಹಕ್ಕೆ ಹರಣಭರಣಗಳೆರಡೂ ಒದಗಿದ ಅದರಲ್ಲಿ ಅಧಿಕವಾದ ಹರಣವನ್ನಾಗಲಿ, ಭರಣವನ್ನಾಗಲಿ ಅನಯನಮಾಡಬಹುದ ಇದರಲ್ಲಿ ಲಗ್ನಬಲದಿಂದ ಆಯುರ್ದಾಯವನ್ನು ಸಾಧಿಸುವಕ್ರಮವು, ಬೇರೆಯಾಗಿ ವುದು ಲಗ್ನದಲ್ಲಿ ಎಷ್ಟು ನವಾಂಶಗಳು ಕಳೆದಿವೆಯೋ ಅಷ್ಟು ವರ್ಷಗಳನ್ನೆ ಆಯುಃ ಫಲವನ್ನಾಗಿ ಕೊಡುತ್ತದೆ. ಇದಕ್ಕೂ ಗ್ರಹಗಳಿಗೆ ಹೇಳಿದಂತೆ ಕ್ರೂರೋ ದಯ ಹರಣಾದಿಗಳುಂಟು. ಹೀಗೆ ಅನೇಕ ರೀತಿಯಿಂದ ಉಕ್ತವಾಗಿರು ಆಯುರ್ದಾಯ ಗಣಿತದಿಂದ ಸರ್ವಾಯುರ್ದಾಯವು ನಿಶ್ಚಯವಾದ ಮೇಲೆ ಶುಭ ಶುಭಫಲಗಳನ್ನು ಕೊಡುವ ಗ್ರಹದ ದಶಾವರ್ಷಗಳನ್ನು ತಿಳಿಯಬೇಕು. (ಉಡು ಶಾದಿಯೇ ಮೊದಲಾದ ಅನೇಕರೀತಿಯ ದಶಾವತ್ಸರಗಳು ಉಕ್ತವಾಗಿದ್ದರೂ ವರಾಹಮಿಹಿರಾಚಾರ್ಯರಿಗೆ ಸಮ್ಮತವಾದ ದಶಾಕ್ರಮವನ್ನೇ ಈ ಗ್ರಂಥಕಾರ ಒಪ್ಪಿರುತ್ತಾರೆ.) ಜಾತಕದಲ್ಲಿ ಲಗ್ನ, ಸೂರ್ಯ, ಚಂದ್ರ ಇವರಲ್ಲಿ ಯಾರು ಬಲಿಷ ರಾಗಿರುವರೋ ಅವರ ಅಯುರ್ದಾಯವರ್ಷಗಳೇ ಅದರ ದಶಾವರ್ಷಗಳಾ ಪರಿಣಮಿಸುವುವು. ಅದನ್ನೇ ಆಜಾತಕನಿಗೆ ಪ್ರಥಮದಶೆಯೆಂದು ಭಾವಿಸಬೇಕ ಅನಂತರ ಅದಕ್ಕೆ ಕೇಂದ್ರಗಳಲ್ಲಿರುವ ಬಲಿಷ್ಠಗ್ರಹದ ದಶೆಯು ಎರಡನೆಯದಾಗಿಯೂ ಫಣಪರ, ಆಪೋಕ್ಲೀಮರಾಶಿಸ್ಥವಾದ ಬಲಿಷ್ಠಗ್ರಹದ ದಶೆಯು ಅದಕ್ಕೆ ಮುಂದೆಯ ನಡೆಯುತ್ತಾ ಫಲಕೊಡುವುವು. (ಲಗ್ನಕ್ಕೆ 4–7–10 ನೇ ರಾಶಿಗಳಿಗೆ ಕೇಂ ವೆಂದೂ, 5–8–11 ನೇರಾಶಿಗಳಿಗೆ ಫಣಪರಸ್ಥಾನಗಳೆಂದೂ, 6-9-12ನೇ ರಾ ಗಳಿಗೆ ಆಪೋಕ್ಲಿಮಸ್ಥಾನಗಳೆಂದೂ ಶಾಸ್ತ್ರದಲ್ಲಿ ಸಂಕೇತವಿದೆ.)

**ತತ್ರೋಚ್ಚ ತ್ರಿಕೋಣ ಸ್ವಕ್ಷೇತ್ರವರ್ಗೋತ್ತಮಗತಸ್ಯ ಶುಭಾ ವಿಪರೀತಸ್ಯ ಚಾಶುಭಾ ಲಗ್ನದಶಾ। ಲಗ್ನಪಗ್ರಹವಶೇನಾಗ-ತಸ್ಯೈಕ ರಾಶಿಗೋಗ್ರಹೋ ವಮಾನನಿದಮ್ಯ[1] ಸ್ವಗುಣಾನಸಾ ಪತಿ ನವಮ ಪಂಚಮಗಸ್ತ್ರೃತೀಯೇನ, ಚತುರ್ಥಗಶ್ಚ ತುರ್ಥೇನ ಸಪ್ತಮಗಸ್ಸಪ್ತಮಗೇನ ಬಹುಷು ಏಕೋಽವ-ಯವೋ। ಅಥ ಅನ್ಯದಶಾಯಾಮಷ್ಟಮಗ್ರಹವಶೇನ ಮ್ರಿಯತೇ ತತ್ರಾರ್ಕೇಣಾಗ್ನಿನಾ ಚಂದ್ರಮಸಾ ಸಲಿಲೇನ ಭೌಮೇನ ಶಸ್ತ್ರೇಣ ಬುಧೇನ ಜ್ವರೇಣ, ಜೀವೇನಾಮಯೇನ, ಶುಕ್ರೇಣ, ಕೃಷ್ಣಯಾ, ಸೌರೇಣ ಕ್ಷುಧಾ, । ಅಷ್ಟಮಂ ಗ್ರಹರಹಿತಂ ಯೋ ಗ್ರಹೋ ಬಲವಾನ್ ಪಶ್ಯತಿ ತದ್ಧಾತುಕಾಯೇನ ಮ್ರಿಯತೇ ಅಷ್ಟಮೇ ಗ್ರಹಯೋಗದೃಗ್ರಹಿತೇ ದ್ವಾವಿಂಶ ದ್ರೇಕ್ಕಾಣಾಧಿ-ಪತಿಕಥಿತಮೃತ್ಯುನಾ ಮ್ರಿಯತೇ ।**

---

ಉಚ್ಚ ಮೂಲತ್ರಿಕೋಣ, ಸ್ವಕ್ಷೇತ್ರ, ವರ್ಗೋತ್ತಮಾಂಶ ಇವುಗಳಲ್ಲಿರುವ ಗ್ರಹದ ದೆಶೆಯು ಶುಭಫಲವನ್ನೂ ತದ್ವಿರುದ್ಧ ಸ್ಥಾನಗಳಲ್ಲಿರುವ ಗ್ರಹಗಳು ಅನಿಷ್ಟ ಫಲವನ್ನೂ ಒದಗಿಸುವುವು. ಲಗ್ನವಾದರೋ ಲಗ್ನಾಧಿಪತಿಯ ಬಲಾಬಲಗಳಂತೆ ಫಲಕೊಡುವುದು ಒಂದೇ ರಾಶಿಯಲ್ಲಿ ಅನೇಕ ಗ್ರಹಗಳಿದ್ದರೆ ಅದರಲ್ಲಿ ಬಲಿಷ್ಠರಾದವರ ದಶೆಯೂ ಆರಂಭವಾಗುವುದು. ಆ ದಶಾಧಿಪತಿಗೆ ನವಮ ಪಂಚಮಗಳಾದ ತ್ರಿಕೋಣಸ್ಥಾನದಲ್ಲಿರುವ ಗ್ರಹವು ಆ ದಶಾವರ್ಷಗಳ ಮೂರನೆಯ ಒಂದು ಭಾಗ ಕಾಲದಲ್ಲಿ ಭುಕ್ತಿಫಲವನ್ನು ಕೊಡುವುದು ಚತುರ್ಥಸ್ಥವಾದ ಗ್ರಹವು ನಾಲ್ಕನೆಯ ಒಂದು ಪಾಲಿನಷ್ಟು ಕಾಲದಲ್ಲಿ ಅಂತರ್ಭುಕ್ತಿಫಲವನ್ನೂ ಸಪ್ತಮರಾಶಿ ಸ್ಥಿತವಾದಗ್ರಹವು ಏಳನೆಯ ಒಂದು ಭಾಗದಲ್ಲಿ ಅಂತರಾಂತರ ಭುಕ್ತಿಯ ಫಲವನ್ನೂ ಕೊಡುವುದು. ಮನುಷ್ಯನ ಮರಣಕಾಲವನ್ನೂ, ಮರಣರೀತಿಯನ್ನೂ ನಿಶ್ಚಯಿಸಬೇಕಾದರೆ ಅಷ್ಟಮ ರಾಶಿಸ್ಥವಾದ ಗ್ರಹಸ್ಥಿತಿಯನ್ನೂ ನೋಡಬೇಕು. ಅಷ್ಟಮ ರಾಶಿಯಲ್ಲಿ ಸೂರ್ಯನಿದ್ದರೆ ಅಗ್ನಿಯಿಂದಲೂ, ಚಂದ್ರನಿದ್ದರೆ ನೀರಿನಿಂದಲೂ ಮೃತಿಹೊಂದುವನೆಂದು ತಿಳಿಯಬೇಕು. ಹಾಗೆಯೇ ಕುಜನಿಗೆ ಶಸ್ತ್ರ, ಬುಧನಿಗೆ ಜ್ವರ, ಗುರುವಿಗೆ ವ್ಯಾಧಿ ಶುಕ್ರನಿಗೆ ಪಿಪಾಸಾರೋಗ, ಶನಿಗೆ ಹಸಿವಿನ ಬಾಧೆ, ಇವು ಮರಣಸಾಧಕಗಳಾಗಿ ಏರ್ಪಟ್ಟಿವೆ. ಆ ಅಷ್ಟಮ ರಾಶಿಯಲ್ಲಿ ಯಾವ ಗ್ರಹವೂ ಇಲ್ಲದಿದ್ದರೆ ಆ ರಾಶಿಯನ್ನು ನೋಡುವ ಗ್ರಹದಿಂದ

---

1 ಇಲ್ಲಿ ಮೂಲಗ್ರಂಥವು ಅಶುದ್ಧವಾಗಿದೆ.

**ಜನ್ಮಕಾಲೇ ಯತ್ರ ಸ್ಥಾನೇಕರ್ೋವ್ಯವಸ್ಥಿತಸ್ತಸ್ಮಾತ್ ಸ್ಥಾನಾತ್ತೃ-
ತೀಯ ಷಷ್ಠದಶಮೈಕಾದಶೇಷು, ಭೌಮಸ್ಥಾನಾತ್ಪ್ರಥಮ
ದ್ವಿತೀಯಚತುರ್ಥ ಸಪ್ತಮಾಷ್ಟಮನವಮದಶಮೈಕಾದಶೇಷು
ಬುಧಾತ್ ತೃತೀಯ ಪಂಚಮಷಷ್ಠನವಮದಶಮೈಕಾದಶ
ದ್ವಾದಶೇಷು, ಜೀವಾತ್ ಪಂಚಮಷಷ್ಠನವಮೈಕಾದಶೇಷು,
ಶುಕ್ರಾತ್ ಷಟ್ಸಪ್ತದ್ವಾದಶೇಷು, ಶನೈಶ್ಚರಾತ್ಪ್ರಥಮ
ದ್ವೀತಿಯಚತುರ್ಥಸಪ್ತಮಾಷ್ಟಮನವಮದಶೈಕಾದಶೇಷು,
ಲಗ್ನಾತ್ತೃತೀಯ ಚತುರ್ಥಷಷ್ಠದಶಮೈಕಾದಶದ್ವಾದಶೇಷುಸ್ಥಿ॥**

ಫಲವನ್ನೂಹಿಸಬೇಕು. ದೃಷ್ಟಿ ಮತ್ತು ಯೋಗ ಇವೆರಡೂ ಆ ರಾಶಿಗೆ ಸಂಬಂಧಿ ದಿದ್ದರೆ ಇಪ್ಪತ್ತೆರಡನೆಯ ದ್ರೇಕ್ಕಾಣಾಧಿಪತಿಯಿಂದ ಮರಣವನ್ನು ತಿಳಿಯಬೇಕ

ಈಗ ಅಷ್ಟಕವರ್ಗದಿಂದ ಗ್ರಹಗಳ ಬಲಾಬಲಗಳನ್ನರಿತು, ಗೋಚಾ ಫಲವನ್ನು ತಿಳಿಯುವ ಕ್ರಮವು ವಿವರಿಸಲ್ಪಡುವುದು. ಲಗ್ನಸಹಿತವಾದ ಸೂರ್ಯಾ ಸಪ್ತಗ್ರಹಗಳೇ ಅಷ್ಟಕ. ಜನನಕಾಲದ ಗ್ರಹಕುಂಡಲಿಯಲ್ಲಿ ಲಗ್ನ, ಗ್ರಹಗ ಇರುವ ಸ್ಥಾನಗಳನ್ನೇ ಸ್ವಸ್ಥಾನಗಳೆಂದು ಕಲ್ಪಿಸಿಕೊಂಡು, ಅಲ್ಲಿಂದ ಮುಂದೆ ಆಯ ಗ್ರಹಗಳಿಗೆ ಉಕ್ತವಾಗುವ ರಾಶಿಗಳಲ್ಲಿ, ರಾಶಿಚಕ್ರ ಕ್ರಮದಿಂದ ಬಿಂದುವಿನ್ಯಾ ಮಾಡಬೇಕು. ಅನುಕ್ತಸ್ಥಾನಗಳಲ್ಲಿ ರೇಖಾವಿನ್ಯಾಸಮಾಡಬೇಕು. ಹೀಗೆ ಸಲ ಗ್ರಹಗಳ ಸ್ಥಾನಗಳಿಂದ ಆರಂಭಿಸಿ ಸೂರ್ಯನು ಕೊಟ್ಟ ಬಿಂದುಗಳು ಯಾವ ಯಾ ರಾಶಿಯಲ್ಲಿ ಎಷ್ಟಾಗುವುವೋ, ಅದರಿಂದ ಆ ಗ್ರಹಕ್ಕೆ ಬಲವನ್ನೂಹಿಸಿಕೊಂಡ ಗೋಚಾರಫಲವನ್ನು ನಿಶ್ಚಯಿಸಿಕೊಳ್ಳಬೇಕು. ಬಿಂದುಗಳೂ, ರೇಖೆಗಳೂ ಸೇ ಪ್ರತಿಯೊಂದು ಗ್ರಹಕ್ಕೂ ಎಂಟು ಸಂಖ್ಯೆಯನ್ನು ತೋರಿಸುವುವು. ಅದರಲ್ಲಿ ಬಿಂ ರೇಖೆಗಳು ಸಮವಾದರೆ, ಶುಭಾಶುಭಫಲವು ಸಮವಾಗುವುದು. ಬಿಂದುವಿನಿಂ ಶುಭಾಧಿಕ್ಯವೂ, ರೇಖೆಗಳಿಂದ ಅಶುಭಾಧಿಕ್ಯವೂ ಲಭಿಸುವುದು. ಪ್ರಕೃ ಸೂರ್ಯಾಷ್ಟಕವರ್ಗವು ಈ ರೀತಿ ಏರ್ಪಡುವುದು.

ಸೂರ್ಯನು ತಾನಿರುವ ರಾಶಿಯಿಂದ ೩-೬-೧೦-೧೧ ನೇ ಮನೆಗಳಲ್ಲಿಯೂ ಕುಜಸ್ಥಾನದಿಂದ ೧-೨-೪-೭-೮-೯-೧೦-೧೧ ನೇ ಸ್ಥಾನದಲ್ಲಿಯೂ, ಬುಧಸ್ಥಾನದಿಂ ೩-೫-೬-೯-೧೦-೧೧-೧೨ ನೇ ಕಡೆಗಳಲ್ಲಿಯೂ, ಗುರುಸ್ಥಾನದಿಂದ ೫-೬-೯-೧

**ಚಂದ್ರಾರ್ಕಸ್ಥಾನಾತ್ ತೃತೀಯಸಪ್ತಮಾಷ್ಟಮ ದಶಮೈಕಾದಶೇಷು, ಸ್ವಾತ್ಪ್ರಥಮ ತೃತೀಯಷಷ್ಠಸಪ್ತಮದಶಮೈಕಾದಶೇಷು, ಶುಕ್ರಾತ್ತೃತೀಯ ಚತುರ್ಥ ಪಂಚಮ ನವಮೈಕಾದಶೇಷು ಭೌಮಾ-ರ್ಕಾರ್ಕ ತೃತೀಯಪಂಚಮಷಷ್ಠದಶಮೈಕಾದಶೇಷು ಸ್ವಾತ್ ಪ್ರಥಮದ್ವಿತೀಯಚತುರ್ಥಸಪ್ತಮಾಷ್ಟಮದಶಮೈಕಾದಶೇಷು ಬುಧಾತ್ತೃತೀಯಪಂಚಮಷಷ್ಠದಶಮೈಕಾದಶದ್ವಾದಶೇಷು ಶುಕ್ರಾತ್ ಷಷ್ಠಾಷ್ಟಮೈಕಾದಶದ್ವಾದಶೇಷು ಸೌರಾತ್ಪ್ರಥಮ ಚತುರ್ಥಸಪ್ತಮಾಷ್ಟಮದಶಮೈಕಾದಶೇಷು ಲಗ್ನಾತ್ಪ್ರಥಮ ತೃತೀಯ ಷಷ್ಠದಶಮೈಕಾದಶೇಷು ॥**

---

ರಲ್ಲಿಯೂ, ಶುಕ್ರನಿಂದ ೬–೭–೧೨ ರಲ್ಲಿಯೂ, ಶನಿಯಿಂದ ೧-೨-೪-೫-೮-೯-೧೦-೧೧ ರಲ್ಲಿಯೂ, ಲಗ್ನದಿಂದ ೩–೪–೬–೧೦–೧೧–೧೨ ರಲ್ಲಿಯೂ ಬಿಂದುಫಲ (ಶುಭಫಲ) ವನ್ನೂ ಉಳಿದೆಡೆಗಳಲ್ಲಿ ಅಶುಭಫಲವನ್ನೂ ಕೊಡುವುದು.

ವಿ. ಸೂ.—(ಇಲ್ಲಿ ಚಂದ್ರನಿಂದ ಸ್ಥಾನಗಳನ್ನು ಗ್ರಂಥಕಾರರು ಕೈಬಿಟ್ಟಿರುವರು ಇತರ ಗ್ರಂಥಗಳಿಂದ ಚಂದ್ರಾತ್ ಸ್ಥಾನಗಳನ್ನೂ ತಿಳಿಯಬೇಕು. ಮತ್ತು ಬೃಹಜ್ಜಾತಕವೇ ಮೊದಲಾದ ಫಲಗ್ರಂಥಗಳಲ್ಲಿ ಹೇಳಿರುವ ಕ್ರಮಕ್ಕೂ, ಇಲ್ಲಿಯ ಕ್ರಮಕ್ಕೂ ಅಲ್ಪಸ್ವಲ್ಪ ವ್ಯತ್ಯಾಸವಿದೆ.)

ಚಂದ್ರಾಷ್ಟಕ ವರ್ಗದಲ್ಲಿ ಚಂದ್ರನಿಗೆ ಸೂರ್ಯಸ್ಥಾನದಿಂದ ೩-೭-೮-೧೦-೧೧ನೇ ಮನೆಗಳಲ್ಲಿಯೂ, ತನ್ನಸ್ಥಾನದಿಂದ ೧–೩–೬–೭–೧೦–೧೧ರಲ್ಲಿಯೂ, ಶುಕ್ರನಿಂದ ೩–೪–೫–೯–೧೧ ಈ ಸ್ಥಾನಗಳಲ್ಲಿ ಕುಜಾಷ್ಟಕವರ್ಗದಲ್ಲಿ ಸೂರ್ಯಸ್ಥಾನದಿಂದ ೩-೫-೬-೧೦-೧೧ರಲ್ಲಿಯೂ, ಸ್ವಸ್ಥಾನದಿಂದ ೧–೨–೪–೭–೮–೧೦–೧೧ ರಲ್ಲಿಯೂ, ಬುಧಸ್ಥಾನದಿಂದ ೩-೫-೬-೧೦-೧೧-೧೨ರಲ್ಲಿಯೂ, ಶುಕ್ರಸ್ಥಾನದಿಂದ ೬-೮-೧೧-೧೨ ರಲ್ಲಿಯೂ, ಶನಿಸ್ಥಾನದಿಂದ ೧-೪-೭-೮-೧೦-೧೧ರಲ್ಲಿಯೂ, ಲಗ್ನಸ್ಥಾನದಿಂದ ೧-೨-೬-೧೦-೧೧ರಲ್ಲಿಯೂ ಬಿಂದು ವಿನ್ಯಾಸ ಮಾಡಬೇಕು. (ಇಲ್ಲಿ ಅನೇಕ ಗ್ರಹಸ್ಥಾನಗಳನ್ನು ಬಿಟ್ಟಿರುವರು ಗ್ರಂಥಾಂತರಗಳಿಂದ ತಿಳಿಯಬೇಕು)

ಬುಧಾರ್ಕಾತ್ಪಂಚಮ ಷಷ್ಠಾಷ್ಟಮ ನವಮ್ಯೈಕಾದಶೇಷು, ಚಂದ್ರಾ-
ದ್ದ್ವಿತೀಯ ಚತುರ್ಥ ಷಷ್ಠಾಷ್ಟಮ ದಶಮ್ಯೈಕಾದಶೇಷು,
ಭೌಮಾತ್ಪ್ರಥಮ ದ್ವಿತೀಯ ಚತುರ್ಥ ಸಪ್ತಮಾಷ್ಟಮ ನವ-
ಮ್ಯೈಕಾದಶೇಷು, ಸ್ವಾತ್ಪ್ರಥಮ ತೃತೀಯ ಪಂಚಮ ಷಷ್ಠ
ನವಮ್ಯೈಕಾದಶ ದ್ವಾದಶೇಷು ಶುಭಃ। ಜೀವಾತ್ ಷಷ್ಠಾಷ್ಟಮ್ಯೈ-
ಕಾದಶ ದ್ವಾದಶೇಷು ಶುಭಃ । ಶುಕ್ರಾತ್ಪ್ರಥಮ ತೃತೀಯ
ಚತುರ್ಥ ಪಂಚಮಾಷ್ಟಮ ನವಮ್ಯೈಕಾದಶೇಷು, ಸೌರಾತ್ಪ್ರ-
ಥಮ ದ್ವಿತೀಯ ಚತುರ್ಥ ಸಪ್ತಮಾಷ್ಟಮ ನವಮ ದಶಮ್ಯೈ-
ಕಾದಶೇಷು, ಲಗ್ನಾತ್ಪ್ರಥಮ ದ್ವಿತೀಯ ಚತುರ್ಥ ಷಷ್ಠಾ-
ಷ್ಟಮ ದಶಮ್ಯೈಕಾದಶೇಷು, ಜೀವೋರ್ಕಾತ್ಪ್ರಥಮ ದ್ವಿತ್ರಿ
ಚತುರ್ಥ ಸಪ್ತಮಾಷ್ಟಮ ದಶಮ್ಯೈಕಾದಶೇಷು, ಧರ್ಮಾದ್ದ್ವಿ-
ತೀಯ ಪಂಚಮ ಸಪ್ತಮ ನವಮ್ಯೈಕಾದಶೇಷು, ಭೌಮಾ-
ತ್ಪ್ರಥಮ ದ್ವಿತ್ರಿ ಚತುಃ ಸಪ್ತಾಷ್ಟ ದಶಮ್ಯೈಕಾಪಶೇಷು,
ಬುಧಾತ್ ಪ್ರಥಮ ದ್ವಿ ಚತುಃ ಪಂಚಷಡ್ದಶೈಕಾದಶೇಷು,
ಜೀವಾತ್ ಪ್ರಥಮ ದ್ವಿತ್ರಿ ಚತುಸ್ಸಪ್ತಾಷ್ಟ ದಶಮ್ಯೈಕಾದಶೇಷು
ಶುಕ್ರಾತ್ ದ್ವಿಪಂಚಷಣ್ಣವ ದಶೈಕಾದಶೇಷು, ಸೌರಾತ್ರಿ ಪಂಚ
ಸಪ್ತ ದಶೈಕಾದಶೇಷು, ಲಗ್ನಾತ್ಪ್ರಥಮ ದ್ವಿಚತುಃ ಪಂಚ-
ಷಟ್ ಸಪ್ತಪಶೈಕಾದಶೇಷು ॥

ಬುಧಾಷ್ಟಕವರ್ಗದಲ್ಲಿ ಬುಧನು ಸೂರ್ಯಸ್ಥಾನದಿಂದ೫-೬-೮-೯ ೧೧ರಲ್ಲಿಯೂ ಚಂದ್ರಸ್ಥಾನದಿಂದ ೨-೪-೬-೮-೧೦-೧೧ರಲ್ಲಿಯೂ, ಕುಜಸ್ಥಾನದಿಂದ ೧-೨-೪-೭-೮-೯-೧೧ರಲ್ಲಿಯೂ, ಸ್ವಸ್ಥಾನದಿಂದ ೧-೩-೫-೬-೯-೧೧-೧೨ರಲ್ಲಿಯೂ, ಗುರುಸ್ಥಾನದಿಂದ ೬-೮-೧೧-೧೨ರಲ್ಲಿಯೂ, ಶುಕ್ರಸ್ಥಾನದಿಂದ ೧-೩-೪-೫-೮-೯-೧೧ರಲ್ಲಿಯೂ, ಶನಿಸ್ಥಾನದಿಂದ ೧-೨-೪-೭-೮-೯-೧೦-೧೧ರಲ್ಲಿಯೂ, ಲಗ್ನದಿಂದ ೧-೨-೪-೬-೮-೧೦-೧೧ರಲ್ಲಿಯೂ, ಶುಭ ಫಲ ಪ್ರದವಾದ ಬಿಂದುಗಳನ್ನು ಹೊಂದುವನು. ಹಾಗೆಯೇ ಗುರುವು ಸೂರ್ಯಸ್ಥಾನದಿಂದ ೧-೨-೩-೪-೭-೮-೧೦-೧೧ರಲ್ಲಿಯೂ, ಚಂದ್ರನ ಸ್ಥಾನದಿಂದ ೨-೫-೭-೯-೧೧ರಲ್ಲಿಯೂ, ಕುಜಸ್ಥಾನದಿಂದ ೧-೨ ೩-೪-೬-೮-೧೦-೧೧ರಲ್ಲಿಯೂ, ಬುಧ ಸ್ಥಾನದಿಂದ ೧-೨-೪-೫-೬-೧೦-೧೧ರಲ್ಲಿಯೂ, ಸ್ವಸ್ಥಾನದಿಂದ ೧-೨-೩-೪-೭-೮-೧೦-೧೧ರಲ್ಲಿಯೂ,

**ಜೀವಾತ್ಪಂಚಾಷ್ಟ ನವಮ್ಯೈಕಾದಶೇಷು, ಸ್ವಾತ್ಪ್ರಥಮ ದ್ವಿಚತುಃ ಪಂಚಾಷ್ಟ ನವಮ್ಯೈಕಾದಶೇಷು, ಸೌರಾತ್ತ್ರಿಚತುಃ ಪಂಚಾಷ್ಟ ನವಮ್ಯೈಕಾದಶೇಷು ಲಗ್ನಾತ್ಪ್ರಥಮ ದ್ವಿತ್ರಿ ಚತುಃ ಪಂಚಾಷ್ಟ ನವಮ್ಯೈಕಾದಶೇಷು, ಸೌರೋರ್ಕಾತ್ಪ್ರಥಮ ದ್ವಿಚತುಃ ಸಪ್ತಾಷ್ಟ ದಶಮ್ಯೈಕಾದಶೇಷು, ಚಂದ್ರಾದ್ದ್ವಿಷಡೇಕಾದಶೇಷು, ಭೌಮಾ-ತ್ತ್ರಿಪಂಚಷಡ್ದಶೈಕಾದಶೇಷು ಬುಧಾತ್ ಷಷ್ಠ ನವದಶೈಕಾದ-ಶೈಕಾದಶ ದ್ವಾದಶೇಷು, ಜೀವಾತ್ಪಂಚಷಷ್ಠ್ಯೈಕಾದಶ ದ್ವಾದ-ಶೇಷು, ಶುಕ್ರಾತ್ ಷಡೇಕಾದಶ ದ್ವಾದಶೇಷು, ಸ್ವಾತ್ರಿಪಂಚ-ಷಡೇಕಾದಶೇಷು, ಲಗ್ನಾತ್ಪ್ರಥಮ ದ್ವಿಚತುರ್ದಶಮೋಷು ಯೋಷು ನೋಕ್ತಃ ಶುಭಸ್ತೇಷು ಸರ್ವ ಏವಾಶುಭೋ ಭವತಿ||**

---

ಶುಕ್ರಸ್ಥಾನದಿಂದ ೨-೫-೬-೯-೧೦-೧೧ರಲ್ಲಿಯೂ, ಶನಿಸ್ಥಾನದಿಂದ ೩-೫-೭-೧೦-೧೧ರಲ್ಲಿಯೂ, ಲಗ್ನದಿಂದ ೧-೨-೪-೫-೬-೭-೧೦-೧೧ರಲ್ಲಿಯೂ ಶುಭ ಫಲವನ್ನು ಕೊಡುವನು.

(ಶುಕ್ರಾಷ್ಟಕ ವರ್ಗದಲ್ಲಿ ಗುರುಸ್ಥಾನದ ಪರ್ಯಂತ ಶುಭಸ್ಥಾನ ನಿರೂಪಣೆ ಮಾಡುವ ಗ್ರಂಥಭಾಗವು ಲುಪ್ತವಾಗಿದೆ) ಶುಕ್ರನುಗುರು ಸ್ಥಾನದಿಂದ ೫-೮-೯-೧೧ರಲ್ಲಿ ಸ್ವಸ್ಥಾನದಿಂದ ೧-೨-೪-೫-೮-೯-೧೧ರಲ್ಲಿ ಶನಿಸ್ಥಾನದಿಂದ ೩-೪-೫-೮-೯-೧೧ರಲ್ಲಿ ಲಗ್ನದಿಂದ ೧-೨-೩-೪-೫-೮-೯-೧೧ರಲ್ಲಿಯೂ ಶುಭಫಲಕೊಡುವನು. ಹಾಗೆಯೇ ಶನ್ಯಷ್ಟಕವರ್ಗದಲ್ಲಿ ಶನಿಯು ಸೂರ್ಯಸ್ಥಾನದಿಂದ ೧-೨-೪-೭-೮-೧೦-೧೧ರಲ್ಲಿ ಚಂದ್ರನಿಂದ ೨-೬-೧೧ರಲ್ಲಿ ಕುಜನಿಂದ ೩-೫-೬-೧೦-೧೧ರಲ್ಲಿಯೂ, ಬುಧಸ್ಥಾನ ದಿಂದ ೬-೯-೧೦-೧೧-೧೨ರಲ್ಲಿ, ಗುರುಸ್ಥಾನದಿಂದ ೫-೬-೧೧-೧೨ರಲ್ಲಿ, ಶುಕ್ರ ಸ್ಥಾನದಿಂದ ೬-೧೧-೧೨ ರಲ್ಲಿ ಸ್ವಸ್ಥಾನದಿಂದ ೩-೫-೬-೧೧ರಲ್ಲಿ, ಲಗ್ನದಿಂದ ೧-೨-೪-೧೦ ರಲ್ಲಿ ಶುಭಫಲ ಕೊಡುವನು, ಮೇಲೆ ಹೇಳದಿರುವ ಇತರ ರಾಶಿಗಳಲ್ಲಿ ಆಯಾ ಗ್ರಹಗಳು ಸಂಚರಿಸುವಾಗ ಅಶುಭಫಲವನ್ನೇ ಕೊಡುತ್ತವೆಂದು ತಿಳಿಯಬೇಕು.

ಶುಭಾಶುಭವಿಶೇಷಶ್ಚ ಚಾರವಶಾತ್ಫಲಂ ಪ್ರಯಚ್ಛತಿ । ದಶಾಫಲಂ ಅವ್ಯಭಿಚಾರಿ ಅಷ್ಟವರ್ಗಫಲಮಶುಭಂ ಶಾಂತ್ಯಾದಿಭಿರುಪಹತಂ ಭವತಿ ಚಾತ್ರ ॥

ಅನಫಾಸುನಫಾಸ್ಥಾನೇ ನ ಶಸ್ತೋ ಗ್ರಹವರ್ಜಿತೇ ।
ಸರ್ವೇಷಾಂ ಚೈವ ಕೇಂದ್ರಾಣಾಂ ಶೂನ್ಯತಾ ನ ಪ್ರಶಸ್ಯತೇ ॥
ಕರ್ಕಿಣೀವ ಝಷಾಣಾಂ ಚ ಚರಮೋಂಶಸ್ತಥೈವ ಚ ।
ಶತ್ರುಕ್ಷೇತ್ರಸ್ತಥಾ ನೀಚೋ ಗ್ರಹಾಣಾಂ ಗರ್ಹಣಾಸ್ಥಿತಿಃ ॥

---

ಈ ಅಷ್ಟಕ ವರ್ಗದಿಂದ ಬರುವ ಶುಭಾಶುಭ ಫಲಗಳನ್ನು ಗ್ರಹಗಳ ಚಾರ ವಶದಿಂದ ಅರಿಯಬೇಕು ದಶಾಫಲಗಳು ಯಾವ ಶಾಂತ್ಯಾದಿಗಳಿಂದಲೂ, ನಿವಾರಣೆ ಯಾಗತಕ್ಕವುಗಳಲ್ಲ ಈ ಗೋಚಾರಫಲವಾದರೋ ಗ್ರಹೋಚಿತವಾದ ಶಾಂತ್ಯಾದಿ ಗಳಿಂದ ಸ್ವಲ್ಪಮಟ್ಟಿಗೆ ನಿವಾರಣೆಯಾಗುವುದು.

ಜನ್ಮಕಾಲದಲ್ಲಿ ಚಂದ್ರನಿಗೆ ಎರಡನೆಯ ರಾಶಿಯಲ್ಲಿ ಕುಜಾದಿ ಪಂಚಗ್ರಹ ಗಳಲ್ಲಿ ಯಾವುದೊಂದು ಗ್ರಹವಿದ್ದರೂ ಅದು ಸುನಫಾಯೋಗವೆನಿಸುವುದು. ಹನ್ನೆರ ಡನೆಯ ರಾಶಿಯಲ್ಲಿ ಗ್ರಹವಿದ್ದರೆ ಅನಫಾ ಯೋಗವಾಗುವುದು ಈ ಎರಡು ಯೋಗ ಗಳನ್ನೂ ಉಂಟುಮಾಡುವ ಗ್ರಹಗಳು ಚಂದ್ರನ ಹಿಂದುಮುಂದಿನ ರಾಶಿಗಳಲ್ಲಿ ಕಾಣದಿದ್ದರೆ ಅದು ಕೇಮದ್ರುಮಯೋಗವೆನಿಸುವುದು. ಅದರ ಫಲವಾದರೋ ಅಶುಭವೇ. ಇದೇ ಸುನಫಾ ಅನಫಾ ಮುಂತಾದ ಶುಭಯೋಗಗಳನ್ನು ಚಂದ್ರರಾಶಿಯು ಕೇಂದ್ರಸ್ಥಾನಗಳಲ್ಲಿರುವ ಗ್ರಹಗಳಿಂದಲೂ ಕೆಲವರು ಹೇಳುವರು. ಆ ಕೇಂದ್ರ ಗಳಲ್ಲಿಯೂ ಯಾವ ಗ್ರಹಗಳೂ ಇಲ್ಲದಿದ್ದರೆ, ಆಗಲೂ ಅಶುಭ ಕೇಮದ್ರುಮ ಯೋಗವು ಸಂಭವಿಸುವುದು. ಯಾವ ಗ್ರಹಗಳೇ ಆಗಲಿ, ಕಟಕರಾಶಿಯ, ಅಥವಾ ಮೀನರಾಶಿಯ ಅಂತ್ಯಾಂಶದಲ್ಲಿದ್ದರೂ, ಶತ್ರುಕ್ಷೇತ್ರಸ್ಥಿತಿ, ನೀಚರಾಶಿಸ್ಥಿತಿ ಸೂರ್ಯ ಸಾಮೀಪ್ಯದಿಂದ ಅಸ್ತವಾಗಿರುವಿಕೆ. ಇಂತಹ ಸ್ಥಿತಿಯಲ್ಲಿದ್ದರೂ, ಅವುಗಳಿಂದ ಬರುವ ಫಲವು ಅಶುಭವಾಗಿಯೇ ಬರುವುದು.

ಸೂರ್ಯಮಂಡಲಗಾಶ್ಚೈವ ನ ಪ್ರಶಸ್ತಾಸ್ತಥಾ ಗ್ರಹಾಃ ।
ಜನ್ಮಪೋ ಲಗ್ನಪಶ್ಚೈವ ಶ್ರೇಷ್ಠೌ ಬಲಸಮನ್ವಿತೌ ।
ತಾವೇತೌ ವಿಬಲೌ ಯಸ್ಯ ತಮಧನ್ಯಂ ವಿನಿರ್ದಿಶೇತ್ ॥
ಏಕೋಽಪಿ ಪರಮೋಚ್ಚಸ್ಥೋ ಮಿತ್ರದೃಷ್ಟಸ್ತಥಾಗ್ರಹಃ ।
ಜನಯತ್ಯವನೀಶತ್ವಂ ಶತ್ರುಪಕ್ಷಕ್ಷಯಂಕರಂ ॥
ಅತೀವ ಸ್ವಸ್ಥೋ ವಿಜ್ಞೇಯಃ ಸ್ವೋಚ್ಚೋ ಲಗ್ನಗತೋ ಗ್ರಹಃ ।
ಭಾವಮಾನಂ ನ ಪ್ರಶಸ್ತಂ ತಥಾ ಜನ್ಮನಿ ಕೀರ್ತಿತಂ ॥

ಚಂದ್ರಶ್ಚಸ್ತೋ ಹಿ ವಿಜ್ಞೇಯೋ ದೃಷ್ಟೋ ಕ್ಷೇತ್ರಾಧಿಪೇನ ತು ।
ತಂ ಮಿತ್ರೇಣ ತಥಾ ಬ್ರಹ್ಮನ್ ಪ್ರಶಸ್ತಂ ತದರಾತಿಭಿಃ ।
ಚತ್ವಾರೋಽಪಿ ಯದಾ ಕೇಂದ್ರಾ ಯುಕ್ತಾಃ ಸ್ವೋಚ್ಚೈಗತೈರ್ಗ್ರಹೈಃ ।
ತದಾ ಜಾತೋ ವಿನಿರ್ದಿಷ್ಟಃ ಸಮಸ್ತವಸುಧಾಧಿಪಃ ॥

---

ಜಾತಕದಲ್ಲಿ ಜನ್ಮಲಗ್ನಾಧಿಪತಿಯೂ, ಚಂದ್ರರಾಶ್ಯಧಿಪತಿಯೂ, ಬಲಿಷ್ಠರಾಗಿರಬೇಕು. ಅವರಿಬ್ಬರೂ ದುರ್ಬಲರಾಗಿದ್ದಲ್ಲಿ ಆ ಜಾತಕನು ದುರ್ಬಲನಾಗುವನು. ಸಪ್ತಗ್ರಹಗಳಲ್ಲಿ ಒಂದು ಗ್ರಹವಾದರೂ ಪರಮೋಚ್ಚಾಂಶದಲ್ಲಿದ್ದು, ಮಿತ್ರ ಗ್ರಹದ ದೃಷ್ಟಿಯನ್ನೂ ಹೊಂದಿ ಪ್ರಬಲವಾಗಿದ್ದರೆ ಆ ಗ್ರಹದ ಬಲದಿಂದಲೇ ಶತ್ರು ನಾಶಕವಾದ ರಾಜಯೋಗವನ್ನು ಜಾತಕನು ಹೊಂದುವನು. ಅದರಲ್ಲಿ ಉಚ್ಚರಾಶಿ ಗತವಾದ ಗ್ರಹವು ಜನ್ಮಲಗ್ನದಲ್ಲಿಯೇ ಇರುವುದಾದರೆ ಆ ಜಾತಕನ ತನುಭಾವವು ಅಂದರೆ ದೇಹಸೌಖ್ಯವು ಬಹು ಪ್ರಶಸ್ತವಾಗಿರುವುದು. ಹಾಗಿಲ್ಲದಿದ್ದರೆ ಆ ಭಾವ ಫಲವು ವಿರುದ್ಧವಾಗಿಯೇ ಲಭಿಸುವುದು.

ಹಾಗೆಯೇ ಜನ್ಮಲಗ್ನಾಧಿಪತಿಯಾದ ಮಿತ್ರಗ್ರಹದಿಂದ ವೀಕ್ಷಿತನಾದ ಚಂದ್ರನು ರಾಜಯೋಗಕರನಾಗುವನು. ಪಾಪಗ್ರಹಗಳಿಂದ ಚಂದ್ರನು ದೃಷ್ಟನಾಗಿರಬಾರದು. ಅದು ಚಂದ್ರನ ಬಲವನ್ನು ಕಮ್ಮಿ ಮಾಡುವುದು. ಲಗ್ನದಿಂದ ಅಥವಾ ಚಂದ್ರನಿಂದ ಇರುವ ಎಲ್ಲಾ ಕೇಂದ್ರರಾಶಿಗಳಲ್ಲಿಯೂ ಗ್ರಹಗಳು ಉಚ್ಚರಾಗಿ ಕಂಡುಬಂದರೆ ಆ ಜಾತಕನು ಚಕ್ರವರ್ತಿಯಾಗುವ ಯೋಗವನ್ನು ಪಡೆಯುವನು.

ತ್ರಯೋ ವಾ ತಸ್ಯ ಯಸ್ಯ ಸ್ಯುರ್ವಶೇ ಪೃಥ್ವೀ ಸಸಾಗರಾ ।
ದ್ವೌತು ಕೇಂದ್ರಗತೌ ಯಸ್ಯ ಗ್ರಹೌ ಕರ್ಕಿಣಿ ಚಂದ್ರಮಾಃ ॥
ಸೋಽಪಿ ರಾಜಾ ವಿನಿರ್ದಿಷ್ಟ ಏಕೇನಾಪಿ ತಥಾ ದ್ವಿಜ ।
ಸರ್ವೈಸ್ತು ಪರಮೋಚ್ಚಸ್ಥೈಸ್ತ್ರೈಲೋಕ್ಯಾಧಿಪತಿರ್ಭವೇತ್ ॥

ಮಿತ್ರಕ್ಷೇತ್ರೇ ತಥಾತ್ಮೀಯೇ ತಥಾ ವರ್ಗೋತ್ತಮೇಽಪಿ ।
ಸ್ವೋಚ್ಚೇ ವಾ ಸ್ವತ್ರಿಕೋಣೇ ವಾ ಗ್ರಹಾಣಾಂ ತಸ್ಯತೇಸ್ಥಿತಿಃ ।
ಗ್ರಹಾಣಾಂ ಚತುರಾದೀನಾಂ ತಥಾ ಯೋಗೋವಿಗರ್ಹಿತಃ ।
ರಾಜವಂಶೇ ತಥಾ ಭೂಪಾಸ್ತ್ರ್ಯಾದ್ಯೈಸ್ಸ್ವಸ್ವಗ್ರಹೋಪಗೈಃ ।
ಅನ್ಯವಂಶಭವಾ ಭೂಪಾಃ ಪಂಚಾದ್ಯೈರಪಿ ಚ ದ್ವಿಜ ।
ತ್ರಿಕೋಣೋಚ್ಚಗತೈರೇವ ವಿಶೇಷೇಣ ದ್ವಿಜೋತ್ತಮ ।

---

ಅಥವಾ ಮೂರು ಕೇಂದ್ರರಾಶಿಗಳಲ್ಲಿ ಗ್ರಹಗಳು ಉಚ್ಚರಾಗಿದ್ದರೂ ಅವನು ಅಖಂಡ ಪೃಥ್ವೀಪತಿಯಾಗುವನು. ಅಥವಾ ಕರ್ಕಾಟಕರಾಶಿಯಲ್ಲಿ ಚಂದ್ರನಿದ್ದು ಎರಡು ಕೇಂದ್ರದಲ್ಲಿ ಉಚ್ಚರಾಗಿದ್ದರೂ ಅಥವಾ ಬಲಿಷ್ಠವಾದ ಒಂದೇಗ್ರಹವು ಉಚ್ಚವಾಗಿದ್ದರೂ ಆ ಜಾತಕಕ್ಕೆ ರಾಜಯೋಗವನ್ನು ಹೇಳಬಹುದು. ಜಾತಕದಲ್ಲಿ ಎಲ್ಲಾ ಗ್ರಹಗಳೂ ಪರಮೋಚ್ಚಾಂಶಗತರಾಗಿದ್ದರೆ ಆತನು ತ್ರಿಲೋಕೇಶ್ವರನೆನಿಸುವನು.

ಸಾಮಾನ್ಯವಾಗಿ ಸಕಲಗ್ರಹಗಳೂ, ಉಚ್ಚರಾಶಿ ಮೂಲತ್ರಿಕೋಣರಾಶಿ, ಮಿತ್ರಕ್ಷೇತ್ರ, ಸ್ವಕ್ಷೇತ್ರ, ವರ್ಗೋತ್ತಮಾಂಶ ಇವುಗಳಲ್ಲಿದ್ದರೆ ಶುಭಫಲವನ್ನು ಕೊಡುವವರಾಗುವರು. ಒಂದೇ ಮನೆಯಲ್ಲಿ ನಾಲ್ಕಕ್ಕಿಂತ ಹೆಚ್ಚಾದ ಗ್ರಹಗಳ ಸಮಾವೇಶವು ಅಷ್ಟು ಫಲಕಾರಿಯಾಗಲಾರದು. ರಾಜವಂಶದಲ್ಲಿಯೇ ಜನಿಸಿದವರ ಜಾತಕದಲ್ಲಿ ಮೂರಕ್ಕಿಂತ ಹೆಚ್ಚಾದ ಗ್ರಹಗಳು ಮೇಲೆ ಹೇಳಿದಂತಹ ರಾಶಿಗಳಲ್ಲಿದ್ದು ಬಲಯುತರಾಗಿದ್ದರೆ ಅವರಿಗೆ ರಾಜಯೋಗವು ಸಿದ್ಧಿಸುವುದು. ಅನ್ಯವಂಶೀಯರಿಗೆ ರಾಜ್ಯಾಧಿಪತ್ಯವು ದೊರಕಬೇಕಾದರೆ ಐದಕ್ಕಿಂತ ಹೆಚ್ಚಾದ ಗ್ರಹಗಳು ಉಚ್ಚರಾಶಿ, ಮೂಲತ್ರಿಕೋಣರಾಶಿ ಇವುಗಳಲ್ಲಿ ಇರಲೇಬೇಕು.

ಭಾವೇ ವಿಕಾರಕಾಃ ಸೌಮ್ಯಾಃ ಪಾಪಾ ಭಾವವಿನಾಶನಾಃ ।
ತೃತೀಯೇ ಚ ತಥಾ ಷಷ್ಠೇ ದಶಮ್ಯೈಕಾದಶೇಪಿ ಚ ।
ಸ್ಥಿತಿಃ ಪಾಪಗ್ರಹಾಣಾಂ ಚ ಪ್ರಶಸ್ತಾ ಪರಿಕೀರ್ತಿತಾ ॥
ಷಷ್ಠಾಃ ಸರ್ವಗ್ರಹಾಶ್ಶಸ್ತಾ ನಶಸ್ತಾ ದ್ವಾದಶಾಷ್ಟಮಾಃ ।
ಚಂದ್ರೇ ಲಗ್ನಗತೇ ಮೂರ್ಖಾ ವಿನಾ ವೃಷಕುಲೀರಕೇ ।
ಸೂರ್ಯೇ ಲಗ್ನಗತೇ ಜ್ಞೇಯಾಸ್ತಥಾ ಜಯಬಲಾನನಾಃ ॥

ಬಲವದ್ಗ್ರಹಯುಕ್ತೈಶ್ಚ ವಿಜ್ಞೇಯಾ (ರೂಪ) ಈಶಚೇಷ್ಟಿತೈಃ ।
ಚಂದ್ರದ್ಯುಗ್ರಾ (ಪುಷ್ಪಾ) ವಿಶೀಲಾಶ್ಚ ವಿಜ್ಞಾತವ್ಯಾಸ್ತಥೈವ ಚ ।
ಪಾಪಾಃ ಪಾಪಬಲಾಜ್ಞೇಯಾಃ ಸೌಮ್ಯಾಃ ಸೌಮ್ಯಬಲಾಸ್ತಥಾ ।

---

ಯಾವ ಭಾವದಲ್ಲಿಯೇ ಆಗಲಿ, ಪಾಪಗ್ರಹಗಳಿದ್ದರೆ, ಆ ಭಾವಫಲವು ನಾಶವಾಗುವುದು. ಶುಭಗ್ರಹಗಳಿಂದ ಆ ಫಲವು ವೃದ್ಧಿಹೊಂದುವುದು. ಆದರೆ ಉಪಚಯಸ್ಥಾನಗಳೆನಿಸಿದ ೩-೬-೧೦-೧೧ನೆಯ ರಾಶಿಗಳಲ್ಲಿ ಪಾಪಗ್ರಹಗಳು ಶುಭ ಫಲವನ್ನು ಕೊಡುವುವು. ಹಾಗೆಯೇ ಆರನೆಯ ಮನೆಯಲ್ಲಿ ಎಲ್ಲ ಪಾಪಗ್ರಹಗಳೂ ವಿಶೇಷವಾಗಿ ಶುಭಫಲವನ್ನು ಕೊಡುವುವು. ಎಂಟು, ಹನ್ನೆರಡನೆಯ ರಾಶಿಗಳಲ್ಲಿ ಪಾಪಫಲವನ್ನು ವಿಶೇಷವಾಗಿ ಕೊಡಬಲ್ಲವು. ವೃಷಭ, ಕರ್ಕಾಟಕ ರಾಶಿಗಳನ್ನು ಬಿಟ್ಟು ಉಳಿದ ರಾಶಿಗಳಲ್ಲಿ ಚಂದ್ರನಿದ್ದು ಅದೇ ಜನ್ಮಲಗ್ನವಾದರೆ, ಆ ಜಾತಕನು ಮೂರ್ಖನಾಗುವನು ಸೂರ್ಯನು ಲಗ್ನಗತನಾಗಿದ್ದರೆ ಬಲಶಾಲಿಯೂ, ಜಯ ಶಾಲಿಯೂ ಆಗುವನು.

ಷಡ್ಬಲಯುಕ್ತವಾದ ಗ್ರಹಗಳಿಂದ ಕೂಡಿದ ಭಾವವು ಪೂರ್ಣ(ರೂಪ) ಸಂಜ್ಞಕ ವಾದ ಫಲವನ್ನು ಕೊಡುವುದು. ದುರ್ಬಲವಾದ ಗ್ರಹವು, ತದ್ವಿರುದ್ಧವಾದ ಶೂನ್ಯ ಫಲವನ್ನೀಯುವುದು. ಪಾಪಗ್ರಹಗಳು ಬಲಯುತರಾದರೆ ಪಾಪಕಾರ್ಯಗಳಲ್ಲಿ ದಕ್ಷತೆಯನ್ನೂ, ಶುಭಗ್ರಹಗಳು ಬಲಿಷ್ಠರಾಗಿದ್ದರೆ ಶುಭಕಾರ್ಯನಿರ್ವಹಣ ಸಾಮರ್ಥ್ಯವನ್ನೂ ಅನುಗ್ರಹಿಸುವುವು. ಚಂದ್ರನ ಉಪಚಯ ರಾಶಿಗಳಲ್ಲಿರುವ ಸಕಲ

ಚಂದ್ರಾದುಪಚಯರ್ಕ್ಷಸ್ಥೈರ್ಗ್ರಹಾ ಜ್ಞೇಯಾಬಲಾನ್ವಿತಾಃ ।
ಏತಾವದುಕ್ತಂ ಸಾರಂ ತೇ ಹೋರಾಸಂಗ್ರಹಮುತ್ತಮಂ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ಜಾತಕಾಧ್ಯಾಯೋ ನಾಮ
ಸಪ್ತಷಷ್ಟ್ಯುತ್ತರಶತತಮೋಽಧ್ಯಾಯಃ

---

ಗ್ರಹಗಳೂ ಬಲಿಷ್ಠರಾದವರೆಂದೇ ತಿಳಿಯಬೇಕು. ಎಲೈ ಭಾರ್ಗವನೇ, ಇಷ್ಟು ಪರ್ಯಂತ ಸಾರವಾದ ಹೋರಾಫಲವನ್ನೂ ನಿನಗೆ ವಿವರಿಸಿರುವೆನು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ
ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ
ಜಾತಕಾಧ್ಯಾಯವೆಂಬ ನೂರ ಅರವತ್ತೇಳನೆಯ
ಅಧ್ಯಾಯವು ಮುಗಿದಿದೆ.



|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಅಷ್ಟಷಷ್ಟ್ಯುತ್ತರಶತತಮೋಽಧ್ಯಾಯಃ

**|| ಪುಷ್ಕರ ಉವಾಚ ||**

**ಅಥ ಭಗವಂತಂ ಭುವನೋತ್ಪತ್ತಿಸ್ಥಿತಿಸಂಹಾರಕಾರಕಂ ಚರಾಚರಗುರುಮತಿಯಶಸಮಭಿಗಮ್ಯ ಭೃಗುರ್ವಿಜ್ಞಾಪಯಾಮಾಸ ಭಗವನ್ ಜ್ಯೋತಿಶ್ಶಾಸ್ತ್ರಂ ವಿನಾ ಗಣಿತೇನ ದುಃಖಗಾಹಮತೋ ಗಣಿತವಿಧಿಮಾಚಕ್ಷ್ವ । ತಮುವಾಚ ಶ್ರೀ ಭಗವಾನ್ ಶೃಣು ವತ್ಸ ಗಣಿತಜ್ಞಾನಂ ॥**

---

### ನೂರ ಅರವತ್ತೆಂಟನೇ ಅಧ್ಯಾಯ.

ಸಕಲ ಪ್ರಪಂಚದ ಸೃಷ್ಟಿಸ್ಥಿತಿಸಂಹಾರ ಕಾರ್ಯಗಳಲ್ಲಿ ದಕ್ಷನೂ, ಚರಾಚರ ವಸ್ತುಗಳಿಗೆ ಮೂಲಕಾರಣನೂ, ಮಿತಿಮೀರಿದ ಯಶಸ್ಸುಳ್ಳವನೂ ಆದ ಪೂಜ್ಯನಾದ ಚತುರ್ಮುಖನನ್ನು ಕುರಿತು ಭೃಗುಮಹರ್ಷಿಯು ಈ ರೀತಿ ಪ್ರಾರ್ಥಿಸಿಕೊಂಡನು. ಪರಮಪೂಜ್ಯನೇ, ಗ್ರಹನಕ್ಷತ್ರಾದಿಗಳ ಚಲನವಲನಗಳನ್ನು ತಿಳಿಸುವ ಜ್ಯೋತಿಶ್ಶಾಸ್ತ್ರವನ್ನು ಅರಿಯಬೇಕಾದರೆ ಮೊದಲು ಗಣಿತಶಾಸ್ತ್ರದ ಪರಿಜ್ಞಾನವು ಅತ್ಯವಶ್ಯಕ. ಗಣಿತಸ್ವರೂಪವನ್ನು ಅರಿಯದವನಿಗೆ ಆ ಶಾಸ್ತ್ರವು ದುರ್ಜ್ಞೇಯವಾಗುವುದು ಆದ್ದರಿಂದ ನನಗೆ ಗ್ರಹಚಾರಗಳ ಆನಯನ ಕ್ರಮವನ್ನು ವಿವರಿಸಿ ಹೇಳಬೇಕು" ಎಂದು ಬೇಡಿಕೊಂಡ ಭೃಗುಮಹರ್ಷಿಗೆ ಉಪದೇಶವಾಗಿ ಚತುರ್ಮುಖಬ್ರಹ್ಮನು ಈ ರೀತಿ ಗಣಿತ ವಿಧಿಯನ್ನು ವಿವರಿಸತೊಡಗಿದನು.

ಅನಾದಿನಿಧನಃ ಕಾಲಃ ಪ್ರಜಾಪತಿರ್ವಿಷ್ಣುಸ್ತಸ್ಯ ಗ್ರಹಗತ್ಯನುಸಾರೇಣ ಜ್ಞಾನಂ ಗಣಿತಂ । ತತ್ರ ಅರ್ಕಭಾಗಭೋಗಃ ಸೌರಾಹೋ-ರಾತ್ರಃ । ತಿಥಿಶ್ಚ ಚಾಂದ್ರಃ । ಅರ್ಕೋದಯಾತ್ತದುದಯೋ-ತ್ಸಾವನಃ । ಚಂದ್ರನಕ್ಷತ್ರಭೋಗೋ ನಾಕ್ಷತ್ರಂ ।

ಸಾವನಾಹೋರಾತ್ರಾ ನರಾಣಾಂ । ತೇಷಾಮರ್ಕಂ ದಿನಂ ವ್ಯರ್ಕಾ ರಾತ್ರಿಃ । ಚಂದ್ರಮಸಃ ಪಿತೄಣಾಮಹೋರಾತ್ರಂ । ತೇಷಾಂ ಕೃಷ್ಣಾಷ್ಟಮ್ಯಾಮರ್ಕೋದಯಃ । ಅಮಾವಾಸ್ಯಾಯಾಂ ಮಧ್ಯಾಹ್ನಃ । ಶುಕ್ಲಾಷ್ಟಮ್ಯಾಮರ್ಕಾಸ್ತಮಯಃ ಪೌರ್ಣ-ಮಾಸ್ಯಾಮರ್ಧರಾತ್ರಂ ಅರ್ಕಭಗಣಭೋಗೋ ದಿವ್ಯಾಹೋ ರಾತ್ರಃ ।

---

ಕಾಲವೆಂಬುದು ಆದ್ಯಂತ ರಹಿತವಾದದ್ದು ಆ ಕಾಲವೇ ಉಪಾಧಿಭೇದದಿಂದ ಬ್ರಹ್ಮವಿಷ್ಣುರೂಪವನ್ನು ಪಡೆದು ಜಗತ್ತನ್ನು ನಡೆಸುತ್ತಿರುವುದು. ಆ ಕಾಲವು ವ್ಯವಹಾರಕ್ಕೆ ಸಿಕ್ಕತಕ್ಕದಲ್ಲ. ಆದರೆ ಗ್ರಹಗಳ ಗತಿಯನ್ನು ಅನುಸರಿಸಿ ವ್ಯವಹಾರಕ್ಕೆ ಕಾಲವನ್ನು ಎಳೆತಂದಿರುವರು. ಅದರಿಂದಲೇ ವರ್ಷ, ಮಾಸ, ದಿನಗಳೆಂಬ ಸಂಕೇತವನ್ನೂ ಆದ್ಯಂತರಹಿತವಾದ ಕಾಲಕ್ಕೆ ಅವಳಪಡಿಸಿರುವರು. ಇದರಲ್ಲಿ ವರ್ಷವನ್ನು ಸೂರ್ಯ, ಚಂದ್ರ, ನಕ್ಷತ್ರ, ಇವುಗಳ ಚಾರದಿಂದ ಮೂರುವಿಧವಾಗಿ ನಿಶ್ಚಯ ಮಾಡಿರುವರು. (ಪಂಚಸಂವತ್ಸರ ಮಯಂ, ಇತ್ಯಾದಿ ಶ್ರುತಿವಾಕ್ಯಗಳಿಂದ ಕಾಲವು, ಸೌರ, ಚಾಂದ್ರ, ನಾಕ್ಷತ್ರ, ಸಾವನ, ಬಾರ್ಹಸ್ಪತ್ಯ, ಎಂದು ಐದು ವಿಧಗಳಾಗಿ ಇತರ ಗ್ರಂಥಗಳಲ್ಲಿ ನಿರೂಪಿತವಾಗಿದೆ) ಹೀಗೆಯೇ ಅಹೋರಾತ್ರಗಳಲ್ಲಿಯೂ, ಸೌರ, ಚಾಂದ್ರ, ನಾಕ್ಷತ್ರ ಸಾವನಗಳೆಂಬ ಭೇದಗಳಿವೆ. ಮೂವತ್ತು ಭಾಗಗಳಿಂದ ಕೂಡಿದ ಮೇಷಾದಿ ರಾಶಿಗಳಲ್ಲಿ ಸೂರ್ಯನು ದಿನಕ್ಕೆ ಒಂದೊಂದು ಭಾಗದಂತೆ ಸಂಚರಿಸುವನು. ಸೂರ್ಯನು ರಾಶಿಗತವಾದ ಒಂದು ಭಾಗವನ್ನು (ಅಂಶವನ್ನು) ಸಂಚರಿಸುವಷ್ಟು ಕಾಲಕ್ಕೆ ಸೌರಾಹೋರಾತ್ರವೆಂದು ಹೆಸರು. ಹಾಗೆಯೇ ಸೂರ್ಯಚಂದ್ರಾಂತರ ರೂಪವಾದ ಕಾಲಕ್ಕೆ ಚಾಂದ್ರಾಹೋರಾತ್ರವೆಂದೂ, ಸೂರ್ಯೋದಯದ್ವಯಗಳ ಮಧ್ಯೆ ತೋರಿಬರುವ ಕಾಲಕ್ಕೆ ಸಾವನಾಹೋತ್ರವೆಂದೂ, ಚಂದ್ರನು ಒಂದು ನಕ್ಷತ್ರದಲ್ಲಿರುವಷ್ಟು ಕಾಲಕ್ಕೆ ಚಾಂದ್ರಾಹೋರಾತ್ರವೆಂದೂ ಸಂಕೇತವಿರುವುದು.

ಭೂಲೋಕದ ಜನರು ಸಾವನಾಹೋರಾತ್ರಗಳಿಂದ ಕಾಲಗಣನೆಮಾಡುವರು. ಸೂರ್ಯಪ್ರಕಾಶವಿರುವ ಕಾಲಕ್ಕೆ ಹಗಲೆಂದೂ, ಸೂರ್ಯಪ್ರಕಾಶರಹಿತವಾದ ಕಾಲಕ್ಕೆ

**ತೇಷಾಮರ್ಕಸ್ಯ ಮೇಷಪ್ರವೇಶೇ ಸೂರ್ಯೋದಯಃ ಕರ್ಕಟ ಪ್ರವೇಶೇ ಮಧ್ಯಾಹ್ನಃ। ತುಲಾಪ್ರವೇಶೇಽಸ್ತಮಯಃ। ಮಕರ ಪ್ರವೇಶೇ ಅರ್ಧರಾತ್ರಃ। ಮೇಷಾದಿಸ್ಥೇ ಮಧ್ಯಮೇ ಜೀವೇ ಜೀವಮಾನೈರಾಶ್ವಯುಜಾದಯೋ ವತ್ಸರಾ ಭವಂತಿ।**

**ಲಂಕಾಯಾಮರ್ಕೋದಯೇ ಚೈತ್ರ ಶುಕ್ಲಪ್ರತಿಪದಾರಂಭೇ ಅರ್ಕ-ದಿನಾದಾವಶ್ವಿನ್ಯಾದೌ ಕಿಂಸ್ತುಘ್ನಾದೌ ರಾತ್ರ್ಯಾವಥಾರ್ಕೋದ-ಯೇ ಕಾಲೇ ಪ್ರವೃತ್ತಿಃ। ಹೋರಾದಿಪ್ರವೃತ್ತಿಶ್ಚ। ಲಂಕಾತಶ್ಚ**

---

ರಾತ್ರಿಯೆಂದೂ ಸಂಕೇತವಿಟ್ಟಿರುವರು. ಪಿತೃಲೋಕದಲ್ಲಿರುವವರಿಗೆ ಚಂದ್ರಚಾರದಿಂದ ಹಗಲು ರಾತ್ರಿಗಳುಂಟಾಗುವುವು. ಪ್ರತಿಮಾಸದ ಕೃಷ್ಣಪಕ್ಷದ ಅಷ್ಟಮೀ ತಿಥಿಯೇ ಪಿತೃಗಳಿಗೆ ಸೂರ್ಯೋದಯಕಾಲವು. ಅಮಾವಾಸ್ಯಾ ತಿಥಿಯು ಅವರಿಗೆ ಮಧ್ಯಾಹ್ನವೆನಿಸುವುದು. ಶುಕ್ಲಪಕ್ಷದ ಅಷ್ಟಮೀ ತಿಥಿಯು ಅವರಿಗೆ ಸೂರ್ಯಾಸ್ತಮಯ ಕಾಲವಾಗುವುದು. ಪೂರ್ಣಿಮಾ ತಿಥಿಯೇ ಪಿತೃಗಳ ಅರ್ಧರಾತ್ರಿ. ಹಾಗೆಯೇ ಸೂರ್ಯನು ದ್ವಾದಶರಾಶಿಗಳಲ್ಲಿಯೂ ಒಂದು ನಾರಿ ಪೂರ್ತಿ ಸಂಚರಿಸಿದರೆ, ಆ ಕಾಲವು ದೇವತೆಗಳಿಗೆ ಒಂದು ದಿನವೆನಿಸುವುದು.

ದೇವತೆಗಳಿಗೆ ಮೇಷಸಂಕ್ರಮಣದಿನವೇ ಸೂರ್ಯೋದಯಕಾಲವಾಗುವುದು ಕಟಕಮಾಸವು ಮಧ್ಯಾಹ್ನ ಕಾಲವಾಗಿಯೂ, ತುಲಾಮಾಸವು ಸಂಧ್ಯಾಕಾಲವಾಗಿಯೂ, ಮಕರಮಾಸವು ಅರ್ಧರಾತ್ರಿಯಾಗಿಯೂ ಪರಿಣಮಿಸುವುದು. ಬೃಹಸ್ಪತಿಯ ಚಾರದಿಂದ ಕಾಲಗಣನೆಗೆ ಮಾಡುವವರಿಗೆ ಗುರುವು ಮೇಷರಾಶಿಯ ಆದಿಭೂತವಾದ ಅಶ್ವಿನೀ ನಕ್ಷತ್ರದಲ್ಲಿರುವಾಗಲೇ ಆಶ್ವಯುಜನಾಮಕವಾದ ಬಾರ್ಹಸ್ಪತ್ಯಮಾಸವು ಆರಂಭವಾಗುವುದು. ಬೃಹಸ್ಪತಿಯು ಒಂದು ರಾಶಿಯಲ್ಲಿ ಸಂಚರಿಸುವ ಕಾಲವೇ ಬಾರ್ಹಸ್ಪತ್ಯವರ್ಷವೆನಿಸುವುದು.

ಲಂಕಾದೇಶವು ನಿರಕ್ಷ ದೇಶವೆಂದು ಗಣಿಸಲ್ಪಟ್ಟಿದೆ. ನಿರಕ್ಷವೆಂದರೆ ಅಂಕ್ಷಾಂಶ ರಹಿತವಾದದ್ದು ಎಂದರ್ಥ. ಸೃಷ್ಟಿಕಾಲದಲ್ಲಿ ಸಕಲಗ್ರಹಗಳೂ ಲಂಕಾದೇಶದಲ್ಲಿ ಒಟ್ಟಾಗಿ ಮೇಷಾದಿಯಲ್ಲಿ ನೆಲಸಿದ್ದುವು. ಆದಿನವೇ, ಭಾನುವಾರವೂ ಅಶ್ವಿನೀ ನಕ್ಷತ್ರವೂ, ಕಿಂಸ್ತುಘ್ನ ಕರಣವೂ, ವಿಷ್ಕಂಭಯೋಗವೂ ಆರಂಭವಾದವು. ವಾರವೆಂಬುದು ಸೂರ್ಯೋದಯ ಕಾಲದಿಂದ ಪ್ರಾರಂಭವಾಗುವುದು. ಎರಡೂವರೆ ಘಳಿಗೆಗೆ ಒಂದೊಂದಾಗಿ ಬರುವ ಕಾಲಹೋರೆಗಳೂ ಸೂರ್ಯೋದಯದಿಂದಲೇ

ಯಾವನ್ಮೇರೋರ್ಯಾಮ್ಯೋತ್ತರ ದೇಶಾಂತರೇ ರೇಖಾ ತತ್ಪೂರ್ವೇಣಾಪರೇಣ ಕಾಲಾರ್ಕೋದಯ ಕಾಲಪ್ರವೃತ್ತಿಃ ಲಂಕಾರ್ಕೋದಯಕಾಲಂ ತನ್ಮಂಡಲಂ ।

ಸ್ವದೇಶವಿಷುವಾದರ್ಕೋದಯವಿಷುವನ್ಮಂಡಲಂ ಪ್ರತಿದಿನಂ ಚಾರ-ದಲವಶೇನಾರ್ಕೋದಯಃ । ಕ್ಷಿತಿಜಂ ಮಂಡಲಂ । ತತ್ರ ಅರ್ಕ ಭಗಣಭೋಗೇನ ಸೌರಾಬ್ದಃ । ಯೇಷಾಮಬ್ದಾನಾಂ ತ್ರಯೇಣ ಗುಣಮೇಕಂ ವೇದಃ ಕಲಿಯುಗಂ, ದ್ವಿಗುಣಂ ದ್ವಾಪರಂ ತ್ರಿಗುಣಂ ತ್ರೇತಾ, ಚತುರ್ಗುಣಂ ಕೃತಂ, ಶೂನ್ಯಚತುಷ್ಟಯಂ ಯಾಮಾಗ್ನಿವೇದಾಶ್ಚತುರ್ಯುಗಂ ।

ಮುಂದುವರಿಯುವುವು. ಲಂಕಾದೇಶದಿಂದ ದಕ್ಷಿಣ ಮತ್ತು ಉತ್ತರಭಾಗದಲ್ಲಿರುವ ದೇಶಗಳಲ್ಲಿಯೂ, ಪೂರ್ವಪಶ್ಚಿಮ ಭಾಗದಲ್ಲಿರುವ ದೇಶಗಳಲ್ಲಿಯೂ, ಉದಯಕಾಲ ತನ್ಮೂಲಕವಾಗಿ ಹುಟ್ಟುವ ವಾರ ಪ್ರವೃತ್ತ್ಯಾದಿಗಳು ವ್ಯತ್ಯಾಸವಾಗುವುವು. ಲಂಕಾ ದೇಶದ ಉದಯ ಕಾಲವೇ ಉಳಿದ ದೇಶಗಳ ಉದಯ ಕಾಲಾದಿಗಳಿಗೆ ಕೇಂದ್ರ ಸ್ಥಾನವಾಗಿ ಪರಿಣಮಿಸುವುದು.

ಲಂಕಾದೇಶದ ಉದಯಾಸ್ತಗಳನ್ನು ತಿಳಿಸುವ ಒಂದು ವೃತ್ತವೇ ವಿಷುವದ್ವೃತ್ತವೆನಿಸುವುದು. ಲಂಕಾದೇಶಕ್ಕಿಂತ ದಕ್ಷಿಣ ಅಥವಾ ಉತ್ತರಭಾಗದಲ್ಲಿರುವ ದೇಶಗಳಲ್ಲಿ ಸೂರ್ಯನ ಉದಯಾಸ್ತಗಳನ್ನನುಸರಿಸಿ ಕಲ್ಪಿಸುವ ರೇಖೆಯು ಸ್ವದೇಶೀಯ ವಿಷುವದ್ವೃತ್ತವೆನಿಸುವುದು. ಗಣಿತದಿಂದ ಆನೀತವಾಗುವ ಚರಘಟಿಗಳನ್ನು ನಿರಕ್ಷ ದೇಶದ ಸೂರ್ಯೋದಯ ಕಾಲಕ್ಕೆ (ಕೂಡುವುದೋ ಅಥವಾ ಕಳೆಯುವುದೋ) ಧನರ್ಣ ಸಂಸ್ಕಾರ ಮಾಡಿದರೆ ಸ್ವದೇಶದ ಉದಯಾಸ್ತಕಾಲವು ತಿಳಿದು ಬರುವುದು. ಸೂರ್ಯನು ದ್ವಾದಶ ರಾಶಿಗಳನ್ನೂ ಒಂದು ಸಾರಿ ಸುತ್ತಿದರೆ ಆಗ ಒಂದು ಸೌರ ವರ್ಷವಾಗುವುದು. ಒಟ್ಟು ಕೃತ, ತ್ರೇತಾ, ದ್ವಾಪರ ಮತ್ತು ಕಲಿಯುಗಗಳ ಕೂಡುವಿಕೆಗೆ ಮಹಾಯುಗವೆಂಬ ಸಂಕೇತವಿರುವುದು. ಈ ಮಹಾಯುಗ ಪ್ರಮಾಣ ೪೩೨೦೦೦೦ ವರ್ಷಗಳು. ಇದರಹತ್ತನೆಯ ಒಂದು ಭಾಗವಾದ ೪೩೨೦೦೦ವರ್ಷಗಳು ಕಲಿಯುಗ ಪ್ರಮಾಣ ಹತ್ತನೆಯ ಎರಡು ಭಾಗವಾದ ೮೬೪೦೦೦ ವರ್ಷಗಳು ದ್ವಾಪರ ಯುಗಮಾನ. ಹತ್ತನೆಯಮೂರು ಭಾಗವಾದ ೧೨೯೬೦೦೦ ವರ್ಷಗಳೂ ತ್ರೇತಾ ಯುಗದ ಹತ್ತನೆಯ ನಾಲ್ಕುಭಾಗವು ಅಂದರೆ ೧೭೨೮೦೦೦ ವರ್ಷಗಳು ಕೃತಯುಗದ ಮಾನವೆನಿಸುವುವು.

**ಏಕಸಪ್ತತಿಶ್ಚ ತುರ್ಯುಗಾನಿ ಮನ್ವಂತರಂ । ಚತುರ್ದಶಮನ್ವಂತರಾಣಿ ಕಲ್ಪಃ । ಮನ್ವಂತರಾಣಾಂ ಚಾದ್ಯಾಂತರಾಲೇಷು ಕೃತಯುಗಪ್ರಮಾಣಂ ಸಂಧಿಃ । ಏವಂ ಚತುರ್ಯುಗಃ ಸ ಕಲ್ಪಃ । ಕಲ್ಪೇನ ಸಪ್ತಶೂನ್ಯಾನಿ ವಸ್ವಗ್ನಿವೇದಾಸ್ಸೂರ್ಯಭಗಣಪರಿವರ್ತನಾನಿ ಭವಂತಿ । ಪಂಚಶೂನ್ಯಾನಿ ಗುಣಾಗ್ನಿ ಪಂಚಸಪ್ತಮಾರ್ಧಚಂದ್ರಾಶ್ಚಂದ್ರಮಸಃ । ಭೌಮಸ್ಯ ದ್ವಿತೀಯಪಂಚಾಷ್ಟನವಾಷ್ಟಂ ತನವಯಮಯಮಲಾಃ । ಬುಧಸ್ಯಾಷ್ಟನವಾಷ್ಟ ನವನವ ರಾಮಾಗ್ನಿ ನವಸಮ ಚಂದ್ರಾಃ ಜೀವಸ್ಯ ಪಂಚಪಂಚ ದ್ವಿಷಟ್ ಪಂಚದ್ವಿಷಡಕ್ಷ ದ್ವಿಕೃತರಸಗುಣಾಃ । ಶುಕ್ರಸ್ಯ ಯಮ ನವಾಶ್ವಿ ನವಾಷ್ಟಾಗ್ನಿಯಮಖಗಿರಯಃ । ಸೌರಸ್ಯಾಷ್ಟ ನವಯಮಗಿರಿ ರಸ ಪಂಚಮನವಃ ॥**

---

ಈ ನಾಲ್ಕು ಯುಗಗಳು ಎಪ್ಪತ್ತೊಂದು ಸಾರಿ ಪರಿವರ್ತಿತವಾದರೆ ಆಗ ಅದು ಒಂದು ಮನ್ವಂತರವೆನಿಸುವುದು. ಇಂತಹ ಹದಿನಾಲ್ಕು ಮನ್ವಂತರಗಳಿಗೆ ಒಂದು ಕಲ್ಪವೆಂದು ವ್ಯವಹಾರ. ಒಂದು ಮನ್ವಂತರಕ್ಕೂ, ಮತ್ತೊಂದು ಮನ್ವಂತರಕ್ಕೂ ಮಧ್ಯಕಾಲದಲ್ಲಿ ಕೃತಯುಗ ಪ್ರಮಾಣದಷ್ಟು ಕಾಲ ಸಂಧಿಕಾಲವಿರುವುದು. ಆ ಕಾಲದಲ್ಲೆಲ್ಲಾ ಪ್ರಪಂಚವು ಜಲಮಯವಾಗಿರುವುದು. ಒಂದು ಕಲ್ಪಕಾಲದಲ್ಲಿ ಸೂರ್ಯನಿಗೆ ೪೩೮೦೦೦೦೦೦೦ ಭಗಣಪರಿವರ್ತನೆಯೊದಗುವುದು. ದ್ವಾದಶರಾಶಿ ಭೋಗಾತ್ಮಕವಾದ ಕಾಲಕ್ಕೆ ಭಗಣಪರಿವರ್ತನಕಾಲವೆಂದು ವ್ಯವಹಾರ. ಅದರಂತೆ

| | | |
|---|---|---|
| ಚಂದ್ರನಿಗೆ | ೧೨೭೫೩೩೦೦೦೦೦ | ಭಗಣ ಪರಿವರ್ತನೆಯೂ |
| ಕುಜನಿಗೆ | ೩೫೧೫೧೨೦೬೮೯೮೫೨ | ಭಗಣಗಳೂ |
| ಬುಧನಿಗೆ | ೧೫೭೯೩೩೯೯೮೯ | ಭಗಣಗಳೂ |
| ಗುರುವಿಗೆ | ೩೬೧೪೨೬೬೨೫೬೨೫೫ | ಈ ಸಂಖ್ಯೆಯ ಭಗಣಗಳೂ |
| ಶುಕ್ರನಿಗೆ | ೭೦೨೩೮೯೧೯೨ | ಭಗಣಗಳೂ |
| ಶನಿಗೆ | ೧೪೫೬೭೨೯೮ | ಭಗಣಗಳೂ ಇರುತ್ತವೆ. |

(ಸೂರ್ಯಸಿದ್ಧಾಂತಾದಿ ಗ್ರಂಥಗಳಲ್ಲಿ ಗ್ರಹಭಗಣಗಳನ್ನು ಮಹಾಯುಗ ಕಾಲಕ್ಕೆ ಮಾತ್ರ ಹೇಳಿರುವರು ಅದರ ಕ್ರಮದಂತೆ ನೋಡಿದರೆ ಕಲ್ಪಕ್ಕೆ ಹೇಳಿರುವ ಈ ಭಗಣಗಳು ಸ್ವಲ್ಪ ವ್ಯತ್ಯಾಸವನ್ನು ಪಡೆಯುತ್ತವೆ.)

ಇಲ್ಲಿ ಅಂಕಾನಾಂ ವಾಮತೋ ಗತಿಃ ಎಂಬ ನ್ಯಾಯವನ್ನು ಅನುಸರಿಸಿ ಅಂಕಿ ಅಂಶಗಳನ್ನು ಕೊಡಲಾಗಿದೆ.

ಆದಿತ್ಯಮಂದ ಗಗನಾಷ್ಟಾವಹ್ನಯಃ । ಚಂದ್ರಮಸೋಽಷ್ಟ್ಯಷ್ಟಾರ್ಥ-
ವೆಸ್ವರ್ಥದಿಕ್ಷ್ವಷ್ಟವೇದಾಃ । ಕುಜಮಂದ ಯಮ ನಖಪಕ್ಷಾಃ ।
ಬುಧಮಂದಸ್ಯ ದ್ವಿತ್ರಿಗುಣಾಃ । ಜೀವಜೀವಮಂದಸ್ಯ ಬಾಣ
ಶರವಸವಃ। ಶುಕ್ರಮಂದಸ್ಯ ಗುಣಶರವಸವಃ । ಸೌರಮಂದಸ್ಯ
ಶಶಿವೇದಾಃ । ಚಂದ್ರಪಾತಸ್ಯ ವಸುರಸಶಶಿರುದ್ರಾಗ್ನಿ ದಹನ-
ಯಮಲಾಃ । ಭೌಮಪಾತಸ್ಯ ಮಹೀಧ್ರರಂಧ್ರಯಮಲಾಃ ।
ಬುಧಪಾತಸ್ಯ ಚಂದ್ರಾರ್ತ್ರ್ಯರ್ಥ ಯಮಲಾಃ । ಜೀವಪಾತಸ್ಯ
ಗುಣರಸಾಃ । ಸೌರಪಾತಸ್ಯ ತ್ರಿನವವಸವಃ । ಅಷ್ಟಶೂನ್ಯೋ
ವಿಲಯಮರಸಖರ ವಿಮುನಿ ವಸುನಿಶಾಕರಾಃ ।

---

ಇನ್ನು ಗ್ರಹಗಳ ಮಂದೋಚ್ಚಗಳು ಕಲ್ಪದಲ್ಲಿ ನಡೆಯುವ ಭಗಣ ಸಂಖ್ಯೆಯು ವಿವರಿಸಲ್ಪಡುವುದು.

| | | | | | |
|---|---|---|---|---|---|
| ರವಿಮಂದೋಚ್ಚ | ಭಗಣ | ಸಂಖ್ಯೆ | | = | ೩೮೦ |
| ಚಂದ್ರ | ,, | ,, | ,, | = | ೪೮೮೨೮೨೮ |
| ಕುಜ | ,, | ,, | ,, | = | ೧೫೨೦೨ |
| ಬುಧ | ,, | ,, | ,, | = | ೫೩೩೨ |
| ಗುರು | ,, | ,, | ,, | = | ೮೫೫ |
| ಶುಕ್ರ | ,, | ,, | ,, | = | ೮೫೩ |
| ಶನಿ | ,, | ,, | ,, | = | ೪೧ |
| ಚಂದ್ರಪಾತ | ಭಗಣ | ಸಂಖ್ಯೆ | | = | ೨೩೨೩೧೧೧೬೮ |
| ಭೌಮಪಾತ | ,, | ,, | | = | ೨೯೭ |
| ಬುಧ | ,, | ,, | ,, | = | ೨೨೧೧ |
| ಗುರು | ,, | ,, | ,, | = | ೬೪ |
| ಶನಿ | ,, | ,, | ,, | = | ೮೯೩ |

ಈ ಗ್ರಹಪಾತಗಳ ಒಟ್ಟು ಭಗಣ ಸಂಖ್ಯೆಯು ಎಂಟು ಸೊನ್ನೆಗಳಿಂದ ಕೂಡಿದ ಇಷ್ಟು (೧೮೭೨೦ ೬೨೦) ಸಂಖ್ಯೆಯುಳ್ಳದ್ದಾಗುವುದು. (ಮೇಲೆ ಉಕ್ತವಾಗಿರುವ ಭಗಣ ಸಂಖ್ಯೆಯು ಪ್ರಾಚೀನ ಸಿದ್ಧಾಂತ ಗ್ರಂಥಗಳಿಗೆ ಸಂಪೂರ್ಣ ವಿರೋಧವಾಗಿದೆ.

ಸ ನವಗ್ರಹಾಣಾಂ ಪ್ರಾಗ್ಗ್ಯಾಪಮಾನಾಂ ಕಲ್ಪಾಷ್ಟಕ ಕಲ್ಪಾಧನೋ ಯಸ್ಯ ಭಗಣಭಾಗೋಪಕ್ರಿಯತೇ ತಸ್ಯೈವ ಕಕ್ಷಾಯೋಜನಾನಿ ಲಭ್ಯಂತೇ । ಯಸ್ಯ ಬಹವೋ ಭಗಣಪರಿವರ್ತಾಸ್ತಸ್ಯೋಪರಿ ತಸ್ಯ ಕಕ್ಷಾ । ಯಸ್ಯ ಅಲ್ಪಾಃ ಕಕ್ಷಾಃ ವರ್ಗ ದಶಭಾಗಮೂಲಕಕ್ಷಾ ಕರ್ಣಃ ತದರ್ಧೇನೋ ಪರಿಭವೋ ಗ್ರಹಾವಸ್ಥಾನಂ ಕರ್ಣವರ್ಗಸ್ಯ ದಶಗುಣಿತಸ್ಯ ಮೂಲಕಕ್ಷಾ । ಏವಂ ಸರ್ವವೃತ್ತಾನಾಂ ಪರಿಧಿ ವ್ಯಾಸಾನಯನಂ ।

ಯತ್ರ ಚ ಸರ್ವಗ್ರಹಾಣಾಂ ಏಕತ್ವಮೇವ ದೃಶ್ಯತೇ ಸಾ ಖರಸೇಂದು ಯಮ ಕಕ್ಷಾ । ತಸ್ಯಾಃ ಯೋಜನ[1]ತಲಿಪ್ತೇ ಮಧ್ಯಮಖಖರಸೇಂದು ಯಜ್ಞೈರ್ಯಸ್ಯೈವ ಕಕ್ಷಾ ವಿಭಜ್ಯಂತೇ । ತಸ್ಯೈವ

ಪೂರ್ವ ದಿಗ್ಗಮನದಿಂದ ಹೋಗುವ ಗ್ರಹಗಳ ಮತ್ತು ಪಾತಗಳ ಭಗಣ ಸಂಖ್ಯೆಯಿಂದ ಆಯಾ ಗ್ರಹಗಳ ಕಕ್ಷಾಪ್ರಮಾಣವನ್ನು ಊಹಿಸಿ ತಿಳಿಯಬೇಕು. ಯಾವ ಗ್ರಹಕ್ಕೆ ಅಧಿಕ ಸಂಖ್ಯೆಯಲ್ಲಿ ಭಗಣವು ಹೇಳಲ್ಪಟ್ಟಿದೆಯೋ, ಆ ಗ್ರಹ ಕಕ್ಷೆಯು ಅಧೋಭಾಗದಲ್ಲಿಯೂ, ಸ್ವಲ್ಪ ಭಗಣಗಳಿಂದ ಕೂಡಿರುವ ಗ್ರಹ ಕಕ್ಷೆಯು ಊರ್ಧ್ವಭಾಗವಲ್ಲಿರುವುದೆಂದೂ ತಿಳಿಯಬೇಕು. ಗ್ರಹ ಕಕ್ಷಾ ಪ್ರಮಾಣವನ್ನು ತಿಳಿಯಬೇಕಾದರೆ ಸೂರ್ಯ ಕಿರಣವ್ಯಾಪ್ತಿಯಿರುವ ಆಕಾಶಕಕ್ಷಾ ಮಾನವನ್ನು ಆಯಾ ಗ್ರಹಗಳ ಕಲ್ಪ ಭಗಣ ಸಂಖ್ಯೆಯಿಂದ ಭಾಗಿಸಿದರೆ ಆಯಾ ಗ್ರಹಗಳ ಕಕ್ಷಾ ಪ್ರಮಾಣವು ದೊರಕುವುದು. ಕಕ್ಷಾ ಪ್ರಮಾಣದ ದಶ ಭಾಗಕ್ಕೆ ವರ್ಗ ಮೂಲವನ್ನು ಕಂಡು ಹಿಡಿದರೆ ಆ ಸಂಖ್ಯೆಯು ಆ ಕಕ್ಷೆಯ ಕರ್ಣರೇಖಾ ಮಾನವೆನಿಸುವುದು. ಹಾಗೆಯೇ ಕರ್ಣವರ್ಗವನ್ನು ಹತ್ತರಿಂದ ಗುಣಿಸಿದರೆ ಮೂಕಕ್ಷಾ ಮಾನವು ತಿಳಿದು ಬರುವುದು. ಈ ರೀತಿಯಾದ ಗಣಿತ ಕ್ರಮದಿಂದ ಸರ್ವಗ್ರಹಗಳ ಕಕ್ಷಾ, ವ್ಯಾಸ, ಮಾನಗಳನ್ನು ಅರಿಯಬೇಕು.

ಸಕಲಕಕ್ಷಾಜ್ಞಾನಕ್ಕೂ ಆಕಾಶ ಕಕ್ಷಾಪ್ರಮಾಣವು ಅತ್ಯವಶ್ಯಕವಾದುದರಿಂದ ಆ ಕಕ್ಷಾಮಾನವನ್ನು ಆಗಮಪ್ರಾಮಾಣ್ಯದಿಂದ ಒಪ್ಪಿಕೊಳ್ಳಬೇಕು. ಆಗಮಗಳಲ್ಲಿ ಬ್ರಹ್ಮಾಂಡಕಕ್ಷಾಮಾನವು (೧೮೭೧೨೦೮೦೮೬೪೦೦೦೦೦೦) ಇಷ್ಟೆಂದು ಹೇಳಲ್ಪಟ್ಟಿದೆ ಈ ಪ್ರಮಾಣವನ್ನು ಆಯಾಗ್ರಹಗಳ ಭಗಣಸಂಖ್ಯೆಯಿಂದ ಭಾಗಿಸಿದರೆ ಬರುವ ಸಂಖ್ಯೆಯು ಆಗ್ರಹಗಳ ಕಕ್ಷಾಪ್ರಮಾಣವೆನಿಸುವುದು. ಮತ್ತು ಆ ಸಂಖ್ಯೆಯು

1 ಇದು ಅಶುದ್ಧಪಾಠ

ಲಿಪ್ತ್ಯಯೋಜನಾನಿ ಲಭ್ಯಂತೇ । ಕಲ್ಪಾದ್ಯಯೋಜನ ಸಮಾ
ನ್ಯೈ ಕಕ್ಷಾಃ ।

ಯದನಂತರಂ ವಿತಿಮಿರಂ ರವಿಃ ಕರೋತಿ ಪಕ್ಷಪಕ್ಷೇಶ್ಚ[1]ತಪ್ರೋದಾ-
ರ್ಕಮಂಡಲಪ್ರಮಾಣಂ ವೇದವೇದಾಶ್ಚಂದ್ರಮಸಃ । ಪಂಚ
ದಶ ಭೌಮಸ್ಯ । ಷಷ್ಟಿರ್ಬುಧಸ್ಯ । ಖಾರ್ಕಾ ಜೀವಸ್ಯ ।
ಖಖಯಮಾಶ್ಶುಕ್ರಸ್ಯ । ತ್ರಿಂಶತ್ಸೌರಸ್ಯ ।

ದ್ವಾದಶ ದೃಶ್ಯಾದೃಶ್ಯಾಂಶಾಶ್ಚಂದ್ರಮಸಃ । ಸಪ್ತದಶ ಭೌಮಸ್ಯ ।
ತ್ರಯೋದಶ ಬುಧಸ್ಯ। ಏಕಾದಶ ಜೀವಸ್ಯ। ನವ ಚ ಶುಕ್ರಸ್ಯ।
ಪಂಚದಶ ಸೌರಸ್ಯ । ತ್ರಿಭಾಗೋನಾಶ್ಚತುರ್ದಶಭಾಗಾ

---

ಯೋಜನಾತ್ಮಕವಾದದ್ದೆಂದು ಭಾವಿಸಬೇಕು. ಕಲ್ಪದಲ್ಲಿ ಮೊದಲನೆಯ ಭ ಪರಿಮಾಣವೇ ಆ ಕಕ್ಷೆಯ ಆಯಾಮವಾಗುವುದು. ಆಯೋಜನಗಳ ಲಿಪ್ತ್ಯಾತ್ಮಕವಾಗಿ ವ್ಯವಹರಿಸಬಹುದು.

ಸೂರ್ಯ ಕಾಂತಿಯಿಂದ ಪ್ರಕಾಶವಾಗಿ ಕಾಣುವ ಗ್ರಹ ಭಾಗಗಳ ಮಾಣವು ಈ ರೀತಿ ಇದೆ.

| | | | |
|---|---|---|---|
| ಚಂದ್ರ | ಬಿಂಬಭಾಗ | | ೪೪ |
| ಕುಜನ | ,, | | ೧೫ |
| ಬುಧನ | ,, | | ೬೦ |
| ಗುರುವಿನ | ,, | | ೧೨೦ |
| ಶುಕ್ರನ | ,, | | ೨೦೦ |
| ಶನಿಯ | ,, | | ೩೦ |
| ಚಂದ್ರ | ಮಂಡಲದಲ್ಲಿ | ದೃಶ್ಯ ಭಾಗ | ೧೨ |
| ಕುಜ | ,, | ,, | ೧೭ |
| ಬುಧ | ,, | ,, | ೧೩ |
| ಗುರು | ,, | ,, | ೧೧ |
| ಶುಕ್ರ | ,, | ,, | ೯ |
| ಶನಿ | ,, | ,, | ೧೫ |

1 ಇದು ಅಶುದ್ಧಪಾಠ.

ಸ್ಸೂರ್ಯಸ್ಯ । ಏಕತ್ರಿಂಶದ್ಭಾಗಾಃ ಷಟ್‌ತ್ರಿಂಶಲ್ಲಿಪ್ತಾಶ್ಚಂದ್ರ ಮಸಃ । ಸಪ್ತತಿರ್ಭೌಮಸ್ಯ । ವಸುರಾಮಾ ಬುಧಸ್ಯ । ಗುಣ ರಾಮಾ ಜೀವಸ್ಯ । ಭವಾಃ ಶುಕ್ರಸ್ಯ । ತ್ರಿಂಶಚ್ಛನೈಶ್ಚರಸ್ಯ ॥

ಏವಂ ಪರಿಧಯೋ ಭೌಮಸ್ಯ ಶೀಘ್ರಪರಿಧಿ ಗುಣವೇದಾಶ್ಚ ಸಂಭಾಗಾ [1]ಲಿಪ್ತಾಃ ಚತ್ವಾರಿಂಶದ್ಬುಧಸ್ಯ ಭಾಗಾಯಮಾಗ್ನಿ ಚಂದ್ರಾಃ ಅಷ್ಟಗುಣಾ ಜೀವಸ್ಯ । ವಸ್ವರ್ಥಪಕ್ಷಾಃ ಶುಕ್ರಸ್ಯ । ಪಂಚ ವಿಂಶತಿಃ ಸೌರಸ್ಯ । ಪರಿವೇಷೇನ ಊರ್ಧ್ವಶ್ಚ ಗ್ರಹಗತಿ ರ್ಜ್ಞೇಯಾ ॥

---

| | | | |
|---|---|---|---|
| ಸೂರ್ಯಮಂಡಲದಲ್ಲಿ | ಮಂದಪರಿಧ್ಯಂಶ | | ಭಾಗ–೧೩ ಲಿಪ್ತಿ–೪೦ |
| ಚಂದ್ರ | ,, | ,, | ಭಾಗ–೩೧ ಲಿಪ್ತಿ–೩೬ |
| ಕುಜ | ,, | ,, | ೭೦ |
| ಬುಧ | ,, | ,, | ೩೮ |
| ಶುಕ್ರ | ,, | ,, | ೧೧ |
| ಶನಿ | ,, | ,, | ೩೦ |

ಹೀಗೆಯೇ ಕುಜಾದಿಗ್ರಹಗಳಿಗೆ ಶೀಘ್ರಪರಿಧ್ಯಂಶಗಳು ಓಜಯುಗ್ಮ ರಾಶಿ ಭೇದದಿಂದ ಉಕ್ತವಾಗಿವೆ.

| | | ಓಜರಾಶಿ | ಯುಗ್ಮರಾಶಿ |
|---|---|---|---|
| ಕುಜನ | ಶೀಘ್ರ ಪರಿಧ್ಯಂಶ | ೨೩೫ | ೨೩೫ |
| ಬುಧನ | ,, | ೧೩೨ | ೧೩೩ |
| ಗುರುವಿನ | ,, | ೭೨ | ೭೦ |
| ಶುಕ್ರನ | ,, | ೨೩೦ | ೨೬೨ |
| ಶನಿ | ,, | ೪೦–೩೭ | ೩೯ |

(ಇಲ್ಲಿ ಕೊಟ್ಟಿರುವ ಅಂಕಿ ಅಂಶಗಳು ಸೂರ್ಯ ಸಿದ್ಧಾಂತಾನುಸಾರವಾಗಿವೆ ಏಕೆಂದರೆ ಈ ಪುರಾಣದಲ್ಲಿ ಮೂಲಭಾಗ ಅನೇಕವಾಗಿ ಬಿಟ್ಟುಹೋಗಿದೆ.) ಹೀಗೆ ಶೀಘ್ರೋಚ್ಚಮಂದೋಚ್ಚಾದಿಗಳ ಆಕರ್ಷಣ ವಶದಿಂದ ಗ್ರಹಗತಿಗಳು ನಾನಾರೀತಿ ಬದಲಾವಣೆ ಹೊಂದುತ್ತವೆ.

---

[1] ಇದು ಅಶುದ್ಧ ಪಾಠ.

ಖಖರಸೇಂದು ಯಮಲಾನಾಂ ಷಣ್ಣವತಿ ಭಾಗಃ ಪ್ರಥಮಜ್ಯಾ । ತದೇವಂ ಪ್ರಥಮಂ ಜ್ಯಾಂತರಾ । ತಸ್ಯ ಪ್ರಥಮ ಜೀವತಯಾ ಭಾಗಮುಪಹೃತ್ಯಾಪ್ತಂ ಪ್ರಥಮಜ್ಯಾಂತರಾತ್ ಸಂಶೋಧ್ಯ ದ್ವಿತೀಯಂಜ್ಯಾಂತರಂ । ದ್ವಿತೀಯಪ್ರಥಮಜ್ಯಾಂತರಯೋಗೇ ದ್ವಿತೀಯಪ್ರಥಮಂ ಜ್ಯಾಂತರಯೋಗೋ ಜೀವಾ । ತತಃ ಪ್ರಥಮಂ ಜೀವಾಪ್ತಂಸದ್ವಿರೇಯಜ್ಯಾಂತರಾತ್ಸಂಶೋಧ್ಯ ತೃತೀಯಂಜ್ಯಾಂತರಂ । ತತಃ ಪ್ರಥಮಜೀವಯೋಗ ಸ್ತೃತೀಯಾ । ತತಃ ಪ್ರಥಮಜೀವಾತ್ಸಂಶೋಧ್ಯ ಚತುರ್ಥಂ ಜ್ಯಾಂತರಂ। ಏವಂ ತೃತೀಯ ಜೀವಾಯಾಂ ದತ್ವಾ ಚತುರ್ಥೀ ಜ್ಯಾ । ತಸ್ಯಾಃ ಪ್ರಥಮಜೀವಾಯಾಂ ಭಾಗಮಸಹೃತ್ಯಾಪ್ತಂ ಚತುರ್ಥಜ್ಯಾಂತರಾತ್ಸಂಶೋಧ್ಯ ಪಂಚಮಜ್ಯಾಂತರಂ। ತತಶ್ಚ ತುರ್ಥಜೀವಾಯಾಂದತ್ವಾಷಷ್ಠೀಜ್ಯಾ । ತತಃಪ್ರಥಮಜೀವಾಪ್ತ ಪಂಚಮೇಜ್ಯಾಂತರಂ ಸಂಶೋಧ್ಯಷಷ್ಠಂ ಜ್ಯಾತರಂ ಪಂಚಮ ಜೀವಾಯಾಂ ದತ್ವಾ ಸಪ್ತಮಿಾ ಜ್ಯಾ । ತತಃ ಪ್ರಥಮಜೀವಾ-

---

ಮಂಡಲಾಕಾರವಾದ ಒಂದು ವೃತ್ತದಲ್ಲಿ ಹನ್ನೆರಡು ರಾಶಿಗಳಿರುವುವು. ಆ ರಾಶಿಗಳ ಆದ್ಯಂತ ಲಿಪ್ತಿಗಳು ೨೧೬೦೦ ಆಗುವುವು. ಒಂದು ವೃತ್ತವು ಎಷ್ಟೇ ಚಿಕ್ಕದಾದರೂ, ದೊಡ್ಡದಾದರೂ ಅದರಲ್ಲಿ ೨೧೬೦೦ ಲಿಪ್ತಿಗಳು ಇರಬೇಕು. ಅದರ ಕೇಂದ್ರವನ್ನು ಕಂಡುಹಿಡಿದು ಕೇಂದ್ರಗಾಮಿಯಾಗುವಂತೆ ಪೂರ್ವಪಶ್ಚಿಮವಾಗಿಯೂ ದಕ್ಷಿಣೋತ್ತರವಾಗಿಯೂ ವ್ಯಾಸಸಂಜ್ಞೆಯುಳ್ಳ ರೇಖೆಗಳನ್ನು ಎಳೆಯುವುದರಿಂದ ಆ ವೃತ್ತವು ನಾಲ್ಕು ಭಾಗಗಳುಳ್ಳದ್ದಾಗುವುದು. ಆಗ ಒಂದೊಂದು ಭಾಗಕ್ಕೂ ಮೂರು ಮೂರು ರಾಶಿಗಳು ಬೇರ್ಪಡುವುವು. ಈ ಮೂರು ರಾಶಿಗಳ ಮಧ್ಯದಲ್ಲಿ ಸ್ಪಷ್ಟಗ್ರಹಸ್ಥಾನವನ್ನು ಸುಲಭವಾಗಿ ತಿಳಿದುಕೊಳ್ಳಬೇಕಾದರೆ ಆ ವೃತ್ತದ ಎಷ್ಟನೆಯ ಭಾಗದಲ್ಲಿ ಗ್ರಹವಿದೆಯೆಂಬುದನ್ನು ಮೊದಲು ಅರಿಯಬೇಕಾಗುವುದು. ಆ ಭಾಗವನ್ನು ವೃತ್ತಪರಿಧಿಯಲ್ಲಿ ತಿಳಿಸುವುದೇ ಕ್ರಮಜ್ಯಾ. ವೃತ್ತದ ಪ್ರಥಮ ತೃತೀಯಭಾಗಗಳನ್ನು ಓಜಪದಗಳೆಂದೂ, ದ್ವಿತೀಯ ಚತುರ್ಥಭಾಗಗಳನ್ನು ಯುಗ್ಮಪದವೆಂದೂ ವ್ಯವಹರಿಸುವರು. ಪ್ರತಿಪದಕ್ಕೂ ಇಪ್ಪತ್ತುನಾಲ್ಕು ಜ್ಯಾಗಳನ್ನು ಕಲ್ಪಿಸಿರುವರು. ಓಜಪದದ ಅಂತ್ಯಜ್ಯೆಯೂ ಯುಗ್ಮಪದದ ಆದಿಜ್ಯೆಯೂ ಒಂದೇಸಮನಾಗಿರುವುದು. ಅದು ವ್ಯಾಸಾರ್ಧಮಿತವಾಗಿ ಅಂದರೆ ತ್ರಿಜ್ಯಾಸಮವಾದ ಸಂಖ್ಯೆಯಲ್ಲಿರುವುದು. ಆದ್ದರಿಂದಲೇ

ಪ್ತಂ ಸಪ್ತಮಜ್ಯಾಂತರಾತ್ಸಂಶೋಧ್ಯ ಅಷ್ಟಮಂ । ತತ್ಸಪ್ತಮ ಜೀವಾಯಾಂ ದತ್ವಾ ನವಮೀಜ್ಯಾ । ತತಃ ಪ್ರಥಮಜೀವಾಂತರೇಣಾಪ್ತಂ ದಶಮಜ್ಯಾಂತರಾತ್ಸಂಶೋಧ್ಯ ನವಮಂ ಜ್ಯಾಂತರಂ । ತಂ ನವಮಜೀವಾಯಾಂ ದತ್ವಾ ದಶಮೀಜ್ಯಾ । ತತಃ ಪ್ರಥಮಜ್ಯಾವಾಪ್ತಂ ಏಕಾದಶಜ್ಯಾಂತರಾತ್ಸಂಶೋಧ್ಯ ದ್ವಾದಶಂ ಜ್ಯಾಂತರಂ । ತದೇಕಾದಶ ಜೀವಾಯಾಂ ದತ್ವಾ ದ್ವಾದಶೀಜ್ಯಾ ತತಃ ಪ್ರಥಮ ಜ್ಯಾವಾಪ್ತಂ ಪಂಚದಶ ಜ್ಯಾಂತರಾತ್ಸಂಶೋಧ್ಯ ಷೋಡಶಂ ಜ್ಯಾಂತರಂ । ತತ್ಪಂಚದಶ ಜೀವಾಯಾಂ ಸಂಶೋಧ್ಯ ಷೋಡಶೀಜ್ಯಾ । ತತಃ ಪ್ರಥಮ ಜ್ಯಾವಾಪ್ತಂ ಷೋಡಶಜ್ಯಾಂತರಾತ್ಸಂಶೋಧ್ಯ ಸಪ್ತದಶಂ ಜ್ಯಾಂತರಂ ತತ್ ಷೋಡಶಜೀವಾಯಾಂ ದತ್ವಾ ಸಪ್ತದಶೀ ಜ್ಯಾ । ತತಃ ಪ್ರಥಮಜ್ಯಾವಾಪ್ತಂ ಸಪ್ತದಶ ಜ್ಯಾಂತರಾತ್ ಸಂಶೋಧ್ಯ ಅಷ್ಟಾದಶಮಂ ಜ್ಯಾಂತರಂ । ತತ್ಸಪ್ತದಶ ಜೀವಾಯಾಂ ದತ್ವಾಷ್ಟಾದಶೀಜ್ಯಾ ತತಃ ಪ್ರಥಮಜ್ಯಾವಾಪ್ತಂ ಅಷ್ಟಾದಶ ಜ್ಯಾಂತರಾತ್ಸಂಶೋಧ್ಯ ಏಕೋನವಿಂಶಂ ಜ್ಯಾಂತರಂ । ತದಷ್ಟಾದಶ ಜೀವಾಯಾಂ ದತ್ವಾ ಏಕೋನವಿಂಶೀ ಜ್ಯಾ। ತತಃ ಪ್ರಥಮ ಜ್ಯಾವಾಪ್ತಮೇಕೋನವಿಂಶಜ್ಯಾಂತರಾತ್ಸಂಶೋಧ್ಯ ವಿಂಶತಿತಮಂ ಜ್ಯಾಂತರಂ । ತದೇಕೋನವಿಂಶ ಜೀವಾಯಾಂ ದತ್ವಾ ವಿಂಶತಿತಮೀ ಜ್ಯಾ । ತತಃ ಪ್ರಥಮ

---

೨೪ನೆಯ, ಜ್ಯೆಯು ತ್ರಿಜ್ಯಾತುಲ್ಯವಾದಂತಾಯಿತು. ಪ್ರಥಮ ಜ್ಯಾಪ್ರಮಾಣವು ಒಟ್ಟು ವೃತ್ತದ, ೨೧೬೦೦ ಕಲೆಗಳ ೯೬ನೆಯ ಒಂದುಭಾಗ ಅಂದರೆ ೨೨೫ ಲಿಪ್ತಿಗಳು ಪ್ರಥಮಜ್ಯಾರ್ಧವಾಗುವುದೆಂದು ಗ್ರಂಥಕಾರರೇ ನಿರೂಪಿಸಿರುವರು. ಇದರಿಂದ ಉಳಿದ ಜ್ಯಾಪ್ರಮಾಣವನ್ನು ಕಂಡುಹಿಡಿಯುವ ಗಣಿತಕ್ರಮವು ಇಲ್ಲಿ ವಿಸ್ತೃತವಾಗಿದೆ ಪ್ರಥಮಜ್ಯಾರ್ಧವನ್ನು ದ್ವಿಗುಣಮಾಡಿ ಅದರಲ್ಲಿ ಒಂದನ್ನು ಕಳೆದರೆ ದ್ವಿತೀಯ ಜ್ಯಾರ್ಧವಾಗುವುದು. ಪ್ರಥಮ ಜ್ಯಾರ್ಧದಿಂದ ದ್ವಿತಿ ಯ ಜ್ಯಾರ್ಧವನ್ನು ಭಾಗಿಸಿ, ಬಂದ ಲಬ್ಧಕ್ಕೆ ಜ್ಯಾಸಂಖ್ಯೆಯನ್ನು ನೇರಿಸಿ ಪ್ರಥಮಜ್ಯಾರ್ಧದಲ್ಲಿ ಕಳೆದು ಅದನ್ನು ದ್ವಿತೀಯ ಜ್ಯಾಪಿಂಡಕ್ಕೆ ನೇರಿಸಿದರೆ ತೃತೀಯ ಜ್ಯಾರ್ಧಪ್ರಮಾಣವು ದೊರೆಯುವುದು. ಅದನ್ನು ಪ್ರಥಮಜ್ಯಾರ್ಧದಿಂದ ಭಾಗಿಸಿ ಬಂದ ಲಬ್ಧವನ್ನು ಜ್ಯಾಸಂಖೆಗೆ ನೇರಿಸಿ

**ಜ್ಯಾವಾಪ್ತಂ ವಿಂಶಾಜ್ಜ್ಯಾಂತರಾತ್ಸಂಶೋಧ್ಯೈಕವಿಂಶಂ ಜ್ಯಾಂತರಂ। ತದ್ವಿಂಶತಿ ಜೀವಾಯಾಂ ದತ್ವಾ ಏಕವಿಂಶೀ ಜ್ಯಾ। ತತಃ ಪ್ರಥಮಜ್ಯಾವಾಪ್ತಂ ಏಕವಿಂಶಾಜ್ಜ್ಯಾಂತರಾತ್ಸಂಶೋಧ್ಯ ದ್ವಾವಿಂಶಂ ಜ್ಯಾಂತರಂ । ತದೇಕವಿಂಶ ಜೀವಾಯಾಂ ದತ್ವಾ ದ್ವಾವಿಂಶೀಜ್ಯಾ। ತತಃ ಪ್ರಥಮಜ್ಯಾವಾಪ್ತಂ ದ್ವಾವಿಂಶಾಜ್ಜ್ಯಾಂತರಾತ್ಸಂಶೋಧ್ಯ ತ್ರಯೋವಿಂಶಂ ಜ್ಯಾಂತರಂ । ತದ್ದ್ವಾವಿಂಶ ಜೀವಾಯಾಂ ದತ್ವಾ ತ್ರಯೋವಿಂಶೀ ಜ್ಯಾ । ತತಃ ಪ್ರಥಮಂ ಜ್ಯಾವಾಪ್ತಂ ತ್ರಯೋವಿಂಶಾಜ್ಜ್ಯಾಂತರಾತ್ಸಂಶೋಧ್ಯ ಚತುರ್ವಿಂಶಂ ಜ್ಯಾಂತರಂ । ತತ್ತ್ರಯೋವಿಂಶಜೀವಾಯಾಂ ದತ್ವಾ ಚತುರ್ವಿಂಶೀ ಜ್ಯಾ । ತತಃ ಪ್ರಥಮಜ್ಯಾವಾಪ್ತಂ ಚತುರ್ವಿಂಶಜ್ಜ್ಯಾಂತರಾತ್ಸಂಶೋಧ್ಯ ಪಂಚವಿಂಶಂ ಜ್ಯಾಂತರಂ । ತಚ್ಚತುರ್ವಿಂಶ ಜೀವಾಯಾಂ ದತ್ವಾ ಪಂಚವಿಂಶೀ ಜ್ಯಾ ।**

---

ಪ್ರಥಮಜ್ಯಾರ್ಧದಲ್ಲಿ ಕಳೆದು ತೃತೀಯಜ್ಯಾರ್ಧಕ್ಕೆ ಸೇರಿಸುವುದರಿಂದ ಚತುರ್ಥಜ್ಯಾ ಪ್ರಮಾಣವು ದೊರೆಯುವುದು. ಇದೇರೀತಿ ಇಪ್ಪತ್ತುನಾಲ್ಕು ಜ್ಯಾರ್ಧಪ್ರಮಾಣವನ್ನೂ ಆನಯನಮಾಡಿದರೆ, ಜ್ಯಾರ್ಧಪ್ರಮಾಣಸಂಖ್ಯೆಯು ಈರೀತಿ ಕಂಡುಬರುವುದು.

| | | | | | |
|---|---|---|---|---|---|
| ೧ | = | ೨೨೫ | ೧೩ | = | ೨೫೮೫ |
| ೨ | = | ೪೪೯ | ೧೪ | = | ೨೭೨೮ |
| ೩ | = | ೬೭೧ | ೧೫ | = | ೨೮೫೯ |
| ೪ | = | ೮೯೦ | ೧೬ | = | ೨೯೭೮ |
| ೫ | = | ೧೧೦೫ | ೧೭ | = | ೩೦೮೪ |
| ೬ | = | ೧೩೧೫ | ೧೮ | = | ೩೧೭೭ |
| ೭ | = | ೧೫೨೦ | ೧೯ | = | ೩೨೫೬ |
| ೮ | = | ೧೭೧೯ | ೨೦ | = | ೩೩೨೧ |
| ೯ | = | ೧೯೨೦ | ೨೧ | = | ೩೩೭೨ |
| ೧೦ | = | ೨೦೯೩ | ೨೨ | = | ೩೪೦೯ |
| ೧೧ | = | ೨೨೬೭ | ೨೩ | = | ೩೪೩೧ |
| ೧೨ | = | ೨೪೩೧ | ೨೪ | = | ೩೪೩೮ |

೩ ಖರಸೇಂದುಯಮುಕಕ್ಷಾಯೋಂ ಚ ವ್ಯಾಸಾರಂ ತದೇವಾನುಪದ-ನ್ಯಾಸಾಯೋಂ ಜ್ಯಾಂತರ ವ್ಯಸ್ತಾನಾಮಂತರಾಲಯೋಗೇ ಚತು-ರ್ವಿಂಶತಿಃ ಶರಾ ಭವಂತಿ । ಕ್ರಮಜ್ಯಾಕೃತಿಜೀವಾಭಿಸತ್ಕ್ರಮ ಜ್ಯಾಕೃತಿಃ ಶರೇ ಯಾಸಾಂ ಲಿಪ್ತಾನಾಂ ಜೀವಾಕ್ರಿಯತೇ ತತ್ಕೇಂದ್ರಸ್ತಸ್ಯ ಚ ರಾಶಿತ್ರಯೇ ಪದಾಖ್ಯಾಪ್ರಥಮಪರಸ್ಥೇ ತದ್ಗಮಂ ಚತುರ್ಥಪದಸ್ಥೇ ಚಕ್ರಾದೂನಂ ।

ಜ್ಯಾಕೇಂದ್ರಲಿಪ್ತಾ ರಾಶಿಲಿಪ್ತಾಷ್ಟವಿಭಾಗೇನ ವಿಭಾಜ್ಯಾ । ಲಬ್ಧಾಂಕ ಸಮಾಕ್ಷ ಸ್ಥಾಪ್ಯಾ । ಅವಶೇಷಂ ತದನಂತರಂ ಜ್ಯಾಂತರೇಣ ಗುಣಯೇತ್ । ರಾಶಿಲಿಪ್ತಾಷ್ಟಭಾಗೇನ ವಿಭಜೇತ್ । ಲಬ್ಧಂ ಸ್ಥಾಪಿತಜೀವಾಯೋಂ ದತ್ವಾ ಇಷ್ಟಜ್ಯಾಸಿದ್ಧಿಃ । ಕಾಲಕ್ಷಣೇ ಭ್ಯೋ ಲಿಪ್ತತ್ವೇನ ಪರಿಕಲ್ಪಿತೇಭ್ಯೋ ಜೀವಾಕಾರ್ಯಾ । ಲಿಪ್ತಾಭ್ಯೋ ಯಾವಂತಿ ಜ್ಯಾಂತರಾಣಿ ಸಂಶುಧ್ಯಂತಿ ತಾವಂತಿ ಸಂಶೋಧ್ಯ ಅವಶಿಷ್ಟಭಾಗ ಲಿಪ್ತಾಷ್ಟಭಾಗಾಹತ

---

ಮೇಲೆ ಹೇಳಿದ ಜ್ಯಾಗಳಿಗೆ ಕ್ರಮಜ್ಯೆಯೆಂದು ಹೆಸರು. ಈ ಕ್ರಮಜ್ಯೆ ಸಂಖ್ಯೆಯನ್ನು ತ್ರಿಜ್ಯಾ ಸಂಖ್ಯೆಯಿಂದ ಕಳೆದರೆ ಉತ್ಕ್ರಮಜ್ಯಾ ಸಂಖ್ಯೆಯು ದೊರೆಯುವುದು. ೨೧೬೦೦ ಕಲೆಗಳಿಂದ ಕೂಡಿದ ಮಂಡಲದಲ್ಲಿ ಜ್ಯಾ ಮತ್ತು ಚಾಪ ಇವುಗಳ ಅಂತರಾಳ ಭಾಗಕ್ಕೆ ಶರವೆಂದು ಹೆಸರು. ವೃತ್ತ ಪರಿಧಿಯೇ ಚಾಪವೆನಿಸುವುದು ಕ್ರಮಜ್ಯೆಯ ಸಂಖ್ಯೆಯನ್ನುನುಸರಿಸಿ, ಶರಗಳೂ ಇಪ್ಪತ್ತ ನಾಲ್ಕು ಆಗುವುವು. ಅಭಿಷ್ಟ ಕಾಲದಿಂದ ಜ್ಯಾಸಾಧನ ಮಾಡಬೇಕಾದರೆ ರಾಶ್ಯಾತ್ಮಕವಾಗಿರುವ ಸಂಖ್ಯೆಯು ಯಾವಪದಕ್ಕೆ ಸೇರುವುದೆಂಬುದನ್ನು ತಿಳಿದು ಅದನ್ನು ಲಿಪ್ತೀಕರಿಸಿಕೊಳ್ಳಬೇಕು. ಅದು ಪ್ರಥಮ ಪದಗಳಾದರೆ ಈ ಮೂರು ರಾಶಿಯಿಂದಲೂ ದ್ವಿತೀಯ ಪದವಾದರೆ ಆರರಿಂದಲೂ, ತೃತೀಯ ಪದವಾದರೆ ಒಂಭತ್ತರಿಂದಲೂ, ಚತುರ್ಥ ಪದವಾದರೆ ಹನ್ನೆರಡರಿಂದಲೂ ಕಳೆಯಬೇಕು.

ಉಳಿದಿರುವ ಕಲೆಗಳನ್ನು ೨೨೫ರಿಂದ ಭಾಗಿಸಿ, ಬಂದ ಲಬ್ಧವು ಎಷ್ಟು ಜ್ಯಾದಿಂದ ಮುಂದಿನದಾಗುವುದೆಂದು ತಿಳಿದು, ಆ ಗತಗಮ್ಯಾಂತರ ಜ್ಯಾ ಸಂಖ್ಯೆಯಿಂದ ಗುಣಿಸಿ ೨೨೫ರಿಂದ ಭಾಗಿಸಬೇಕು. ಆ ಫಲವನ್ನು ಗತವಾದ ಜ್ಯಾ ಸಂಖ್ಯೆಗೆ ಸೇರಿಸಿದರೆ ಇಷ್ಟಜ್ಯೆಯಾಗುವುದು. ಅದರಿಂದ ಚಾಪವನ್ನು ಆನಯನಮಾಡಬೇಕು

ಮಶುದ್ಧಜ್ಯಾಂತರೇಣ ವಿಭಜೇತ್ । ಲಬ್ಧಹತಾಸ್ತು ಅದ್ಯಷ್ಟಕ ಭಾಗಲಿಪ್ತಾಸು ಕ್ಷಿಪೇತ್ ।

ಶರಾಂತರೈರೇವಂ ಶರಚಾಪಃ ಭಾಗಚತುರ್ವಿಂಶತಿಜ್ಯಾಪರಮಾಪ ಕ್ರಮಜ್ಯಾ ಮೇಷಾದಿಸ್ಥೋ ವಿಷುವಲ್ಲೇಖಾಸ್ಥೋ ಗ್ರಹೋ ಭವತಿ ಕುಲೀರಾದಿಸ್ಥಶ್ಚಾಂತರೇಣ। ಪರಮಾಪಕ್ರಮಾಂತಸ್ಥೋ ಭವತಿ । ತುಲಾದಿಸ್ಥೋ ವಿಷುವಲ್ಲೇಖಾಸ್ಥಃ ಮಕರಾದಿಸ್ಥೋ ದಕ್ಷಿಣೇನ ಪರಮಾಪ ಕ್ರಮ ಹತಾಂ ವ್ಯಾಸಾರ್ಧೇನ ವಿಭಜೇತ್। ಲಬ್ಧಂ ಚಂದ್ರಸ್ಫುಟವಿಕ್ಷೇಪಃ । ತಾತ್ಕಾಲಿಕ ಶೀಘ್ರಂ ಸ್ಫುಟಂ ಸುಪಾತೇ ಯೋಜ್ಯಂ ಬುಧಶುಕ್ರಯೋಃ ಸ್ವಮುದಾವಿಕ್ಷೇಪ-ಹತಾಂ ಸ್ಫುಟಾಂತ್ಯಕರ್ಣೇನ ವಿಭಜೇತ್ । ಲಬ್ಧಂ ತಯೋಃ ಸ್ಫುಟವಿಕ್ಷೇಪಃ ।

---

ಆಗ ಜ್ಯಾ ಪಿಂಡವನ್ನು ಗಮ್ಯಜ್ಯಾ ಪಿಂಡದಿಂದ ಕಳೆದು ೨೨೫ರಿಂದ ಗುಣಿಸಿ ಜ್ಯಾಂತರ ಸಂಖ್ಯೆಯಿಂದ ಭಾಗಿಸಿ ಬಂದ ಸಂಖ್ಯೆಯನ್ನು ೫೨೫ರ ವರ್ಗ ಸಂಖ್ಯೆಗೆ ಸೇರಿಸಿದರೆ ಬರುವ ಸಂಖ್ಯೆಯೇ ಚಾಪವೆನಿಸುವುದು.

ಹೀಗೆ ಶರಾಂತರಗಳಿಂದ ಜ್ಯಾಸಾಧನೆಮಾಡುವಾಗ ಗ್ರಹಗಳಿಗೆ ೨೪ನೆಯ ಜ್ಯಾ ಸಂಖ್ಯೆಯು ಪರಮ ಕ್ರಾಂತಿ ಜ್ಯಾ ತುಲ್ಯವಾಗುವುದು ಗ್ರಹಗಳು ಮೇಷಾದಿಯಲ್ಲಿದ್ದರೆ ಆಗ ವಿಷುವದ್ವೃತ್ತದ ಮೇಲಿದ್ದಂತೆ ಆಗುವುದು ಕಟಕಾದಿಯಾಗಿದ್ದರೆ ವಿಷುವದ್ವೃತ್ತಕ್ಕೆ ಪರಮಾಪಕ್ರಮ ಜ್ಯಾಂತರವೊದಗುವುದು. ಅದೇ ಉತ್ತರ ದಿಕ್ಕಿನ ಪರಮ ಕ್ರಾಂತಿ ಭಾಗ. ಹಾಗೆಯೇ ತುಲಾದಿಯು ವಿಷುವದ್ವೃತ್ತದಲ್ಲಿಯೂ ಅಲ್ಲಿಂದ ಮುಂದಿನ ಮಕರಾದಿಯು ದಕ್ಷಿಣ ಪರಮ ಕ್ರಾಂತಿ ಭಾಗದಲ್ಲಿಯೂ ಇದ್ದಂತಾಗುವುದು. ಅಂದರೆ ವಿಷುವದ್ವೃತ್ತದಿಂದ ದಕ್ಷಿಣಕ್ಕೂ, ಉತ್ತರಕ್ಕೂ ಪರಮ ಕ್ರಾಂತಿ ಭಾಗವು ಕಟಕಾದಿ ಮಕರಾದಿಗಳ ವರಿಗೆ ವ್ಯಾಪಿಸುವುದು. ಇಷ್ಟ ಗ್ರಹಗಳ ಕ್ರಾಂತ್ಯಂಶವನ್ನು ತಿಳಿದುಕೊಳ್ಳಬೇಕಾದರೆ ತಾತ್ಕಾಲಿಕ ಗ್ರಹದ ಕ್ರಮಜ್ಯಾ ಸಂಖ್ಯೆಯನ್ನು ಪರಮಾಪಕ್ರಮಜ್ಯೆ (೧೩೯೭) ಯಿಂದ ಗುಣಿಸಿ ತ್ರಿಜ್ಯೆ (೩೪೩೮) ಯಿಂದ ಭಾಗಿಸಿದರೆ ಬರುವ ಜ್ಯಾ ಪ್ರಮಾಣಕ್ಕೆ ಧನುಸ್ಸನ್ನು ಆನಯನ ಮಾಡುವುದರಿಂದ ಆಯಾ ಗ್ರಹಗಳ ಕ್ರಾಂತಿಯು ಲಿಪ್ತ್ಯಾತ್ಮಕವಾಗಿ ಬರುವುದು. ಚಂದ್ರನ ಕ್ರಾಂತ್ಯಂಶವೇ ಸ್ಫುಟವಿಕ್ಷೇಪವೆನಿಸುವುದು. ಬುಧ ಶುಕ್ರರಿಗೆ ಶ್ರೀಘ್ರೋಚ್ಚ ಮಂದೋಚ್ಚ ಸಂಸ್ಕಾರಗಳಿಂದ ಸ್ಫುಟಕ್ರಾಂತಿಯನ್ನು ಆನಯನ ಮಾಡಬೇಕು.

**ತಾತ್ಕಾಲಿಕೆ ಸ್ಫುಟಗ್ರಹ ಸ್ಫುಟಪಾತೆ ಯೋಗಜ್ಯಾಂ ಭೌಮಜೀವ-ಸೌರಾಣಾಂ ಮಧ್ಯವಿಕ್ಷೇಪಹತಾಂ ಸ್ಫುಟಾಂತ್ಯಕರ್ಣೇನ ವಿಭಜೇತ್ । ಲಬ್ಧಂ ತೇಷಾಂ ಸ್ಫುಟವಿಕ್ಷೇಪಃ । ಉತ್ಕ್ರಾಂತಿ ಚಾಪಸ್ಫುಟವಿಕ್ಷೇಪಯೋರ್ದಿಶೈಕೋಯೋಗಃ ತಜ್ಜ್ಞೇ ವಾಯಾಃ ಕ್ರಾಂತಿಃ ತಸ್ಯಾ ನಿಯೋಗಃ ಶಿಷ್ಯತೇ ಸಾ ದಿಕ್, ತದ್ಗೋಲಸ್ಥಶ್ಚ ಗ್ರಹೋ ಭವತಿ । ಏವಂ ಗ್ರಹಾಣಾಂ ಉತ್ತರೇಣ ದಕ್ಷಿಣೇನ ಗತಿರ್ಜ್ಞೇಯಾ ॥**

**ಭಚಕ್ರವಶೇನೋದಯಾಸ್ತಮಯೌ ಕುರ್ವತಃ ಪಶ್ಚಿಮೇನ ಯಾಂತಿ। ಪೂರ್ವಾಂ ವ್ರಜಂತೋ ಭಗಣಪರಿವರ್ತಾನ್ ಕುರ್ವಂತಿ ಚ ಸೂರ್ಯಾಶ್ವಪಾತ್ಯೈಃ ಸಮನೇವ ಲಂಕಾ ದಕ್ಷಿಣೋತ್ತರರೇ-**

---

ಕುಜ, ಗುರು, ಶನಿಗಳ ಸ್ಥಾನವನ್ನು ಗೋಳದಲ್ಲಿ ಅರಿಯ ಬೇಕಾದರೆ, ತಾತ್ಕಾಲಿಕ ಸ್ಫುಟ ಗ್ರಹವನ್ನು ಸ್ಫುಟ ಪಾತದೊಡನೆ ಸೇರಿಸಿ, ಮಧ್ಯಕ್ರಾಂತಿಯಿಂದ ಗುಣಿಸಿ, ಸ್ಫುಟಾಂತ್ಯ ಕರ್ಣದಿಂದ ಭಾಗಿಸಿದರೆ ಬರುವುದೇ ಆಯಾ ಗ್ರಹಗಳ ಸ್ಫುಟ ವಿಕ್ಷೇಪ. ಗೋಳದಲ್ಲಿ ಮೇಷಾದಿಯಾದ ಆರು ರಾಶಿಗಳು ಉತ್ತರ ದಿಕ್ಕಿನವುಗಳಾಗಿಯೂ, ತುಲಾದಿ ಆರು ರಾಶಿಗಳು ದಕ್ಷಿಣದಿಕ್ಕಿನವುಗಳಾಗಿಯೂ, ಆಗುವುವು. ಕ್ರಾಂತಿಜ್ಯೆಯೂ, ಭುಜಜ್ಯೆಯೂ ಒಂದೇ ದಿಕ್ಕಿಗೆ ಸೇರುವುದಾದರೆ ಅವೆರಡರ ಸಂಕಲನದಿಂದ ಗ್ರಹಸ್ಥಾನವಿರುವ ದಿಕ್ಕನ್ನು ಅರಿಯಬೇಕು. ಭಿನ್ನ ದಿಕ್ಕಾದರೆ ಭುಜಜ್ಯೆಯಿಂದ ಕ್ರಾಂತಿಜ್ಯೆಯನ್ನು ಕಳೆದು ಉಳಿದ ಭಾಗದಿಂದ ಗ್ರಹ ಸ್ಥಾನವನ್ನರಿಯಬೇಕು. ಹೀಗೆ ಗ್ರಹಸ್ಥಾನಗಳ ದಕ್ಷಿಣ ಮತ್ತು ಉತ್ತರ ದಿಗ್ಭಾಗ ಗಳನ್ನು ಗೋಳದಲ್ಲಿ ತಿಳಿಯಬೇಕು.

ಪ್ರವಹವಾಯುವಿನಿಂದ ಸುತ್ತುವ ಭಚಕ್ರವಶದಿಂದ ಗ್ರಹಗಳು ನಿತ್ಯ ಉದಯಾಸ್ತಗಳನ್ನು ಪಡೆಯುತ್ತವೆ ಮತ್ತು ಪೂರ್ವಪಶ್ಚಿಮವಾದ ಗಮನವನ್ನು ಹೊಂದುತ್ತವೆ. ಸೂರ್ಯನು ತನ್ನ ಕ್ರಾಂತಿಗನುಸಾರವಾಗಿ ಲಂಕಾದೇಶದ ದಕ್ಷಿಣೋತ್ತರ ಭಾಗಗಳಲ್ಲಿ ಆಗಾಗ ಸಂಚರಿಸುವನು. ಕಲ್ಪದ ಆ ದಿನದ ಸೂರ್ಯೋದಯಕಾಲದಲ್ಲಿ

**ಛಾಯೋಃ ಫಾಲ್ಗುನಾಂತೇ ಸರ್ವ ಏವ ಕಲ್ಪಾದಾವರ್ಕೋ-ದಯೇ ಮೀನಮೇಷಸಂಧಿಗಾ ಭವಂತಿ। ಕಲ್ಪಾವಸಾನೇ ಚ ಮೇಷಪ್ರವೇಶೇ ವಾ। ಭಾನೋರ್ಗಗನಮಧ್ಯವರ್ತಿನ್ಯಾದಿತ್ಯೇ ದ್ವಾದಶಾಂಗುಲೇನ ಶಂಕುನಾ ಸಮಾವನೌ ಛಾಯಾ ಗ್ರಾಹ್ಯಾ। ತದ್ವರ್ಗಂ ವ್ಯಾಸಾರ್ಧವರ್ಗಹತೇಛಾಯಾಶಂಕುವರ್ಗಯೋ-ಗೇನವಿ ಜೇತ್। ಲಬ್ಧಮಕ್ಷಜ್ಯಾವರ್ಗಃ। ತತ್ಪದಮಕ್ಷಜ್ಯಾ। ತಚ್ಚಾಪಂ ಸ್ವದೇಶಾಕ್ಷಃ। ತಂ ರಾಶಿತ್ರಯಾದಪಾಸ್ಯ ಸ್ವದೇ-ಶಾವಲಂಬಕೋ ಭವತಿ।**

---

ಸಕಲಗ್ರಹಗಳೂ ಮೀನ, ಮೇಷ ಈರಾಶಿಗಳ ಸಂಧಿಭಾಗದಲ್ಲಿ ಸೇರಿರುವುವು. ಅದೇರೀತಿ ಕಲ್ಪಾಂತ್ಯದದಿನವೂ ಆಗ್ರಹಗಳು ಅದೇ ಸ್ಥಾನದಲ್ಲಿ ಬಂದು ನಿಲ್ಲುವುವು. ನಿರಕ್ಷದೇಶವೆಂದರೆ ಅಕ್ಷಾಂಶರಹಿತವಾದ ದೇಶವೆಂದರ್ಥ ಲಂಕೆಯನ್ನು ಬಿಟ್ಟರೆ ಅದಕ್ಕೆ ದಕ್ಷಿಣೋತ್ತರದಲ್ಲಿರುವ ಎಲ್ಲಾದೇಶಗಳಿಗೂ ಅಕ್ಷಾಂಶವಿರುವುದು. ಆಯಾ ದೇಶಗಳ ಅಕ್ಷಾಂಶವನ್ನು ತಿಳಿಯಬೇಕಾದರೆ, ಸಮತಲವಾಗಿರುವ ಒಂದು ಪ್ರದೇಶ ದಲ್ಲಿ ದ್ವಾದಶಾಂಗುಲಪ್ರಮಾಣವಿರುವ ಒಂಗು ಶಂಕು (ಗೂಟ) ವನ್ನು ಮಧ್ಯದಲ್ಲಿ ಸ್ಥಾಪನೆಮಾಡಬೇಕು. ಸೂರ್ಯನು ಗಗನಮಧ್ಯವರ್ತಿಯಾಗಿದ್ದ ಕಾಲದಲ್ಲಿ ಆ ಶಂಕುವಿನಿಂದ ಯಾವದಿಕ್ಕಿಗೆ ಎಷ್ಟು ಅಂಗುಲಪ್ರಮಾಣದಲ್ಲಿ ನೆರಳು ಬೀಳುವುದು ಎಂಬುದನ್ನು ತಿಳಿದು, ಅದರಿಂದ ಛಾಯಾಕರ್ಣವನ್ನು ಆನಯನ ಮಾಡಬೇಕು. ಶಂಕುವಿನ ಮತ್ತು ಅದರ ಛಾಯೆಯ ವರ್ಗವನ್ನು ಒಟ್ಟುಗೂಡಿಸಿ ಅದರ ಮೂಲವನ್ನು ತೆಗೆದರೆ ಬರುವುದೇ ಛಾಯಾಕರ್ಣ. ಅದರ ವರ್ಗವನ್ನು ಶಂಕುವಿನ ವರ್ಗದಿಂದ ಕಳೆದು ಮೂಲತೆಗೆದರೆ ಬರುವ ಪ್ರಮಾಣವೇ ಛಾಯಾ ಶಂಕುಪ್ರಮಾಣ. ತ್ರಿಜ್ಯಾ ವರ್ಗವನ್ನು ಛಾಯಾಶಂಕುವರ್ಗದಿಂದ ಗುಣಿಸಿ, ಶಂಕುವರ್ಗದಿಂದ ಭಾಗಿಸಿದರೆ ಅಕ್ಷಜ್ಯಾವರ್ಗವು ಲಭಿಸುವುದು. ಅದರ ಮೂಲವೇ ಅಕ್ಷ್ಯಜ್ಯೆ, ಅದಕ್ಕೆ ಧನುಸ್ಸನ್ನು ಕಂಡುಹಿಡಿದರೇ ಆಗ ಅದು ಸ್ವದೇಶಿಯ ಅಕ್ಷಾಂಶವಾಗುವುದು. ಅದನ್ನು ತ್ರಿರಾಶಿ ಜ್ಯಾದಿಂದ ಕಳೆದರೆ ಸ್ವದೇಶಿಯ ಲಂಬಾಂಶವು ದೊರೆಯುವುದು.

ತಜ್ಜ್ಯಾವಲಂಬಕಜ್ಯಾ ತ್ರಿಜ್ಯಾ ವರ್ಗಸ್ಯ ಸ್ವಕ್ರಾಂತಿವರ್ಗೋನಸ್ಯ
ಪದಂ ಸ್ಯಾಹತವ್ಯಾಸಾರ್ಧಸ್ತಸ್ಯ ಚ ಸ್ವಕ್ರಾಂತಿವಶೇನ ದಿಕ್ ।
ಸ್ವಕ್ರಾಂತಿ ವಿಷುವಚ್ಛಾಯಾಹತಾ ಶಂಕುಹೃತಾಕ್ಷಿತಿಜಾ। ಸಾ
ತ್ರಿಜ್ಯಾಹತಾ ಸ್ಯಾಹವ್ಯಾಸಾರ್ಧ ಭಾಜಿತಾ ಕ್ಷಯೋ ವೃದ್ಧಿ-
ಜ್ಯಾ । ತದ್ಧನುಶ್ಚರಾರ್ಧಂ ವಾ ಪ್ರಾಣಾಸ್ತದ್ಘಟಿಕಾಭಿಃ ಪಂಚ
ದಶ ಘಟಿಕಾಯುತಾ ದಿನಾರ್ಧಂ । ಊನಾ ರಾತ್ರ್ಯರ್ಧಗಾ
ಏವ ಮುತ್ತರಗೋಲಸ್ಥಾ ದಕ್ಷಿಣಕಾರಃ ಸ್ವಸ್ವ ಭಾಗಾಪಹಾರಃ
ಅವಾಮುಧನುಷಾಮುಚೋಧಃ ।

ಶೋಧನಂ ವ್ಯಕ್ಷರಾಶ್ಯುದಯ ಪ್ರಾಣಾಃ ಮೇಷವೃಷಮಿಥುನಾನಾಂ
ಕ್ರಮೇಣ ಕರ್ಕಟ ಸಿಂಹ ಕನ್ಯಾನಾಮುತ್ಕ್ರಮೇಣ ಮೇಷ
ವೃಷ ಮಿಥುನ ಜೀವಾದಿಃ ಸ್ಪ್ರಾಗ್ಸ್ವಚ್ಚರಪ್ರಾಣಾಃ ಕರ್ತವ್ಯಾಃ ।

---

ಲಂಬಾಂಶದಜ್ಯಾ ಪ್ರಮಾಣಕ್ಕೆ ಲಂಬ ಜ್ಯೆಯೆಂದು ಹೆಸರು. ತ್ರಿಜ್ಯಾವರ್ಗದಲ್ಲಿ ಸ್ವದೇಶೀಯ ಕ್ರಾಂತಿಜ್ಯವರ್ಗವನ್ನು ಕಳೆದು ಮೂಲತೆಗೆದರೆ ದ್ಯುಜ್ಯೆಯು ಲಭಿಸುವುದು ಕ್ರಾಂತಿವಶದಿಂದ ಅದರಲ್ಲಿ ದಿಗ್ವ್ಯವಸ್ಥೆಯನ್ನು ತಿಳಿಯಬೇಕು. ಸ್ವದೇಶೀಯ ಕ್ರಾಂತ್ಯಂಶವನ್ನು ಸ್ವದೇಶೀಯ ವಿಷುವಚ್ಛಾಯೆಯಿಂದ ಗುಣಿಸಿ ಶಂಕುಪ್ರಮಾಣ ದಿಂದ ಭಾಗಿಸಿದರೆ, ಬರುವುದೇ ಕ್ಷಿತಿಜ್ಯಾ. ಅದನ್ನು ತ್ರಿಜ್ಯೆಯಿಂದ ಗುಣಿಸಿ, ದ್ಯುಜ್ಯೆಯಿಂದ ಭಾಗಿಸಿದರೆ ಬರುವುದು ಚರಜ್ಯಾ ಅದನ್ನು ಧನುಸ್ಸನ್ನಾಗಿ ಪರಿವರ್ತಿ ಸಿದರೆ ಬರತಕ್ಕದ್ದು ಚರಘಟಿಗಳು ದ್ಯುಜ್ಯೆಯು ಚರಜ್ಯೆಗಿಂತ ಅಧಿಕವಾಗಿದ್ದರೆ ಹದಿನೈದುಘಳಿಗೆಗೆ ಆ ಚರಘಟಿಯನ್ನು ಸೇರಿಸುವುದರಿಂದಲೂ ನ್ಯೂನವಾಗಿದ್ದರೆ, ಕಳೆಯುವುದರಿಂದಲೂ ಅಹಃ ಪ್ರಮಾಣವನ್ನು ತಿಳಿಯಬೇಕಾಗುವುದು. ೨೯

ಮೇಷ, ವೃಷಭ, ಮಿಥುನರಾಶಿಗಳೇ ಗೋಳದಲ್ಲಿ ಕ್ರಮವಾಗಿ ಕಟಕ, ಸಿಂಹ, ಕನ್ಯಾರಾಶಿಯ ವೃತ್ತಗಳಾಗಿ ಪರಿವರ್ತಿತಗಳಾಗುವುವು. ಕ್ರಾಂತಿವಶ ದಿಂದ ದಿಕ್ಕನ್ನು ತೀರ್ಮಾನಿಸಿ, ನಿರಕ್ಷದೇಶದ ಲಗ್ನಪ್ರಮಾಣಕ್ಕೆ ಸ್ವದೇಶೀಯ ಚರಘಟಿಗಳನ್ನು ಧನವನ್ನಾಗಿಯೋ ಋಣವನ್ನಾಗಿಯೋ ಮಾಡಬೇಕು. ಮೇಷ

**ಶೇಷಾಮುಪಚೋಧಃ ಶೋಧನಂ ಚ ಶೇನೈಕ ದ್ವಿತ್ರ್ಯಕ್ಷರಾ ಪ್ರಾಣಾಃ ತ್ರೈಃ ಕ್ರಮೇಣ ಮೇಷವೃಷಮಿಥುನಾಃ ಪ್ರಾಣಹೀನಾಃ ಉತ್ಕ್ರಮೇಣ ಕುಲೀರ ಸಿಂಹ ಕನ್ಯಾನಾಂ। ಯುಕ್ತ್ಸ್ವದೇಶೇ ಚರಾಃ ಹೃದಯೇಪ್ರಾಣಾ ಭವಂತಿ ತೆ ವಿಪ್ರೋತ್ಕ್ರಮೇಣ ತುಲಾದೀನಾಂ ಮೇಷಾದೀನಾಮಪಿ। ಅರ್ಧದಿನ ಮಧ್ಯಾಹ್ನ ಛಾಯಾಗ್ರಮೂಲ ಯೊನ್ಯೋತ್ತರಾಗ್ರ ಮೂಲಾಗ್ರ ಪರಿಲೇಖ ಮತ್ಸ್ಯಮುಖ ಪುಚ್ಛರಖಾ ಪ್ರಾಚ್ಯಾಪರಾ ಆದಿತ್ಯ ಚಂದ್ರ ಯೋರನ್ಯತರಸ್ಯ ದೇಶಾಂತರಕರ್ಮ ವಿನಾ ಗ್ರಹಣಂ ನ ಕಾರ್ಯಂ।**

---

ವೃಷಭ ಮಿಥುನರಾಶಿಗಳಲ್ಲಿ ಚರಘಟಿಗಳನ್ನು ಕ್ರಮವಾಗಿ ಸಂಸ್ಕಾರಮಾಡುತ್ತಾ ಕಟಕ ಸಿಂಹ ಕನ್ಯಾರಾಶಿಗಳಲ್ಲಿ ವ್ಯುತ್ಕ್ರಮವಾಗಿ ಅಂದರೆ ಧನದಿಂದ ಋಣ. ಋಣ ದಿಂದ ಧನ. ಈ ರೀತಿ ಯೋಜನೆ ಮಾಡಬೇಕು. ಹಾಗೆಯೇ ತುಲಾ, ವೃಶ್ಚಿಕ, ಧನುಸ್ಸು ಈ ರಾಶಿಗಳ ಕ್ರಮವೇ ಮಕರ, ಕುಂಭ, ಮೀನ ರಾಶಿಗಳಿಗೆ ವ್ಯುತ್ಕ್ರಮ ವಾಗುವುದು. ಇನ್ನು ಭಾಭ್ರಮವನ್ನೂ ಅರಿಯಬೇಕಾದರೆ ತ್ರಿ ಸ್ಪೃಕ್ ಸೂತ್ರವನ್ನು ರಚಿಸಿಕೊಳ್ಳಬೇಕು. ಹಿಂದೆ ಹೇಳಿದಂತೆ ಸಮತಲವಾದ ಭೂಮಿಯಲ್ಲಿ ಪೂರ್ವಾಪರ ಸೂತ್ರವನ್ನು ಕಲ್ಪಿಸಿಕೊಂಡು, ಅದರ ಮಧ್ಯಸ್ಥಾನದಿಂದಲೂ, ಪೂರ್ವಾಪರ ಭಾಗದ ಅಂತ್ಯದಿಂದಲೂ ಭುಜಾಂಗುಲಮಾನದಿಂದ ಒಂದೊಂದು ವೃತ್ತವನ್ನು ಮತ್ಸ್ಯಪುಚ್ಛಾ ಕಾರದಿಂದ ಗುರುತಿಸಿಕೊಳ್ಳಬೇಕು. ಆ ಮೂರು ಮತ್ಸ್ಯಪುಚ್ಛಾಕಾರಗಳ ಮೇಲೆ ನೇರವಾಗಿ ಎಳೆಯುವ ರೇಖೆಯೇ ತ್ರಿಸ್ಪೃಕ್ ಸೂತ್ರವೆನಿಸುವುದು. ಆ ಸೂತ್ರ ಮಾರ್ಗವೇ ಭಾಭ್ರಮದ ಮಾರ್ಗ. ಗ್ರಹಣಾದಿಗಳನ್ನು ಆನಯನ ಮಾಡಬೇಕಾ ದರೆ ದೇಶಾಂತರ ಕರ್ಮಸಂಸ್ಕಾರದಿಂದ ಸೂರ್ಯ ಚಂದ್ರ ಸ್ಫುಟವನ್ನು ಸಂಸ್ಕರಿಸ ಬೇಕಾಗುವುದು. ದೇಶಾಂತರ ಕರ್ಮವೆಂದರೆ ನಿರಕ್ಷದೇಶಿಯ ವಿಷುವದ್ವೃತ್ತದಿಂದ ಸ್ವದೇಶೀಯ ವಿಷುವದ್ವೃತ್ತ ಮತ್ತು ಅಹೋರಾತ್ರವೃತ್ತಗಳು ಎಷ್ಟಂಶ ನತವಾಗಿದೆ. ಅದರಿಂದ ವ್ಯತ್ಯಾಸವಾಗುವ ಕಾಲವೆಷ್ಟು ? ಎಂಬುದನ್ನು ಸರಿಪಡಿಸಿ ತಿಳಿಸುವ ಗಣಿತ ವಿಶೇಷವೆಂದು ಹೇಳಬಹುದು

ವ್ಯಥಾಗತೇ ಕಾಲೇ ಯದಿ ಭವತಿ ತದಾ ರೇಖಾಮಧ್ಯೇ ಸ್ವದೇಶೋ ಜ್ಞೇಯಃ । ಅಥಾದೌ ರೇಖಾ ಪಶ್ಚಾಚ್ಚೇತ್ಪ್ರಾಕ್ ತತ್ಕಾಲಾನಂತರಂ ಷಷ್ಟಿಹತಂ ಪಂಚಭಿಸ್ಸಹಸ್ರೈರ್ವಿಭಜೇತ್ । ಲಬ್ಧದೇಶಾಂತರ ಯೋಜನಾನಿ ಗ್ರಹಸ್ಯಾರ್ಧಂ । ರಾತ್ರಿಮಧ್ಯಾಹ್ನಂ ಯಾವತ್ಪೂರ್ವಃ ಕಾಲೋ ಮಧ್ಯಾಹ್ನಾದಪರರಾತ್ರಂ ಯಾವದಪರಸ್ತತ್ರಾರ್ಕಸ್ಯ ಕಾಲಮವಿಲಂಘಯನ್ ಛಾಯಾದ್ವಯಂ ಗೃಹ್ಣೀಯಾತ್ । ತತ್ಕರ್ಣೋ ವ್ಯತ್ಯಾಸೇನ ಶಂಕುಸ್ಪ್ರಾಚ್ಯಪರಾಂತೇ ರಹಿತೋ ತದನಂತರಂ

---

ಈಗ ವೇಧದಿಂದ ರವಿಸ್ಥಾನವನ್ನು ತಿಳಿಯುವ ಕ್ರಮವು ಪ್ರತಿಪಾದಿತವಾಗುವುದು. ಇಷ್ಟದಿನದಲ್ಲಿ ಸೂರ್ಯನ ಕ್ರಾಂತಿಯನ್ನು ಗಣಿತದಿಂದ ಕಂಡುಹಿಡಿದು ಅದನ್ನು ಸ್ವದೇಶಿಯ ಅಕ್ಷಾಂಶದ ದಿಗ್ವ್ಯವಸ್ಥೆಯಿಂದ ಧನವನ್ನಾಗಿಯೋ, ಋಣವನ್ನಾಗಿಯೋ ಮಾಡಿ, ಅದಕ್ಕೆ ಜ್ಯಾವನ್ನು ಸಾಧಿಸಿ, ಆ ಪ್ರಮಾಣದಲ್ಲಿ ವಿಷುವತ್ವೃತ್ತದಿಂದ ಅದಕ್ಕೆ ಸಮನಾಂತರವಾಗುವಂತೆ ಮತ್ತೊಂದು ವೃತ್ತವನ್ನು ಕಲ್ಪಿಸಿಕೊಳ್ಳಬೇಕು ಅದು ಕ್ರಾಂತಿವೃತ್ತವಿಷುವದ್ವೃತ್ತಗಳ ಮಧ್ಯದಲ್ಲಿ ಬಂದು ನಿಲ್ಲುವುದು. ಅನಂತರ ಕ್ರಾಂತಿವೃತ್ತದಲ್ಲಿ ಯಾವ ಅಂಶಕ್ಕೆ ಆ ಜ್ಯಾ ಪ್ರಮಾಣವು ಸಂಬಂಧಿಸುವುದೋ, ಆ ಸ್ಥಾನವೇ ಸೂರ್ಯಸ್ಥಾನವೆಂದು ಅರಿಯಬೇಕು. ಈ ವೃತ್ತದ್ವಯ ಮಧ್ಯಗತವಾದ ರೇಖೆಯ ಪೂರ್ವ ಅಥವಾ ಪಶ್ಚಿಮದ ಅಂತರವನ್ನು ತಿಳಿಯಬೇಕಾದರೆ, ಪೂರ್ವೋಕ್ತ ಜ್ಯಾಚಾಪವನ್ನು ಅರವತ್ತರಿಂದ ಗುಣಿಸಿ ಐದು ಸಾವಿರದಿಂದ ಭಾಗಿಸಿದರೆ ಅದು ದೇಶಾಂತರ ಯೋಜನವಾಗುವುದು. (ಟೀಕು–ಇದಕ್ಕೆ ಉಪಪತ್ತಿಯು ದೊರೆಯಲಾರದು) ಗೋಲಭಾಗದಲ್ಲಿರುವ ಸೂರ್ಯಸ್ಥಾನವನ್ನು ತಿಳಿದ ಮೇಲೆ) ಅದು ಗೋಲದ ಪ್ರಥಮ ಪದದಲ್ಲಿದ್ದರೆ, ಯಥಾಗತವಾದ ಸ್ಥಾನವೇ ಸೂರ್ಯಸ್ಥಾನವಾಗುವುದು. ದ್ವಿತೀಯ ಪದವಾದರೆ, ಆ ಅಂಶಗಳನ್ನು ಭಾರ್ಧಾಂಶ ಅಂದರೆ ನೂರೆಂಭತ್ತು ಭಾಗಗಳಿಂದ ಕಳೆಯಬೇಕು. ತೃತೀಯ ಭಾಗದಲ್ಲಿದ್ದರೆ, ನೂರೆಂಭತ್ತು ಭಾಗಗಳನ್ನು ಸೇರಿಸಬೇಕು. ಚತುರ್ಥ ಭಾಗದಲ್ಲಿದ್ದರೆ, ಚಕ್ರಾಂಶ (೩೬೦) ದಿಂದ ಕಳೆಯಬೇಕು. ಹೀಗೆ ಕಳೆದುಳಿದ ಭಾಗವೇ ಸೂರ್ಯಸ್ಥಾನವಾಗುವುದು. ಗೋಲದ ಸಹಾಯದಿಂದ ಕ್ರಾಂತಿವೇಧೆಯನ್ನು ತಿಳಿಯಬೇಕಾದರೆ ಈ ರೀತಿ ಗಣಿತಕ್ರಿಯೆ ಮಾಡಬೇಕು. ಒಂದು ದಿನದಲ್ಲಿ ಅರ್ಧ ರಾತ್ರಿಯಿಂದ ಮಧ್ಯಾಹ್ನಪರ್ಯಂತವಾದ ಕಾಲಕ್ಕೆ ಪೂರ್ವಕಾಲವೆಂದೂ, ಮಧ್ಯರಾತ್ರಿಯ

**ವಿಷುವಚ್ಛಾಯಾಗ್ರಹಣಮಿಷ್ಟೇಹ್ನಿ ಇಷ್ಟದಿನಾಕ್ಷವೈಷುವತಾ ಕ್ಷಾಂತಮೇಕದಿಗಭಿಮುಖೀಭ್ಯಶ್ಛಾಯಾಭ್ಯೋ ಯುಕ್ತಂ ಸ್ವರಾಪಕ್ರಮಃ । ತೇನ ತ್ರಿಜ್ಯಾಹತಾ ಪರಮಾಪಕ್ರಮಜ್ಯಯಾ ವಿಭಜೇತ್ । ಲಬ್ಧಚಾಪಷರ್ಕಃ ಪ್ರಥಮೇ ಪದೇ ದ್ವಿತೀಯಾ ದ್ಭಾನಾಚ್ಛುದ್ಧಃ । ತೃತೀಯೇನ ಯುಕ್ತಃ ಚತುರ್ಥೇ ಚಕ್ರಾ-ಚ್ಛುದ್ಧಃ । ವಿಷುವಚ್ಛಾಯಾ ತರುಣಾ ಚ ಹೀಯಮಾನಾ ಚ ಛಾಯಾ ಪ್ರಥಮಪದಸ್ಥೇ ಅರ್ಕೇ ಭವತಿ ಊನಾ ವೃದ್ಧಿಮತೀ ದ್ವಿತೀಯಸ್ಥೇ ವೃದ್ಧಿಮತ್ಯಧಿಕಾ ತೃತೀಯಸ್ಥೇ ಹೀಯಮಾನಾಧಿಕಾ ಚತುರ್ಥಸ್ಥೇ ಏವಮತೀತದಿವಸಾರ್ಕಸ್ಯ, ತದರ್ಕಸ್ಯ ವಿವರಂ ಸ್ಫುಟಭುಕ್ತಿಃ ॥**

---

ಪರ್ಯಂತವಾದ ಕಾಲಕ್ಕೆ ಅಪರ ಕಾಲವೆಂದೂ ಸಂಜ್ಞೆಯಿದೆ. ಈ ಎರಡು ಕಾಲಗಳಲ್ಲಿಯೂ ಪ್ರತ್ಯೇಕ ಪ್ರತ್ಯೇಕವಾಗಿ ಎರಡುಸಾರಿ ಇಷ್ಟದಿನದ ಶಂಕುಛಾಯೆಯನ್ನು ಸಾಧಿಸಿಕೊಳ್ಳಬೇಕು. ಅದನ್ನು ವಿಷುವಚ್ಛಾಯೆಯಿಂದ ಅಂದರೆ ಸ್ವದೇಶೀಯ ವಿಷುವಚ್ಛಾಯಾಪ್ರಮಾಣದಿಂದ ಶೋಧಿಸಿಕೊಳ್ಳಬೇಕು. ಆ ಅಂತರವನ್ನು ಇಷ್ಟದಿನದ ಛಾಯನಾದಿಗನುಸಾರವಾಗಿ ಏಕದಿಕ್ಕಾಗಿದ್ದರೆ, ಸ್ವದೇಶೀಯ ವಿಷುವಚ್ಛಾಯಾ ಪ್ರಮಾಣಕ್ಕೆ ಧನಸಂಸ್ಕಾರಮಾಡಬೇಕು. ಭಿನ್ನದಿಕ್ಕಾಗಿದ್ದರೆ ಋಣ ಸಂಸ್ಕಾರ ಮಾಡಬೇಕು. ಅನಂತರ ಅದನ್ನು ತ್ರಿಜ್ಯೆಯಿಂದ ಗುಣಿಸಿ ಪರಮಕ್ರಾಂತಿಜ್ಯೆಯಿಂದ ಭಾಗಿಸಿದರೆ, ಬರುವುದು ಇಷ್ಟದಿನ ಭುಜಜ್ಯಾ ಅದನ್ನು ಧನುಸ್ಸನ್ನಾಗಿ ಪರಿವರ್ತಿಸ್ಸುವುದರಿಂದ ತಾತ್ಕಾಲಿಕವಾದ ಸೂರ್ಯಸ್ಥಾನವು ದೊರೆಯುವುದು. ಇದನ್ನು ಹಿಂದೆ ಹೇಳಿದಂತೆ ಪ್ರಥಮಪದವಾದರೆ ಯಥಾಸ್ಥಿತಿಯಲ್ಲಿಯೇ ಇರಿಸಿಕೊಳ್ಳಬೇಕು. ದ್ವಿತೀಯಪದವಾದರೆ, ಭಾರ್ಧಾಂಶದಿಂದ ಕಳೆಯಬೇಕು. ತೃತೀಯಪದವಾದರೆ ಭಾರ್ಧಾಂಶಕ್ಕೆ (೧೮೦) ಯೋಜನಮಾಡಬೇಕು. ಚತುರ್ಥಪದವಾದರೆ ಚಕ್ರಾಂಶ ೩೬೦ ದಿಂದ ಕಳೆಯಬೇಕು. ಆಗ ನಮಗೆ ತಾತ್ಕಾಲಿಕಗ್ರಹಸ್ಥಾನ ದೊರೆಯುವುದು ಗ್ರಹಗಳ ಗತ ಮತ್ತು ಗಮ್ಯದಿನಗಳ ಸ್ಫುಟಾಂತರವೇ ಆಯಾದಿನದ ಸ್ಫುಟಭುಕ್ತಿಯಾಗುವುದು. ಸೂರ್ಯನ ಗತಗಮ್ಯಗಳ ಸ್ಫುಟಾಂತರದಿಂದ ಸೂರ್ಯಸ್ಫುಟಗತಿಯನ್ನು ತಿಳಿಯಬೇಕು.

ಆದಿತ್ಯೋದಯಾಸ್ತಮಯಾದ್ವಾ ಚಂದ್ರೋದಯಂ ದೃಷ್ಟ್ವಾ ನಗ್ರ। ದಪ್ಯರಿತೋರ್ಕಸ್ತೇನ ಕಾಲೇನ ಚಂದ್ರಮಾ ಭವತಿ ಚಂದ್ರಾನ್ನಕ್ಷತ್ರಜ್ಞಾನಂ ಚಂದ್ರಾರ್ಕ ವಿವರಾತ್ತಿಥಿಜ್ಞಾನಂ । ತಸ್ಮಾದಹರ್ಗಣಃ । ಸ್ಫುಟಕಾರ್ದ್ವಿಪರೀತ ಕರ್ಮಣಾ ಮಧ್ಯಮಾರ್ಕಃ। ಸೌರಜೀವಯೋಶ್ಚಾರಾತ್ಸಂವತ್ಸರಃ । ಚಂದ್ರವತ್ಸರ್ವ ಗ್ರಹ ಕ್ರಿಯಾ । ಗ್ರಹೇಭ್ಯೋ ವಾ ಕಲ್ಪಗತ ಕಾಲಜ್ಞಾನಂ । ಏವಂ ಕಾಲಪರಿಚ್ಛೇದಃ ॥

ಅಶ್ವಿನ್ಯಾದೀನಾಂ ಧ್ರುವಕಾಃ ರಾಶ್ಯಾದ್ಯಾಃ । ಖಮುಷ್ಟ್ಯಾ, ಖಂಖಂ ಖಯಮಾಃ ಖಂ ಶಶೀಮುನಯೋಷ್ಟಯಮಾಃ, ಶಶೀ ನವೇಂದವೋಶ್ವಯಮಾಃ, ಪಕ್ಷಾಗುಣಾಃ ಖಪಕ್ಷೌ ಶೈಲಾಃ ಖಂ

---

ಸೂರ್ಯೋದಯ ಮತ್ತು ಸೂರ್ಯಾಸ್ತ ಕಾಲಗಳ ಸಹಾಯದಿಂದ ಅದಕ್ಕನುಸಾರವಾಗಿ ಚಂದ್ರನ ಉದಯಾಸ್ತಗಳನ್ನು ಚಂದ್ರ ಸೂರ್ಯರ ಸ್ಫುಟಗತ್ಯನುರೋಧವಾಗಿ ತಿಳಿದು ಚಂದ್ರನ ಸ್ಫುಟಸ್ಥಾನವನ್ನು ಗುರ್ತಿಸಿ ಕೊಳ್ಳಬೇಕು. ಚಂದ್ರನ ಗತಿಯಿಂದಲೇ ನಕ್ಷತ್ರಗಳನ್ನು ತಿಳಿಯಬೇಕು. ಸೂರ್ಯ ಚಂದ್ರರ ಸ್ಫುಟಾಂತರಗಳಿಂದ ಪ್ರತಿಪದಾದಿ ತಿಥಿ ಜ್ಞಾನವು ಲಭಿಸುವುದು. ಹೀಗೆ ದಿನಗಳನ್ನೂ ಸಾಧಿಸಿ ಅಹರ್ಗಣವನ್ನು ಕಂಡುಹಿಡಿಯಬೇಕು. ಸೂರ್ಯ ಸ್ಫುಟಕ್ಕೆ ವಿಪರೀತ ಸಂಸ್ಕಾರ ಮಾಡುವುದರಿಂದ ಅಂದರೆ ಹಿಂದೆ ಸೂರ್ಯ ಮಧ್ಯಕ್ಕೆ ಮಾಡಿದ ಸಂಸ್ಕಾರಗಳಿಗೆ ವಿರುದ್ಧವಾದ ಸಂಸ್ಕಾರಗಳನ್ನು ಮಾಡುವುದರಿಂದ ಮತ್ತೆ ಸೂರ್ಯ ಮಧ್ಯವೇ ದೊರೆಯುವುದು. ಸೂರ್ಯ ಮತ್ತು ಗುರು ಇವರಿಬ್ಬರ ಚಾರವಶದಿಂದ ಸಂವತ್ಸರವೂ ಲಭಿಸುವುದು. ಸರ್ವಗ್ರಹಗಳ ಸ್ಫುಟವನ್ನು ಚಂದ್ರನಂತೆಯೇ ಸೂರ್ಯೋದಯ ಕಾಲಿಕವನ್ನಾಗಿ ಮಾಡಿಕೊಳ್ಳಬೇಕು. ಆದುದರಿಂದ ಕಲ್ಪಪ್ರಮಾಣ ಆ ಕಲ್ಪಕ್ಕೆ ಒದಗುವ ಗ್ರಹ ಭಗಣ ಸಂಖ್ಯೆ ಇವುಗಳನ್ನು ಗ್ರಹಿಸಲು ಸುಲಭವಾಗುವುದು ಇದೇ ಕಾಲವನ್ನು ಗಣಿಸುವ ಸಾಧನ.

ಈಗ ಅಶ್ವಿನ್ಯಾದಿ ನಕ್ಷತ್ರಗಳಿಗೆ ರಾಶ್ಯಾದಿಯಾದ ಧ್ರುವಕವೂ ನಕ್ಷತ್ರಶರವೂ ವಿವರಿಸಲ್ಪಡುವುವು.

(ಇಲ್ಲಿ ಕೊಟ್ಟಿರುವ ಸಂಖ್ಯಾಸೂಚಕವಾದ ಅಕ್ಷರಗಳು ಮುದ್ರಣದೋಷದಿಂದ ವ್ಯತ್ಯಾಸಹೊಂದಿ ಇತರ ಸಿದ್ಧಾಂತಗ್ರಂಥಗಳಿಗೆ ಸ್ವಲ್ಪವಿರುದ್ಧವಾಗಿ ಕಂಡುಬರುತ್ತಿವೆ)

---

ಇದು ಅಶುದ್ಧ ಪಾಠ.

ಗುಣಾ ಗುಣಾಃ ಖಂ ಗುಣಾ ಷೋಡಶಖಂ ತ್ರೀದ್ವ್ಯಷ್ಟೌ ದಶಖಂ ವೇದಾ ರಂಧ್ರಾಣಿ ಖಂ ವೇದಾಃ ಸಪ್ತಯಮಾಃ ಖಂ ಶರಾ ನಖಾಃ ಖಂ ರಸಾ ಪುಷ್ಕರಾ ಖಂ ರಸಾ ನ ವೇಂದವಃ ಖಂ ಸಪ್ತಪಷೌ ಶರಾ ಮುನಯೋ ಮನವೋ ಭೂತಾನಿ ಚ ಸಪ್ತ ನವೇಂದವಃ ಪಂಚ ಅಷ್ಟೌ ಚ ಖಂ ಅಷ್ಟೌ ಜನಖಂ ಅಷ್ಟೌ ನಖಃ ಖಂ ಅಷ್ಟೌ ಚತ್ವಾರಿ ಖಂ ನವ ವಸವಃ ಖಂ ಸೂರ್ಯಮುನಯಃ ಖಂ । ಅಥೈತೇಷಾಂ ವಿಕ್ಷೇಪಾಂಶಾಃ ದಶ, ದ್ವಾದಶ, ಪಂಚದಶ, ಏಕಾದಶ ಷಟ್ ಖಂ ಸಪ್ತ ಖಂ ದ್ವಾದಶ, ತ್ರಯೋದಶ, ಏಕಾದಶ, ದ್ವಾವಷ್ಟಾ ವಿಂಶತ್ಸಾರ್ಧಂ ತ್ರೀಣಿ, ಚತ್ವಾರಿ, ಸಾರ್ಧಾನ್ಯಷ್ಟೌ ಪಂಚ-ವಿಭಾಗಾಃ ಪಂಚ ದ್ವಿಷಷ್ಟಿಃ ತ್ರಿಂಶತ್ ಅಂಶವಿಭಾಗಃ ಚತುರ್ವಿಂಶತಿಃ ಷಡ್ವಿಂಶತಿಃ ಶೂನ್ಯಂ ಚಾಶ್ವಿನೀ ಭರಣೀ

---

ಅದಕ್ಕಾಗಿ ಇಲ್ಲಿ ಸೂರ್ಯಸಿದ್ಧಾಂತಪ್ರೋಕ್ತವಾದ, ಧ್ರುವಕ ವಿಕ್ಷೇಪಾಂಶಗಳನ್ನೇ ಸ್ಪಷ್ಟವಾಗಿ ತಿಳಿಯುವಂತೆ ಕೊಡಲಾಗಿದೆ.

| | | | | | |
|---|---|---|---|---|---|
| ಅಶ್ವಿನಿ | ೪೮ | = | ೦- ೮- ೦ | = | ೧೦೩ |
| ಭರಣಿ | ೪೦ | = | ೦-೨೦- ೦ | = | ೫೨ |
| ಕೃತ್ತಿಕಾ | ೬೫ | = | ೧- ೭-೩೦ | = | ೫೩ |
| ರೋಹಿಣೀ | ೭೭ | = | ೧-೧೯-೩೦ | = | ೫೬ |
| ಮೃಗಶಿರ | ೫೮ | = | ೨- ೩- ೦ | = | ೧೦೬ |
| ಆರ್ದ್ರಾ | ೪ | = | | | ೯೩ |
| ಪುನರ್ವಸ | | | | | ೬೩ |
| ಪುಷ್ಯ | ೭೬ | = | ೩-೧೬- ೦ | = | ೭೬ |
| ಮಖಾ | ೫೪ | = | ೪- ೯- ೦ | = | ೦ |
| ಪೂರ್ವಫಲ್ಗುನಿ | ೬೪ | = | ೪-೨೪- ೦ | = | ೧೨೬ |
| ಉ॥ಪಲ್ಗುನಿ | ೫೦ | = | ೫- ೫- ೦ | = | ೧೩೩ |
| ಹಸ್ತ | ೬೦ | = | ೫-೨೦- ೦ | = | ೧೧೬ |
| ಚಿತ್ರ | ೭೪ | = | ೬-೧೯- ೦ | = | ೩೭೩ |
| ವಿಶಾಖಾ | ೭೮ | = | ೭- ೩- ೦ | = | ೧೩೬ |

ಕೃತ್ತಿಕಾ ಪುನರ್ವಸು ಪುಷ್ಯಮಖಾಭಾಗ್ಯಾರ್ಯಮಾಣಃ । ಸ್ವಾತಿ ವೈಶ್ವದೇವಾಭಿಜಿಚ್ಛ್ರವಣ ಧನಿಷ್ಠಾಜಾಹಿರ್ಬುಧ್ನ್ಯ ರೇವತೀನಾಂ । ಉತ್ತರಾರೋಹಿಣೀ ಸೌಮ್ಯಾದ್ರಾನ್ ಸಾರ್ಪ ಹಸ್ತ ಚಿತ್ರಾವಿಶಾಖಾ ಮೈತ್ರೇಂದ್ರ ಮೂಲಾಪ್ಯವಾರುಣಾ ಯಾಮ್ಯಾಃ । ರೇವತ್ಯುದಯಃ ಪ್ರಾಚೀ ಸರ್ವಸ್ಯ ಮಹತೀ ಯೋಗತಾರಾ ರಾಶಿದ್ವಯಂ ಸಪ್ತವಿಂಶತಿರ್ಭಾಗಾಃ ಅಗಸ್ತ್ಯ ಧ್ರುವಕಃ ಸಪ್ತಭಿರ್ಮಾರ್ಗೈಸ್ತಸ್ಯ ಯಾಮ್ಯೋ ವಿಕ್ಷೇಪಃ ॥

ಅಥ ಭೌಮಾದೀನಾಂ ವಕ್ರಕೇಂದ್ರಾಣಿ ರಾಶ್ಯಾದ್ಯಾನಿ ಪಂಚಮ ನವಃ, ಖಂ ವೇದಾಃ, ಷಡ್ಯಮಾಃ, ಖಂ ಪಂಚವೇದಾಃ ಖಂ, ಪಂಚಪಂಚ ದಶ ಖಂ, ವೇದಾಸ್ತ್ರಯೋದಶ ಖಂ । ಅಥಾನು ವಕ್ರಕೇಂದ್ರಾಣಿ ಷಟ್ ಷೋಡಶ ಖಂ ಸಪ್ತ ವೇದಾಃ ಖಂ ಷಡ್ಯಮಾಃ ಖಂ ಸಪ್ತದಶ ಖಂ (ಷಟ್ಪಂಚವಿಂಶತಿಃ ಖಂ ಖಂ ಮನವಃ ಖಂ ಷಡ್ಗುಣಾಃ ಖಂ)

---

| | | | | | |
|---|---|---|---|---|---|
| ಅನೂರಾಧಾ | ೭೪ | = | ೭-೧೪- ೦ | = | ೩೬ |
| ಜ್ಯೇಷ್ಠಾ | ೧೪ | = | ೭-೧೯- ೦ | = | ೪೬ |
| ಮೂಲ | ೬ | = | ೮- ೧- ೦ | = | ೯೬ |
| ಪೂರ್ವಾಷಾಢ | ೪ | = | ೮-೧೪- ೦ | = | ೫೬ |
| ಉತ್ತರಾಷಾಢ | | = | ೮-೨೦- ೦ | = | ೫೬ |
| ಅಭಿಜಿತ್ | | = | ೬-೨೬-೪೦ | = | ೬೦೩ |
| ಶ್ರವಣ | | = | ೯-೧೦- ೦ | = | ೩೦೬ |
| ಧನಿಷ್ಠ | | = | ೯-೨೦- ೦ | = | ೩೬೩ |
| ಶತಭಿಷಾ | ೮೦ | = | ೧೦-೨೦- ೦ | = | ೨೬ |
| ಪೂ-ಭಾದ್ರಪದ | ೩೬ | = | ೧೦-೨೬- ೦ | = | ೨೪೩ |
| ಉ-ಭಾದ್ರಪದ | ೨೨ | = | ೧೧- ೭- ೦ | = | ೨೬೩ |
| ರೇವತೀ | ೭೯ | = | ೧೧-೨೯-೫೦ | = | ೦ |
| ಅಗಸ್ತ್ಯನಕ್ಷತ್ರ | ೦ | = | ೩-೦ | = | ೮೦೬ |

ಮೂಲದಲ್ಲಿ ಅಗಸ್ತ್ಯನಕ್ಷತ್ರ ಧ್ರುವಕವನ್ನು ೨೭ ಎಂದು ಕೊಟ್ಟಿದೆ.

ಭೌಮಾದಿ ಷಡ್ಗ್ರಹಗಳ ವಕ್ರಕೇಂದ್ರ ಸ್ಥಾನಗಳೂ ಅನು ವಕ್ರಸ್ಥಾನಗಳೂ ರಾಶ್ಯಾದಿಯಾಗಿ ಈ ರೀತಿ ಇರುತ್ತವೆ.

**ಅಥ ಪೂರ್ವದ್ವಾರೋದಯ ಕೇಂದ್ರಾಣಿ ಖಮುಷ್ವಯಮಾಃ ಖಂ ಷಟ್ಪಂಚವಿಂಶತಿ ಖಂ ಖಂ ಮನಃ ಖಂ ಷಡ್ಗುಣಾಃ ಖಂ ಖಂ ಸಪ್ತದಶ ಖಂ । ಅಥ ಪಶ್ಚಾದ್ಧಾರ್ಸ್ತಮಯ ಕೇಂದ್ರಾಣಿ ಏಕಾದಶ ದ್ವೌ ಖಂ ಪಂಚ ಪಂಚ ಖಂ ಏಕಾದಶ ಷೋಡಶ ಖಂ ಪಂಚ ಸಪ್ತವಿಂಶತಿ ಖಂ ಏಕಾದಶ ತ್ರಯೋದಶ ಖಂ । ಅಥ ಬುಧಶುಕ್ರಯೋಃ ಪೂರ್ವಾರ್ಧಾರ್ಸ್ತಮಯ ಕೇಂದ್ರೇ ದಶದಶ ಖಂ ಏಕಾದಶ, ಷೋಡಶ, ಖಂ ॥ ಚತ್ವಾರಿ ಶೂನ್ಯಾನಿ ಚತ್ವಾರಿ, ಶೂನ್ಯಾನಿ, ಪಂಚವೇದ ರಸಾಗ್ನಿ ಯಮ ಪಕ್ಷಾಷ್ಟಶರೇಂದವಃ ಕಲ್ಪನ ಪ್ರತಿನಕ್ಷತ್ರೋದಯಃ ತ ಏವ ಅರ್ಕಭಗಣೋನಾ ದಿವಸಾಃ**

---

ಭೌಮಾದಿಗಳ ವಕ್ರಕೇಂದ್ರಸ್ಥಾನ ಧ್ರುವಕಗಳು. ಅನುವಕ್ರಸ್ಥಾನಧ್ರುವಕ.

| | | |
|---|---|---|
| ಕುಜನಿಗೆ | ೫—೧೪—೦ | ೬—೧೬—೦ |
| ಬುಧನಿಗೆ | ೪—೨೬—೦ | ೭— ೪—೦ |
| ಗುರುವಿಗೆ | ೫— ೪—೦ | ೬— ೨—೦ |
| ಶುಕ್ರನಿಗೆ | ೫—೧೫—೦ | ೬—೨೫—೦ |
| ಶನಿಗೆ | ೪—೧೩—೦ | ೦—೧೭—೦ |

ಇದೇ ಗ್ರಹಗಳಿಗೆ ಕ್ರಮವಾಗಿ ಪೂರ್ವದ್ವಾರೋದಯ ಕೇಂದ್ರಗಳು, ೦—೮—೨ , ೦—೬—೪೫ , ೦—೦—೧೪ ; ೦—೦—೩೦ , ೦—೧೭—

ಪಶ್ಚಾದ್ಧಾರ್ಸ್ತಮಯ ಕೇಂದ್ರಗಳು ಈ ರೀತಿ ಇರುತ್ತವೆ. ೧೧—೨— ೫—೫—೦ ; ೧೧—೧೬—೦ , ೫—೨೭—೦ ; ೧೧—೧೩—೯.

ಬುಧ ಶುಕ್ರರಿಗೆ ಮಾತ್ರ ಪೂರ್ವಾರ್ಧಾರ್ಸ್ತಮಯ ಕೇಂದ್ರಗಳು ಹೀಗಿ ಬುಧನಿಗೆ ೧೦—೧೦—೦, ಶುಕ್ರನಿಗೆ ೧೧—೧೬—೦.

ಒಂದು ಕಲ್ಪಕ್ಕೆ ಹೇಳಿರುವ ನಾಕ್ಷತ್ರ ದಿವಸಗಳಿಂದ ಸೂರ್ಯ ಭಗಣ ನಂ ಯನ್ನು ಕಳೆದರೆ ಉಳಿಯುವುದೇ ಭೂಮಿಸಾವನವಾಸರವೆನಿಸುವುದು. ಕಲ್ಪ ಒಟ್ಟು ೧೫೮೧೫೨೩೬೪೫೦೦೦೦ ನಾಕ್ಷತ್ರ ಸಾವನದಿನಗಳಿರುತ್ತವೆ.

(ಈ ಸಂಖ್ಯೆಯು ಸೂರ್ಯಸಿದ್ಧಾಂತ ಗ್ರಂಥಕ್ಕೆ ವಿರೋಧವಾಗಿದೆ.)

ಅರ್ಕಭಗಣಾ ದ್ವಾದಶಹತಾಸ್ತಂ ಮಾಸಾಸ್ತ್ರೈಸ್ತ್ರಿಂಶದ್ಧತಾಸ್ತದ್ದಿವಸಾ
ಶ್ಚಾಂದ್ರಭಗಣಾಃ ಸಪ್ತವಿಂಶತಿಹತಾ ನಕ್ಷತ್ರದಿವಸಾಃ ಭಗ-
ಣಾಂತರಮರ್ಕೇಂದ್ವೋಶ್ಚಾಂದ್ರಮಸಸ್ತೇ ತ್ರಿಂಶದ್ಗುಣಾಸ್ತದ್ದಿ-
ವಸಾಶ್ಚಾಂದ್ರಮಾಸಃ ।  ಸೂರ್ಯಮಾಸೋನಾಧಿಮಾಸಾ ಶ್ಚಾಂದ್ರ
ದಿವಸಸ್ತು ದಿವಸಾಂತರಮವಮಾನೀತಿ  ೩೫

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ಉಪಕರಣ
ವಿವರಣಂ ನಾಮ ಅಷ್ಟ ಷಷ್ಟ್ಯುತ್ತರಶತತಮೋಽಧ್ಯಾಯಃ

---

ಮಹಾಯುಗಕ್ಕೆ ಹೇಳಿದ ಸೂರ್ಯಭಗಣಸಂಖ್ಯೆಯನ್ನು ಹನ್ನೆರಡರಿಂದ ಗುಣಿಸಿದರೆ, ತಿಂಗಳುಗಳೂ ಅದನ್ನು ಮೂವತ್ತರಿಂದ ಗುಣಿಸಿದರೆ ದಿನಗಳೂ ಬರುವುವು ಆದಿನಗಳೇ ಸೌರಸಾವನದಿನಗಳೆನಿಸುವುವು. ಹಾಗೆಯೇ ಉಕ್ತವಾಗಿರುವ ಚಂದ್ರ ಭಗಣಸಂಖ್ಯೆಯನ್ನು ೨೭ ರಿಂದ ಗುಣಿಸಿದರೆ, ನಾಕ್ಷತ್ರಸಾವನಾಹರ್ಗಣವು ಲಭಿಸುವುದು. ಸೂರ್ಯಚಂದ್ರರ, ಭಗಣಗಳ ಅಂತರವೇ, ಚಾಂದ್ರಮಾಸಗಳೆನಿಸುವುವು. ಆ ಚಾಂದ್ರಮಾಸಗಳ ಮತ್ತು ರವಿಮಾಸಗಳ ಅಂತರಮಾನವೇ ಅಧಿಕ ಮಾಸಗಳ ಸಂಖ್ಯೆಯಾಗುವುದು. ಹಾಗೆಯೇ ಚಾಂದ್ರ ಮತ್ತು ಸಾವನ ದಿನಗಳ ಅಂತರದಿಂದ ತಿಥಿಕ್ಷಯದಿನಗಳ ಅಂದರೆ ಅವಮಾಹಸ್ಸುಗಳ ಸಂಖ್ಯೆಯನ್ನು ತಿಳಿದುಕೊಳ್ಳಬಹುದು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ
ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ
ಉಪಕರಣವಿವರಣಂ ಎಂಬ ನೂರ ಅರವತ್ತೆಂಟನೆಯ
ಅಧ್ಯಾಯವು ಮುಗಿದಿದೆ.



॥ ಓಂ ॥

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

### ಏಕೋನಸಪ್ತತ್ಯುತ್ತರಶತತಮೋಽಧ್ಯಾಯಃ

---

**ಅಥ ಯಥಾಕಾಲಂ ಗತಮನವಸ್ತ್ವೇಕ ಸಪ್ತತಿಹತಾಶ್ಚತುರ್ಯುಗಾಬ್ದಹತಾಃ ಕಾರ್ಯಾಃ । ತೇಷು ಕೃತಪ್ರಮಾಣಂ ಕ್ಷೇಪ್ಯಂ । ತಮೇವ ತತ್ರ ಭೂಯೋ ಗತ ಸಂಖ್ಯಾಹತಂ ಚ ತತೋ ವರ್ತಮಾನಮನ್ವಂತರ್ಗತಚತುರ್ಯುಗಸಂಖ್ಯಾ ಹತಾನಿ, ಚತುರ್ಯುಗಾಬ್ದಾನಿ ಯುಗಾನಿ ಚ ವರ್ತಮಾನ ಯುಗಾಚ್ಚೈತ್ರಪ್ರಭವ ಗತಾಬ್ದಾನಿ ಚ । ಏವಮಿಷ್ಟಕಾಲಾಬ್ದಗಣೋ ಭವತಿ ।**

---

### ನೂರ ಅರವತ್ತೊಂಭತ್ತನೆಯ ಅಧ್ಯಾಯ.

ಈಗ ಇಷ್ಟದಿನಕ್ಕೆ ಸೃಷ್ಟ್ಯಾದಿಯಾದ ಅಹರ್ಗಣವನ್ನು ಆನಯನ ಮಾಡುವ ಕ್ರಮವು ವಿವರಿಸಲ್ಪಡುವುದು. ಅಹರ್ಗಣಾನಯನವೆಂದರೆ, ಇಷ್ಟದಿನದ ಪರ್ಯಂತವಾಗಿ ಸೃಷ್ಟ್ಯಾದಿಯಿಂದ ಎಷ್ಟುದಿನಗಳು ಕಳೆದಿವೆ ಎಂಬುದನ್ನು ತಿಳಿಸುವ ಗಣಿತ ಸಾಧನೆ ಎಂದರ್ಥ. ಎಪ್ಪತ್ತೊಂದು ಮಹಾಯುಗಗಳಿಗೆ ಒಂದು ಮನ್ವಂತರವಾಗುವುದರಿಂದ ಪ್ರಕೃತಕಾಲಕ್ಕೆ ಎಷ್ಟು ಮನ್ವಂತರಗಳು ಕಳೆದಿವೆಯೋ ಅವನ್ನು ಎಪ್ಪತ್ತೊಂದರಿಂದ ಗುಣಿಸಬೇಕು. ಆಸಂಖ್ಯೆಯು ಮಹಾಯುಗ ಪ್ರಮಾಣವಾಗುವುದು ಒಂದೊಂದು ಮನ್ವಂತರಕ್ಕೂ ಕೃತಯುಗಪ್ರಮಾಣದ ವರ್ಷಗಳು ಸಂಧಿಕಾಲವಾಗಿರುತ್ತವೆ. ಆದ್ದರಿಂದ ಗತಮನ್ವಂತರಸಂಖ್ಯೆಯಿಂದ ಕೃತಯುಗಪ್ರಮಾಣವನ್ನು ಗುಣಿಸಿ ಅದಕ್ಕೆ ಸೇರಿಸಬೇಕು. ಅನಂತರ ವರ್ತಮಾನಮನ್ವಂತರದಲ್ಲಿ ಗತವಾಗಿರುವ ಚತುರ್ಯುಗಪ್ರಮಾಣವನ್ನರಿತು, ಆ ಸಂಖ್ಯೆಯನ್ನೂ ಮಹಾಯುಗದಲ್ಲಿ ಗತವಾಗಿರುವ ಪ್ರತ್ಯೇಕಯುಗಪ್ರಮಾಣವರ್ಷಗಳನ್ನೂ ಸೇರಿಸಿ, ಒಟ್ಟು ವರ್ಷಮಾನವನ್ನು ತಿಳಿಯಬೇಕು. ಇದರಿಂದ ನಾವು ಸೃಷ್ಟ್ಯಾದಿಯಿಂದ ಇಷ್ಟಕಾಲದವರೆಗೆ ಕಳೆದ ವರ್ಷಮಾನವನ್ನೂ ಅರಿತಂತಾಗುವುದು. ಆ ಸಂಖ್ಯೆಗೆ ಪ್ರಭವಾದಿಯಾಗಿ ಗತವಾಗಿರುವ ವರ್ಷಸಂಖ್ಯೆಯನ್ನು ಸೇರಿಸಬೇಕು.

ಷ ದ್ವಾದಶ ಹತಶ್ಚೈತ್ರಸಿತಾದಿ ಮಾಸಯುಕ್ತ ಸ್ತ್ರಿಂಶದ್ಧತೋ ವಮಾನಮಿತಾದಿ ತಿಥಿ ಸಹಿತೈಃ ಕಾರ್ಯಃ । ಏವಂ ಸೌರೋ ದಿನ ಗಣೋ ಭವತಿ । ತಂ ಪೃಥಕ್ಕಲ್ಪಾಧಿಮಾಸಕಹತಂ ಕಲ್ಪ ಕುದಿನೈರ್ವಿಭಜೇತ್ । ಲಬ್ಧಂ ಗತಾಧಿಮಾಸಾಃ । ತೈಸ್ತ್ರಿಂ ಶದ್ಧತೈರರ್ಕಾಹರ್ಗಣಯುಕ್ತೋ ಚಂದ್ರಾಹರ್ಗ ಣೋ ಭವತಿ । ತಂ ಪೃಥಕ್ಕಲ್ಪಾವಮಹತಂ ಕಲ್ಪಚಂದ್ರದಿನೈರ್ವಿಭಜೇತ್ । ಲಬ್ಧಂ ಗತೋನರಾತ್ರಿಃ ತೈಶ್ಚಂದ್ರಾಹರ್ಗಣಾದ್ಧನಂ ಸಾವ- ನಾಹರ್ಗಣೋ ಭವತಿ । ಅಧಿಮಾಸ ಶೇಷಸ್ಯ ಕಲ್ಪಾಧಿ ಮಾಸ ಕೈರ್ಭಾಗೇ ಹತೇ ಏಷ್ಯಾಧಿಮಾಸಕೈರ್ಭಾಗೇ ಹತೇ ಗತಾಧಿ ಮಾಸಕಸ್ಯ ದಿನಾದಿಃ ಕಾಲೋ ಲಭ್ಯತೇ ॥

ಅಧಿಮಾಸಶೇಷಂ ಕಲ್ಪರವಿದಿವಸೇಭ್ಯಃ ಸಂಶೋಧ್ಯ ಅವಶೇಷಸ್ಯ ಕಲ್ಪಾಧಿಮಾಸಕೈರ್ಭಾಗೇ ಹತೇ ಏಷ್ಯಾಧಿಮಾಸೇ ಗತಕಾಲೋ

---

ಅದನ್ನು ಹನ್ನೆರಡರಿಂದ ಗುಣಿಸಿ ತಿಂಗಳುಗಳನ್ನಾಗಿ ಮಾಡಿಕೊಂಡು, ಆ ಸಂಖ್ಯೆಗೆ ಚೈತ್ರಾದಿಯಾಗಿ ಕಳೆದಿರುವ ತಿಂಗಳುಗಳ ಸಂಖ್ಯೆಯನ್ನು ಕೂಡಬೇಕು. ಆ ಸಂಖ್ಯೆಯು ಒಟ್ಟು ಮಾಸಗಣವೆನಿಸುವುದು. ಆ ಮಾಸಗಣನವನ್ನು ಮೂವತ್ತ ರಿಂದ ಗುಣಿಸಿ, ಗತತಿಥಿಗಳನ್ನು (ಅವಮಾಹಸ್ಸುಗಳನ್ನು ಸೇರಿಸಿ) ಶುಕ್ಲಪಕ್ಷಾದಿ ಯಾಗಿ ಸೇರಿಸಬೇಕು. ಹಾಗೆಬರುವ ಸಂಖ್ಯೆಯೇ ಸೌರಾಹರ್ಗಣವೆನಿಸುವುದು. ಅದನ್ನು ಒಂದು ಕಲ್ಪಕ್ಕೆ ಹೇಳಿರುವ ಅಧಿಮಾಸ ಸಂಖ್ಯೆಯಿಂದ ಗುಣಿಸಿ ಕಲ್ಪಕ್ಕೆ ಹೇಳಿರುವ ಸಾವನಾಹಸ್ಸಿನಿಂದ ಭಾಗಿಸಬೇಕು. ಬರುವ ಲಬ್ಧವೇ ಗತಾಧಿಮಾಸ ಸಂಖ್ಯೆಯಾಗುವುದು. ಆ ಅಧಿಮಾಸಗಳನ್ನು ಮೂವತ್ತರಿಂದ ಗುಣಿಸಿ, ಸೌರಾಹ ರ್ಗಣ ಸಂಖ್ಯೆಗೆ ಸೇರಿಸಿದರೆ ಆಗ, ಚಾಂದ್ರಾಹರ್ಗಣವಾಗುವುದು. ಆ ಚಾಂದ್ರಾಹ ರ್ಗಣವನ್ನು ಒಂದು ಕಲ್ಪಕ್ಕೆ ಹೇಳಿರುವ ಅವಮಾಹರ್ಗಣ ಸಂಖ್ಯೆಯಿಂದ ಗುಣಿಸಿ ಕಲ್ಪಸಾವನಾಹರ್ಗಣದಿಂದ ಭಾಗಿಸಿದರೆ ಬರುವ ಸಂಖ್ಯೆಯು ಅವಮಾಹರ್ಗಣವೆನಿ ಸುವುದು. ಅದನ್ನು ಚಾಂದ್ರಾಹರ್ಗಣಸಂಖ್ಯೆಗೆ ಸೇರಿಸಿದರೆ ಅದು ಸಾವನಾಹರ್ಗಣ ವಾಗುವುದು. ಕಲ್ಪಕ್ಕೆ ಉಕ್ತವಾಗಿರುವ ಒಟ್ಟು ಅಧಿಮಾಸಸಂಖ್ಯೆಯಲ್ಲಿ ಗತಾಧಿ ಮಾಸ ಸಂಖ್ಯೆಯನ್ನು ಕಳೆದರೆ ಉಳಿಯುವುದೇ ಏಷ್ಯಾಧಿಮಾಸಸಂಖ್ಯೆಯಾಗುವುದು.

ಕಲ್ಪಕುದಿನಗಳಿಗೆ ಇಷ್ಟು ಅಧಿಮಾಸ ಅಥವಾ ಇಷ್ಟು ಅವಮಾಹಸ್ಸುಗಳೆಂದು ಗ್ರಂಥಕಾರರೇ ಕಲ್ಪಿಸಿರುವುದರಿಂದ ಯಾವಕಾಲದಲ್ಲಿಬೇಕಾದರೂ, ಕಲ್ಪಸಾವನಾಹಸ್ಸು

ಲಭ್ಯತೇ । ಅವಮಶೇಷಸ್ಯ ಕಲ್ಪೇನ ರಾತ್ರೇರ್ಭಾಗೇ ಹತೇ ಏಷ್ಯೋನರಾತ್ರಕಾಲಃ ಅವಮಶೇಷಕಲ್ಪ ಚಂದ್ರ ದಿವಸೇಭ್ಯಃ ಸಂಶೋಧ್ಯ ಅವಶಿಷ್ಟಸ್ಯ ಕಲ್ಪೋ ನ ರಾತ್ರೇರ್ಭಾಗೇ ಹೃತೇಏಷ್ಯೋನರಾತ್ರಪಾತಕಾಲಃ ಸಂವತ್ಸರಗಣಾ ತ್ಪಂಚ ಹತಾವಶೇಷೇ ಸಂವತ್ಸರಾದ್ಯೋಬ್ದಃ ಅದಿತ್ಯಃ ಚಂದ್ರಃ ಭೌಮಃ ಬುಧಃ ಜೀವಃ ಸಿತಃ ಸೌರಶ್ಚೇತಿ ಕ್ರಮೇಣ ಗ್ರಹಣಂ ಸಂವತ್ಸರಾಃ ಸಪ್ತಹೃತಾವಶೇಷೇ ಚತುರ್ಥಕ್ರಮೇಣ ಸಂವತ್ಸ-ರಾಧಿಪಃ ಸಾವನಾದ್ದಿನಗಣಾತ್ಸಪ್ತಹೃತಾತ್ಕ್ರಮೇಣೈವ ದಿವಸಾಧಿಪಃ ಚಾಂದ್ರಾಃ ದಿನಗಣಾ ದಶಾತ್ಯಧಿಕ ಶತಹತಾಲ್ಲಬ್ಧಂ ಸಪ್ತಹತಂ ತದವ ಶೇಷಂ ಪರ್ವ, ಬ್ರಹ್ಮಚಂದ್ರೇಂದ್ರ ವೈಶ್ರವಣ ವರುಣಾಗ್ನಿಯಮಾಶ್ಚ ಪರ್ವಪತಯಃ ದಿನಗಣಮಿಷ್ಟಗ್ರಹ ಭಗಣ ಗುಣ ಭೂದಿನೈರ್ವಿಭಜೇತ್ । ಲಬ್ಧಂ ಭಗಣಾದಿಃ

---

ಗಳಿಗೆ ನಿರ್ದಿಷ್ಟ ಅಧಿಮಾಸ ಅಥವಾ ಅವಮಾಹಸ್ಸುಗಳಾದರೆ, ಇಷ್ಟಕಾಲದ ಅಹರ್ಗಣಗಳಿಗೆ ಎಷ್ಟು ? ಎಂಬ ತ್ರೈರಾಶಿಕಗಣಿತದ ಪ್ರಕಾರ ಗತ ಮತ್ತು ಏಷ್ಯ ಅಧಿಮಾಸಾದಿಗಳನ್ನು ಅರಿಯಬೇಕು. (ಅನಂತರ ಅಹರ್ಗಣಸಂಖ್ಯೆಯನ್ನು ಐದರಿಂದ ಭಾಗಿಸಿ ಉಳಿದ ಸಂಖ್ಯೆಯಿಂದ ಸೌರ, ಚಾಂದ್ರ, ನಾಕ್ಷತ್ರ, ಬಾರ್ಹಸ್ಪತ್ಯ, ಸಾವನವೆಂಬ ಪಂಚವರ್ಷಗಳಲ್ಲಿ ಒಂದನ್ನು ಅರಿಯಬೇಕು) (ಇದು ಅಷ್ಟು ಉಪಪತ್ತಿಯುತವಾಗಿಲ್ಲ). ಹಾಗೆಯೇ ಅಹರ್ಗಣಸಂಖ್ಯೆಯನ್ನು ಏಳರಿಂದ ಭಾಗಿಸಿ ನಿಂತ ಶೇಷಕ್ಕೆ ಅನುಸಾರವಾಗಿ ಸೂರ್ಯಾದಿವಾರಗಳನ್ನು ತಿಳಿಯಬೇಕು. ಈ ಸೂರ್ಯಾದಿವಾರಗಳು ರಕ್ಷಾಕ್ರಮದಲ್ಲಿ ನಾಲ್ಕನೆಯ ಗ್ರಹಗಳ ಹೆಸರಿನಿಂದ ಲಭಿಸವುವು ಹಾಗೆಯೇ ಅಹರ್ಗಣವನ್ನು ಏಳರಿಂದ ಭಾಗಿಸಿ ನಿಂತ ಶೇಷ ಸಂಖ್ಯೆಗೆ ಅನುಗಣವಾಗಿ ಬ್ರಹ್ಮ, ಚಂದ್ರ, ಇಂದ್ರ, ವೈಶ್ರವಣ, ವರುಣ, ಅಗ್ನಿ, ಯಮ, ಎಂಬ ಪರ್ವಾಧಿಪತಿಗಳನ್ನು ಗಮನಿಸಬೇಕು. ಇದೇ ಅಹರ್ಗಣಸಂಖ್ಯೆಯನ್ನು ಹಿಂದೆ ಹೇಳಿದ ಕಲ್ಪಸಾವನಾಹಸ್ಸುಗಳ ಗ್ರಹಭಗಣಸಂಖ್ಯೆಯಿಂದ ಗುಣಿಸಿಕಲ್ಪಸಾವನದಿನಗಳಿಂದ ಭಾಗಿಸಿದರೆ ಬರುವ ತಾತ್ಕಾಲಿಕ ನಿಜ ಭಗಣವು, ನಿರಕ್ಷದೇಶದ ಅರ್ಧರಾತ್ರಾಕಾಲಿಕವಾಗಿ

ಲೇಖಾರ್ಕೋದಯೋ ಗ್ರಹೋ ಭವತಿ। ಏವಂ ರೂಪೇಣಾ ಹರ್ಗಣೇನ ಗ್ರಹಭುಕ್ತಿಃ ॥

ಇಷ್ಟಕಾಲಾದ್ಯಾವತಾಕಾಲೇನಾರ್ಕೋದಯೋ ಭವಿಷ್ಯತಿತಾವತಾ ಕಾಲೇನ ಗ್ರಹಸ್ಯ ಏಕದಿವಸ ಭುಕ್ತಿಂ ಸಂಗುಣ್ಯ ಷಷ್ಟ್ಯಾ ವಿಭಜೇತ್। ಅವಾಪ್ತಂ ರವ್ಯುದಯೇ ಗ್ರಹಸ್ಯ ಧನಮಸ್ತಮಯೇ ಋಣಂ। ಏವಮುತ್ತರಗೋಲೇ ದಕ್ಷಿಣೇನ ವಿಪರೀತದಿಶಾನ್ತರಯೋಜನಾನಿ ಷಷ್ಟ್ಯಾಸಂಗುಣ್ಯ ಪಂಚಭಿಃಸಹಸ್ರೈರ್ವಿಭಜೇತ್। ಲಬ್ಧಂ ಲೇಖಾ ಪ್ರಾಗ್ಭಾವೇ ಸಂಶೋಧ್ಯಮಪರಸ್ಮಿನ್ ದೇಯಮೇವ ಇಷ್ಟೇ ದೇಶೇ। ಇಷ್ಟೇ ಚ ಕಾಲೇ ಗ್ರಹೋ ಮಧ್ಯಮೋ ಭವತಿ। ತತ್ಕಾಲಾರ್ಕಚಂದ್ರ

---

ಗತವೆಸಿಸುವುದು. ಇದೇಕ್ರಮದಿಂದ ಆದಿತ್ಯಾದಿಗ್ರಹಗಳ ಇಷ್ಟಕಾಲಿಕ ಗತಭಗಣವನ್ನು ತಿಳಿಯಬೇಕು.

ಲಂಕಾರ್ಧರಾತ್ರಿಕಾಲಿಕವಾದ ಗ್ರಹವನ್ನು ಇಷ್ಟಕಾಲಕ್ಕೆ ಆನಯನಮಾಡಬೇಕಾದರೆ, ಆಯಾಗ್ರಹಗಳ ದಿನಗತಿಯನ್ನು ಇಷ್ಟಕಾಲದ ಘಟಿಯಿಂದ ಗುಣಿಸಿ ಅರವತ್ತರಿಂದ ಭಾಗಿಸಿ ಬಂದ ಕಲಾತ್ಮಕವಾದ ಗತಿಯನ್ನೂ ಆಭಗಣಸಂಖೆಗೆ ಸೇರಿಸಬೇಕು. ಆಗ ಅದು ಇಷ್ಟಕಾಲಿಕ ಮಧ್ಯಗ್ರಹವಾಗುವುದು ಆದರೆ ನಿರಕ್ಷದೇಶಕ್ಕಿಂತ ಸ್ವದೇಶವು ಪೂರ್ವಭಾಗದಲ್ಲಿದ್ದರೆ ಆ ಗತಿಕಲೆಯನ್ನು ಭಗಣಸಂಖ್ಯೆಯಲ್ಲಿ ಕಳೆಯಬೇಕು. ಪಶ್ಚಿಮದಿಕ್ಕಿನಲ್ಲಿದ್ದರೆ ಸೇರಿಸಬೇಕು. ಈ ಮಧ್ಯಗ್ರಹವನ್ನು ಸ್ಪಷ್ಟೀಕರಿಸಿ ಸ್ಫುಟಗ್ರಹವನ್ನಾಗಿ ಮಾಡಿಕೊಳ್ಳಲು, ಈ ಮಧ್ಯಗ್ರಹಸ್ಫುಟಕ್ಕೆ ಕೆಲವು ಸಂಸ್ಕಾರಗಳನ್ನು ಮಾಡಬೇಕು. ಪ್ರತಿ ಗ್ರಹಗಳಿಗೂ:ಚಲನೆಯನ್ನುಂಟುಮಾಡುವ ಶೀಘ್ರೋಚ್ಚ. ಮಂದೋಚ್ಚ, ಪಾತಸಂಜ್ಞಕವಾದ ಕೆಲವು ಕೇಂದ್ರಸ್ಥಾನಗಳಿರುವುವು. ಅವುಗಳನ್ನು ಅದೃಶ್ಯಗಳಾದ ಕಾಲಮೂರ್ತಿಗಳೆನ್ನಬಹುದು. ಅವು ತಮ್ಮ ಆಕರ್ಷಣಶಕ್ತಿಯಿಂದ ಗ್ರಹಗಳನ್ನು ತಮ್ಮ ಕಡೆಗೆ ಎಳೆದು ಪ್ರವಹವಾಯುವಿನಿಂದ ಉತ್ಪನ್ನವಾಗುವ ಗ್ರಹಚಲನೆಯಲ್ಲಿ ಅಲ್ಪಸ್ವಲ್ಪ ವ್ಯತ್ಯಾಸವನ್ನುಂಟುಮಾಡುವುವು. ಇದರಿಂದಲೇ ಗ್ರಹಗಳಿಗೆ ವಕ್ರಾದಿಗತಿಗಳು ತೋರಿಬರುವುವು. ಈ ಶೀಘ್ರೋಚ್ಚಮಂದೋಚ್ಚಾದಿಸ್ಥಾನಗಳನ್ನು ಕಂಡುಹಿಡಿದು, ಅವುಗಳಿಂದ ಸಂಭವಿಸುವ ಕಲಾತ್ಮಕವಾದ ಆಕರ್ಷಣಗತಿಯನ್ನು ಗ್ರಹಮಧ್ಯಕ್ಕೆ ಸೇರಿಸುವುದರಿಂದಲೂ ಕಳೆಯುವುದರಿಂದಲೂ ಗ್ರಹವು ನಿಜವಾಗಿರುವ ಸ್ಪಷ್ಟಸ್ಥಾನವನ್ನು ತಿಳಿಯಬೇಕಾಗುತ್ತದೆ. ಆದರೆ ಸೂರ್ಯಚಂದ್ರರಿಗೆ ಶೀಘ್ರೋಚ್ಚಕೇಂದ್ರವಿಲ್ಲ.

ಮಂದಕರ್ಮಣ್ಯೈವ ಸ್ಫುಟೇ ಕಾರ್ಯೇ। ಭೌಮಃ ಕರ್ಮಚತುಷ್ಟಯೇನ ತಸ್ಯ ಮಂದಂ ಶೀಘ್ರಂ ಮಂದಂ ಶೀಘ್ರಮಿತಿ ಕರ್ಮಾಣಿ। ಅನ್ಯೇಷಾಂ ಮಂದ ಶೀಘ್ರೇ ಕರ್ಮಣೀ। ತತ್ರ ಭೌಮಮಧ್ಯಃ ಸಂಸ್ಕಾರ್ಯಃ। ತಚ್ಛೀಘ್ರಪರಿಧಿಶ್ಚ ಶುಕ್ರಸ್ಯ ಪರಿಧಿದ್ವಯಮಪಿ ತತ್ರ ಭೌಮ ಜೀವ ಸೌರಾಣಾಮರ್ಕಃ ಶೀಘ್ರಃ।

ಸ್ವಯಂ ಮಧ್ಯಮೋ ಬುಧಶುಕ್ರಯೋರರ್ಕೋ ಮಧ್ಯಮಃ ಸ್ವಯಂ ಶೀಘ್ರೋಚ್ಚಶೀಘ್ರಃ। ಗ್ರಹೋನಂ ಕೇಂದ್ರಃ। ಗ್ರಹಶ್ಚ ಮಂದೋನಃ। ಭೌಮ ಶೀಘ್ರಕೇಂದ್ರಪದ ಭುಕ್ತಾಭುಕ್ತಯೋರಲ್ಪಸ್ಯ ಜೀವಂ ಚತುರ್ಭಿಃ ಶತೈಃ ಗ್ರಹೈಶ್ಚ ಮಂದೋನ ಭಾಜಿತಂ ದ್ವಾದಶ್ಯಾ ಜೀವಯಾ ವಿಭಜೇತ್ । ಲಬ್ಧೇನ

---

ಅದರ ಆಕರ್ಷಣಕ್ಕೆ ಆಗ್ರಹಗಳು ಒಳಪಟ್ಟಿಲ್ಲ. ಆದುದರಿಂದ ಸೂರ್ಯಚಂದ್ರರ ಮಧ್ಯಸ್ಫಟವನ್ನು ಕೇವಲ ಮಂದಫಲ ಸಂಸ್ಕಾರದಿಂದಲೇ ಸ್ಪಷ್ಟೀಕರಿಸಬಹುದು. ಕುಜಾದಿಗಳಿಗೆ ಮಾತ್ರ ಶೀಘ್ರಮಂದಫಲಗಳೆರಡರಿಂದಲೂ ಸಂಸ್ಕಾರಮಾಡಬೇಕಾಗುತ್ತದೆ. ಈಗ ಗಣಿತಕ್ರಮವು ಇಲ್ಲಿ ವಿವರಿಸಲ್ಪಡುವುದು. ಕುಜಾದಿಗ್ರಹಗಳ ಮಧ್ಯಕ್ಕೆ ಮೊದಲು ಶೀಘ್ರಫಲ, ಅನಂತರ ಮಂದಫಲ ಮತ್ತೆ ಶೀಘ್ರಫಲ, ಪುನಃ ಮಂದಫಲ ಈರೀತಿ ಶೀಘ್ರಮಂದಫಲಗಳನ್ನೂ ಧನರ್ಣಸಂಸ್ಕಾರಮಾಡುವುದರಿಂದ ಸ್ಪಷ್ಟ ಕುಜಾದಿಗ್ರಹಗಳು ಲಭಿಸುವುವು. ಮುಂದೆ ಶೀಘ್ರಮಂದಪರಿಧ್ಯಂಶಗಳು ಕ್ರಮವಾಗಿ ಎಲ್ಲಾಗ್ರಹಗಳಿಗೂ ಉಕ್ತವಾಗುವುವು. ಕುಜ, ಗುರು, ಶನಿಗಳಿಗೆ ಮಾತ್ರ ಸೂರ್ಯನೇ ಶೀಘ್ರೋಚ್ಚಸ್ಥಾನವಾಗುವನು

ರವಿಮಂದೋಚ್ಚ ಮಧ್ಯಮವೇ ಬುಧಶುಕ್ರರ ಮಂದೋಚ್ಚಮಧ್ಯಮವಾಗುವುದು. ರವಿಗೆ ಶೀಘ್ರೋಚ್ಚವಿಲ್ಲದಿರುವುದರಿಂದ, ಬುಧಶುಕ್ರರಿಗೆ ಪ್ರತ್ಯೇಕ ಶೀಘ್ರೋಚ್ಚವನ್ನು ಆನಯನಮಾಡಿಕೊಳ್ಳಬೇಕು ಕಲ್ಪದಿನಗಳಿಗೆ ಹಿಂದೆ ಹೇಳಿದಂತೆ ಮಂದ ಶೀಘ್ರೋಚ್ಚ ಭಗಣಗಳಾದರೆ ಇಷ್ಟ ದಿನಗಳಿಗೆ ಎಷ್ಟು ಎಂಬ ಅನುಪಾತದಿಂದ ಇಷ್ಟ ದಿನಕ್ಕೆ ಮಂದೋಚ್ಚ ಶೀಘ್ರೋಚ್ಚಸ್ಥಾನಗಳನ್ನು ರಾಶ್ಯಾತ್ಮಕವಾಗಿ ಆನಯನಮಾಡಿಟ್ಟುಕೊಳ್ಳಬೇಕು. ಇದರಿಂದ ಹಿಂದೆ ಸಾಧಿತವಾದ ಮಧ್ಯಗ್ರಹಗಳನ್ನು ಸ್ಪಷ್ಟಗ್ರಹವನ್ನಾಗಿ ಮಾಡುವ ವಿಧಾನವು ಈಗ ನಿರೂಪಿತವಾಗುವುದು. ಶ್ರೀಘ್ರೋಚ್ಚ ಮಂದೋಚ್ಚಾದಿಗಳ ಮತ್ತು ಮಧ್ಯಗ್ರಹದ ಅಂತರವೇ ಶೀಘ್ರಕೇಂದ್ರ ಮತ್ತು ಮಂದ

**ಕೇಂದ್ರೇ ಮಕರಾದಿಗೇ ಭೌಮಮಂದಯುತಂ ಕಾರ್ಯಂ । ಕರ್ಕಟಾದಿಗೇ ಚೋನಯುತಿ ಶುಕ್ರಮಂದಂ ಕೇಂದ್ರಜ್ಯಾಂ ನ್ಯಾಸಾರ್ಧಾವಹೂತಾಂ ಲಬ್ಧೇನ ತಂ ಮಂದಂ ಪರಿಧಿರೂನಃ ಸ್ಪಷ್ಟೋ ಭವತಿ ।**

**ತಸ್ಯೈವ ಶೀಘ್ರಕೇಂದ್ರಜ್ಯಾಂ ವ್ಯಾಸಾರ್ಧಂ ಪಂಚ[1]ಮೋನ ವಿಭಜೇತ್। ಲಬ್ಧೇ ಯುತಃ ಶುಕ್ರ ಶೀಘ್ರಪರಿಧಿಃ ಸ್ಪಷ್ಟೋ ಭವತೀತಿ ಮಂದಕೇಂದ್ರಾತ್ ಜೀವಾ ಭುಜಜ್ಯಾ ತ್ರಿರಾಶಿ ಸಹಿತೇ ಕೋಟಿಜ್ಯಾ ಕೋಟಿ ಭುಜಜ್ಯೇ ಸ್ವಮರ್ಧ-**

---

ಕೇಂದ್ರಗಳೆನಿಸುವುವು. ಅವುಗಳ ಜ್ಯಾವನ್ನು ಕಂಡುಹಿಡಿದು, ಆಯಾಗ್ರಹಗಳ ಸ್ಫುಟಪರಿಧಿಯಿಂದ ಗುಣಿಸಿ ಮಸ್ನೂರರವತ್ತರಿಂದ (ಈ ಗ್ರಂಥದಲ್ಲಿ ಮಾತ್ರ ೪೦೦ ಎಂದು ಹೇಳಿದೆ. ಇದಕ್ಕೆ ಗ್ರಂಥಾಂತರಗಳಲ್ಲಿ ಆಧಾರವಿಲ್ಲ) ಭಾಗಿಸಿಬರುವ ಲಬ್ಧಕ್ಕೆ ಧನುರಾನಯನ ಮಾಡಿದರೆ ಬರುವುದೇ ಶೀಘ್ರಫಲ ಅಥವಾ ಮಂದಫಲವೆನಿಸುವುದು. ಅದು ಲಿಪ್ತ್ಯಾದಿಯಾಗಿ ಬರುವುದು. ಅದನ್ನು ಮಂದ ಶೀಘ್ರಕೇಂದ್ರಗಳು ಮಕರಾದಿ ಯಾಗಿದ್ದರೆ ಮಧ್ಯಗ್ರಹದಲ್ಲಿ ಕೂಡಬೇಕು. ಕಟಕಾದಿಯಾಗಿದ್ದರೆ ಮಧ್ಯಗ್ರಹದಲ್ಲಿ ಕಳೆಯಬೇಕು. ಆದರೆ ಕುಜಾದಿಗ್ರಹಗಳ ಸ್ಪಷ್ಟೀಕರಣದಲ್ಲಿ ಮೊದಲು ಶೀಘ್ರಫಲಾರ್ಧ ಅನಂತರ ಮಂದಫಲಾರ್ಧ ಅನಂತರ ಪೂರ್ಣ ಶೀಘ್ರಫಲ, ಪೂರ್ಣಮಂಧಫಲ ಹೀಗೆ ನಾಲ್ಕುವಿಧವಾದ ಸಂಸ್ಕಾರದಿಂದ ಗ್ರಹಗಳು ಸ್ಪಷ್ಟವಾಗುವುವು.

ಅಭೀಷ್ಟಕೇಂದ್ರ ಸಂಬಂಧದಿಂದ ಪರಿಧಿಭಾಗಗಳನ್ನೂ ಆನಯನ ಮಾಡ ಬೇಕಾದರೆ ಯಾವ ಗ್ರಹದ ಪರಧಿಯನ್ನು ಕಂಡುಹಿಡಿಯಬೇಕೋ, ಆ ಗ್ರಹದ ಮಂದ ಅಥವಾ ಶೀಘ್ರಕೇಂದ್ರವನ್ನು ತಿಳಿದುಕೊಂಡು ಅದಕ್ಕೆ ಭುಜಜ್ಯಾ ಸಾಧನೆ ಮಾಡಿ, ಅದನ್ನು ಓಜ ಮತ್ತು ಯುಗ್ಮಪದ ಕೇಂಪ್ರ ಪರಿಧಿಗಳ ಅಂತರದಿಂದ ಗುಣಿಸಿ, ತ್ರಿಜ್ಯೆಯಿಂದ ಭಾಗಿಸಿದರೆ ಬರುವುದೇ ಸ್ಫುಟ ಪರಿಧಿಯೆನಿಸುವುದು. ಹಾಗೆಯೇ ಭುಜಜ್ಯಾ ಮತ್ತು ಕೋಟಿಜ್ಯಗಳನ್ನೂ ಸ್ವೀಯ ಸ್ಫುಟ ಪರಿಧಿಯಿಂದ ಗುಣಿಸಿ, ಭಗಣಾಂಶ (೩೬೦) ದಿಂದ ಭಾಗಿಸಿದರೆ, ಭುಜಫಲ ಮತ್ತು ಕೋಟಿ ಫಲಗಳು ದೊರೆಯುತ್ತವೆ. ಮಂದಕೇಂದ್ರ ಭುಜಫಲಕ್ಕೆ ಧನುರಾನಯನ ಮಾಡಿದರೆ ಮಂದಫಲವು ಲಿಪ್ತ್ಯಾದಿಯಾಗಿ ದೊರೆಯುವುದು ಶೀಘ್ರಕೇಂದ್ರಫಲಜ್ಯೆಗೆ ಧನು ರಾಯನ ಮಾಡಿದರೆ ಶೀಘ್ರಫಲವು ದೊರೆಯುವುದು. ಶೀಘ್ರಸಂಬಂಧಿ ಕೋಟಿ

---

1 ತ್ರಿಜ್ಯಯಾ ಇತಿ ಪಾಠಃ ಸಾಧುಃ

ವಾರಿಧಿ ಹತೇ ಖರಸಾಮಿಭಿರ್ವಿಭಜೇತ್ । ಲಬ್ಧಂ ಭುಜ ಕೋಟಿಪಾತೇ ಮಕರಾದಿ ಕೇಂದ್ರೇ ಕೋಟಿಫಲಂ ವ್ಯಾಸಾರ್ಧೇ ದದ್ಯಾತ್ । ಕುಲೀರಾದಿಕೇ ಶೋಧಯೇತ್ಕೋಟಿರ್ಭವತಿ ।

ಭುಜಾಫಲಂ ಭುಜಾ ಕೋಟಿ ಭುಜವರ್ಗಯೋಗಮೂಲಂ ಕರ್ಣಃ ವ್ಯಾಸಾರ್ಧಹತಾಂ ಭುಜಜ್ಯಾಂ ಸ್ಫುಟಕರ್ಣೇನ ವಿಭಜೇತ್ । ಲಬ್ಧಚಾಪಂ ಫಲಕಲಾಃ ಮೇಷಾದಿಕೇಂದ್ರೇ ಗ್ರಹೇ ಶೋಧ್ಯಾಸ್ತುಲಾದೌ ದೇಯಾಃ । ಭೌಮಸ್ಯ ಪ್ರಥಮಮಂದ ಕರ್ಮಣಿ ಅಧಿಕೃತಾಃ ಏವಂ ಮಂದಸ್ಫುಟಂ ಗ್ರಹಂ ಶೀಘ್ರಾದ ಪಾಸ್ಯ ಕೇದ್ರಂ ಕೃತ್ವಾ ಏವಮೇವ ಶೀಘ್ರ ಪರಿಧಿನಾ ಕರ್ಮ ಕುರ್ಯಾತ್ । ತತ್ಫಲಂ ಮಂದಸ್ಫುಟೇ ಗ್ರಹೇ ಮೇಷಾದಿಕೇಂದ್ರೇ । ಧನಂತುಲಾದಾವೃಣಮಿತಿ ।

---

ಫಲವನ್ನು, ಶೀಘ್ರಕೇಂದ್ರವು ಮಕರಾದಿಯಾಗಿದ್ದರೆ ಧನಮಾಡಬೇಕು. ಕಟಕಾದಿ ಕೇಂದ್ರವಾಗಿದ್ದರೆ ತ್ರಿಜ್ಯೆಯಲ್ಲಿ ಋಣಮಾಡಬೇಕು

ಇಲ್ಲಿ ಕೋಟಿಫಲ ಸಂಸ್ಕೃತವಾದ ತ್ರಿಜ್ಯೆಯೇ ಕೋಟಿಯಾಗುವುದು. ಭುಜಜ್ಯೆಯೇ ಭುಜವೆನಿಸುವುದು. ಇವೆರಡರ ವರ್ಗಯೋಗ ಮೂಲವೇ ಕರ್ಣ ವೆಂಬ ಹೆಸರನ್ನು ತಾಳುವುದು. ಭುಜಫಲವನ್ನು ತ್ರಿಜ್ಯೆಯಿಂದ ಗುಣಿಸಿ, ಶೀಘ್ರ ಕರ್ಣದಿಂದ ಭಾಗಿಸಿ, ಅದಕ್ಕೆ ಧನುರಾಯನ ಮಾಡಿದರೆ, ಲಿಪ್ತ್ಯಾದಿಯಾದ ಶೀಘ್ರ ಫಲವು ದೊರೆಯುವುದು. ಇದನ್ನು ಮೇಷಾದಿ ಕೇಂದ್ರವಾಗಿದ್ದರೆ, ಧನಮಾಡಬೇಕು. ತುಲಾದಿಕೇಂದ್ರದಲ್ಲಿ ಋಣಮಾಡಬೇಕು. ಈ ಶೀಘ್ರಫಲವನ್ನು ಹಿಂದೆ ಹೇಳಿದಂತೆ ಪರಿಧಿ ಭಾಗಾಯನ ಮಾಡಿ ಸ್ಪಷ್ಟೀಕರಿಸಿಕೊಂಡು, ಮಂದಸ್ಫುಟ ಗ್ರಹಕ್ಕೆ ಅಜಾದಿ, ತುಲಾದಿ ಕೇಂದ್ರಗಳ ವಿಮರ್ಶೆಯಿಂದ ಧನ ಅಥವಾ ಋಣಸಂಸ್ಕಾರ ಮಾಡಬೇಕು.

ಭೌಮಸ್ಯ ಪ್ರಥಮೋ ಶೀಘ್ರಕರ್ಮಣಿ ತದೂನೀಕೃತಂ ಏವಂ ಗ್ರಹಃ ಸ್ಫುಟೋ ಭವತಿ । ಬುಧಸಿತಪಾತಾ ವಿಪರೀತೇನ ಲಬ್ಧಫಲೇನ ಸ್ಫುಟಾ ಕಾರ್ಯಾ । ಭೌಮಜೀವ ಸೌರಾಣಾಂ ಶೀಘ್ರಾರ್ಧಫಲೇನ ಅನುಲೋಮೇನ ಆನೀತ ವರ್ತಮಾನ ಸ್ಫುಟಂ ಗ್ರಹಾಂತರಂ ಸ್ಫುಟಭುಕ್ತಿಃ ಅರ್ಕ ಫಲಂ ಸ್ಫುಟಭುಕ್ತಿಹತಂ ಭವನ ಕಲಾಭಿರ್ವಿಭಜೇತ್ । ಲಬ್ಧ ಮರ್ಕ ಕೇಂದ್ರವಶೆ ತದ್ವದೇವ ಗ್ರಹಸ್ಯ ಧನರ್ಣೇ ಯೋಜ್ಯೇ ।

ಅಂತ್ಯ ಶೀಘ್ರಕರ್ಮವಿಶೇಷಂ ಕೇಂದ್ರಸ್ಯ ವಕ್ರಾದಿಕೇಂದ್ರಸ್ಯ ವಾ ಅಂತರಂ ಸ್ಫುಟಭುಕ್ತಿಶೀಘ್ರಮುತ್ಪಂತ ರೇಣ ವಿಭಜೇತ್ ।

---

ಕುಜಾದಿಗ್ರಹಗಳ ಮಧ್ಯಸ್ಫುಟದಲ್ಲಿ ಸ್ವಸಾಧಿತವಾದ ಶೀಘ್ರಫಲದ ಅರ್ಧವನ್ನು ಸಂಸ್ಕರಿಸಿ ಅದರಿಂದ ಮಂದಫಲವನ್ನು ಹಿಂದಿನಂತೆ ಆನಯನಮಾಡಿ, ಅದರಿಂದ ಮತ್ತೆ ಶೀಘ್ರಫಲವನ್ನು ಸಾಧಿಸಿ ತದರ್ಧವನ್ನು ಮಂದಸ್ಫುಟಸಾಧಿತವಾದ ಗ್ರಹಕ್ಕೆ ಸಂಸ್ಕರಿಸಿದರೆ ಗ್ರಹವು ಸ್ಪಷ್ಟೀಕೃತವಾಗುವುದು. ಹೀಗೆ ಸ್ಪಷ್ಟವಾದ ಗ್ರಹಗಳ ನಿತ್ಯಗತಿಯನ್ನು ಹಿಂದಿನ ಗಣಿತಕ್ರಮದಂತೆ ಸಾಧಿಸಿಕೊಂಡು ಅದನ್ನು ಸೂರ್ಯನ ಮಂದಫಲದಿಂದ ಗುಣಿಸಿ. ದ್ವಾದಶರಾಶಿಕಲೆಗಳಿಂದ ಭಾಗಿಸಿದರೆ ಬರುವ ಫಲವೇ ಭುಜಾಂತರಫಲ. ಅದನ್ನು ಸೂರ್ಯನಿಗೆ ಮಂದಫಲ ಸಂಸ್ಕಾರಮಾಡಿದಂತೆಯೇ ಧನವನ್ನಾಗಿಯೋ ಋಣವನ್ನಾಗಿಯೋ ಸಂಸ್ಕರಿಸಬೇಕು.

ಕುಜಶನಿಗುರುಗಳ ಪಾತಗಳಿಗೆ ಹಿಂದೆ ಹೇಳಿದ ಕ್ರಮದಂತೆ ತಾತ್ಕಾಲಿಕ ಮಧ್ಯವನ್ನು ಆನಯನಮಾಡಿ, ಆಯಾಗ್ರಹಗಳಿಗೆ ಬಂದ ಚತುರ್ಥಶೀಘ್ರಫಲವನ್ನು ಆನಯನಮಾಡಿ, ಆಯಾಗ್ರಹಗಳಿಗೆ ಬಂದ ಚತುರ್ಥಶೀಘ್ರಫಲವನ್ನು ಸಂಸ್ಕರಿಸಿದಂತೆ ಈಪಾತಗಳಿಗೂ ಸಂಸ್ಕಾರಮಾಡಬೇಕು. ಬುಧಶುಕ್ರರ ಪಾತಗಳಿಗ ಮಾತ್ರ ತೃತೀಯವಾದ ಮಂದಫಲವನ್ನು ಗ್ರಹಗಳಿಗೆ ಮಾಡಿದ ಸಂಸ್ಕಾರಕ್ಕೆ ವಿರುದ್ಧವಾಗಿ ಅಂದರೆ ಧನಮಾಡಿದರೆ ಋಣವನ್ನಾಗಿಯೂ, ಋಣಮಾಡಿದರೆ ಧನವನ್ನಾಗಿಯೂ ಭಾವಿಸಿ ಸಂಸ್ಕರಿಸಬೇಕು. ಕುಜಾದಿಗಳ ಗತಿಶೀಘ್ರಫಲವು ಮಂದಸ್ಪಷ್ಟಗತಿಗಿಂತಲೂ ಊನವಾಗುವುದಾದರೆ ಆಗ ಆಗ್ರಹಗಳಿಗೆ ವಕ್ರಗತಿಯು ಸಂಭವಿಸುವುದು. ಆಗ ಗ್ರಹಗಳ ಮಂದಕೇಂದ್ರಾಂತರವನ್ನು ಸ್ಫುಟಭುಕ್ತಿ ಶೀಘ್ರಕೇಂದ್ರದಿಂದ ಭಾಗಿಸಿದರೆ

ಲಬ್ಧೋ ವಕ್ರಾದೇರ್ದಿನಾದಿಃ ಕಾಲಃ ಧ್ರುವಕಕೇಂದ್ರೇ
ಅಧಿಕೇ ಏಷ್ಯಃ ಶೀಘ್ರಕೇಂದ್ರೇ ಅಧಿಕೇ ಅತೀತಃ । ೪೪

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ಏಕೋನ ಸಪ್ತತ್ಯುತ್ತರಶತತಮೋಽಧ್ಯಾಯಃ**

---

ಬರುವ ಫಲವು ವಕ್ರಕಲಾತ್ಮಕವಾಗಿ ಪರಿಣಮಿಸುವುದು. ಅದು ಆಯಾಗ್ರಹಗಳಿಗೆ ಹೇಳಿರುವ ವಕ್ರಧ್ರುವಕ್ಕಿಂತ ಅಧಿಕವಾಗಿದ್ದರೆ ಅಷ್ಟು ದಿನಗಳಮುಂದೆ ಆ ಗ್ರಹಗಳಿಗೆ ವಕ್ರತ್ವವು ಸಂಭವಿಸುವುದು. ಊನವಾಗಿದ್ದರೆ ಅಷ್ಟುದಿನಗಳ ಹಿಂದೆ ವಕ್ರತ್ವವು ಪೂರೈಸಿರಬೇಕೆಂದು ಭಾವಿಸಬೇಕು.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ ಅರವತ್ತೊಂಭತ್ತನೆಯ ಅಧ್ಯಾಯವು ಮುಗಿದಿದೆ.



|| ೭೦ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

### ಸಪ್ತತ್ಯುತ್ತರ ಶತತಮೋಽಧ್ಯಾಯಃ

ಸ್ಫುಟಗ್ರಹಂ ಲಿಪ್ತೀಕೃತಂ ಅಷ್ಟಭಿಶ್ಶತೈರ್ವಿಭಜೇತ್ । ಲಬ್ಧಂ ಗ್ರಹೇಣ ಭುಕ್ತಾನ್ಯಶ್ವಿನ್ಯಾದೀನಿ ನಕ್ಷತ್ರಾಣಿ ಶೇಷಂ ಸ್ಫುಟ ಭುಕ್ತ್ಯಾ ವಿಭಜೇತ್ । ಲಬ್ಧಂ ದಿನಾದಿಃ ಕಾಲೋ ನಕ್ಷತ್ರ-ಪ್ರವಿಷ್ಟಸ್ಯ ಅವಶೇಷಮಷ್ಟಭ್ಯಶ್ಶತೇಭ್ಯಃ ಸಂಶೋಧ್ಯ ಅವಮ ಶೇಷಾತ್ ಪ್ರಾಗ್ಗತಕಾಲೋ •ನಕ್ಷತ್ರಸ್ಥಿತೇಃ ರಾಶೌ ಭುಕ್ತಾ ಅಭುಕ್ತಾ ವಾ ಸ್ಫುಟಭುಕ್ತ್ಯಾ ವಿಭಜೇತ್ । ಲಬ್ಧಂ ದಿನಾದಿಃ ಸಂಕ್ರಾಂತೇರ್ಗತೈಷ್ಯಃ ಕಾಲಃ ।

---

### ನೂರ ಎಪ್ಪತ್ತನೆಯ ಅಧ್ಯಾಯ.

ಸ್ಪಷ್ಟಗ್ರಹವನ್ನು ಪೂರ್ವೋಕ್ತ ಗಣಿತದ ಸಹಾಯದಿಂದ ಆನಯನಮಾಡಿ, ಆ ಗ್ರಹವಿರುವ ನಕ್ಷತ್ರವನ್ನು ತಿಳಿಯಬೇಕಾದರೆ, ಸ್ಫುಟಗ್ರಹವನ್ನು ಲಿಪ್ತಿಯನ್ನಾಗಿ ಮಾಡಿಕೊಂಡು, ಎಂಟು ನೂರರಿಂದ ಭಾಗಿಸಬೇಕು ಏಕೆಂದರೆ ೨೧೬೦೦ ಕಲೆಗಳಿಂದ ಕೂಡಿದ ಭಚಕ್ರದಲ್ಲಿ ೨೭ ನಕ್ಷತ್ರಗಳು ಕ್ರಮವಾಗಿರುವುದರಿಂದ, ಒಂದೊಂದು ನಕ್ಷತ್ರದ ಆವರಣ ಸ್ಥಾನವು ೮೦೦ ಕಲೆಗಳುಳ್ಳದ್ದಾಗುವುದು (೨೧೬೦೦ ÷ ೨೭ = ೮೦೦) ಇದರಿಂದ ಭಾಗಿಸಿದರೆ ಬರುವ ಲಬ್ಧವು ಗತನಕ್ಷತ್ರ ಸಂಖ್ಯೆಯನ್ನು ಅಶ್ವಿನ್ಯಾದಿಯಾಗಿ ತಿಳಿಸುವುದು. ಶೇಷವನ್ನು ಆಯಾ ಗ್ರಹಗಳ ಸ್ಪಷ್ಟಗತಿಯಿಂದ ಭಾಗಿಸಿ ದಿನಮಾನದಿಂದ ಗುಣಿಸಿದರೆ, ತತ್ಕಾಲದಲ್ಲಿ ಗ್ರಹವು ತನ್ನ ಆ ನಕ್ಷತ್ರವನ್ನು ದಾಟುವ ಕಾಲವು ದಿನಾದಿಯಾಗಿಯೋ, ಘಟಿಕಾದಿಯಾಗಿಯೋ ಲಭಿಸುವುದು. ಈ ವಿಧವಾದ ಅನುಪಾತಕ್ರಮದಿಂದ ಗ್ರಹನಕ್ಷತ್ರಗಳ ಸಂಕ್ರಮಣ ಕಾಲವನ್ನು ತಿಳಿಯಬೇಕು

**ಅಥ ಯೋಜನಕರ್ಣಾಂತಂ ಸರ್ವಾಂತ್ಯಾವಿಶೇಷಕರ್ಣಾದ್ಯಂತಂ । ವ್ಯಸ್ತಂ ವ್ಯಾಸಾರ್ಧೇನ ವಿಭಜೇತ್ । ಲಬ್ಧಂ ಸ್ಫುಟಯೋಜನ ಕರ್ಣಾರ್ಧಾ ಗ್ರಹಾಃ ಪ್ರಮಾಣವಿಷ್ಕಂಭ ಯೋಜನಾನಿ ವ್ಯಾಸಾರ್ಧಹತಾನಿ ಸ್ಫುಟಯೋಜನ ಕರ್ಣಾರ್ಧೇನ ವಿಭಜೇತ್ ಲಬ್ಧಂ ಭೂಚ್ಛಾಯಾ ಸ್ಫುಟರಾಶಿ ಕರ್ಣಾರ್ಧೋನಸಾಂ ಚ ಸಾಹಸ್ರಿಕಸ್ಯ । ಪರಿಧೇಃ ರರ್ಣ ಹತಾಂಭೂಚ್ಛಾಯಯಾ ವಿಭಜೇತ್ । ಲಬ್ಧಂ ವ್ಯಾಸಾರ್ಧಗುಣಂ ಚಂದ್ರಸ್ಫುಟ ಯೋಜನಕರ್ಣಾರ್ಧೇನ ವಿಭಜೇತ್ ಲಬ್ಧಂ ರಾಹುಮಾನ ಕಲಾಃ । ಗ್ರಹಮಾನಾರ್ಧಕಲಾ ಷಷ್ಟಿಗುಣಾ ಭುಕ್ತ್ಯಾ ವಿಭಜೇತ್ । ಲಬ್ಧಂ ಸಂಕ್ರಾಂತಿ ಕಾಲಾತ್ಪ್ರಾಗಪರೇಣ ಚ ಪುಣ್ಯಕಾಲಃ ।**

---

ಸೂರ್ಯಾದಿಗಳ ಬಿಂಬಯೋಜನ ಪ್ರಮಾಣವನ್ನು ಅರಿಯಲು, ಆಯಾ ಗ್ರಹಗಳ ವ್ಯಾಸಪ್ರಮಾಣವನ್ನು ಆಯಾಗ್ರಹಗಳ ಸ್ಫುಟಗತಿಯಿಂದ ಗುಣಿಸಿ ಮಧ್ಯ ಗತಿಯಿಂದ ಭಾಗಿಸಬೇಕು ಬರುವುದೇ ಸ್ಫುಟವ್ಯಾಸ ಆ ಸ್ಫುಟವ್ಯಾಸವನ್ನು ವ್ಯಾಸಾರ್ಧದಿಂದ ಗುಣಿಸಿ, ಸ್ಫುಟಯೋಜನ ಕರ್ಣಾರ್ಧದಿಂದ ಭಾಗಿಸಿದರೆ ಬರುವ ಪ್ರಮಾಣವೇ ಭೂಚ್ಛಾಯಮಾನ. ಭೂವ್ಯಾಸ, ಸ್ಪಷ್ಟ ಸೂರ್ಯಬಿಂಬವ್ಯಾಸ, ಇವುಗಳ ಅಂತರವನ್ನು, ಚಂದ್ರಬಿಂಬವ್ಯಾಸದಿಂದ ಗುಣಿಸಿ, ಮಧ್ಯಸೂರ್ಯಬಿಂಬ ವ್ಯಾಸ (೫೦೦೦ ?) ದಿಂದ ಭಾಗಿಸಿದರೆ, ಬರುವುದೇ ರಾಹುಮಾನ ಕಲೆಗಳಾಗುವುವು. ಗ್ರಹಗಳ ಪರಿಧ್ಯರ್ಧ ಕಲೆಗಳನ್ನು ಅರವತ್ತರಿಂದ ಗುಣಿಸಿ, ಅವುಗಳ ಸ್ಫುಟಗತಿಯಿಂದ ಭಾಗಿಸಿದರೆ ಗ್ರಾಸಪ್ರಮಾಣವು ದೊರೆಯುವುದು. ಈ ರೀತಿ ಪರಿಧಿ ಸ್ಪರ್ಶವೇ ಸಂಕ್ರಾಂತಿ ಕಾಲವೆನಿಸುವುದು. ಇವರ ಹಿಂದುಮುಂದಿನ ಕೆಲವು ಘಳಿಗೆಗಳು ಪುಣ್ಯಕಾಲಗಳೆನಿಸುವುವು.

(ಮೇಲಿನ ಬಿಂಬಮಾನವೇ ಮೊದಲಾದ ವಿಷಯಗಳು ಇಲ್ಲಿ ಬಹು ಸೂಕ್ಷ್ಮ ವಾಗಿ ಅಸ್ತವ್ಯಸ್ತವಾಗಿವೆ. ಇದರ ವಿವರವನ್ನು ಸೂರ್ಯಸಿದ್ಧಾಂತವೇ ಮೊದಲಾದ ಗ್ರಂಥಗಳಲ್ಲಿ ವಿವರವಾಗಿ ತಿಳಿಯಬೇಕು).

**ಅರ್ಕೋನಾ ಚ್ಚಂದ್ರಾಲ್ಲಿಪ್ತೀ ಕೃತಾತ್ ಖಯಮಾಚಲ ಭಕ್ತಾ ಚ್ಛುಕ್ಲೆ ಪ್ರತಿಪದಾದ್ಯಾ ತಿಥಿಃ । ಶೇಷಾತ್ ಷಷ್ಟಿಗುಣ್ಯಾದ್ಭುಕ್ತ್ಯಂತರ ಹೃತಾದ್ಘಟಿ ಕಾದಿಃ ಕಾಲಃ । ಕೃಷ್ಣ ಚತುರ್ದಶಾಂತೇಃ ಸದೈವ ಶಕುನಿಃ, ಅಮಾಯಾ ಅದ್ಯರ್ಧೇ ಚತುಷ್ಪಾತ್ ದ್ವಿತೀಯೇ ನಾಗಃ ಪ್ರತಿಪದಾದ್ಯರ್ಧೇ, ಕಿಂಸ್ತುಘ್ನಂ । ಅರ್ಕೋನ ಚಂದ್ರಲಿಪ್ತಾಃ ಖರಸಾಗ್ನಿಭಿ ರ್ವಿಭಜೇತ್ । ಅವಶೇಷಾತ್ತಿಥಿವತ್ಕಾಲಃ । ಲಬ್ಧಾದೇಕೋನಾತ್ಸಪ್ತಮಹೃತಾದವಶೇಷಂ ಬವಾದ್ಯಂ ಕರಣಂ ಚಂದ್ರಾರ್ಕ ಯೋಗೇ ಚಂದ್ರಾರ್ಕ ಯೋಜನೇ ಘಾತವೈಧೃತೇ ತೇನ ಚಂದ್ರಾರ್ಕಯೋಃ ಕ್ರಾಂತಿ ಸಾಮ್ಯೇ ।**

---

ಸೂರ್ಯಚಂದ್ರ ಸ್ಫುಟಾಂತರ ಕಳೆಗಳನ್ನು ೭೨೦ ರಿಂದ ಭಾಗಿಸಿದರೆ ಶುಕ್ಲ ಪ್ರತಿಪದಾದಿಯಾದ ತಿಥಿಯು ಲಭಿಸುವುದು. ಲಬ್ಧಸಂಖ್ಯೆಯೇ ಗತತಿಥಿಗಳ ಅಂತರ ವನ್ನು ಸೂಚಿಸುವುದು ಶೇಷವನ್ನು ಅರವತ್ತರಿಂದ ಗುಣಿಸಿ, ಸೂರ್ಯಚಂದ್ರರ ಭುಕ್ತ್ಯಂತರಗಳಿಂದ ಭಾಗಿಸಿದರೆ, ಬರುವ ಲಬ್ಧವು ಘಟಿಕಾತ್ಮಕವಾಗಿ ವರ್ತಮಾನ ತಿಥಿಯಿರುವಷ್ಟು ಕಾಲವನ್ನು ತಿಳಿಸುವುದು. ತಿಥ್ಯರ್ಧವೇ ಬವಾದಿಕರಣಗಳು. ಯಾವಾಗಲೂ ಕೃಷ್ಣಚತುರ್ದಶಿಯ ಅಪರಾರ್ಧ ಭಾಗದಲ್ಲಿ ಶಕುನಿಕರಣವೂ ಅಮಾವಾಸ್ಯೆಯ ದಿನ ಚತುಷ್ಪಾತ್, ನಾಗವಾನ್ ಕರಣಗಳೂ, ಪ್ರತಿಪತ್ತಿನ ಆದ್ಯರ್ಧದಲ್ಲಿ ಕಿಂಸ್ತುಘ್ನಕರಣವೂ ಇರುತ್ತದೆ ಇದನ್ನು ಆನಯನಮಾಡಬೇಕಾದರೆ ಸೂರ್ಯ ಚಂದ್ರರ ಸ್ಫುಟಾಂತರಕಲೆಗಳನ್ನು ೩೬೦ ರಿಂದ ಭಾಗಿಸಿ, ತಿಥಿಯನ್ನು ಆನಯನ ಮಾಡಿದಂತೆಯೇ ಸಾಧಿಸಬೇಕು. ಲಬ್ಧಸಂಖ್ಯೆಯಲ್ಲಿ ಒಂದನ್ನು ಕಳೆದು ಏಳರಿಂದ ಭಾಗಿಸಿದರೆ ಗತವಾದ ಬವಾದಿಯಾದ ಏಳು ಕರಣಗಳು ಗೊತ್ತಾಗುವುವು ಇನ್ನೂ ವಿಷ್ಕಂಭಾದಿ ಯೋಗಗಳನ್ನು ತಿಳಿಯಬೇಕಾದರೆ ಸೂರ್ಯಚಂದ್ರರ ಸ್ಫುಟಗಳನ್ನು ಕೂಡಿ, ಎಂಟುನೂರರಿಂದ ಭಾಗಿಸಿ ಗತಯೋಗಗಳನ್ನರಿತು ಅನಂತರ ಶೇಷವನ್ನು ಅರವತ್ತರಿಂದ ಗುಣಿಸಿ ಸೂರ್ಯಚಂದ್ರರ ಗತಿಯೋಗದಿಂದ ಭಾಗಿಸಿದರೆ, ಬರುವ ಸಂಖ್ಯೆಯು ವರ್ತಮಾನಯೋಗದ ಘಟಿಕೆಯನ್ನು ಸೂಚಿಸುವುವು.

ತತ್ರ ವ್ಯತಿಪಾತೌ ಭಿನ್ನಾಯನೇ ಗೋಲೈಕತ್ವೇ ಚ ವೈಧೃತಃ ಸಮಾಯನೇ ಗೋಲಭೇದೇ ಚ ಧ್ರುವಕಾರ್ಕ ಚಂದ್ರಯೋಗಾಂತರಂ ಚಂದ್ರಾರ್ಕ ಭುಕ್ತಿಯೋಗೇನ ವಿಭಜೇತ್ । ಲಬ್ಧೇನ ಧ್ರುವ-ಕಾದಿತ್ಯೇ ಚಂದ್ರಾರ್ಕ ಯೋಗಾಧಿಕಾವಿತಿ । ತತೋಽರ್ಕಾತ್ಕ್ರಾಂತಿಸ್ತಾತ್ಕಾಲಿಕ ಪಾತೇನ ಚಂದ್ರಾತ್ ಸ್ವಕ್ರಾಂತಿಃ ಪ್ರಥಮ ತೃತೀಯ ಪಾದಾಂತಸ್ಥೇ ಚಂದ್ರಸ್ಯಕ್ರಾಂತೇಃ ಚಂದ್ರಕ್ರಾಂತಿರ್ಯದೋನಾ ಭವತಿ ತದಾ ಕ್ರಾಂತಿ ಸಾಮ್ಯಾರ[1]ವಾಃ ಪ್ರಥಮ ತೃತೀಯ ಪದಸ್ಥೇ ಚಂದ್ರಮಸಿ ತದಪಕ್ರಮಮರ್ಕಾಪಕ್ರಮಾದೂನೇ ಏಷ್ಯಃ ಕ್ರಾಂತಿ ಸಾಮ್ಯ ಕಾಲೋಽನ್ಯಥಾತೀತಃ ॥

(ತತೋಽರ್ಕಾತ್ಕ್ರಾಂತಿಸ್ತಾತ್ಕಾಲಿಕಪಾತೇನ ಚಂದ್ರಾತ್ಸ್ವಕ್ರಾಂತಿಃ ಪ್ರಥಮ ತೃತೀಯ ಪಾದಾಂತಸ್ಥೇ ಚಂದ್ರಸ್ಯ ಕ್ರಾಂತೇಃ ಚಂದ್ರಕ್ರಾಂತಿರ್ಯದೋನಾ ಭವತಿ) ದ್ವಿತೀಯ ಚತುರ್ಥ ಪದ-

---

ಸೂರ್ಯಚಂದ್ರರು ಒಂದೇ ಅಯನದಲ್ಲಿದ್ದು ಅವರಿಬ್ಬರ ಸ್ಫುಟಯೋಗವು ದ್ವಾದಶ ರಾಶಿಮಿತವಾಗಿ ಕ್ರಾಂತಿಸಾಮ್ಯವಿದ್ದರೆ ಆಗ ವೈಧೃತರೂಪವಾದ ಮಹಾಪಾತಕಾಲವೆಂದು ಅರಿಯಬೇಕು ಸೂರ್ಯಚಂದ್ರರು ಭಿನ್ನಾಯನಗತರಾಗಿದ್ದು ಅವರಿಬ್ಬರ ಸ್ಫುಟಯೋಗವು ಷಡ್ರಾಶಿಮಿತವಾದರೆ ಅಂದರೆ ಭಗಣಾರ್ಧ ಸಮವಾದರೆ ಕ್ರಾಂತಿ ಸಾಮ್ಯದಿಂದ ವ್ಯತೀಪಾತವೆಂಬ ಮಹಾಪಾತವೊದಗುವುದು. ಇದರ ಕಾಲವನ್ನು ಘಟಿಕಾತ್ಮಕವಾಗಿ ತಿಳಿಯಬೇಕಾದರೆ, ಚಂದ್ರಸೂರ್ಯರ ಸ್ಫುಟಾಂತರವನ್ನು ಸೂರ್ಯ ಚಂದ್ರರ ಗತ್ಯಂತರದಿಂದ ಭಾಗಿಸಿ, ಅರವತ್ತರಿಂದ ಗುಣಿಸಿದರೆ ಬರುವ ಕಾಲವೇ ಮೇಲೆ ಹೇಳಿದ ಮಹಾಪಾತಕಾಲವೆನಿಸುವುದು. ಸೂರ್ಯಚಂದ್ರರಿಗೆ ಸ್ಪಷ್ಟ ಕ್ರಾಂತಿಯನ್ನು ಆನಯನಮಾಡಿದಾಗ, ತೃತೀಯ ಪದಸ್ಥನಾದ ಚಂದ್ರನ ವಿಕ್ಷೇಪ ಸಂಸ್ಕೃತವಾದ ಕ್ರಾಂತಿಯು ಸೂರ್ಯಕ್ರಾಂತಿಗಿಂತ ಅಧಿಕಾಂಶದಲ್ಲಿದ್ದರೆ, ಸ್ಪಷ್ಟ ಕ್ರಾಂತಿ ಸಾಮಾನ್ಯಾತ್ಮಕವಾದ ಪಾತಕಾಲವು ಗತವಾಯಿತೆಂದು ತಿಳಿಯಬೇಕು. ಕಮ್ಮಿಯಾಗಿದ್ದರೆ ಪಾತಕಾಲವು ಮುಂದೆ ಬರುವುದೆಂದು ಭಾವಿಸಬೇಕು.

ಎರಡು ಮತ್ತು ನಾಲ್ಕನೆಯ ಪದಗಳಲ್ಲಿ ಚಂದ್ರನಿರುವುದಾದರೆ ಚಂದ್ರ ಕ್ರಾಂತ್ಯಂಶವು ಸೂರ್ಯಕ್ರಾಂತಿಗಿಂತ ಅಧಿಕವಾಗಿದ್ದರೆ ಪಾತಕಾಲವು ಮುಂದೆ ಬರುವುದೆಂದೂ, ಊನವಾಗಿದ್ದರೆ ಗತವಾಯಿತೆಂದೂ ತಿಳಿಯಬೇಕು. ಹೀಗೆ ಸೂರ್ಯ ಚಂದ್ರರ ಸ್ಪಷ್ಟಕ್ರಾಂತಿವಶದಿಂದ ಕಂಡು ಹಿಡಿದ ಮೇಲೆ ಅರ್ಧರಾತ್ರಕಾಲಿಕವೆಂದು ಭಾವಿಸಿ, ಅದಕ್ಕೆ ದೇಶಾಂತರ ಸಂಸ್ಕಾರಮಾಡಿ, ಸ್ವದೇಶೀಯವನ್ನಾಗಿ ಕಲ್ಪಿಸಿಕೊಳ್ಳ

---

1 ಇದು ಅಶುದ್ಧ ಪಾಠ.

ಸ್ಥಾನ್ಯಥಾ ವಿಕ್ಷೇಪೇಣ ಸ್ವಕ್ರಾಂತಿದಿಗುತ್ಪತ್ತೌ ಚಂದ್ರಾಪಕ್ರಮ ಮಧಿಕೃತಂ ಕಲ್ಪಯೇತ್ ಕ್ರಾಂತೇರ್ಯುತಿರನ್ಯದಿಶೋರೇಕ ದಿಶೋರಂತರಂ ವ್ಯತೀಪಾತೇ ನ್ಯಥಾ ವೈಧೃತಿ ಪ್ರಥಮಾಖ್ಯಃ। ಏವಮಿಷ್ಟಕಾಲಿಕೈರರ್ಕಚಂದ್ರಪಾತೈರ್ದ್ವಿತೀಯಾದಯಸ್ತತಃ ಪ್ರಥಮ ದ್ವಿತೀಯ ಕಾಲಯೋಃ ದ್ವಯೋರೇಷ್ಯೋತೀತೋ ವಾ ಪಾತಸ್ತದಾ ತಯೋರಂತರಂ। ಅನ್ಯಥಾ ಯೋಗೋ ಭಾಗಾಪಹಾರಃ। ಪ್ರಥಮ ಗುಣಿತಸ್ಯ ಇಷ್ಟಕಾಲಸ್ಯ ತೇ ಕಾಲಸ್ಯ ತೇನ ಕಾಲೇನ ಅಸಕೃತ್ ದ್ವಿತೀಯಂ ಕೃತ್ವಾ ವಿಶೇಷ ಕರ್ಮಣಾ ಸ್ಫುಟಕಾಲಃ ಸಾಧ್ಯಃ। ಸ ವ್ಯತೀಪಾತೆಪಾತ ಮಧ್ಯಕಾಲಃ। ಆದಿತ್ಯ ಚಂದ್ರಮಾನಯೋಗಃ ಷಷ್ಟಿಗುಣೋ ಭುಕ್ತ್ಯಂತರೇಣ ಹೃತೋ ಲಬ್ಧಾ ಸ್ಥಿತಿರಿತಿ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ತಿಥಿನಕ್ಷತ್ರ ಪ್ರಕರಣಂ ನಾಮ ಸಪ್ತತ್ಯುತ್ತರಶತತಮೋಽಧ್ಯಾಯಃ

---

ಬೇಕು. ಮತ್ತು ಪಾತಕಾಲವನ್ನು ಸ್ಪಷ್ಟೀಕರಿಸಲು, ಅಸಕೃತ್ಕರ್ಮದಿಂದ ಸ್ಥಿರೀ ಕೃತವಾದ ಅರ್ಧರಾತ್ರಕಾಲ ಮತ್ತು ಅರ್ಧರಾತ್ರಿಕ ಸ್ಪಷ್ಟಚಂದ್ರ ಇವರಿಬ್ಬರ ಅಂತರ ಕಾಲವನ್ನು ಅರವತ್ತರಿಂದ ಗುಣಿಸಿ, ಸ್ಪಷ್ಟಕಲಾತ್ಮಕ ಚಂದ್ರಗತಿಯಿಂದ ಭಾಗಿಸಿದರೆ, ಬರುವ ಫಲವು ಸ್ಪಷ್ಟಕ್ರಾಂತಿ ಸಾಮ್ಯರೂಪವಾದ ಪಾತಕಾಲವಾಗಿ ಪರಿಣಮಿಸುವುದು. ಹೀಗೆ ಸ್ಥಿರೀಕೃತವಾದ ಸ್ಪಷ್ಟಪಾತಕಾಲವೇ ಪಾತಮಧ್ಯವೆನಿಸುವುದು. ಗ್ರಹಣ ಕಾಲದಲ್ಲಿ ಸ್ಥಿತ್ಯರ್ಧವನ್ನು ಕಂಡು ಹಿಡಿದಂತೆ, ಆದಿತ್ಯ ಚಂದ್ರಮಾನಯೋಗದಿಂದ ಇಲ್ಲಿಯೂ ಸ್ಥಿತ್ಯರ್ಧವನ್ನು ಆನಯನಮಾಡಿ ಪಾತಮಧ್ಯಕಾಲದಲ್ಲಿ ಅದನ್ನು ಕಳೆದರ ಪಾತದ ಆದಿಕಾಲವೂ, ಕೂಡಿದರೆ ಪಾತಾಂತ್ಯಕಾಲವೂ ಲಭಿಸುವುದು. ಈ ಕ್ರಮ ದಿಂದಲೇ, ಮಹಾಪಾತಗಳೆನಿಸಿದ ವೈಧೃತಿವ್ಯತಿಪಾತಗಳ ಸಮಯವನ್ನು ತಿಳಿದು ಕೊಳ್ಳಬೇಕು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನ ಉಪಾಖ್ಯಾನದಲ್ಲಿ ತಿಥಿ ನಕ್ಷತ್ರಪ್ರಕರಣವೆಂಬ ನೂರ ಎಪ್ಪತ್ತನೆಯ ಅಧ್ಯಾಯ ಮುಗಿದಿದೆ

॥ ಓಂ ॥

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಅಥ ಏಕಸಪ್ತತ್ಯುತ್ತರ ಶತತಮೋಧ್ಯಾಯಃ

ದಿನಗತಶೇಷಾಲ್ಪಕಾಲಸ್ಯೋತ್ತರಗೋಲೇರ್ಧರಾತ್ರ್ಯೋರ್ದ್ಧಿನಸ್ಯ ದಕ್ಷಿ-ಣೇಯುಕ್ತಸ್ಯ ಜೀವಾಸಾಹೋರಾತ್ರಾವಹತಾ ತ್ರಿಜ್ಯಾ ಹೃತೋ ಗೋಲವಿಪರ್ಯಯೇಣ ತ್ರಿಜ್ಯಾ ಯುತೋ ನ್ಯಚ್ಛೇದಃ । ಛೇದೋವಲಂಬಕವ್ಯಾಹತಃ ತ್ರಿಜ್ಯಾವಿಭಾಜಿತಶ್ಶಂಕುಃ । ಶಂಕುವರ್ಗಹೀನಸ್ಯ ತ್ರಿಜ್ಯಾವರ್ಗಸ್ಯ ಪದಂ ದೃಶ್ಯ ದ್ವಾದಶ-ಹತಾ ಶಂಕುಹೃತಾ ಛಾಯಾ ಮಾಧ್ಯಾಹ್ನಿಕಾರ್ಕ ಕ್ರಾಂತ್ಯಾ ಸಾಕ್ಷಸಂಯೋಗವಿವರೋ ದಕ್ಷಿತೋತ್ತರಗೋಲಯೋರನಿಷ್ಟಂ

---

### ನೂರ ಎಪ್ಪತ್ತೊಂದನೇ ಅಧ್ಯಾಯ.

ಅಭಿಷ್ಟ ದಿನದಲ್ಲಿ ಮಧ್ಯಾಹ್ನ ಛಾಯೆಯಿಂದ ಅಕ್ಷಾಂಶಾನಯನ ಮಾಡುವ ಕ್ರಮವು ಈ ರೀತಿ ಇದೆ ಯಾಮ್ಯೋತ್ತರ ವೃತ್ತದಲ್ಲಿ ಮಧ್ಯಾಹ್ನ ಕಾಲದಲ್ಲಿ ಖಸ್ವಸ್ತಿಕ ದಿಂದ ಸೂರ್ಯನು ಉತ್ತರಕ್ಕಾಗಲಿ. ದಕ್ಷಿಣಕ್ಕಾಗಲಿ ಸ್ವಲ್ಪ ಬಗ್ಗಿದ ಭಾಗವೇ ನತಾಂಶ (ಅಕ್ಷಾಂಶ) ವೆನಿಸುವುದು ವಿಷುವದ್ವೃತ್ತ ಮತ್ತು ಸೂರ್ಯಸ್ಥಾನ ಗಳಿರುವ ಅಂಶವೇ ಕ್ರಾಂತ್ಯಂಶವು. ದಕ್ಷಿಣ ಕ್ರಾಂತಿಯಿರುವಾಗ ಮತ್ತು ಅಕ್ಷಾಂಶ ಗಳನ್ನು ಸೇರಿಸಿರುವುದರಿಂದಲೂ. ಉತ್ತರಕ್ರಾಂತಿಯಿರುವಾಗ ಅವುಗಳನ್ನು ಪರಸ್ಪರ ವಾಗಿ ಕಳೆಯುವುದರಿಂದಲೂ, ತಾತ್ಕಾಲಿಕ ನತಾಂಶವನ್ನು ಸಾಧಿಸಿಕೊಳ್ಳಬೇಕು. ನತಾಂಶದ ಜ್ಯಾವನ್ನು ತೊಂಭತ್ತರಿಂದ ಕಳೆದು, ನತಾಂಶವನ್ನು ಭುಜವೆಂದೂ, ಕಳೆಮಳಿದ ಭಾಗವನ್ನು ಕೋಟಿಯೆಂದೂ ಭಾವಿಸಬೇಕು. ಹಾಗೆಯೇ ನತಕಾಲಾ ನಯನ ಮಾಡಬೇಕಾದರೆ ಅಭಿಷ್ಟಕಾಲದ ಛಾಯೆಯಿಂದ ತ್ರಿಜ್ಯೆಯನ್ನು ಗುಣಿಸಿ ಛಾಯಾಕರ್ಣದಿಂದ ಭಾಗಿಸಬೇಕು. ಅದರಿಂದ ದೃಗ್ಜ್ಯಾ ಸಂಖ್ಯೆಯು ತಿಳಿಯು ವುದು. ಅದರ ವರ್ಗಕ್ಕೂ ತ್ರಿಜ್ಯಾವರ್ಗಕ್ಕೂ ಇರುವ ಅಂತರದ ಮೂಲವೇ ಅಭಿಷ್ಟ ಶಂಕು. ಅದನ್ನು ತ್ರಿಜ್ಯೆಯಿಂದ ಗುಣಿಸಿ ಸ್ವದೇಶೀಯ ಲಂಬಜ್ಯೆಯಿಂದ ಭಾಗಿಸಿದರೆ

ತದ್ರಾಶಿತ್ರಯಾದಪಾಸ್ಯ ತಜ್ಜ್ಯಾ ಭಾಗಾಪಹಾರಃ ದ್ವಾದಶಹ-
ತಾಯಾಃ ಅನಷ್ಟಜೀವಯಾ ಲಬ್ಧಂ ಮಾಧ್ಯಾಹ್ನಿಕೀ ಛಾಯಾ ।

ತ್ರಿಜ್ಯಾರ್ಕಘಾತೆ ಮಧ್ಯಾಹ್ನಚ್ಛಾಯಾ ಭಾಗಾಪಹಾರ ವಿಭಕ್ತೆಸ್ತ-
ತ್ಕರ್ಣಃ ವಿಷುವತ್ಕರ್ಣಹತಾಂ ತ್ರಿಜ್ಯಾಂ ಸ್ವೇಷ್ಟಕಾಯಾಕ-
ರ್ಣೇನ ವಿಭಜೇತ್ । ಲಬ್ಧಮುತ್ತರದಕ್ಷಿಣಗೋಲಯೋಃ ಕ್ಷಿತಿ-
ಜ್ಯಯಾ ಯುತೋನವ್ಯಾಸಾರ್ಧ ತಾಡಿತಂ ಸ್ವಾಹೋರಾತ್ರಾ-
ರ್ಧೇನ ವಿಭಜೇತ್ । ಲಬ್ಧಾ ಚಾಯಂ ಗೋಲವಿಪರ್ಯಯಾ-
ಚ್ಚರದಲೇನ ಯುತಂ ದಿವಸಸ್ಯ ಗತಂ ಶೇಷಂ ವಾ ಭವತಿ ।

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ಛಾಯಾಪ್ರಕರಣಂ ನಾಮ
ಏಕಸಪ್ತತ್ಯುತ್ತರ ಶತತಮೋಧ್ಯಾಯಃ

---

ಬರುವ ಲಬ್ಧವೇ ಭೇದವೆನಿಸುವುದು. ಆ ಭೇದವನ್ನು ತ್ರಿಜ್ಯೆಯಿಂದ ಗುಣಿಸಿ ದ್ಯುಜ್ಯೆಯಿಂದ ಭಾಗಿಸಿ ಧನುರಾಯನ ಮಾಡಿದರೆ ಉನ್ನತಕಾಲವು ಲಭಿಸುವುದು. ಅದನ್ನು ಅಹರರ್ಧ ಘಟಿಯಿಂದ ಕಳೆದರೆ ನತಕಾಲವು ದೊರೆಯುವುದು.

ದೃಗ್ಜ್ಯೆಯನ್ನು ಹನ್ನೆರಡರಿಂದ ಗುಣಿಸಿ, ಅಭೀಷ್ಟ ಶಂಕುಪ್ರಮಾಣದಿಂದ ಭಾಗಿಸಿದರೆ, ಛಾಯಾಪ್ರಮಾಣವೂ, ತ್ರಿಜ್ಯೆಯನ್ನು ಹನ್ನೆರಡರಿಂದ ಗುಣಿಸಿ, ಅಭೀಷ್ಟ ಶಂಕುಪ್ರಮಾಣದಿಂದ ಭಾಗಿಸಿದರೆ ಛಾಯಾಕರ್ಣವೂ ಲಭಿಸುವುದು ಉತ್ತರಗೋಲದಲ್ಲಿ ಚರಜ್ಯೆಯಿಂದ ಸಹಿತವಾದ ತ್ರಿಜ್ಯೆಯೂ, ದಕ್ಷಿಣಗೋಲದಲ್ಲಿ ಚರಜ್ಯೆಯಿಂದ ರಹಿತವಾದ ತ್ರಿಜ್ಯೆಯೂ ಅಂತ್ಯಜ್ಯೆಗಳೆನಿಸುವುವು. ಅದನ್ನು ನತೋತ್ಕ್ರಮಜ್ಯೆಯಿಂದ (ಕೋಟಿಜ್ಯೆ) ಕಳೆದು ಸ್ವದೇಶೀಯ ದಿನಾರ್ಧಮಾನದಿಂದ ಭಾಗಿಸಬೇಕು. ಅದಕ್ಕೆ ಗೋಲದಿಕ್ಕನ್ನು ತಿಳಿದು ಚರಘಟಿಯನ್ನು ಧನವನ್ನಾಗಿಯೋ ಋಣವನ್ನಾಗಿಯೋ ಮಾಡಿ ಸಂಸ್ಕರಿಸುವುದರಿಂದ ಅಭೀಷ್ಟದಿನದ ಗತಭಾಗವು ಮತ್ತು ಗಮ್ಯಭಾಗವೂ ತಿಳಿದುಬರುವುದು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದ ಮಾರ್ಕಂಡೇಯ ಸಂವಾದದಲ್ಲಿ
ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ ಛಾಯಾ
ಪ್ರಕರಣವೆಂಬ ನೂರ ಎಪ್ಪತ್ತೊಂದನೆಯ ಅಧ್ಯಾಯ ಮುಗಿದಿದೆ.

॥ ಓಂ ॥

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ದ್ವಿಸಪ್ತತ್ಯುರಶತತಮೋಽಧ್ಯಾಯಃ

ಇಷ್ಟಕಾಲಸ್ಫುಟಾರ್ಕರಾಶಿಭುಕ್ತ ಲಿಪ್ತಾಸ್ತದಾ ಕ್ರಾಂತರಾಶ್ಯುದಯ ಪ್ರಾಣಹತಾ ಗ್ರಹತಾಗ್ರಹಲಿಪ್ತಾಭಿರ್ವಿಭಜೇತ್ । ಲಬ್ಧಮರ್ಕ ಕ್ರಾಂತಿರಾಶೇರ್ದಿನಭಾಗಕಾಲಃ । ತದಿಷ್ಟಕಾಲಪ್ರಾಣೇಭ್ಯೋನ ಸ್ಯಾದಿತ್ಯೇ ಚಾಭುಕ್ತಲಿಪ್ತಾ ದೇಯಾಃ ಕಾಲೇ ಚಾನಂತರ ರವ್ಯುದಯಾಶ್ರಯಾಸ್ಯಾಃ ಅರ್ಕ.................. .. ಚ ರಾಶ್ಯು-ದಯೋದೇಯಃ। ಶೇಷಾದಶುದ್ಧ ರಾಶ್ಯುದಯೈರ್ಭಾಗಾದ್ಯಾಃ।

---

### ನೂರ ಎಪ್ಪತ್ತೆರಡನೇ ಅಧ್ಯಾಯ.

ಅಭೀಷ್ಟಕಾಲಕ್ಕೆ ಋಣ ಧನಲಗ್ನ ಸಾಧನಕ್ರಮವು ಈಗ ನಿರೂಪಿಸಲ್ಪಡುವುದು. ಯಾವ ಕಾಲಕ್ಕೆ ಸ್ಫುಟಲಗ್ನವನ್ನು ಸಾಧಿಸಿಕೊಳ್ಳಬೇಕೋ, ಆ ಕಾಲಕ್ಕೆ ಸೂರ್ಯ ಸ್ಫುಟವನ್ನು (ಸ್ವದೇಶೀಯ) ಗಣಿತ ಸಂಸ್ಕಾರಗಳಿಂದ ಕಂಡು ಹಿಡಿಯಬೇಕು. ಅದರಲ್ಲಿ ಭಾಗಾದಿಗಳನ್ನು ಒಂದು ರಾಶಿ ಭಾಗಗಳೆನಿಸಿದ ಮೂವತ್ತರಿಂದ ಕಳೆದರೆ, ಭೋಗ್ಯಭಾಗಗಳು ದೊರೆಯುವುವು. ಹೀಗೆ ಭುಕ್ತ ಭಾಗಗಳನ್ನರಿತು, ಸೂರ್ಯಾ ಕ್ರಾಂತರಾಶಿಗೆ ಉಕ್ತವಾಗಿರುವ ಸ್ವದೇಶೋದಯಾಸುಗಳಿಂದ ಗುಣಿಸಿ, ಮೂವತ್ತ ರಿಂದ ಭಾಗಿಸಿದರೆ, ಆ ಲಗ್ನದ ಗತಾಸುಗಳು ದೊರೆಯುವುವು. ಸೂರ್ಯೋದಯ ಕಾಲದ ಲಗ್ನದಿಂದ ಅಭೀಷ್ಟಕಾಲ ಪರ್ಯಂತವಾಗಿರುವ ಘಳಿಗೆಗಳವರೆಗೆ, ಎಷ್ಟು ಲಗ್ನೋದಯಾಸುಗಳು ಕಳೆಯುವುವೋ, ಅಷ್ಟು ಲಗ್ನಗಳೂ ಅಲ್ಲಿನವರೆಗೆ ಗತವಾಗಿವೆ ಎಂದು ಭಾವಿಸಬೇಕು. ನಿರಕ್ಷದೇಶದ ಲಗ್ನೋದಯಾಸುಗಳು ಮೇಷಾದಿಯಾಗಿ ಕನ್ಯಾಂತದವರೆಗಿನ ಆರು ಲಗ್ನಗಳಿಗೆ ಯಾವ ಪ್ರಮಾಣದಲ್ಲಿದೆಯೋ, ಅದೇ ಪ್ರಮಾಣವನ್ನನುಸರಿಸಿ, ತುಲಾದಿಯಾಗಿ ಮೀನಾಂತದವರೆಗೂ ಲಗ್ನಪ್ರಮಾಣ

ಏವಂ ರಾಶಿ ಗತಕಾಲ ಲಗ್ನೋದಯಃ ಷಡ್ರಾಶಿಯುತಾರ್ಕಾ
ಅರ್ಕಭುಕ್ತ ಕಾಲಾದ್ಯಾಃ ಕಾಲಾಃ॥ಲಗ್ನಾಚ್ಚ ಭುಕ್ತಕಲಾಭ್ಯಸ್ತ
ದ್ಯೋಗೇ ತದಂತರಾವ್ಯುದಯೋ ಯುತೇ ಲಗ್ನೋದಯಃ
ಕಾಲಃ ।

ಇತಿ ಶ್ರೀ ವಿಷ್ಣು ಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂಪ್ರತಿ ಪುಷ್ಕರೋಪಾಖ್ಯಾನೇ ಲಗ್ನಪ್ರಕರಣಂ ನಾಮ
ದ್ವಿಸಪ್ತತ್ಯುತ್ತರಶತತಮೋಽಧ್ಯಾಯಃ

---

ಘಟಿಗಳಿರುವುವು. ಇದನ್ನು ಚರಖಂಡಾದಿಗಳ ಧನರ್ಣ ಸಂಸ್ಕಾರದಿಂದ ಸ್ವದೇಶಕ್ಕೆ ಬದಲಾಯಿಸಿಕೊಳ್ಳಬೇಕು. ಈ ರೀತಿ ಸೂರ್ಯಾಕ್ರಾಂತರಾಶಿಯಲ್ಲಿ ಗತಗಮ್ಯ ಭಾಗಗಳಿಗೆ ಅನುಗುಣವಾಗಿ ತ್ರೈರಾಶಿಕದಿಂದ ಗತಗಮ್ಯ ಲಗ್ನಗಳನ್ನು ಕಂಡು ಹಿಡಿಯುವುದೇ ತಾತ್ಕಾಲಿಕ ಲಗ್ನ ಸ್ಪಷ್ಟೀಕರಣವು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ
ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ
ಲಗ್ನಪ್ರಕರಣವೆಂಬ ನೂರ ಎಪ್ಪತ್ತೆರಡನೆಯ ಅಧ್ಯಾಯವು ಮುಗಿದಿದೆ.



॥ ಓಂ ॥

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಅಥ ತ್ರಿಸಪ್ತತ್ಯುತ್ತರಶತತಮೋಽಧ್ಯಾಯಃ

**ಭೌಮಜೀವಮಂದಾಃ ಕೇಂದ್ರೈಃ ಶೀಘ್ರೈಃಬುಧಸಿತೌ ವಕ್ರೇ ಮಂದಾ-
ವತ್ಯಥಾ ಶೀಘ್ರೌ ಮಂದಗ್ರಹಾರ್ಕಾಂತರಗಾಃ ಕಾಲದೃಶ್ಯಾ-
ದೃಶ್ಯಾಂಶೇನ ಯದಾ ತದಾ ಪೂರ್ವಾರ್ಧೋದಯಾಸ್ತಮಯ
ಯೋರಾರ್ಕೋದಯಿಕೋ ಗ್ರಹಃ। ಪಶ್ಚಾರ್ಧೇನ ತದಾಸ್ತಮ-
ಯಿಕಃ । ತಾತ್ಕಾಲಿಕಗ್ರಹಸ್ಫುಟವಿಕ್ಷೇಪ ಮಂದಜ್ಯಾ ಹತವ್ಯಾ**

---

### ನೂರ ಎಪ್ಪತ್ತಮೂರನೇ ಅಧ್ಯಾಯ.

ಕುಜಾದಿ ಪಂಚ ಗ್ರಹಗಳಿಗೆ ಸೂರ್ಯ ಸಾಮೀಪ್ಯದಿಂದ ಭೂಲೋಕಕ್ಕೆ ಉದ ದಯಾಸ್ತಮಯಾದಿಗಳು ಅಂದರೆ ದೃಶ್ಯಾದೃಶ್ಯ ಕಾಲಗಳು ಆಗಾಗ ಒದಗುವುವು. ಸೂರ್ಯಾದಿ ಗ್ರಹಗಳಿಗೆ ನಿತ್ಯಗತಿಯು ನಿಯತವಾಗಿದ್ದರೂ, ಕುಜಾದಿಗ್ರಹಗಳಿರುವ ಶೀಘ್ರೋಚ್ಚ ಮಂದೋಚ್ಚಾದಿಗಳ ಆಕರ್ಷಣ ವಶದಿಂದ, ಅತಿಚಾರ ಅಥವಾ ವಕ್ರ ಮುಂತಾದ ಗತಿಭೇದಗಳು ಕಂಡು ಬರುವುವು. ಈ ಗತಿ ವ್ಯತ್ಯಾಸದಿಂದ ಕುಜಾದಿ ಗ್ರಹಗಳು ಸೂರ್ಯಕ್ರಾಂತಿ ಸಾಮ್ಯವನ್ನು ಪಡೆದು ಸೂರ್ಯನ ಜೊತೆಯಲ್ಲಿಯೇ ಉದಯಾಸ್ತಮಯಗಳನ್ನು ಹೊಂದುವುವು. ಆಗ ಭೂಲೋಕ ವಾಸಿಗಳಿಗೆ ಕುಜಾದಿಗಳ ದೃಶ್ಯ ಭಾಗವು ಕಾಣದೇ ಹೋಗುವುದು ಅದನ್ನೇ ಅಸ್ತವೆನ್ನುವರು. ಕುಜಾದಿ ಗ್ರಹಗಳಿಗೆ ಪ್ರತ್ಯೇಕವಾಗಿ ಕಾಲಾಂಶಗಳನ್ನು ಹೇಳಲಾಗಿದೆ. ಈ ಅಂಶ ಗಳಲ್ಲಿಯೇ ಗ್ರಹಗಳು ಅಡಕವಾಗಿದ್ದರೆ ಆಗ ಅದೃಶ್ಯಗಳಾಗುವುವು. ಗುರು, ಕುಜ, ಶನಿಗಳು ಮತ್ತು ವಕ್ರಗತಿಯುಳ್ಳ ಶುಕ್ರ, ಬುಧರು ಸ್ಪಷ್ಟ ಸೂರ್ಯನಿಗಿಂತ ಅಧಿಕ ಸಂಖ್ಯೆಯಲ್ಲಿದ್ದರೆ, ಪಶ್ಚಿಮಾಸ್ತವನ್ನು ಹೊಂದಿ, ಸ್ಪಷ್ಟ ಸೂರ್ಯನಿಗಿಂತ ಕಮ್ಮಿ

ಸಾರ್ಧೇನ ವಿಭಜೇತ್ । ಲಬ್ಧಗ್ರಹ ಔಪಯಿಕೇ ಋಣಮಾಸ್ತ-ಮಯಿಕವನ ಉತ್ತರ ವಿಕ್ಷೇಪಪರಮಾಪಕ್ರಮೇಣ ವಿಭಜೇತ್। ಲಬ್ಧಮಯನ ವಿಕ್ಷೇಪೇನ್ಯೇ ಶೋಧ್ಯಮನ್ಯಥಾ ದೇಯಂ । ಏವಂ ಗ್ರಹೋದಯಾಸ್ತಲಗ್ನಾ ಭವತಃ ।

ತತೋ ಗ್ರಹಾಂತರಾಲ್ಲಗ್ನವತ್ಕಾಲಃ ಕಾಲಾಂಶ ಗ್ರಹಾಂತರಾಂಶಾನಾಂ ಭುಜಾಂತರೇಣ ಭಾಗಮುಪಹರೇತ್ । ಗ್ರಹೇ ವಕ್ರಿಣಿ ಭುಕ್ತಿ-ಯೋಗೇನ ಲಬ್ಧೋ ದಿನಾದಿಃ ಕಾಲ್ಯಮುದಯಾಸ್ತಮಯಸ್ಯ ಏವ ನಕ್ಷತ್ರಾಣಾಂ ತೇಷಾಂ ದ್ವಾದಶ ದೃಶ್ಯಾದೃಶ್ಯಾಂಶಾಃ

---

ಸ್ಫುಟವನ್ನು ಪಡೆದಾಗ ಪೂರ್ವೋದಯವನ್ನು ಪಡೆಯುವರು. ಒಟ್ಟಿನಲ್ಲಿ ಸೂರ್ಯ ಗತಿಗಿಂತ ಅಲ್ಪಗತಿಯುಳ್ಳ ಗ್ರಹಗಳು ಸ್ಪಷ್ಟ ಸೂರ್ಯನಿಗಿಂತ ಕಡಿಮೆ ಸ್ಫುಟದಲ್ಲಿದ್ದರೆ ಅವುಗಳಿಗೆ ಪ್ರಾಗುದಯವು ಲಭಿಸುವುದು. ಸೂರ್ಯಗತಿಗಿಂತ ಅಧಿಕ ಗತಿಯುಳ್ಳ ಗ್ರಹಗಳು ಸ್ಫುಟದಲ್ಲಿ ಸೂರ್ಯನಿಗಿಂತ ಕಮ್ಮಿಯಿದ್ದರೆ ಪೂರ್ವದಿಕ್ಕಿದನಲ್ಲಿ ಅಸ್ತವು ಸಂಭವಿಸುವುದು. ಈ ರೀತಿ ಉದಯಾಸ್ತಗಳ ದಿಗ್ವ್ಯವಸ್ಥೆಯನ್ನು ಅರಿಯಬೇಕು ಉದಯಾಸ್ತಕಾಲವನ್ನು ಕಂಡು ಹಿಡಿಯಬೇಕಾದರೆ ಮೊದಲು ಆಯಾ ಗ್ರಹಗಳಿಗೆ ಹೇಳಿದ ಕಲಾಂಶಗಳಲ್ಲಿ ಅಂತರ ಕಲೆಗಳನ್ನು ಸೂರ್ಯ ಮತ್ತು ಗ್ರಹಗಳ ಭುಕ್ತ್ಯಂತರ ಕಲೆಗಳಿಂದ ಭಾಗಿಸಿದರೆ ಬರುವ ಕಾಲವು ಉದಯ ಅಥವಾ ಅಸ್ತಕಾಲದ ಗತ ಗಮ್ಯಾಂಶವನ್ನೂ ತಿಳಿಯಪಡಿಸುವುದು .ಆದರೆ ವಕ್ರಿಗಳಾದ ಗ್ರಹಗಳಿಗೆ ಸೂರ್ಯ ಮತ್ತು ಆ ಗ್ರಹಗಳ ಭುಕ್ತಿಯೋಗದಿಂದ ಭಾಗಹಾರಮಾಡಿ ಗತೈಷ್ಯದಿನಾದಿಗಳನ್ನು ಕಂಡುಹಿಡಿಯಬೇಕು ಇದಕ್ಕೆ ಮೊದಲು ಹಿಂದೆ ಹೇಳಿದಂತೆ ಎಲ್ಲಾ ಗ್ರಹಗಳ ತಾತ್ಕಾಲಿಕೀಕರಣ, ಸ್ಫುಟವಿಕ್ಷೇಪಾದಿಗಳ ಆನಯನ ಇವು ಅತ್ಯವಶ್ಯಕ.

ಭಿನ್ನಭಿನ್ನ ಕಕ್ಷ್ಯೆಗಳಲ್ಲಿ ಸಂಚರಿಸುವ ಬೇರೆಬೇರೆ ಗ್ರಹಗಳನ್ನು ಒಂದೇ ಕಕ್ಷ್ಯೆಯಲ್ಲಿರುವಂತೆ ಮಾಡಿಕೊಳ್ಳಲು ಒಂದು ಗಣಿತಕ್ರಮವನ್ನು ಅನುಸರಿಸಿಕೊಳ್ಳ ಬೇಕು. ಸೂರ್ಯ ಮತ್ತು ಆಯಾಗ್ರಹಗಳ ಸ್ಪಷ್ಟಗತಿಯನ್ನು, ಆಯಾಗ್ರಹ ಗಳಿರುವ ರಾಶ್ಯುದಯಾಸುಗಳಿಂದ ಗುಣಿಸಿ, ೧೮೦೦, ರಿಂದ ಭಾಗಿಸಿದರೆ ಬರುವ ಫಲವು ಸೂರ್ಯಮತ್ತು ಆಯಾಗ್ರಹಗಳ ಕಾಲಗತಿಯೂ ಗೊತ್ತಾಗುವುದು. ಈ ಕಾಲಗತಿಯನ್ನು ಗ್ರಹಗಳಿಗೆ ಪ್ರತ್ಯೇಕವಾಗಿ ಉಕ್ತವಾಗಿರುವ ಕಾಲಾಂಶಗಳನ್ನೂ ಅರಿತು ಗ್ರಹಗಳ ಉದಯಾಸ್ತಕಾಲಗಳನ್ನು ಗತಗಮ್ಯ ಭಾಗವನ್ನು ಹಿಂದೆ ಹೇಳಿದ

ಅಗಸ್ತ್ಯಧ್ರುವಕೆ ದೃಕ್ಕರ್ಮದ್ವಯಕಂ ಕೃತ್ವಾ ತದ್ಘಟಿಕಾದ್ವ-
ಯೇನ ಸ್ವದೇಶರಾಶ್ಯುದಯೇ ವರ್ಧಯೇತ್। ತಾದೃಶೇಕೇಽ
ಗಸ್ತ್ಯೋದಯಃ ಪಕ್ರೋನೇಸ್ತಮಯಃ ಪ್ರತಿದೈವಸಿಕ
ಉದಯೋ ಗ್ರಹಾಂತಂ ಲಗ್ನವಶೇನ ಇತಿ ।

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ಉದಯಾಸ್ತಮಯಪ್ರಕರಣಂ ನಾಮ
ತ್ರಿಸಪ್ತತ್ಯುತ್ತರಶತತಮೋಽಧ್ಯಾಯಃ

---

ಕ್ರಮದಿಂದ ಅರಿಯಬೇಕು ಗ್ರಹಗಳಿಗೆ ಸೂರ್ಯ ಸಾನ್ನಿಧ್ಯದಿಂದ ಉದಯಾ ಗಳಿರುವಂತೆ ನಕ್ಷತ್ರಗಳಿಗೂ ಸೂರ್ಯಸಾನ್ನಿಧ್ಯದಿಂದ ದೃಶ್ಯಾದೃಶ್ಯಭಾಗಗಳಿ ಅಗಸ್ತ್ಯನಕ್ಷತ್ರವೇ ಮೊದಲಾದ ನಕ್ಷತ್ರಗಳಿಗೂ ೧೨ ಅಂಶಗಳೇ ಕಾಲಾಂಶಗಳೆಂ ತಿಳಿಯಬೇಕು. (ಸೂರ್ಯಸಿದ್ಧಾಂತದಲ್ಲಿ ಬೇರೆ ಬೇರೆ ನಕ್ಷತ್ರಗಳಿಗೆ ಪ್ರತ್ಯೇ ಕಾಲಾಂಶ ಸಂಖ್ಯೆಯನ್ನು ಹೇಳಿರುವರು). ಈ ಕಾಲಾಂಶಗಳನ್ನು ೧೮೦೦, ರಿ ಗುಣಿಸಿ, ಗ್ರಹರಾಶ್ಯುದಯಾಸುಗಳಿಂದ ಭಾಗಿಸಿದರೆ, ಬರುವ ಕ್ಷೇತ್ರಾಂಶವು ದೃಶ ದೃಶ್ಯಾಂಶಗಳಾವುವು. ಎಲ್ಲಾ ನಕ್ಷತ್ರಗಳಿಗೂ ಪ್ರಾಗುದಯ ಪಶ್ಚಾದಸ್ತವೆಂ ತಿಳಿಯಬೇಕು. ಏಕೆಂದರೆ ನಕ್ಷತ್ರಗಳಿಗೆ ಸ್ವಗತಿಯಿಲ್ಲ. ಈ ನಕ್ಷತ್ರಗಳ ಉದಯಾ ಕಾಲಗಳನ್ನು ಆನಯನ ಮಾಡಬೇಕಾದರೆ ಆಕ್ಷದೃಕ್ಕರ್ಮ ಆನಯನ ದೃಕ್ಕರ ಗಳೆಂಬ ಸಂಸ್ಕಾರವನ್ನು ತಿಳಿದು ಮಾಡಬೇಕು ಅನಂತರ ಅದನ್ನು ದೇಶಾಂ ಸಂಸ್ಕಾರದಿಂದ ಸ್ವದೇಶಕ್ಕೆ ತಂದು, ಹಿಂದೆ ಹೇಳಿದ ಕ್ರಮದಿಂದ ತಾತ್ಕಾಲಿಕ ಲ ವನ್ನೂ ಸಾಧಿಸಿಕೊಳ್ಳಬೇಕು. ಈ ಗಣಿತ ಕಾರ್ಯಗಳಿಂದ ಗ್ರಹನಕ್ಷತ್ರಗಳು ಉ ಯಾಸ್ತಮವಾಗುವ ಕಾಲ ಮತ್ತು ಲಗ್ನ ಇವುಗಳನ್ನೂ ಕಂಡುಹಿಡಿಯಬಹುದು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ
ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ
ಉದಯಾಸ್ತಮಯಪ್ರಕರಣವೆಂಬ ನೂರ ಎಪ್ಪತ್ತಮೂರನೆಯ
ಅಧ್ಯಾಯವು ಮುಗಿದಿದೆ.



|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಅಥ ಚತುಸ್ಸಪ್ತತ್ಯುತ್ತರಶತತಮೋಽಧ್ಯಾಯಃ

**ಸ್ವೋದಯಾಸ್ತವಿಲಗ್ನಾ ಚಂದ್ರಾರ್ಕಯೋಃ ತತಶ್ಚಂದ್ರೋದಯಾಸ್ತಕಾತಾ ಸಾಧ್ಯಾ । ಇಷ್ಟಕಾಲಿಕಚಂದ್ರಾರ್ಕಸ್ಯಕ್ರಾಂತಿ ತ್ರಿಜ್ಯಾಗುಣೇ ವಿಲಸ್ಯಜ್ಯಯಾ ವಿಭಜೇತ್। ಲಬ್ಧೇಗ್ರೇ ಕ್ರಾಂತಿ ದಿಷ್ಟೇಶೇನ ತತೋರ್ಕ ಚಂದ್ರ ಶಂಕು ಕಾತ್ಯಾ ಪೃಥಕ್ ಶಂಕು ಹತಾಪ್ಯಜ್ಯಾವಲಂಬಕೇನ ವಿಭಜೇತ್ । ಲಬ್ಧೇ ಶಂಕುತಲೇ ತಾ ಚೋತ್ತರೇ ಸ್ವರಾತ್ರಾ ದಿವಸಯೋರ್ನ್ಯೇ ದ್ವಾದಶಶಂಕುತಲಯೋರ್ದಿಶಿಯೋಗೋ ದಿಗ್ಭೇದವಿಯೋಗಃ ಪೃಥಗ್ಬಾಹುಃ**

---

### ನೂರ ಎಪ್ಪತ್ತನಾಲ್ಕನೆಯ ಅಧ್ಯಾಯ

ಪ್ರಕೃತ ಚಂದ್ರನ ಉದಯಾಸ್ತ ಲಗ್ನಗಳನ್ನೂ, ಚಂದ್ರಶೃಂಗೋನ್ನತಿಯನ್ನೂ ಗಣಿತಕ್ರಮದಿಂದ ಆನಯನ ಮಾಡುವ ರೀತಿಯು ಇಲ್ಲಿ ವಿವರಿಸಲ್ಪಡುವುದು. ಲಗ್ನಸಾಧನೆಯ ಕ್ರಮದಂತೆ ಸೂರ್ಯಚಂದ್ರರ ಉದಯ ಮತ್ತು ಅಸ್ತಕಾಲದ ಲಗ್ನಗಳನ್ನು ಆನಯನಮಾಡಬೇಕು ಅಭೀಷ್ಟಕಾಲದಲ್ಲಿ ಸೂರ್ಯಚಂದ್ರರ ಸ್ಫುಟದಿಂದ ಕ್ರಾಂತಿ ಮತ್ತು ವಿಕ್ಷೇಪಗಳನ್ನು ಸಾಧಿಸಿಕೊಳ್ಳಬೇಕು ಅದರಿಂದ ಕ್ರಾಂತಿಜ್ಯೆಯನ್ನು ಕಂಡುಹಿಡಿದು ಅದರಿಂದ ಸೂರ್ಯಚಂದ್ರರ ದಿಕ್ಕುಗಳನ್ನು ಗಮನಿಸಬೇಕು. ಅವರಿಬ್ಬರೂ ಒಂದೇ ದಿಕ್ಕಿನಲ್ಲಿದ್ದು ಸೂರ್ಯಕ್ರಾಂತಿಯು ಚಂದ್ರಕ್ರಾಂತಿಗಿಂತ ಅಧಿಕವಾಗಿರುವುದಾದರೆ, ಪರಸ್ಪರವಾಗಿ ಕಳೆಯಬೇಕು. ದಿಗ್ಭೇದವಾಗಿದ್ದರೆ ಕ್ರಾಂತಿ

ತಯೋರ್ದಿಗ್ಯೈಕ್ಯೇ ವಿಯೋಗೋನ್ಯಥಾ ಯೋಗಃ ಸ್ಫುಟ-ಬಾಹುಃ ಸ್ವದೃಕ್ಕರ್ಮವರ್ಗಭುಜಾ ವರ್ಗವಿಶ್ಲೇಷಪದ ಯೋಗಃ ಕಪಾಲಭೇದೇ ಸಾಮ್ಯೇ ವಿಯೋಗಃ ಪ್ರಥಮಾಂಶ ಜಾಂದಿಗ್ಯೈವಾತಿವಿಶ್ಲೇಷೋ ದಿಗ್ಭೇದೋ ಯುತಿದ್ವಿತೀಯಃ । ಪ್ರಥಮದ್ವಿತೀಯವರ್ಗಯೋಗ ಪದಂ ಕೋಟಿಃ । ಕೋಟಿ ಬಾಹುವರ್ಗಯೋಗ ಮೂಲಃಕರ್ಣಃ ।

ಅರ್ಕೋನೇನಾಚ್ಛಂದ್ರಾರ್ಕೇರ್ಧಂ ತಸ್ಮಾಜ್ಜ್ಯಾಕೇಂದ್ರಲಿಪ್ತಾಚ್ಛಂದ್ರ-ಮಾನಲಿಪ್ತಾಃ ನವತ್ಯಾಹತಾಸ್ಮಿನ್ ಕೇಂದ್ರಪ್ರಥಮಚತುರ್ಥ ಪದಸ್ಥೇ ದ್ವಿತೀಯಸ್ಥೇ ಕೃಷ್ಣಂ ಇಂದುಮಾನಚತುರ್ಭಾಗ-ಕೃತಾ ಸ್ಮಿತೇ । ಅರ್ಕಮಾನಭುಜಕರ್ಣಕೋಟಿ ಸೂತ್ರಾ-ಣ್ಯಂಗುಲತಾಂ ಯಾಂತಿ ಪೂರ್ವಾಪರಾಶಾಭಿಮುಖಾರ್ಕೇಂ-ದ್ರಾಣ್ಯಾದ್ಯಪಡಗೇ ಮಿತಶೃಂಗಂ ಪರಿಲಿಖೇತ್ । ಏವಂ

---

ಸ್ವಯಗಳನ್ನು ಯೋಗಮಾಡಬೇಕು. ಶೃಂಗೋನ್ನತಿಯನ್ನು ಕಂಡುಹಿಡಿಯುವ ದಿನ ತಾತ್ಕಾಲಿಕವಾದ ಚಂದ್ರನ ದಿನಗತಶೇಷವನ್ನು ತಿಳಿದು, ತ್ರಿಪ್ರಶ್ನಾಧಿಕಾರದಲ್ಲಿ ಹೇಳಿದಂತೆ ಶಂಕುವನ್ನೂ, ಛಾಯಾಕರ್ಣವನ್ನೂ ಸಾಧಿಸಿಕೊಳ್ಳಬೇಕು. ಈ ಸೂರ್ಯ ಚಂದ್ರರ ಕ್ರಾಂತ್ಯಂತರವೇ ಕೋಟಿಯಾಗುವುದು. ಸೂರ್ಯಚಂದ್ರ ಸ್ಫುಟಾಂತರವೇ ಕರ್ಣವಾಗುವುದು. ಕೋಟಿಕರ್ಣಗಳ ವರ್ಗಾಂತರ ಮೂಲವೇ ಬಾಹುವೆನಿಸುವುದು. ಚಂದ್ರನಿಂದ ಯಾವ ದಿಕ್ಕಿನಲ್ಲಿ ಸೂರ್ಯನಿರುವನೋ ಆ ದಿಕ್ಕೇ ಕೋಟಿಗತವಾದ ದಿಕ್ಕೆನಿಸುವುದು. ಆ ದಿಕ್ಕಿನಲ್ಲಿ ಹಿಂದೆ ಹೇಳಿದ ಅಂಶಗಳಿಗೆ ಸಮವಾದ ಅಂಗುಳಿ ಸಂಖ್ಯೆಯಿಂದ ಕೋಟಿಯನ್ನು ಕಲ್ಪಿಸಬೇಕು. ಅದೇ ಮಾನದಿಂದ ಭುಜ ಮತ್ತು ಕರ್ಣಗಳನ್ನೂ ನಿರ್ಮಿಸಿಕೊಳ್ಳಬೇಕು. ಆಗ ಚಂದ್ರಕೇಂದ್ರದಿಂದ ಕೋಟ್ಯಗ್ರದ ಮೂಲಕ ಚಂದ್ರ ಬಿಂಬಮಾನದ ಮೇಲೆ ಗೆರೆಯನ್ನೆಳೆದರೆ ಆಗ ದರ್ಶನಯೋಗ್ಯವಾದ ಚಂದ್ರಬಿಂಬಮಾನವು ಲಭಿಸುವುದು.

ಸ್ಪಷ್ಟ ಸೂರ್ಯನಿಂದ ಕಳೆಯಲ್ಪಟ್ಟ ಸ್ಪಷ್ಟ ಚಂದ್ರನ ಲಿಪ್ತಿಗಳನ್ನು ೯೦೦ರಿಂದ ಭಾಗಿಸಿ ಚಂದ್ರ ಗ್ರಹಣಾಧಿಕಾರದಲ್ಲಿ ಕಂಡು ಹಿಡಿದಂತೆ ಚಂದ್ರಮಾನಾಂಗುಲಗಳನ್ನು ಸಾಧಿಸಿ ಅದರಿಂದ ಭಾಗ ಲಬ್ಧವನ್ನು ಗುಣಿಸಿ ಹನ್ನೆರಡರಿಂದ ಭಾಗಿಸಿದರೆ ಬರುವ ಲಬ್ಧವು ಸ್ಫುಟ ಶುಕ್ಲ ಪ್ರಮಾಣವೆನಿಸುವುದು. ಈ ಶೃಂಗೋನ್ನತಿ ಪರಿಲೇಖವನ್ನು

ದ್ವಿತೀಯ ತೃತೀಯಗೇ ಕೃಷ್ಣಂ ಬಿಂದುಮರ್ಕಂ ಪರಿಕಲ್ಪ್ಯ ತತೋಽರ್ಕಾದ್ಯಥಾ ಶಶೀ ತಥಾ ಭುಜಾ ದೇಯಾ । ತದಗ್ರಾತ್ಸ್ವಾಭಿಮುಖ್ಯೇನ ಕೋಟಿಃ ತತಃ ತದಂತಲಗ್ನೇನ ಪೂರ್ವಾಂತಂ ಪುನಃ ಪುನಃ ಸತ್ಕುಲಂ । ಯಾವದವಿಶೇಷಂ ಲಬ್ಧೋನಂ ಸ್ಯಾತ್ ಇತಿ ಲಂಬನಂ ಸಂಸ್ಕೃತೇ ತಿಥ್ಯಂತೇ ಗ್ರಹಣಮಧ್ಯ ಶ್ಚಂದ್ರಶ್ಚಂದ್ರವತ್ಕಲ್ಪಿತಾದ್ವಿತ್ರಿಭಾತ್ಸ್ವಕ್ರಾಂತಿಃ ಅಕ್ಷೇಸೌಮ್ಯಾ ಶೋಧ್ಯಾ ಯಾಮ್ಯೇ ದೇಯಾ ತಜ್ಜ್ಯಾ ಮಧ್ಯಮ ಚಂದ್ರಾರ್ಕ ಭುಕ್ತ್ಯಂತರಹತಾ ಶರೇರ್ಕಹತಯಾ ತ್ರಿಜ್ಯಯಾ ವಿಭಜೇತ್ ।

---

ಬರೆಯ ಬೇಕಾದರೆ ಸಮ ಭೂಮಿಯಲ್ಲಿ ದಿಕ್ಸಾಧನೆಯಿಂದ ಮೊದಲು ಪೂರ್ವಾಪರ ರೇಖೆಯನ್ನೂ, ದಕ್ಷಿಣೋತ್ತರರೇಖೆಯನ್ನೂ ಕಲ್ಪಿಸಿ ಕೊಳ್ಳಬೇಕು. ಆ ದಿಕ್ಸಂಪಾತ ಸ್ಥಳದಲ್ಲಿ ಸೂರ್ಯಸಂಜ್ಞಕವಾದ ಒಂದು ಬಿಂದುವನ್ನು ನಿರ್ಮಿಸಿಕೊಳ್ಳಬೇಕು. ಆ ಬಿಂಧುವಿನಿಂದ ದಕ್ಷಿಣಕ್ಕೋ ಅಥವಾ ಉತ್ತರಕ್ಕೋ ಕ್ರಾಂತಿ ದಿಕ್ಕನ್ನು ಅನುಸರಿಸಿ ಅಂಗುಲ ಮಾನದಿಂದ ಭುಜ ಜ್ಯಾ ಪರಿಮಿತವಾದ ಭುಜವನ್ನು ಗುರುತಿಸಬೇಕು. ಭುಜಾಗ್ರ ಚಿಹ್ನೆಯಿಂದ ಪಶ್ಚಿಮಾಭಿಮುಖವಾಗಿ ದ್ವಾದಶಾಂಗುಲ ಪರಿಮಿತವಾದ ಕೋಟಿಯನ್ನು ರಚಿಸಿಕೊಳ್ಳಬೇಕು. ಇವೆರಡರ ಪ್ರಮಾಣದಿಂದ ಕರ್ಣವನ್ನು ಸಾಧಿಸಿ ಗುರುತಿಸಬೇಕು. ಕೋಟಿ ಕರ್ಣ ರೇಖಾ ಸಂಯೋಗ ಸ್ಥಳವನ್ನೇ ಮಧ್ಯವನ್ನಾಗಿ ಮಾಡಿಕೊಂಡು ಚಂದ್ರ ಬಿಂಬ ಕಲೆಯ ತ್ರಿಜ್ಯೆಯಿಂದ ಒಂದು ಚಂದ್ರ ಮಂಡಲವನ್ನು ರಚಿಸಿಕೊಳ್ಳಬೇಕು. ಪೂರ್ವಸಾಧಿತವಾದ ಸ್ಪಷ್ಟ ಶುಕ್ಲ ಮಾನವನ್ನೇ ತ್ರಿಜ್ಯೆಯನ್ನಾಗಿಟ್ಟುಕೊಂಡು ಕರ್ಣ ರೇಖಾ ಮಾರ್ಗದಿಂದ ಚಂದ್ರ ಬಿಂಬ ಸಂಬಂಧವಾಗಿರುವ, ಚಂದ್ರ ಮಂಡಲ ಮತ್ತು ಪರಿಧಿಯ ಸಂಪಾತ ಸ್ಥಾನ ವನ್ನತಿಕ್ರಮಿಸಿ, ಚಂದ್ರ ವೃತ್ತ ಕೇಂದ್ರಾಭಿಮುಖವಾಗಿ ರೇಖೆಯನ್ನು ತ್ರಿಸ್ಪೃಕ್ಸೂತ್ರ ಕ್ರಮದಿಂದ ನಯನಮಾಡಬೇಕು. ಆ ಭುಜವೇ ಚಂದ್ರಬಿಂಬ ಪರಿಧಿಯಲ್ಲಿ ಅಕ್ಷ ಸಂಜ್ಞೆಯನ್ನು ಪಡೆಯುವುದು. ಆ ಅಕ್ಷದಿಂದ ನಮನ ಮತ್ತು ಉನ್ನಮನ ಜ್ಞಾನವನ್ನು ಪಡೆಯಬೇಕು. ಚಂದ್ರಮಧ್ಯದಿಂದ ಕರ್ಣರೂಪವಾಗಿ ಬಂದಿರುವ ರೇಖಾಮಧ್ಯಭಾಗವನ್ನೆಲ್ಲಾ ಶುಕ್ಲವನ್ನಾಗಿ ಗ್ರಹಿಸಬೇಕು. ಚಂದ್ರಕ್ರಾಂತಿಯು ಉತ್ತರದಿಕ್ಕಿನದಾದರೆ ಆ ಅಕ್ಷಪ್ರಮಾಣವನ್ನು ಕಳೆಯಬೇಕು. ದಕ್ಷಿಣವಾದರೆ ಕೂಡಬೇಕು.

ಲಬ್ಧಭನವತಿಃ ಸ್ವಕ್ರಾಂತಿತೋಕ್ಷೇ ಅಧಿಕೇ ಸೌಮ್ಯಾನ್ಯಥಾ ಯೊಮ್ಯಾ ತಾತ್ಕಾಲಿಕಚಂದ್ರವಿಕ್ಷೇಪಾವನ್ಯಾದಿಗೈಕ್ಯೇ ಯೋಗೋ ದಿಗ್ಭೇದೇ ವಿಯೋಗಃ ಸ್ಫುಟವಿಕ್ಷೇಪಃ । ತೇನ ಸ್ಥಿತೇ ಮಂದಭದಲೋನಯುತ್ಯೈರ್ಗ್ರಹ್ಯೈಃ ಸ್ಪರ್ಶನಿಮೀಲನೋನ್ಮೀಲನ ಮೋಕ್ಷ ಕಾಲಿಕೈರ್ಲಂಬನಮಾನಾನಿ ಕಾರ್ಯಾಣಿ॥ ಮಧ್ಯಲಂಬನಸ್ಯೇಷ್ಟ ಲಂಬನಸ್ಯ ಧನರ್ಣಕೇಂತರೇ ಭೇದಯೋಗಃ ಫಲಂ । ತೇನ ಮಧ್ಯಸ್ಥಿತ್ಯರ್ಧ ರವಿಮಂದಾವೇವಯುತೇ ಸ್ವಕಾಲಿಕೇ ಸ್ಫುಟೇ ಭವತಃ ಪಂಚದಶ ಘಟಿಕಾಕಾಲಿಕಂ ಲಂಬನೇ ಫಲೇನ ಹೀನೇ ವಿಮರ್ದಾರ್ಧೇ ಕಾರ್ಯೇ ಶೇಷಂ ಪರಿಲೇಖಾದ್ಯೇ ಚಂದ್ರಗ್ರಹಣವದ್ಭವತಿ ।

---

ಚಂದ್ರಮಂಡಲದಲ್ಲಿ ದೊರೆತ ಶುಕ್ಲಪ್ರಮಾಣವು, ಅಂದರೆ ಪರಿಲೇಖೆಯಲ್ಲಿ ಕಂಡುಬರುವ ಅಕ್ಷಪ್ರಮಾಣವು, ಸೂರ್ಯಕ್ರಾಂತ್ಯಪೇಕ್ಷೆಯಾ ಅಧಿಕವಾಗಿದ್ದರೆ, ಉತ್ತರ ಶೃಂಗೋನ್ನತಿಯೆಂದೂ, ನ್ಯೂನವಾಗಿದ್ದರೆ ದಕ್ಷಿಣ ಶೃಂಗೋನ್ನತಿಯೆಂದೂ ಭಾವಿಸಬೇಕು. ಅಕ್ಷ ಮತ್ತು ಕ್ರಾಂತಿಗಳು ಏಕದಿಕ್ಕಾಗಿದ್ದರೆ, ಯೋಗವನ್ನೂ ಭಿನ್ನದಿಕ್ಕಾಗಿದ್ದರೆ ವಿಯೋಗವನ್ನೂ ಮಾಡಬೇಕು. ಆಗ ಅದು ಸ್ಫುಟವಿಕ್ಷೇಪ ವೆನಿಸುವುದು. ಚಂದ್ರಗ್ರಹಣದಲ್ಲಿ ಸ್ಪರ್ಶ ಮತ್ತು ನಿಮೀಲನ, ಉನ್ಮೀಲನ ಕಾಲ ಗಳನ್ನು ಕಂಡುಹಿಡಿಯಲು ಲಂಬನವೇ ಮೊದಲಾದ ಸಂಸ್ಕಾರಗಳಿಂದ ಚಂದ್ರನನ್ನು ಸ್ಪಷ್ಟೀಕರಿಸಿದಂತೆಯೇ ಇಲ್ಲಿಯೂ ಆಕ್ಷದೃಕ್ಕರ್ಮಸಂಸ್ಕಾರದಿಂದಲೂ, ಲಂಬನ ಸಂಸ್ಕಾರದಿಂದಲೂ ಚಂದ್ರ ಶೃಂಗೋನ್ನತಿಯ ದಿಕ್ಕುಗಳನ್ನು ಸಾಧಿಸಿಕೊಳ್ಳಬೇಕು. ಗ್ರಹಣಾರಂಭಕಾಲದಿಂದ ಗ್ರಹಾಣಾಂತ ಪರ್ಯಂತವಾಗಿರುವ ಕಾಲಕ್ಕೆ ಸ್ಥಿತಿಕಾಲ ವೆಂದೂ, ನಿಮೀಲನ ಉನ್ಮೀಲನ ಕಾಲಗಳ ಅಂತರಕ್ಕೆ ವಿಮರ್ದಕಾಲವೆಂದೂ ಗ್ರಹಣಾಧ್ಯಾಯದಲ್ಲಿ ಸಂಕೇತವಿದೆ. ಅದೇ ರೀತಿ ಸೂರ್ಯಕಾಂತ್ಯಾಶ್ರಿತವಾದ ಚಂದ್ರಬಿಂಬಮಾನದಲ್ಲಿ ಸೂರ್ಯಕಾಂತಿಯ ಸ್ಪರ್ಶಾದಿಗಳನ್ನು ತಿಳಿಯಲು, ಚಂದ್ರಗ್ರಹಣಕಾಲದಲ್ಲಿ ಮಾಡಿದ ಗಣಿತಕ್ರಮವನ್ನೂ, ಪರಿಲೇಖಾಕ್ರಮವನ್ನೂ ತಿಳಿಯಬೇಕು.

(ವಿ. ಸೂ.—ಇಲ್ಲಿ ಗ್ರಂಥಕಾರರು ಚಂದ್ರಗ್ರಹಣಾಧಿಕಾರ, ಶೃಂಗೋನ್ನತ್ಯಧಿಕಾರ ಗಳಲ್ಲಿ ಕಂಡುಬರುವ ಗಣಿತಕ್ರಮ, ಪರಿಲೇಖಾರಚನಾಕ್ರಮ ಇವುಗಳನ್ನು ಮಿಳಿತ ಮಾಡಿ, ಅಸ್ತವ್ಯಸ್ತವಾಗಿ ಸೇರಿಸಿರುವುದರಿಂದಲೂ, ಮೂಲದಲ್ಲಿ ಬಹು ಮುದ್ರಣ ದೋಷವಿರುವುದರಿಂದಲೂ, ಸ್ಪಷ್ಟವಾಗಿ ಕೇವಲ ಈ ಗ್ರಂಥವೊಂದರಿಂದಲೇ, ಎಲ್ಲಾ ವಿಷಯಗಳನ್ನು ತಿಳಿಸಲೂ ಸಾಧ್ಯವಿಲ್ಲ. ತಿಳಿಯುವುದಕ್ಕೂ ಆಗುವುದಿಲ್ಲ.)

ಧನ್ಯಂ ಯಶಸ್ಯಮಾಯುಷ್ಯಂ ಸ್ವರ್ಗಲೋಕಪ್ರದಂ ತಥಾ ।
ಇದಂ ಗ್ರಹಾಣಾಂ ಗಣಿತಂ ಸರ್ವಕಾಮಪ್ರದಂ ಶಿವಂ ।
ಗತಿರ್ಮೋಕಸ್ಯ ವಿಜ್ಞಾಯ ಗ್ರಹಸ್ಯ ಸುಸಮಾಹಿತಃ ।
ತಸ್ಯ ಲೋಕಮವಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ।

ಸರ್ವಗ್ರಹಗತಿಂ ಜ್ಞಾತ್ವಾ ಬ್ರಹ್ಮಲೋಕಂ ಪ್ರಪದ್ಯತೇ ।
ಧರ್ಮಾರ್ಥೀ ಪ್ರಾಪ್ನುಯಾದ್ಧರ್ಮಮರ್ಥಾರ್ಥೀ ಚಾರ್ಥಮಾಪ್ನುಯಾತ್ ।
ಕಾಮಾನವಾಪ್ನುಯಾತ್ಕಾಮೀ ಮೋಕ್ಷಾರ್ಥೀ ಪರಮಂ ಪದಂ ।
ಸರ್ವಗ್ರಹಗತಿಂ ಜ್ಞಾತ್ವಾ ಪಾತ್ರತಾಂ ಯಾತಿ ವೈ ದ್ವಿಜಃ ।
ನ ಚೇದ್ವೃತ್ತಿಂ ತಥಾ ಕುರ್ಯಾತ್ತಥಾ ವೃತ್ತಿಂ ವಿವರ್ಜಯೇತ್ ।
ಪಾತ್ರಾಣಾಮಪಿ ತತ್ಪಾತ್ರಂ ಗ್ರಹಾಣಾಂ ವೇತ್ತಿಯೋ ಗತಿಂ ।

---

ಇಲ್ಲಿನ ವರೆಗೂ ತಿಳಿಸಿದ ಗ್ರಹ ಗಣಿತ ಜ್ಞಾನವು ಐಹಿಕವಾದ ಸಕಲ ಇಷ್ಟಾರ್ಥಗಳನ್ನೂ ಒದಗಿಸುವುದಲ್ಲದೆ ಸ್ವರ್ಗಲೋಕ ಪ್ರಾಪ್ತಿಗೂ ಕಾರಣವೆನಿಸುವುದು ಸಮಾಧಾನ ಚಿತ್ತದಿಂದ ಇದನ್ನರಿತವರಿಗೆ ಆಯುಸ್ಸು, ಯಶಸ್ಸು ಇಷ್ಟು ಮಾತ್ರವಲ್ಲದೆ ಗ್ರಹಾಧಿ ರಾಜನಾದ ಸೂರ್ಯ ಪರಮಾತ್ಮನ ಸನ್ನಿಧಿಯು ದೊರಕುವುದರಲ್ಲಿ ಯಾವ ಅನುಮಾನವೂ ಇಲ್ಲ.

ಗಣಿತ ಕ್ರಮದಿಂದ ಯಂತ್ರಾದಿಗಳ ಸಹಾಯದಿಂದಲೂ ಯಾರು ಸರ್ವ ಗ್ರಹಗಳ ಗತ್ಯಾದಿಗಳನ್ನು ತಿಳಿದು ಕರ್ಮಾನುಷ್ಠಾನ ಮಾಡುವರೋ ಅವರಿಗೆ ಬ್ರಹ್ಮಲೋಕ ಪ್ರಾಪ್ತಿಯಾಗುವುದು. ಧರ್ಮಾರ್ಥ ಕಾಮ ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳನ್ನು ಇದರಿಂದಲೇ ಸುಲಭವಾಗಿ ಮಾನವನು ಪಡೆಯಬಹುದು. ಸರ್ವಗ್ರಹಗತಿಗಳನ್ನೂ ತಿಳಿದ ಬ್ರಾಹ್ಮಣನೇ ಸಕಲ ಕರ್ಮಗಳಿಗೂ ಅಧಿಕಾರಿಯೆನಿಸುವನು. ಗ್ರಹಗತಿ ಜ್ಞಾನವಿಲ್ಲದವನ ಯಾವ ಮಾರ್ಗವನ್ನೂ ಯಾರೂ ಅವಲಂಬಿಸಬಾರದು. ಗ್ರಹವಿಷಯಗಳನ್ನರಿಯದವನ ವೃತ್ತಿಯೇ ದೂಷ್ಯವಾದುದು. ಸಂಪೂರ್ಣವಾದ ಗ್ರಹಗಣಿತ ಜ್ಞಾನವನ್ನು ಹೊಂದಿದವನನ್ನೇ ಸತ್ಪಾತ್ರನೆಂದು ಭಾವಿಸಬೇಕು.

ವೇದಾಸ್ತು ಯಜ್ಞಾರ್ಥಮಭಿಪ್ರವೃತ್ತಾಃ
ಕಾಲಾನುಪೂರ್ವ್ಯಾವಿಹಿತಾಸ್ತು ಯಜ್ಞಾಃ ।
ತಸ್ಮಾದಿದಂ ಕಾಲವಿಧಾನಶಾಸ್ತ್ರಂ
ಯೋ ಜ್ಯೋತಿಷಂ ವೇದ ಸವೇದ ಸರ್ವಂ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ಪೈತಾಮಹಸಿದ್ಧಾಂತೋ ನಾಮ
ಚತುಸ್ಸಪ್ತತ್ಯುತ್ತರಶತತಮೋಽಧ್ಯಾಯಃ

---

ಯಾಗಾದಿ ಕರ್ಮಾನುಷ್ಠಾನ ಪ್ರಯೋಜಕಗಳಾಗಿ ವೇದಗಳು ಪ್ರಕಾಶಿಸುತ್ತಿವೆ. ಅಂತಹ ಯಾಗಾದಿ ಕರ್ಮಗಳು ನಡೆಯಬೇಕಾದ ಕಾಲನಿರ್ಣಯವನ್ನರಿಯಲು ಈ ಜ್ಯೋತಿ ಶಾಸ್ತ್ರವು ಸಹಾಯಕವಾಗಿ ನಿಂತಿದೆ. ನಕಾಲದಲ್ಲಿ ಮಾಡದ ಯಾಗಾದಿ ಕ್ರಿಯೆಗಳು ಅಷ್ಟಾಗಿ ಫಲಪ್ರದಗಳಾಗಲಾರವು. ಅಂತಹ ಸಕಲ ಕರ್ಮಗಳಿಗೂ ಫಲಪ್ರದತ್ವ ರೂಪವಾದ ಶಕ್ತಿಯನ್ನೊದಗಿಸುವ ಕಾಲಸ್ವರೂಪವನ್ನು ನಿರ್ಣಯ ಮಾಡಿ ತಿಳಿಸುವ ಈ ಜ್ಯೋತಿಷವನ್ನರಿತವನೇ ನಿಜವಾಗಿ ಧನ್ಯನೂ, ಆತನು ಇದರಿಂದ ಸರ್ವವನ್ನೂ ತಿಳಿಯ ಬಲ್ಲನು. ಅಂತಹವನೇ ಸರ್ವಜ್ಞನೂ ಆದಾನು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ
ಸಂವಾದದಲ್ಲಿ ಬ್ರಹ್ಮಪ್ರೋಕ್ತವಾದ ಗ್ರಹಸ್ವರೂಪ, ಗ್ರಹಗತಿ ವ್ಯತ್ಯಾಸ
ಇವೇ ಮೊದಲಾದ ವಿಷಯಗಳನ್ನು ತಿಳಿಸುವ ಪೈತಾಮಹ
ಸಿದ್ಧಾಂತವೆಂಬ ನೂರ ಎಪ್ಪತ್ತನಾಲ್ಕನೆಯ
ಅಧ್ಯಾಯವು ಮುಗಿದಿದೆ.



|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

### ಪಂಚಸಪ್ತತ್ಯುತ್ತರಶತತಮೋಽಧ್ಯಾಯಃ

**|| ಶ್ರೀ ಪರಶುರಾಮ ಉವಾಚ ||**

**ಭಗವನ್ ಸರ್ವಧರ್ಮಜ್ಞ ಸರ್ವಶಾಸ್ತ್ರವಿಶಾರದ ।**
**ಜಿಗೀಷೂಣಾಂ ಸಮಾಚಕ್ಷ್ವ ಯಾತ್ರಾಕಾಲಂ ಮಹೀಕ್ಷಿತಾಂ || ೧ ||**

**|| ಪುಷ್ಕರ ಉವಾಚ ||**

**ಸರ್ವೇಷಾಮೇವ ವರ್ಣಾನಾಂ ಯಾತ್ರಾಕಾಲಂ ನಿಬೋಧ ಮೇ ।**
**ಅಧಿಕೃತ್ಯ ಮಹೀನಾಥಂ ವಿಜಿಗೀಷುಂ ಗುಣಾನ್ವಿತಃ || ೨ ||**

**ಪೂರ್ವೇ ಕಪಾಲೇ ಪೌರೋಽರ್ಕೇ ಯಾಯೀ ಭವತಿ ಚಾಪರೇ ।**
**ಯಾಯಿಗ್ರಹೌ ಶುಕ್ರಕುಜೌ ಶೇಷಾಃ ಪೌರಾಃ ಪ್ರಕೀರ್ತಿತಾಃ || ೩ ||**

---

### ನೂರಎಪ್ಪತ್ತೈದನೆಯ ಅಧ್ಯಾಯ.

೧. ಪರಶುರಾಮನು ಪ್ರಶ್ನೆಮಾಡುತ್ತಾನೆ:—ಸರ್ವಧರ್ಮಗಳನ್ನೂ ತಿಳಿದು ಸರ್ವಶಾಸ್ತ್ರಗಳಲ್ಲಿಯೂ, ವಿಶಾರದನಾಗಿರುವ ಎಲೈ ಪೂಜ್ಯನೇ, ವಿಜಯಾಭಿಲಾಷೆ ಯಿಂದ ಹೊರಡುವ ರಾಜರ ಯಾತ್ರಾಕಾಲವನ್ನು ದಯವಿಟ್ಟು ಹೇಳಬೇಕು. ಇದಕ್ಕೆ ಉತ್ತರವಾಗಿ ಪುಷ್ಕರನು ಹೇಳುತ್ತಾನೆ.

೨-೩. ವಿಜಯೇಚ್ಛೆಯುಳ್ಳ ಗುಣಶಾಲಿಯಾದ ರಾಜನ ಯಾತ್ರಾಕಾಲದ ಈ ಸಂದರ್ಭದಲ್ಲಿ ರಾಜನಿಗೂ ಇತರ ಎಲ್ಲಾ ವರ್ಣದವರಿಗೂ ಯಾತ್ರಾಕಾಲವನ್ನು ಹೇಳುತ್ತೇನೆ. ಇದನ್ನೂ ನನ್ನಿಂದ ತಿಳಿದುಕೋ. ಗ್ರಹಮಂಡಲದ ಪೂರ್ವಕಪಾಲ ದಲ್ಲಿ ಸೂರ್ಯನು ಪೌರನೂ ಯಾಯಿಯೂ ಆಗುತ್ತಾನೆ. (ಮಧ್ಯಸ್ಥನೆಂದು ಹಿಂದೆಯೂ ಹೇಳಿದೆ) ಇತರ ಗ್ರಹಗಳಲ್ಲಿ ಶುಕ್ರ, ಮತ್ತು ಅಂಗಾರಕ ಇವರು ಕೇವಲ ಯಾಯಿಗ್ರಹಗಳು ಉಳಿದವರು ಪೌರಗ್ರಹಗಳೇ ಎಂದು ಹೇಳಲ್ಪಟ್ಟಿದೆ.

ಪೌರಗ್ರಹೈರ್ಬಲೋಪೇತೈರ್ನ ಯಾತ್ರಾಂ ಸಂಪ್ರಯೋಜಯೇತ್ ।
ಯಾಯಿಗ್ರಹಬಲೇ ರಾಜಾ ನಿತ್ಯಂ ಯಾತ್ರಾಂ ಪ್ರಯೋಜಯೇತ್ ॥ ೪ ॥

(ಅಸ್ತಂಗತೇ ನೀಚಗತೇ ವಿವಶೇ ರಿಪುರಾಶಿಗೇ ।
ಪ್ರತಿಲೋಮಂ ಚ ವಿಧ್ವಾಸ್ತೇ ಶುಕ್ರೇ ಯಾತ್ರಾಂ ವಿವರ್ಜಯೇತ್) ॥ ೫ ॥
ಪ್ರತಿಲೋಮೇ ಬುಧೇ ಯಾತ್ರಾ ವಿಕೃತೌ ಚ ತಥಾ ಗ್ರಹೇ ।
ವಿಷ್ಟ್ಯೇ ವೃಷ್ಟ್ಯಾಂ ವಾತಿ ವಾತೇ ವಾತ್ಯಾಯಾಂ ಚ ವಿವರ್ಜಯೇತ್ ॥೬॥
ವೈಧೃತೇ ಚ ವ್ಯತೀಪಾತೇ ನಾಗೇ ಚ ಶಕುನೌ ತಥಾ ।
ಚತುಷ್ಪದೇ ಚ ಕಿಂಸ್ತುಘ್ನೇ ತಥಾ ಯಾತ್ರಾಂ ವಿವರ್ಜಯೇತ್ ॥ ೭ ॥
ವಿಪತ್ಕರೇ ನೈಧನೇ ಚ ಪ್ರತ್ಯರೌ ಭೇ ಚ ಜನ್ಮನಿ ।
ಗಣೇ ವಿವರ್ಜಯೇದ್ಯಾತ್ರಾಂ ರಿಕ್ತಾಯಾಂ ಚ ತಿಥಾವಪಿ ॥ ೮ ॥

---

೪–೫. ಪೌರಗ್ರಹಗಳು ಬಲಶಾಲಿಗಳಾಗಿರುವಾಗ ರಾಜನು ವಿಜಯ ಯಾತ್ರೆಯನ್ನು ಕೈಗೊಳ್ಳಬಾರದು, ಯಾಯಿಗ್ರಹಗಳು ಬಲಶಾಲಿಗಳಾಗಿರವಾಗಲೇ ಯಾವಾಗಲೂ ಹೊರಡಬೇಕು. ಅಂತಹ ಯಾಯಿಗ್ರಹಗಳಲ್ಲಿಯೂ ಶುಕ್ರನು ಅಸ್ತಂಗತನಾಗಿಯೂ ನೀಚಸ್ಥಾನದಲ್ಲಿರುವಾಗಲೂ, ಪರಾಧೀನನಾಗಿರುವಾಗಲೂ, ಶತ್ರುರಾಶಿಯಲ್ಲಿರುವಾಗಲೂ, ವಕ್ರನಾಗಿರುವಾಗಲೂ, ನಹಯಾತ್ರೆಯನ್ನು ಸ್ವೀಕರಿ ನಬಾರದು.

೬–೭. ಬುಧನು ವಕ್ರಗತಿಯಲ್ಲಿರುವಾಗಲೂ, ಮತ್ತು ಪ್ರಯಾಣ: ಹೊರಡುವ ದಿಕ್ಕಿಗೆ ಅವನೇ ಪತಿಯಾಗಿರುವಾಗಲೂ, ಭದ್ರಕರಣದಲ್ಲಿಯೂ, ಮಳೆ ಬರುತ್ತಿರುವಾಗಲೂ ಗಾಳಿಯೂ, ಹೆಚ್ಚಾದ ಗಾಳಿಯೂ, ಬೀಸುತ್ತಿರುವಾಗಲೂ, ಯಾತ್ರೆಯನ್ನು ಬಿಡಬೇಕು. ವೈಧೃತಿ, ವ್ಯತೀಪಾತ, ನಾಗಕರಣ, ಶಕುನಿ, ಚತುಷ್ಪಾತ್, ಕಿಂಸ್ತುಘ್ನ ಈ ಕರಣಗಳಲ್ಲಿಯೂ ಯಾತ್ರೆ ಹೊರಡಬಾರದು.

೮–೯. ವಿಪತ್ಕರವಾದ ತಾರೆಯಲ್ಲಿಯೂ, ಮತ್ತು ನೈಧನ, ಪ್ರತ್ಯಕ್ ಮತ್ತು ಜನ್ಮತಾರೆಯಲ್ಲಿಯೂ, ರಿಕ್ತ ತಿಥಿಯಲ್ಲಿಯೂ ವಿಜಯ ಯಾತ್ರೆಯನ್ನು ವರ್ಜಿಸಬೇಕು. ಉತ್ತರ ಮತ್ತು ಪೂರ್ವದಿಕ್ಕುಗಳು ಒಂದೇ ಎಂದೂ, ಪಶ್ಚಿಮ ಮತ್ತು ದಕ್ಷಿಣ ಈ ದಿಕ್ಕುಗಳೂ ಸಹ ಒಂದೇ ಎಂದೂ ಶಾಸ್ತ್ರದಲ್ಲಿ ಹೇಳಲ್ಪಟ್ಟಿದೆ.

ಉದೀಚೀ ಚ ತಥಾ ಪ್ರಾಚೀ ತಯೋರೈಕ್ಯಂ ಪ್ರಕೀರ್ತಿತಂ ।
ಪಶ್ಚಿಮಾ ದಕ್ಷಿಣಾ ಯಾ ದಿಕ್ತಯೋರೈಕ್ಯಂ ತಥೈವ ಚ ॥ ೯ ॥

ವಾಯ್ವಗ್ನಿದಿಕ್ಸಮುದ್ಭೂತಂ ಪರಿಘಂ ತು ನ ಲಂಘಯೇತ್ ।
ರಾಮ ಸಂವತ್ಸರಾದ್ಯೇಷು ಸರ್ವೇಷ್ವೇವ ಮಹೀಪತಿಃ ॥ ೧೦ ॥

ಸಂವತ್ಸರಮುದಿಕ್ಪ್ರಾಚೀ ಪರಿಪೂರ್ವಸ್ಯ ದಕ್ಷಿಣಾ ।
ತತ್ಪೂರ್ವಸ್ಯಾಪರಾ ಜ್ಞೇಯಾ ಚಾನುಪೂರ್ವಸ್ಯ ದಕ್ಷಿಣಾ ॥ ೧೧ ॥

ಅದ್ವಾರಸ್ತು ವಿನಿರ್ದಿಷ್ಟಃ ತಥಾ ವತ್ಸರಸಂಜ್ಞಿತಃ ।
ಉತ್ತರಾಯಣಗೇ ಸೂರ್ಯೇ ಪ್ರಾಚೀಂ ಯಾಯಾದ್ದಿಶಂ ನೃಪಃ ॥ ೧೨ ॥

ಚಂದ್ರೇ ಚ ಬ್ರಾಹ್ಮಣಶ್ರೇಷ್ಠ ಪಶ್ಚಿಮಾಂ ದಕ್ಷಿಣಸ್ಥಿತೇ ।
ತಯೋರಯನಭೇದೇನ ಯಾಯಾತ್ಸೂರ್ಯಾಯನಂ ದಿವಾ ॥ ೧೩ ॥

ರಾತ್ರೌ ಚಾಂದ್ರಾಯಣಂ ಯಾಯಾದ್ಯಾ ದಿಗುಕ್ತಾ ಮಯಾ ತವ ।
ವಸನ್ತ ಉತ್ತರದ್ವಾರಃ ಗ್ರೀಷ್ಮಃ ಪ್ರಾಗ್ದ್ವಾರಿಕಸ್ತಥಾ ॥ ೧೪ ॥

ಶರಚ್ಚ ಪಶ್ಚಿಮದ್ವಾರಃ ಶಿಶಿರಶ್ಚೋತ್ತರಾಮುಖಃ ।
ಹೇಮಂತಃ ಸರ್ವತೋ ದ್ವಾರಃ ಪ್ರಾವೃಡದ್ವಾರಿಕಾ ಸ್ಮೃತಾ ॥ ೧೫ ॥

---

೧೦–೧೩. ಸೂರ್ಯನು ಉತ್ತರಾಯಣದಲ್ಲಿರುವಾಗ ದೊರೆಯು ಪೂರ್ವ ದಿಕ್ಕಿಗೆ ವಿಜಯ ಯಾತ್ರೆ ಹೊರಡಬೇಕು. ಚಂದ್ರನು ದಕ್ಷಿಣಾಯನದಲ್ಲಿರುವಾಗ ಪಶ್ಚಿಮ ದಿಕ್ಕಿಗೆ ಹೊರಡಬೇಕು. ಹೀಗೆ ಸೂರ್ಯ ಚಂದ್ರರ ಅಯನ ಭೇದದಿಂದ ಸೂರ್ಯಾಯನದಲ್ಲಿ ಆದರೆ ಹಗಲಿನಲ್ಲಿ ಹೊರಡಬೇಕು.

೧೪–೧೫. ಚಾಂದ್ರಾಯಣದಲ್ಲಿ ರಾತ್ರಿಯಲ್ಲಿ ಹೊರಡಬೇಕು. ನಾನು ಮೇಲೆ ಹೇಳಿರುವ ದಿಕ್ಕುಗಳಿಗೆ ಈ ರೀತಿ ಹೊರಡಬೇಕು. ವಸಂತ ಋತುವು ಉತ್ತರದ್ವಾರ ಉಳ್ಳದ್ದು, ಗ್ರೀಷ್ಮವು ಪೂರ್ವದ್ವಾರ ಉಳ್ಳದ್ದು, ಶರದೃತುವು ಪಶ್ಚಿಮದ್ವಾರ ಉಳ್ಳದ್ದು, ಶಿಶಿರ ಋತುವು ಉತ್ತರ ದ್ವಾರ ಉಳ್ಳದ್ದು, ಹೇಮಂತವು ಎಲ್ಲಾ ಕಡೆಗಳಲ್ಲಿಯೂ ದ್ವಾರ ಉಳ್ಳದ್ದು, ವರ್ಷಾಕಾಲವು ಯಾವ ದ್ವಾರವನ್ನೂ ಹೊಂದಿಲ್ಲ.

ನಕ್ಷತ್ರವದ್ದೇವತಾಭಿಃ ಯಾ ಯಸ್ಯ ತು ದಿಗುಚ್ಯತೇ ।
ಮಾಸಾರ್ಧೇಽಸ್ಯ ಮಹಾಭಾಗ ತಥೈವ ಪರಿಕೀರ್ತಿತಾ ॥ ೧೬ ॥

ಆದಿತ್ಯಚಂದ್ರಸೌರಾರ್ಕ ದಿವಸಾಸ್ತು ನ ಶೋಭನಾಃ ।
ತ ಏವ ಚಾನುಕೂಲಸ್ಯ ದಿವಸೋ ನ ಪ್ರಶಸ್ಯತೇ ॥ ೧೭ ॥

ಪ್ರಾಗ್ದ್ವಾರೋ ಭಾಸ್ಕರೋ ಜ್ಞೇಯಃ ದಕ್ಷಿಣೇನ ತಥಾ ಕುಜಃ ।
ಪಶ್ಚಿಮೇನ ಶನೈಶ್ಚಾರೀ ಉದಗ್ದ್ವಾರಸ್ತು ಚಂದ್ರಮಾಃ ॥ ೧೮ ॥

ಸರ್ವದ್ವಾರಾಃ ಸ್ಮೃತಾ ರಾಮ ಜೀವಶುಕ್ರೇಂದುನಂದನಾಃ ।
ತೇಷಾಂ ಹಿ ದಿವಸಾಃ ಶಸ್ತಾಃ ವಿಶೇಷೇಣ ಗಮಿಷ್ಯತಾಂ ॥ ೧೯ ॥

ಸಮಾಗಮೇ ಜಿತೋ ಯಸ್ತು ಜೀವೋ ಮಿತ್ರಗೃಹೇ ಸ್ಥಿತಃ ।
ಸ್ಫುರಣೋ ರಶ್ಮಿಹೀನಶ್ಚ ನ ಪ್ರಶಂಸಂತಿ ತದ್ದಿನಂ ॥ ೨೦ ॥

---

೧೬–೧೭. ನಕ್ಷತ್ರಗಳಂತೆ ದೇವತೆಗಳೂ ಸಹ ಆಯಾಯ ದಿಕ್ಕುಗಳನ್ನಾಶ್ರಯಿಸಿರುತ್ತಾರೆ. ಆಯಾಯ ಮಾಸ ಮತ್ತು ಮಾಸಾರ್ಧಗಳೂ ಸಹ ಆಯಾಯ ದೇವತೆಗಳಿಗೆ ಸೇರಿರುತ್ತವೆ. ಚಂದ್ರ, ಸೂರ್ಯ, ಶನಿ ಈ ವಾರಗಳು ಪ್ರಶಸ್ತಗಳಲ್ಲ ಒಳ್ಳೆಯ ಕೆಲಸಗಳನ್ನು ಆ ದಿವಸಗಳಲ್ಲಿ ಮಾಡಕೂಡದು.

೧೮–೧೯. ಸೂರ್ಯನು ಪೂರ್ವ ಬಾಗಿಲುಳ್ಳವನು, ಅಂಗಾರಕನು ದಕ್ಷಿಣ ದಿಕ್ಕಿಗೆ ಬಾಗಿಲುಳ್ಳವನು, ಶನಿಯು ಪಶ್ಚಿಮದ್ವಾರ ಉಳ್ಳವನು, ಚಂದ್ರನು ಉತ್ತರದ್ವಾರವುಳ್ಳವನು, ಗುರು, ಶುಕ್ರ, ಬುಧರು ಸರ್ವದ್ವಾರ ಉಳ್ಳವರು. ಇವರ ವಾರಗಳು ಬಹು ಮಟ್ಟಿಗೂ ಪ್ರಯಾಣಿಕರಿಗೆ ಪ್ರಶಸ್ತವಾಗಿರುತ್ತವೆ. (ಈ ಗುರು, ಶುಕ್ರಾದಿಗಳನ್ನು ಬಿಟ್ಟು ಆದಿತ್ಯವಾರಗಳಲ್ಲಿ ಪ್ರಯಾಣ ಮಾಡತಕ್ಕವರು ಪ್ರಯಾಣ ಮಾಡುವ ದಿಕ್ಕಿಗೆ ತಕ್ಕಂತೆ ದ್ವಾರವ್ಯವಸ್ಥೆಯನ್ನು ತಿಳಿದುಕೊಂಡು ಶುಭಾಶುಭಗಳನ್ನು ಊಹಿಸಬೇಕೆಂದು ತಾತ್ಪರ್ಯ)

೨೦–೨೧. ಗುರುವು ಮಿತ್ರ ಗೃಹದಲ್ಲಿದ್ದರೂ ಗ್ರಹಸಮಾಗಮದಿಂದ ಪರಾಜಿತನಾಗಿ ರಶ್ಮಿ ಹೀನನಾಗಿ ಸ್ವಲ್ಪ ಮಟ್ಟಿಗೆ ಪ್ರಕಾಶಿಸುತ್ತಿರುವಾಗಲೂ ಆದಿನವು ವಿಜಯಯಾತ್ರೆಗೆ ಪ್ರಶಸ್ತವಲ್ಲ. ಯಾವ ಗ್ರಹವು ಮಿತ್ರ ಗೃಹವನ್ನು ಹೊಂದಿ ಉಚ್ಚ

ಉಚ್ಚಸ್ಥೋ ಮಿತ್ರಗೃಹಗಃ ಸ್ವಕ್ಷೇತ್ರಸ್ಥಶ್ಚ ಯೋ ಗ್ರಹಃ ।
ವಿಜಯೀ ರಶ್ಮಿವಾನ್ ಸ್ಥೂಲೋ ದಿನಂ ತಸ್ಯ ಪ್ರಶಸ್ಯತೇ　　|| ೨೦ ||

ಕೃತ್ತಿಕಾದ್ಯಾನಿ ಪೂರ್ವೇಣ ಮಘಾದ್ಯಾನಿ ಚ ಯಾಮ್ಯತಃ ।
ಮೈತ್ರಾದ್ಯಾಃ ಪಶ್ಚಿಮೇನಾಥ ವಾಸವಾದ್ಯಾನಿ ಚಾಪ್ಯುದಕ್　　|| ೨೨ ||

ಸರ್ವದ್ವಾರಾಣಿ ತತ್ರಾಪಿ ದಿವಾದ್ಯಾನಿ ವಿನಿರ್ದಿಶೇತ್ ।
ಭವಂತಿ ಸ್ತಂಭಸಂಜ್ಞಾನಿ ತಾನಿ ದಿಙ್ಮಧ್ಯಗಾನಿ ಚ　　|| ೨೩ ||

ಸ್ತಂಭರ್ಕ್ಷಾದ್ಯಾನಿ ಪೂರ್ವಾಣಿ ತಾನಿ ಪ್ರಾವೇಶಿಕಾನಿ ತು ।
ನಿರ್ಗಮರ್ಕ್ಷಾಣಿ ಜಾನೀಯಾತ್ ಸ್ತಂಭರ್ಕ್ಷಾದುತ್ತರಾಣಿ ತು　　|| ೨೪ ||

ಪ್ರವೇಶಭೇಷು ದುಷ್ಟೇಷು ಯಾಯಿನಾಂ ವಿಜಯಂ ವದೇತ್ ।
ಸ್ತಂಭಭೇಷು ಚ ದುಷ್ಟೇಷು ದುರ್ಗಾಣಾಂ ಗ್ರಹಣೇ ತದಾ　　|| ೨೫ ||

---

ವಾಗಿಯೂ ಅಥವಾ ಸ್ವಕ್ಷೇತ್ರಸ್ಥವಾಗಿಯೂ ಇರುವುದೋ (ಗ್ರಹ ಯುದ್ಧದಲ್ಲಿ) ವಿಜಯ ಶಾಲಿಯಾಗಿಯೂ ರಶ್ಮಿಯಿಂದ ತುಂಬಿ ಸ್ಥೂಲವಾಗಿಯೂ ಇರುತ್ತದೆಯೋ ಅಂತಹ ದಿನವು ಪ್ರಶಸ್ತವೆಂದು ತಿಳಿಯಬೇಕು.

೨೨-೨೩. ಕೃತ್ತಿಕೆಯೇ ಮೊದಲಾದ ನಕ್ಷತ್ರಗಳು ಪೂರ್ವದ್ವಾರವುಳ್ಳ ಗ್ರಹಗಳ ದಿನದಲ್ಲಿಯೂ ಮಘಾ ಮೊದಲಾದ ನಕ್ಷತ್ರಗಳು ದಕ್ಷಿಣದ್ವಾರ ಉಳ್ಳ ಗ್ರಹಗಳ ದಿನದಲ್ಲಿಯೂ, ಅನೂರಾಧ ಮೊದಲಾದ ನಕ್ಷತ್ರಗಳು ಪಶ್ಚಿಮ ದ್ವಾರ ಉಳ್ಳ ಗ್ರಹಗಳ ದಿನದಲ್ಲಿಯೂ ಚಿತ್ರಾ ಮೊದಲಾದ ನಕ್ಷತ್ರಗಳು ಉತ್ತರದ್ವಾರ ಉಳ್ಳ ಗ್ರಹಗಳ ದಿನದಲ್ಲಿಯೂ ಪ್ರಶಸ್ತವಾಗುತ್ತವೆ. ಅವುಗಳಲ್ಲಿಯೂ ಸರ್ವ ದ್ವಾರ ಉಳ್ಳ ಆ ಗ್ರಹಗಳ ನಕ್ಷತ್ರಗಳು ದಿಙ್ಮಧ್ಯವನ್ನು ಹೊಂದಿದ್ದಲ್ಲಿ ಅವುಗಳಿಗೆ ಸ್ತಂಭವೆಂಬ ಸಂಜ್ಞೆಯೂ ಉಂಟು.

೨೪-೨೫ ಸ್ತಂಭ ನಕ್ಷತ್ರಗಳಿಗಿಂತ ಮೊದಲಿನ ನಕ್ಷತ್ರಗಳು ಪ್ರವೇಶಕ್ಕೆ ಅರ್ಹವಾಗ ತಕ್ಕವು. ಅನಂತರವಿರುವ ನಕ್ಷತ್ರಗಳು ನಿರ್ಗಮನಕ್ಕೆ ಅರ್ಹವಾದವು. ಪ್ರವೇಶ ನಕ್ಷತ್ರಗಳು ದುಷ್ಟಗಳಾದಲ್ಲಿ ಯಾಯಿ ಗ್ರಹಗಳಿಗೆ ವಿಜಯ ಉಂಟಾಗು

ನಿರ್ಗಮರ್ಕ್ಷೇಷು ದುಷ್ಟೇಷು ನಾಗರಾಣಾಂ ಜಯಂ ವದೇತ್ ।
ಋಕ್ಷೇ ಪಾಪಗ್ರಹಾಕ್ರಾಂತೇ ತಥಾಚಾಸ್ತಮಿತೇ ದ್ವಿಜ ॥ ೨೬ ॥

ದಗ್ಧೇ ಚ ಧೂಮಿತೇ ವಾಪಿ ರಜಸೋಪಹತೇಽಥವಾ ।
ಕೇತುನಾ ಧೂಮಿತೇ ವಾಪಿ ಪರಿವೇಷೇಥವಾ ಪುನಃ ॥ ೨೭ ॥

ಉತ್ಪಾತದರ್ಶನಂ ಚ ಸ್ಯಾದ್ಯೇನ ಚರ್ಕ್ಷೇಣ ಭಾರ್ಗವ ।
ಸಂಕ್ರಾಂತಿರ್ವಾ ಗ್ರಹಸ್ಯ ಸ್ಯಾದ್ಯೇನ ಚಾಸ್ತೋದಯೌ ತಥಾ ॥ ೨೮ ॥

ಭಿನ್ನಶ್ಚಂದ್ರಮಸಾ ಯಶ್ಚ ಗ್ರಹೇಣಾನ್ಯೇನ ವಾ ಪುನಃ ।
ಯನ್ನಕ್ಷತ್ರಗತೌ ಗ್ರಸ್ತೌ ಸ್ಯಾತಾಂ ವಾ ಶಶಿಭಾಸ್ಕರೌ ॥ ೨೯ ।

ನ ತೇನ ನೃಪತಿರ್ಯಾಯಾನ್ನಕ್ಷತ್ರೇಣ ಕದಾಚನ ।
ಅಷ್ಟವರ್ಗಾನುಕೂಲಸ್ಥೇ ಚಂದ್ರೇ ಯಾತ್ರಾಂ ಪ್ರಯೋಜಯೇತ್ ॥ ೩೦ ।

---

ತ್ರದೆಂದು ಹೇಳಬೇಕು. ಸ್ತಂಭ ನಕ್ಷತ್ರಗಳು ದುಷ್ಟಗಳಾಗಿದ್ದು ನಿರ್ಗಮ ನಕ್ಷತ್ರಗಳೂ ದುಷ್ಟಗಳಾಗಿದ್ದು ದುರ್ಗಗ್ರಹಣ ಪ್ರಸಂಗವಿದ್ದಲ್ಲಿ ನಾಗರ (ಪೌರ) ಗ್ರಹಗಳಿಗೆ ಜಯವಾಗುತ್ತದೆಂದು ಹೇಳಬೇಕು.

೨೮–೨೯. ಪಾಪಗ್ರಹಗಳಿಂದ ಆಕ್ರಮಿಸಲ್ಪಟ್ಟ ನಕ್ಷತ್ರದಲ್ಲಿಯೂ ಅಸ್ತ ಹೊಂದಿರುವ ನಕ್ಷತ್ರದಲ್ಲಿಯೂ ಮತ್ತು ಇತರ ತೇಜಸ್ಸಿನಿಂದ ಸುಡಲ್ಪಟ್ಟ ಅಥವಾ ಧೂಳಿಯಿಂದ ಆಕ್ರಮಿಸಲ್ಪಟ್ಟಿರುವ ಅಧವಾ ಕೇತು ಸಂಬಂಧದಿಂದ ಹೊಗೆ ಕಕ್ಕುತ್ತಿರುವ ಮತ್ತು ಪರಿವೇಷ ಹೊಂದಿರುವ ನಕ್ಷತ್ರದಲ್ಲಿಯೂ ಹೊರಡಬಾರದು. ಮತ್ತು ಯಾವ ನಕ್ಷತ್ರದಿಂದ ಉತ್ಪಾತವು ಕಂಡುಬರುವುದೋ ಇತರ ಗ್ರಹದೊಡನೆ ಸಂಕ್ರಾಂತಿ ತೋರಿ ಬರುವುದೋ ಮತ್ತು ಅಸ್ತೋದಯಗಳು ತಿಳಿದು ಬರುತ್ತವೆಯೋ ಯಾವ ನಕ್ಷತ್ರವು ಚಂದ್ರನಿಂದಾಗಲಿ ಇತರ ಗ್ರಹದಿಂದಾಗಲಿ ಒಡೆದಂತೆ ತೋರಿಬರುತ್ತದೆಯೋ ಯಾವ ನಕ್ಷತ್ರ ಹೊಂದಿ ಸೂರ್ಯಚಂದ್ರರು ಗ್ರಸ್ತರಾಗುತ್ತಾರೆಯೋ ಅಂತಹ ನಕ್ಷತ್ರದಲ್ಲಿ ದೊರೆಯು ವಿಜಯ ಯಾತ್ರೆ ಹೊರಡಕೂಡದು.

೩೦–೩೨. ಅಷ್ಟ ವರ್ಗ ವಿಧಾನದಿಂದ ಚಂದ್ರನು ಅನುಕೂಲನಾಗಿರುವಾಗ ಯಾತ್ರೆಯನ್ನು ಕೈಗೊಳ್ಳಬೇಕು ನಂದಾ ತಿಥಿಯು ದ್ವಾರದಲ್ಲಿರತಕ್ಕದ್ದು.

ಪೂರ್ವದ್ವಾರಸ್ಥಿತಾ ನಂದಾ ಭದ್ರಾ ದಕ್ಷಿಣತಃ ಸ್ಥಿತಾ ।
ಜಯಾ ಚ ಪಶ್ಚಿಮದ್ವಾರಾ ರಿಕ್ತಾ ಚೋದಕ್ಪ್ರಕೀರ್ತಿತಾ ॥ ೩೦ ॥

ಪೂರ್ಣಾ ತು ಸರ್ವತೋ ದ್ವಾರಾ ತಿಥಿರುಕ್ತಾ ಮಹಾಭುಜ ।
ನಕ್ಷತ್ರದೇವತಾ ತುಲ್ಯಾ ಮುಹೂರ್ತಾನಾಂ ತು ದಿಗ್ಭವೇತ್ ॥ ೩೧ ॥

ತ್ರಿದಿಗ್ದ್ವಾರಾಭಿಜಿತ್ ಜ್ಞೇಯಾ ದಕ್ಷಿಣೇನ ವಿಗರ್ಹಿತಾ ।
ಪ್ರಾಗ್ದ್ವಾರಾಃ ಕಥಿತಾ ರಾಮ ಮೇಷಸಿಂಹಧನುರ್ಧರಾಃ ॥ ೩೨ ॥

ತಥಾ ಚ ಪಶ್ಚಿಮದ್ವಾರಾಃ ಕನ್ಯಾಮಕರಗೋವೃಷಾಃ ।
ತುಲಾಮಕರಕುಂಭಾಶ್ಚ ಜ್ಞೇಯಾಃ ಪಶ್ಚಿಮ[1]ದಿಙ್ಮುಖಾಃ ॥ ೩೪ ॥

ಕೀಟವೃಶ್ಚಿಕಮೀನಾಶ್ಚ ತಥಾ ಚೋದಕ್ಪ್ರಕೀರ್ತಿತಾಃ ।
ಲಗ್ನೇನ ದಿಙ್ಮುಖಂ ಯತ್ಸ್ಯಾತ್ ಜ್ಞೇಯಂ ಪ್ರಾಙ್ಮುಖಮಂಶಕಂ ॥ ೩೫ ॥

---

ಭದ್ರಾತಿಥಿಯು ದಕ್ಷಿಣದಲ್ಲಿರತಕ್ಕದ್ದು. ಜಯಾತಿಥಿಯು ಪಶ್ಚಿಮದ್ವಾರದಲ್ಲಿಯೂ ರಿಕ್ತಾತಿಥಿಯು ಉತ್ತರದ್ವಾರದಲ್ಲಿಯೂ ಇರುತ್ತವೆ. ಪೂರ್ಣಾ ತಿಥಿಯು ಸರ್ವದ್ವಾರದಲ್ಲಿಯೂ ಇರುತ್ತದೆ. ನಕ್ಷತ್ರಗಳಿಗೆ ಯಾವ ಯಾವ ದೇವತೆಗಳಿರುತ್ತಾರೆಯೋ ಆದಕ್ಕೆ ಸಮಾನವಾಗಿ ಮುಹೂರ್ತಗಳಿಗೂ ಆಯಾಯ ದೇವತೆಗಳ ದಿಕ್ಕುಗಳೇ ಅನ್ವಯಿಸುತ್ತವೆ

೩೨-೩೪. ಅಭಿಜಿತ್ ಎಂಬ ನಕ್ಷತ್ರವು ಪೂರ್ವಪಶ್ಚಿಮ ಉತ್ತರ ಈ ದಿಕ್ಕುಗಳ ದ್ವಾರ ಉಳ್ಳದ್ದರಿಂದ ಆ ನಕ್ಷತ್ರವು ದಕ್ಷಿಣದಿಕ್ಕಿನ ಯಾತ್ರೆಗೆ ಪ್ರಶಸ್ತವಲ್ಲ. ಮೇಷ, ಸಿಂಹ, ಧನುಸ್ಸು ಈ ಲಗ್ನಗಳು ಪೂರ್ವದ್ವಾರಗಳೆಂದು ಹೇಳಲ್ಪಟ್ಟಿವೆ. ಕನ್ಯಾ, ಮಕರ, ವೃಷಭ, ಇವುಗಳು ಪಶ್ಚಿಮದ್ವಾರಗಳೆಂದೂ, ತುಲಾ, ಮಕರ, ಕುಂಭ ಇವು ದಕ್ಷಿಣದಿಙ್ಮುಖಗಳೆಂದೂ ತಿಳಿಯಬೇಕು

೩೫-೩೬. ಕರ್ಕಾಟಕ, ವೃಶ್ಚಿಕ, ಮೀನ ಇವುಗಳು ಉತ್ತರದ್ವಾರಗಳೆಂದೂ ತಿಳಿಯಬೇಕು. ಆಯಾಯ ಲಗ್ನಗಳಿಂದ ದಿಙ್ಮುಖವನ್ನೂ ಅದರಲ್ಲಿಯೂ ಪ್ರಾಙ್ಮುಖ

---

1 ಇದು ಅಶುದ್ಧಪಾಠವೆಂದು ತೋರುತ್ತದೆ.

ಸೌರಾಃ ಸರ್ವೇಪ್ರಶಸ್ಯಂತೇ ಕಾಲರೋಧಂ ವಿವರ್ಜಯೇತ್ ।
ವಿಶಾಖಾದ್ಯಂ ಭತ್ರಿತಯಂ ದಿನೇಸೂರ್ಯೇ ವಿವರ್ಜಯೇತ್ ॥ ೩೬ ॥

ಆಷಾಢಾತ್ರಿತಯಂ ಚಂದ್ರೇ ತಥಾ ಬ್ರಾಹ್ಮಣಸಂಜ್ಞಕಂ ।
ಧನಿಷ್ಠಾದ್ಯತ್ರಯಂ ಭೌಮೇ ಪೌಷ್ಣಾದ್ಯಂತ್ರಿತಯಂ ಬುಧೇ ॥ ೩೭ ॥

ರೋಹಿಣ್ಯಾದ್ಯಂ ತಥಾ ಜೀವೇ ಪುಷ್ಯಾದ್ಯಂ ಚ ತಥಾಸಿತೇ ।
ಅರ್ಯಮ್ಣಾದ್ಯಂ ತಥಾ ಸೌರೇ ಪ್ರಯತ್ನೇನ ಮಹಾಭುಜ ॥ ೩೮ ॥

ಮೂಲಂ ಚ ಶ್ರವಣಂ ಚೈವ ಅಹಿರ್ಬುಧ್ನ್ಯಂ ತಥೈವ ಚ ।
ಆಗ್ನೇಯಮಥ ಚಾದಿತ್ಯಂ ಭಾಗ್ಯಂ ವಾಯವ್ಯಮೇವಚ ॥ ೩೯ ॥

ಆದಿತ್ಯಾದಿದಿನೇಷ್ವೇತೇ ಸಿದ್ಧಿಯೋಗಾಃ ಪ್ರಕೀರ್ತಿತಾಃ ।
ಸಿದ್ಧಿಯೋಗಾನ್ವಿಶೇಷೇಣ ತಿಥಿಷ್ವಪಿ ನಿಬೋಧ ಮೇ ॥ ೪೦ ॥

---

ವಾದ ಅಂಶಗಳನ್ನೂ ತಿಳಿದುಕೊಳ್ಳಬೇಕು. ಸೌರನಕ್ಷತ್ರಗಳೆಲ್ಲವೂ ಪ್ರಶಸ್ತವಾಗುತ್ತವೆ. ವಿಶಾಖೆ ಮೊದಲು ಮೂರು ನಕ್ಷತ್ರಗಳನ್ನು ಸೂರ್ಯಬಲವಿಲ್ಲದಿರುವಾಗ ವರ್ಜಿಸಬೇಕು.

೩೭-೩೮. ಹಾಗೆಯೇ ಚಂದ್ರನು ದುರ್ಬಲನಾಗಿರುವಾಗ ಪೂರ್ವಾಷಾಢಾ ಮೊದಲು ಮೂರು ನಕ್ಷತ್ರಗಳನ್ನೂ ರೋಹಿಣಿಯನ್ನೂ ತ್ಯಜಿಸಬೇಕು. ಅಂಗಾರಕನು ದುರ್ಬಲನಾಗಿರುವಾಗ ಧನಿಷ್ಠಾ ಮೊದಲು ಮೂರು ನಕ್ಷತ್ರಗಳನ್ನೂ, ಬುಧನು ದುರ್ಬಲನಾಗಿರುವಾಗ ರೇವತಿ ಅಶ್ವಿನಿ ಭರಣಿಗಳನ್ನೂ ತ್ಯಜಿಸಬೇಕು. ಹಾಗೆಯೇ ಗುರುವು ದುರ್ಬಲನಾಗಿರುವಾಗ ರೋಹಿಣಿ ಮೊದಲು ಮೂರು ನಕ್ಷತ್ರಗಳನ್ನೂ ಶುಕ್ರನು ದುರ್ಬಲನಾಗಿದ್ದಲ್ಲಿ ಪುಷ್ಯ ಮೊದಲು ಮೂರು ನಕ್ಷತ್ರಗಳನ್ನೂ ಶನಿಯು ದುರ್ಬಲನಾಗಿರುವಾಗ, ಉತ್ತರಾ ಮೊದಲು ಮೂರು ನಕ್ಷತ್ರಗಳನ್ನೂ ಸಹ ಪ್ರಯತ್ನ ಪೂರ್ವಕವಾಗಿ ತ್ಯಜಿಸಬೇಕು.

೩೯-೪೦. ಮೂಲ, ಶ್ರವಣ, ಉತ್ತರಾಭಾದ್ರ, ಕೃತ್ತಿಕೆ, ಪುನರ್ವಸು, ಪೂರ್ವಫಲ್ಗುನಿ, ಸ್ವಾತಿ ಈ ನಕ್ಷತ್ರಗಳು ಆದಿತ್ಯಾದಿ ಏಳು ದಿನಗಳಲ್ಲಿ ಇದ್ದಲ್ಲಿ ಅವು ಸಿದ್ಧಿಯೋಗಗಳೆಂದು ಹೇಳಲ್ಪಡುತ್ತವೆ. ತಿಥಿಗಳಲ್ಲಿಯೂ ಸಿದ್ಧಿಯೋಗಗಳನ್ನು ವಿಶೇಷ ರೀತಿಯಿಂದ ಹೇಳುತ್ತೇನೆ. ತಿಳಿದುಕೊ.

ಗ್ರಹಕ್ರಮೇಣ ಧರ್ಮಜ್ಞ ಸರ್ವಕರ್ಮಸು ಸಿದ್ಧಿದಾನ್ ।
ದ್ವಿತೀಯಾ ಚ ತೃತೀಯಾ ಚ ಪ್ರತಿಪಚ್ಚಾಷ್ಟಮೀ ತಥಾ ॥ ೪೧ ॥

ಸಪ್ತಮೀ ಚ ಚತುರ್ಥೀ ಚ ಪಂಚಮೀ ಚ ತಥಾ ತಿಥಿಃ ।
ಅನ್ಯಾಶ್ಚ ಸಿದ್ಧಯೋಗೇಷು ತಿಥಯಸ್ತಾಂ ಶೃಣು ಕ್ರಮಾತ್ ॥ ೪೨ ॥

ಏಕಾದಶೀ ಚ ದಶಮೀ ನವಮೀ ಪಂಚದಶ್ಯಪಿ ।
ಚತುರ್ದಶೀ ದ್ವಾದಶೀ ಚ ತಥಾ ರಾಮ ತ್ರಯೋದಶೀ ॥ ೪೩ ॥

ಛಾಯಾಪ್ರಮಾಣಂ ವಕ್ಷ್ಯಾಮಿ ಸಿದ್ಧಿಯೋಗೇಷ್ವತಃ ಕ್ರಮಾತ್ ।
ತತ್ರ ಕಾಲೇ ಕೃತಂ ಕರ್ಮ ಸಕೃತ್ಸಂಪತ್ಸ್ಯತೇ ಧ್ರುವಂ ॥ ೪೪ ॥

ಆದಿತ್ಯೇ ವಿಂಶತಿರ್ಜ್ಞೇಯಾಶ್ಚಂದ್ರೇ ಷೋಡಶ ಕೀರ್ತಿತಾಃ ।
ಭೌಮೇ ಪಂಚದಶೈವೋಕ್ತಾಶ್ಚತುರ್ದಶ ತಥಾ ಬುಧೇ ॥ ೪೫ ॥

---

೪೧–೪೨ ಆಯಾಯ ಗ್ರಹಗಳ ಕ್ರಮದಿಂದ ಇವು ಸರ್ವಕರ್ಮಗಳಲ್ಲಿಯೂ ಸಿದ್ಧಿಪ್ರದವಾಗುತ್ತವೆ. ದ್ವಿತೀಯಾ, ತೃತೀಯಾ, ಪ್ರಥಮಾ, ಅಷ್ಟಮಿ, ಸಪ್ತಮಿ, ಚತುರ್ಥೀ, ಪಂಚಮಿ ಈ ತಿಥಿಗಳನ್ನೂ ಮತ್ತು ಸಿದ್ಧಿಯೋಗದಲ್ಲಿ ಉಪಯೋಗಿಸುವ ಇತರ ತಿಥಿಗಳನ್ನೂ ಕ್ರಮವಾಗಿ ಹೇಳುತ್ತೇನೆ ಕೇಳು.

೪೩–೪೪. ಏಕಾದಶೀ, ದಶಮೀ, ನವಮೀ, ಪೂರ್ಣಿಮಾ ಮತ್ತು ಅಮಾವಾಸ್ಯಾ, ಚತುರ್ದಶೀ, ದ್ವಾದಶೀ, ತ್ರಯೋದಶೀ ಇವೇ ಆ ತಿಥಿಗಳು. ಇನ್ನು ಮುಂದೆ ಗ್ರಹಗಳ ಛಾಯಾಪ್ರಮಾಣವನ್ನು ಹೇಳುತ್ತೇನೆ. ಕೇಳು, ಇವುಸಿದ್ಧಿಯೋಗಗಳಲ್ಲಿ ಉಪಯೋಗಿಸಲ್ಪಡತಕ್ಕವು. ಇಂತಹ ಕಾಲಗಳಲ್ಲಿ ಒಂದೊಂದಾವರ್ತಿ ಆಯಾಯ ಕಾರ್ಯಗಳನ್ನು ಮಾಡಿದರೂ ಸಹ ಅದು ಶಾಶ್ವತವಾಗಿ ಪರಿಣಮಿಸುತ್ತದೆ.

೪೫–೪೬. ಸೂರ್ಯನಲ್ಲಿ ಇಪ್ಪತ್ತು ಛಾಯೆಗಳು, ಚಂದ್ರನಲ್ಲಿ ಹದಿನಾರು, ಅಂಗಾರಕನಲ್ಲಿ ಹದಿನೈದು, ಬುಧನಲ್ಲಿ ಹದಿನಾಲ್ಕು, ಗುರುವಿನಲ್ಲಿ ಹದಿಮೂರು, ಶುಕ್ರನಲ್ಲಿ ಹನ್ನೆರಡು, ಸೂರ್ಯನು ಉದಯ ಹೊಂದಿರುವಾಗ ಉತ್ತರದಿಕ್ಕಿಗೆ

ತ್ರಯೋದಶ ತಥಾ ಜೀವೇ ಶುಕ್ರೇ ದ್ವಾದಶಕೀರ್ತಿತಾಃ ।
ಉದಿತೇನೋತ್ತರಾಂ ಗಚ್ಛೇತ್ಪ್ರಾಚೀಂ ಮಧ್ಯಸ್ಥಿತೇ ರವೌ ॥ ೪೭ ॥

ದಕ್ಷಿಣಾಮಪರಾಹ್ಣೇ ತು ಅರ್ಧರಾತ್ರೇ ತು ಪಶ್ಚಿಮಾಂ ।
ಜನ್ಮರಾಶ್ಯುದಯೋ ಯಾತ್ರಾ ನ ಪ್ರಶಸ್ತಾ ಮಹಾಭುಜ ॥ ೪೭ ॥

ತಾಭ್ಯಾಮುಪಚಯರ್ಕ್ಷೇ ತು ಯಾತ್ರಾ ಶಸ್ತಾ ತಥಾ ಭವೇತ್ ।
ಶೇಷೇಷು ವರ್ಜಯೇದ್ಯಾತ್ರಾಂ ಭೂತಿಕಾಮೋ ನರಾಧಿಪಃ ॥ ೪೮ ॥

ಯಾತ್ರಾ ಶುಭಫಲಾ ಜ್ಞೇಯಾ ಸೌಮ್ಯಗ್ರಹನವಾಂಶಕೇ ।
ಪಾಪಗ್ರಹಾಂಶಕೇ ಯಾತ್ರಾಂ ಪ್ರಯತ್ನೇನ ವಿವರ್ಜಯೇತ್ ॥ ೪೯ ॥

ಜನ್ಮಭೇ ನೈಧನೇ ಚೈವ ತಥಾಧಾನೇ ವಿಪತ್ಕರೇ ।
ಪ್ರತ್ಯರೌ ಭಗಣೇ ಯಾತ್ರಾಂ ಪ್ರಯತ್ನೇನ ವಿವರ್ಜಯೇತ್ ॥ ೫೦ ॥

ಕ್ಷೇಮೇ ಸಂಪತ್ಕರೇ ಮೈತ್ರೇ ಸಾಧಕೇ ಚಾತಿಮೈತ್ರಕೇ ।
ಕರ್ಮಭೇ ಚ ತಥಾ ಯಾತ್ರಾ ಪ್ರಶಸ್ತಾ ಮನುಜೋತ್ತಮ ॥ ೫೧ ॥

---

ಹೊರಡಬೇಕು. ಮಧ್ಯದಲ್ಲಿರುವಾಗ ಪೂರ್ವದಿಕ್ಕಿಗೂ, ಅಪರಾಹ್ಣದಲ್ಲಿ ದಕ್ಷಿಣ ದಿಕ್ಕಿಗೂ, ಅರ್ಧರಾತ್ರಿಯಲ್ಲಿ ಪಶ್ಚಿಮದಿಕ್ಕಿಗೂ ಸಹ ಹೊರಡಬೇಕು.

೪೭–೪೮. ಜನ್ಮರಾಶಿಯ ಉದಯಕಾಲವು ವಿಜಯಯಾತ್ರೆಗೆ ಪ್ರಶಸ್ತವಲ್ಲ. ಆದರೆ ವೃದ್ಧಿಹೊಂದಿರುವ ನಕ್ಷತ್ರದಿಂದ ಅವು ಕೂಡಿದ್ದಲ್ಲಿ ಅಂತಹ ಯಾತ್ರೆಯು ಪ್ರಶಸ್ತವೆಂದು ತಿಳಿಯಬೇಕು. ಉಳಿದ ಕಾಲದಲ್ಲಿ ಅಭ್ಯುದಯವನ್ನು ಅಪೇಕ್ಷಿಸುವ ದೊರೆಯು ಯಾತ್ರೆಯನ್ನು ಕೈಗೊಳ್ಳಬಾರದು. ಸೌಮ್ಯಗ್ರಹಗಳ ನವಾಂಶದಲ್ಲಿ ಉಂಟಾದ ಯಾತ್ರೆಯು ಶುಭಫಲವಾಗುತ್ತದೆ ಎಂದು ತಿಳಿಯಬೇಕು.

೪೯–೫೧ ಪಾಪಗ್ರಹಗಳ ಅಂಶಗಳಲ್ಲಿ ಯಾತ್ರೆಯನ್ನು ಪ್ರಯತ್ನಪೂರ್ವಕವಾಗಿ ಬಿಡಬೇಕು. ಜನ್ಮತಾರೆಯಲ್ಲಿಯೂ, ನೈಧನತಾರೆಯಲ್ಲಿಯೂ, ವಿಪತ್ತಾರೆಯಲ್ಲಿಯೂ, ಪ್ರತ್ಯಕ್ತಾರೆಯಲ್ಲಿಯೂ ಸಹ ಯಾತ್ರೆಯನ್ನು ಬಿಟ್ಟುಬಿಡಬೇಕು ಕ್ಷೇಮತಾರೆಯಲ್ಲಿಯೂ, ಸಂಪತ್ತಾರೆ ಮತ್ತು ಮೈತ್ರ, ಸಾಧಕ, ಅತಿಮೈತ್ರ ಈ ತಾರೆಗಳಲ್ಲಿಯೂ ಯಾತ್ರೆಯು ಪ್ರಶಸ್ತವಾಗುತ್ತದೆ.

ದಿವ್ಯಾಂತರಿಕ್ಷಕ್ಷಿತಿಜೇ ದೃಷ್ಟೇ ರಾಮ ಮಹಾದ್ಭುತೇ ।
ಸಪ್ತಾಹಂ ವರ್ಜಯೇದ್ಯಾತ್ರಾಂ ಪ್ರಯತ್ನೇನ ಮಹಾಭುಜ ॥ ೫೨ ॥

ಲಗ್ನೇ ತು ವಿಬಲೇ ಯಾತ್ರಾಂ ಶೂನ್ಯೇ ಕೇಂದ್ರೇ ಚ ವರ್ಜಯೇತ್ ।
ಜನ್ಮಪೇ ಲಗ್ನಪೇ ರಾಮ ಬಲಹೀನೇ ವಿಶೇಷತಃ ॥ ೫೩ ॥

ದಿಕ್ಪತಾವನುಕೂಲೇ ತು ಶುಭಾ ಯಾತ್ರಾ ಪ್ರಕೀರ್ತಿತಾ ।
ಸಮ್ಮುಖೇ ಶಕ್ರಚಾಪೇ ತು ಯಾತ್ರಾಂ ಯತ್ನೇನ ವರ್ಜಯೇತ್ ॥ ೫೪ ॥

ನ ಚ ಗಚ್ಛೇತ್ತಥಾ ರಾಮ ದ್ವಾರಾಭಿಹತಮಸ್ತಕಃ ।
ದೃಷ್ಟ್ವಾ ದ್ರವ್ಯಮಮಂಗಲ್ಯಂ ಖಿನ್ನಚೇತಾಸ್ತಥೈವ ಚ ।
ತುಷ್ಟೇ ಮನಸಿ ಗಂತವ್ಯಂ ಪ್ರಯತ್ನೇನ ಮಹೀಭುಜಾ ॥ ೫೫ ॥

---

೫೨–೫೪. ದಿವ್ಯ, ಆಂತರಿಕ್ಷ, ಭೌಮ ಎಂಬ ಮೂರು ವಿಧವಾದ ಅದ್ಭುತಗಳಲ್ಲಿ ಯಾವುದೊಂದು ಕಂಡು ಬಂದಲ್ಲಿಯೂ ಸಹ ಅದು ಮೊದಲು ಏಳು ದಿನಗಳವರೆಗೆ ಯಾವ ಯಾತ್ರೆಯನ್ನೂ ಕೈಗೊಳ್ಳಬಾರದು. ಲಗ್ನವು ದುರ್ಬಲವಾಗಿರುವ ಕಾಲದಲ್ಲಿಯೂ, ಕೇಂದ್ರಸ್ಥಾನವು ಶೂನ್ಯವಾಗಿದ್ದರೂ ಸಹ ಯಾತ್ರೆಯನ್ನು ವರ್ಜಿಸಬೇಕು. ಜನ್ಮರಾಶ್ಯಧಿಪನೂ, ಲಗ್ನಾಧಿಪತಿಯೂ ಸಹ ಬಲಹೀನರಾಗಿದ್ದಲ್ಲಿ ಯಾತ್ರೆಯನ್ನು ಸರ್ವಥಾ ತ್ಯಜಿಸಬೇಕು. ಯಾವ ದಿಕ್ಕಿಗೆ ಯಾತ್ರೆ ಹೊರಡಬೇಕೋ ಆ ದಿಕ್ಪತಿಯು ಅನುಕೂಲನಾಗಿದ್ದಲ್ಲಿ ಯಾತ್ರೆಯು ಶುಭಕರವಾಗಿಯೇ ಆಗುತ್ತದೆ. ಇಂದ್ರಧನುವು ಎದುರಾಗಿ ಕಾಣಿಸಿಕೊಂಡಲ್ಲಿ ಯಾತ್ರೆಯನ್ನು ಪ್ರಯತ್ನಪೂರ್ವಕವಾಗಿ ತ್ಯಜಿಸಬೇಕು.

೫೫–೫೬. ಮತ್ತು ಯಾತ್ರಾರ್ಥಿಯಾಗಿ ಮನೆಯಿಂದ ಹೊರಡುವಾಗ ಬಾಗಿಲಿನ ಮೇಲಿನ ಭಾಗವು ತಲೆಗೆ ಹೊಡೆದಲ್ಲಿ ಪ್ರಯಾಣ ಮಾಡಬಾರದು. ಮತ್ತು ಅಮಂಗಲವಾದ ವಸ್ತುಗಳನ್ನು ನೋಡಿದಲ್ಲಿಯೂ ಮತ್ತು ಮನಸ್ಸು ಖೇದದಿಂದ ನೊಂದಿರುವಾಗಲೂ ಪ್ರಯಾಣ ಮಾಡಬಾರದು. ಧೊರೆಯಾದವನು ಮನಸ್ಸಿನಲ್ಲಿ ಸಂತೋಷ ಹೊಂದಿಯೇ ಪ್ರಯಾಣ ಮಾಡಬೇಕು. ಯಾವ ಲಗ್ನದಲ್ಲಿ ಪ್ರಯಾಣ

ತ್ರಿಕೋಣಕೇಂದ್ರೋಪಗತಾಸ್ತು ಸೌಮ್ಯಾಃ
ಪಾಪಾಸ್ತಥಾ ಚೋಪಚಯರ್ಕ್ಷಸಂಸ್ಥಾಃ ।
ಭವಂತಿ ಲಗ್ನಸ್ಯ ತು ಯಸ್ಯ ತೇನ
ಯಾತ್ರಾ ಪ್ರಯುಕ್ತಾ ತು ಶುಭಾವಹಾಸ್ಯಾತ್ ॥ ೫೬ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ಜ್ಯೋತಿಃಶಾಸ್ತ್ರಮತೇ ಯಾತ್ರಾಧಿಕಾರೋ
ನಾಮ ಪಂಚಸಪ್ತತ್ಯುತ್ತರಶತತಮೋಽಧ್ಯಾಯಃ

---

ಹೊರಡುತ್ತಾನೆಯೋ ಆ ಲಗ್ನದ ತ್ರಿಕೋಣ ಮತ್ತು ಕೇಂದ್ರಗಳಲ್ಲಿ ಸೌಮ್ಯಗ್ರಹಗಳೂ ಹನ್ನೊಂದನೆಯ ಸ್ಥಾನದಲ್ಲಿ ಪಾಪಗ್ರಹಗಳೂ ಇದ್ದಲ್ಲಿ ಅಂತಹ ಲಗ್ನದಲ್ಲಿ ಕೈಗೊಳ್ಳುವ ವಿಜಯಯಾತ್ರೆಯು ಶುಭಕರವಾದುದು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ ಸಂವಾದದಲ್ಲಿ
ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ ಜ್ಯೋತಿಸ್ಸಿದ್ಧಾಂತದ
ಯಾತ್ರಾಧಿಕಾರವೆಂಬ ನೂರ ಎಪ್ಪತ್ತೈದನೆಯ
ಅಧ್ಯಾಯ ಮುಗಿದಿದೆ.



|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಷಟ್‌ಸಪ್ತತ್ಯುತ್ತರಶತತಮೋಽಧ್ಯಾಯಃ

|| ರಾಮ ಉವಾಚ ||

ಯಾತ್ರಾವಿಧಾನಮಾಚಕ್ಷ್ವ ಸರ್ವಧರ್ಮಭೃತಾಂ ವರ |
ಜಿಗೀಷೂಣಾಂ ನರೇಂದ್ರಾಣಾಂ ಸಿದ್ಧಿಕಾರಣಮುತ್ತಮಂ || ೧ ||

|| ಪುಷ್ಕರ ಉವಾಚ ||

ಸಪ್ತಾಹೇನ ಯದಾ ಯಾತ್ರಾ ಭವಿಷ್ಯತಿ ಮಹೀಪತೇಃ |
ತದಾ ದಿನೇ ತು ಪ್ರಥಮೇ ಪೂಜನೀಯೋ ವಿನಾಯಕಃ || ೨ ||

---

### ನೂರ ಎಪ್ಪತ್ತಾರನೇ ಅಧ್ಯಾಯ.

೧-೨. ಪರಶುರಾಮನು ಕೇಳುತ್ತಾನೆ, ಸಮಸ್ತ ಧರ್ಮಗಳನ್ನು ಹೊಂದಿರುವವರಲ್ಲಿ ಅಗ್ರೇಸರನಾದ ಪೂಜ್ಯನೇ ವಿಜಯೇಚ್ಛೆಯಿಂದ ಪ್ರಸ್ಥಾನ ಮಾಡುವ ರಾಜರುಗಳ ಸರ್ವಸಿದ್ಧಿಗೂ ಕಾರಣವಾದ ಯಾತ್ರಾ ವಿಧಾನವನ್ನು ದಯವಿಟ್ಟು ಹೇಳು. ವಿಜಯಕ್ಕಾಗಿ ಯುದ್ಧ ಹೂಡುವ ರಾಜರುಗಳು ವಿಜಯ ಯಾತ್ರೆಯನ್ನು ಯಾವ ರೀತಿಯಲ್ಲಿ ಕೈಗೊಳ್ಳ ಬೇಕೆಂಬುದನ್ನು ಹೇಳು ಎಂದು ತಾತ್ಪರ್ಯ. ಇದಕ್ಕೆ ಉತ್ತರವಾಗಿ ಪುಷ್ಕರನು ಹೇಳುತ್ತಾನೆ. ಧೊರೆಯ ವಿಜಯ ಯಾತ್ರೆಯು ಇನ್ನು ಏಳು ದಿನಗಳಲ್ಲಿ ಉಂಟಾಗುತ್ತದೆ. ಎಂದು ತಿಳಿದೊಡನೆಯೇ ಮೊದಲನೆಯ ದಿನದಲ್ಲಿ ವಿನಾಯಕನನ್ನು ಪೂಜಿಸಬೇಕು.

ಮೋದಕೈರಕ್ಷತೈಃ ದಧ್ನಾ ಕುಸುಮೈಶ್ಚ ತಥಾ ಫಲೈಃ ।
ಗಂಧವಸ್ತ್ರೈರಲಂಕಾರೈಃ ಧೂಪೈರ್ದೀಪೈರ್ಮನೋಹರೈಃ ॥ ೩ ॥

ದ್ವಿತೀಯೇಽಹ್ನಿ ತತಃ ಕಾರ್ಯಂ ಸರ್ವದಿಕ್ಪಾಲಪೂಜನಂ ।
ದಿಕ್ಪಾಲಪೂಜನಂ ಕೃತ್ವಾ ತೇಷಾಂ ಚ ಪುರತಃ ಸ್ಥಿತಃ ॥ ೪ ॥

ಶಯ್ಯಾಂ ಕುಶಾಭಿಃ ಕುರ್ವೀತ ಸಿತವಸ್ತ್ರೋತ್ತರಚ್ಛದಾಂ ।
ವಿಕಿರೇನ್ನಾಗಪುಷ್ಪೈಸ್ತಾಂ ತಥಾ ಸಿದ್ಧಾರ್ಥಕೈಃ ಶುಭೈಃ ॥ ೫ ॥

ಶಚ್ಛೀರ್ಷಕೇ ತು ಪೂಜ್ಯಾ ಶ್ರೀಃ ಭದ್ರಕಾಲೀ ಚ ಪಾದಯೋಃ ।
ಹರಂ ದಕ್ಷಿಣಪಾರ್ಶ್ವೇ ತು ವಾಮೇ ಬ್ರಹ್ಮಾಣಮೇವ ಚ ॥ ೬ ॥

ಪೂಜಿತಂ ಕಲಶಂ ಹೃದ್ಯಂ ಕುರ್ಯಾದುಷ್ಣೀಷಕೇ ದೃಢಂ ।
ನೀಲಪಲ್ಲವಸಂಛನ್ನಂ ಚಾರುಪುಷ್ಪೋಜ್ಜ್ವಲಂ ಶುಭಂ ॥ ೭ ॥

---

೩–೫. ಕಡುಬುಗಳಿಂದಲೂ, ಅಕ್ಷತೆ, ಮೊಸರು, ಪುಷ್ಪಫಲ, ಗಂಧ ವಸ್ತ್ರ, ಅಲಂಕಾರಗಳು ರಮ್ಯವಾದ ಧೂಪದೀಪಾದಿಗಳು ಇವುಗಳಿಂದ ಪೂಜಿಸಬೇಕು ಅನಂತರ ಎರಡನೆಯ ದಿನದಲ್ಲಿ ಎಲ್ಲಾ ದಿಕ್ಪಾಲಕರನ್ನೂ ಪೂಜಿಸಬೇಕು. ಆ ರೀತಿ ದಿಕ್ಪಾಲಕರನ್ನು ಪೂಜಿಸಿ ದಿಕ್ಪಾಲಕರ ಎದುರಿಗೆ ನಿಂತು ದರ್ಭೆಗಳಿಂದ ಹಾಸಿಗೆಯನ್ನು ಮಾಡಬೇಕು. ಆ ಹಾಸಿಗೆಯ ಮೇಲೆ ಬಿಳಿಯ ವಸ್ತ್ರದಿಂದ ಆಚ್ಛಾದನವನ್ನು ಏರ್ಪಡಿಸಬೇಕು. ಅದರ ಮೇಲೆ ಸುರಹೊನ್ನೆ ಹೂವುಗಳನ್ನು ಎರಚಬೇಕು. ಹಾಗೆಯೇ ಚೆನ್ನಾಗಿರುವ ಬಿಳಿಯ ಸಾಸವೆಯನ್ನೂ ಎರಚಬೇಕು.

೬–೮. ಆ ಹಾಸಿಗೆಯ ತಲೆಯ ಭಾಗದಲ್ಲಿ ಲಕ್ಷ್ಮಿಯನ್ನೂ, ಪಾದದ ಭಾಗದಲ್ಲಿ ಭದ್ರಕಾಳಿಯನ್ನೂ ಪೂಜಿಸಬೇಕು. ಹಾಗೆಯೇ ಬಲಭಾಗದಲ್ಲಿ ಹರನನ್ನೂ ಎಡಭಾಗದಲ್ಲಿ ಬ್ರಹ್ಮನನ್ನೂ ಪೂಜಿನಬೇಕು ಆ ಪ್ರದೇಶದಲ್ಲಿ ಕಪ್ಪಾಗಿರುವ ಚಿಗುರುಗಳಿಂದಲೂ, ರಮ್ಯವಾದ ಹೂವುಗಳಿಂದಲೂ, ಪೂಜಿಸಿ ಪ್ರತಿಷ್ಠೆಮಾಡಿರುವ ಕಲಶವನ್ನು ತನ್ನ ರುಮಾಲಿನಮೇಲೆ ದೃಢವಾಗಿ ಇಟ್ಟುಕೊಳ್ಳಬೇಕು ಧೊರೆಯಾಗಿರುವವನು ಒಂದೇ ಹೊತ್ತು ಹೋಮಾರ್ಹವಾದ ಅನ್ನವನ್ನು ಭುಂಜಿಸಿ (ಕ್ಷಾರಲವ

**ಏಕಕಾಲಂ ಹವಿಷ್ಯಾನ್ನಂ ಲಘುಭುಕ್ತ್ವಾ ಮಹೀಪತಿಃ ।**
**ಸ್ವಯಂ ದಕ್ಷಿಣಪಾರ್ಶ್ವೇ ಚ ಮಂತ್ರಮೇತದುದೀರಯೇತ್ ॥ ೮ ॥**

**ನಮಃ ಶಂಭೋ ತ್ರಿನೇತ್ರಾಯ ರುದ್ರಾಯ ವರದಾಯ ಚ ।**
**ವಾಮನಾಯ ವಿರೂಪಾಯ ಸ್ವಪ್ನಾಧಿಪತಯೇ ನಮಃ ॥ ೯ ॥**

**ಭಗವನ್ ದೇವದೇವೇಶ ಶೂಲಭೃದ್ವೃಷವಾಹನ ।**
**ಇಷ್ಟಾನಿಷ್ಟಂ ಸಮಾಚಕ್ಷ್ವ ಸ್ವಪ್ನೇ ಸುಪ್ತಸ್ಯ ಶಾಶ್ವತಂ ॥ ೧೦ ॥**

**ಯಜ್ಜಾಗ್ರತೋ ದೂರಮಿತಿ ಮಂತ್ರಮಾವರ್ತಯೇತ್ತತಃ ।**
**ಹೃದಿ ನ್ಯಸ್ಯ ಕುಶಾನ್ ರಾಜ್ಞಃ ಪ್ರಯತಸ್ತು ಪುರೋಹಿತಃ ॥ ೧೧ ॥**

**ತತಃ ಸ್ವಪ್ನೇ ಶುಭೇ ದೃಷ್ಟೇ ಯಾತ್ರಾ ದೇಯಾ ತು ನಾನ್ಯಥಾ ।**
**ತೃತೀಯೇಽಹನಿ ಸಂಪ್ರಾಪ್ತೇ ದೇವಂ ದಿಙ್ನಾಥಮರ್ಚಯೇತ್ ॥ ೧೨ ॥**

---

ಣವರ್ಜಿತವಾದ ಅನ್ನವು ಹೋಮಾರ್ಹವೆಂದುಹೇಳಲ್ಪಟ್ಟಿದೆ.) ಮೇಲೆ ಹೇಳಿರುವಂತೆ ಕಲಶವನ್ನು ಧರಿಸಿ ಆ ಹಾಸಿಗೆಯ ದಕ್ಷಿಣಭಾಗದಲ್ಲಿ ನಿಂತು ಈ ಮಂತ್ರವನ್ನು ಉಚ್ಚರಿಸಬೇಕು.

೯–೧೧. ತ್ರಿನೇತ್ರನಾಗಿಯೂ, ರುದ್ರರೂಪಿಯಾಗಿಯೂ, ವರಪ್ರದನಾಗಿಯೂ, ವಾಮನನಾಗಿಯೂ, ವಿರೂಪನಾಗಿಯೂ, ಸ್ವಪ್ನಕ್ಕೆ ಅಧಿಪತಿಯಾಗಿಯೂ, ಶಂಭು ರೂಪಿಯಾಗಿಯೂ ಇರುವ ನಿನಗೆ ಅನಂತ ನಮಸ್ಕಾರಗಳು ಪೂಜ್ಯನಾದ ಪ್ರಭುವೇ ದೇವಾಧಿಪತಿಯೇ ಶೂಲಧಾರಿಯೇ ವೃಷಭವಾಹನನೇ ಇಲ್ಲಿ ಮಲಗುವ ನನ್ನ ಸ್ವಪ್ನದಲ್ಲಿ ಶಾಶ್ವತವಾದ ನನ್ನ ಶುಭಾಶುಭಗಳನ್ನು ದಯವಿಟ್ಟು ನನಗೆ ಹೇಳು ಹೀಗೆ ಪ್ರಾರ್ಥಿಸಬೇಕು. ಅನಂತರ ಪರಿಶುದ್ಧನಾದ ಪುರೋಹಿತನು ರಾಜನ ಹೃದಯದಲ್ಲಿ ದರ್ಭೆಗಳನ್ನಿಟ್ಟು ಯಜ್ಜಾಗ್ರತೋ ದೂರಂ ಎಂಬ ಮಂತ್ರವನ್ನು ಆವರ್ತಿಯಿಂದ ಪಠಿಸಬೇಕು.

೧೨–೧೩. ಅನಂತರ ಆ ಸ್ವಪ್ನದಲ್ಲಿ ಶುಭವು ಕಂಡದ್ದೇ ಆದರೆ ಆಗ ವಿಜಯ ಯಾತ್ರೆಯನ್ನು ಕೈಗೊಳ್ಳಬೇಕು. ಇಲ್ಲದಿದ್ದರೆ ವರ್ಜಿಸಬೇಕು. ಮೂರನೇಯ ದಿನವು ಬಂದಾಗ ದಿಕ್ಪತಿಯಾದ ದೇವತೆಯನ್ನು ಪೂಜಿಸಬೇಕು. ಗ್ರಹಗಳಲ್ಲಿ ಸೂರ್ಯಗ್ರಹ

ಏಕಮೇವ ಮಹಾಭಾಗ ದಿನನಾಥಂ ತಥಾಗ್ರಹಂ ।
ಯಾಂ ದಿಶಂ ನೃಪತಿರ್ಗಚ್ಛೇನ್ನಾಥಂ ತಸ್ಯಾಸ್ತಥೈವ ತಾಂ ॥ ೧೩ ॥

ಚತುರ್ಥೇಽಹನಿ ಸಂಪ್ರಾಪ್ತೇ ಗ್ರಹಯೋಗೋ ವಿಧೀಯತೇ ।
ಪಂಚಮೇಽಹನಿ ಸಂಪ್ರಾಪ್ತೇ ಸರ್ವಯೋಗಸ್ತಥೈವ ಚ ।
ದೇವತಾನಾಂ ಸ್ವನಗರೇ ಕೃತಾಯೇಸಾಂ ತಥಾಲಯಾಃ ॥ ೧೪ ॥

ತಾಸಾಂ ಸಂಪೂಜನಂ ಕಾರ್ಯಂ ಸ್ವಪುರೇ ಯೇ ತಥಾ ಸ್ಥಿತಾಃ ।
ತತ್ರೈವ ರಾತ್ರೌ ಭೂತಾನಾಂ ಕರ್ತವ್ಯಂ ಚ ತಥಾರ್ಚನಂ ॥ ೧೫ ॥

ಏಕವೃಕ್ಷೇಷು ಚೈತ್ಯೇಷು ಚತ್ವರಾಟ್ಟಾಲಕೇಷು ಚ ।
ಚತುಷ್ಪಥೇಷು ರಥ್ಯಾಸು ಪರ್ವತಾನಾಂ ಗುಹಾಸು ಚ ॥ ೧೬ ॥

ನದೀತೀರೇಷು ಶೈಲೇಷು ದೇವತಾಯತನೇಷು ಚ ।
ತೇಷಾಂ ಸಂಪೂಜನಂ ಕೃತ್ವಾ ಸ್ವಗೃಹೇ ತಾನ್ಸಮರ್ಚಯೇತ್ ॥ ೧೭ ॥

---

ಒಂದನ್ನೇ ಪೂಜಿಸಬೇಕು. ದಿಕ್ಪತಿಯನ್ನು ಪೂಜಿಸುವಾಗ ತಾನು ಯಾವದಿಕ್ಕಿಗೆ ವಿಜಯಯಾತ್ರೆ ಹೊರಡುತ್ತಾನೆಯೋ ಆ ದಿಕ್ಕಿಗೆ ಪತಿಯಾದ ದೇವತೆಯನ್ನೂ ಆ ದಿಕ್ಕನ್ನೂ ಸಹ ಪೂಜಿಸಬೇಕು

೧೪-೧೫. ನಾಲ್ಕನೆಯ ದಿನವು ಬಂದಲ್ಲಿ ಆದಿನದಲ್ಲಿ ಗ್ರಹಯಾಗವನ್ನು ಮಾಡಬೇಕು. ಐದನೆಯ ದಿನದಲ್ಲಿ ಸರ್ವಯಾಗವನ್ನು ಮಾಡಬೇಕು. ಮತ್ತು ತನ್ನ ನಗರದಲ್ಲಿ ಯಾವಯಾವ ದೇವತೆಗಳಿಗೆ ಆಲಯನಿರ್ಮಾಣ ಪೂರ್ವಕವಾಗಿ ಪ್ರತಿಷ್ಠಾವಿಧಿಯು ನಡೆದಿರುತ್ತದೆಯೋ, ಆ ದೇವತೆಗಳೆಲ್ಲರಿಗೂ ಪೂಜಾವಿಧಿಗಳು ಯಥೋಕ್ತವಾಗಿ ನಡೆಯಬೇಕು. ಆದಿನದಲ್ಲಿಯೇ ರಾತ್ರಿಯಲ್ಲಿ ಎಲ್ಲಾ ಭೂತಗಳಿಗೂ ಅರ್ಚನೆಯನ್ನು ನೆರವೇರಿಸಬೇಕು.

೧೬-೧೭. ಒಂಟೊಂಟಿ ಮರಗಳಿರುವ ಸ್ಥಳಗಳಲ್ಲಿಯೂ, ಶೂನ್ಯದೇವಾಲಯಗಳಲ್ಲಿಯೂ, ಅಂಗಳಗಳಲ್ಲಿಯೂ, ಮಹಡಿಗಳಲ್ಲಿಯೂ, ನಾಲ್ಕುದಾರಿಗಳು ಕೂಡುವ ಚೌಕಗಳಲ್ಲಿಯೂ, ರಾಜಮಾರ್ಗಗಳಲ್ಲಿಯೂ, ಪರ್ವತಗಳ ಗುಹೆಗಳಲ್ಲಿಯೂ, ನದೀತೀರಗಳಲ್ಲಿಯೂ, ಪರ್ವತಗಳಲ್ಲಿಯೂ, ದೇವಾಲಯಗಳಲ್ಲಿಯೂ, ಆಭೂತಗಳಿಗೆ ಪೂಜೆಮಾಡಿ ತನ್ನ ಮನೆಯಲ್ಲಿಯೂ ಪುನಃ ಪೂಜಿಸಬೇಕು.

ತತ್ರ ಕೃತ್ವಾ ತತೋ ವಾಚ್ಯಾಃ ಪ್ರಮಥಾ ಭೂಭುಜಾ ಸ್ವಯಂ ।
ವಾಸುದೇವಸ್ಯ ದೇವಸ್ಯ ತಥಾ ಸಂಕರ್ಷಣಸ್ಯ ಚ ॥ ೧೮ ॥

ಪ್ರದ್ಯುಮ್ನಸ್ಯಾನಿರುದ್ಧಸ್ಯ ಬ್ರಹ್ಮಣಃ ಶಂಕರಸ್ಯ ಚ ।
ಕೀನಾಶಶಕ್ರವರುಣಧನೇಶಾನಾಂ ತು ಯೇ ಗಣಾಃ ॥ ೧೯ ॥

ವಾಯೋಶ್ಚ ನಿಋತೇರ್ವಹ್ನೇಃ ತಥಾ ಚಂದ್ರಾರ್ಕಯೋಶ್ಚ ಯೇ ।
ಗ್ರಹಾಣಾಮಥ ಋಕ್ಷಾಣಾಂ ಸ್ಕಂದಸ್ಯ ಚ ಮಹಾಬಲಾಃ ॥ ೨೦ ॥

ವಿನಾಯಕಸ್ಯ ದೇವಸ್ಯ ದೇವತಾನಾಂ ಗಣಾಶ್ಚ ಯೇ ।
ದೈತ್ಯಾನಾಂ ರಾಕ್ಷಸಾನಾಂ ಚ ಸರ್ವೇಷಾಮನುಗಾಶ್ಚ ಯೇ ॥ ೨೧ ॥

ಮಹಾಬಲಾ ಮಹಾಕಾಯಾ ಮಹಾಸತ್ವಾ ಮಹಾವ್ರತಾಃ ।
ಅಣಿಮಾಮಹಿಮಾಪ್ರಾಪ್ತಿಃ ಪ್ರಾಕಾಮ್ಯೇನ ಚ ಸಂಯುತಾಃ ॥ ೨೨ ॥

ಈಶಿತ್ವೇನ ವಶಿತ್ವೇನ ಪ್ರಾಪ್ತಿನಾಮ್ನಾ ತಥೋದಯೇ ।
ಯತ್ರ ಕಾಮಾವಸಾಯಿತ್ವಾತ್ತಥಾ ತೇಷಾಂ ಚ ವಿದ್ಯತೇ ॥ ೨೩ ॥

---

೧೮–೨೬. ಈ ರೀತಿ ಪೂಜೆಯನ್ನು ನೆರವೇರಿಸಿದ ನಂತರ ದೊರೆಯು ತಾನಾಗಿ ಪ್ರಮಥರುಗಳನ್ನು ಪ್ರಾರ್ಥಿಸಿ ಹೀಗೆ ಹೇಳಬೇಕು. ಪ್ರಭುವಾದ ವಾಸುದೇವನ ಮತ್ತು ಅವನ ರೂಪಾಂತರವೇ ಆದ ಸಂಕರ್ಷಣನ ಮತ್ತು ಪ್ರದ್ಯುಮ್ನನ, ಅನಿರುದ್ಧನ ಮತ್ತು ಬ್ರಹ್ಮ ಮತ್ತು ಶಂಕರ ಇವರುಗಳ ಹಾಗೂ ಯಮ, ಇಂದ್ರ, ವರುಣ, ಕುಬೇರ ಇವರುಗಳ ಗಣಗಳಾವುವು ಇರುತ್ತವೆಯೋ ಮತ್ತು ವಾಯು, ನಿಋತಿ, ಅಗ್ನಿ, ಚಂದ್ರ, ಸೂರ್ಯ, ಗ್ರಹಗಳು ಮತ್ತು ನಕ್ಷತ್ರಗಳು ಸ್ಕಂದ ಇವರ ಅನುಯಾಯಿಗಳಾದ ಮಹಾಬಲಶಾಲಿಗಳಾದ ಯಾವ ಯಾವ ಗಣಗಳಿರುವುವೋ ಮತ್ತು ವಿನಾಯಕನ, ಇತರ ದೇವತೆಗಳ ಯಾವ ಯಾವ ಗಣಗಳಿವೆಯೋ, ದೈತ್ಯರ ಮತ್ತು ರಾಕ್ಷಸರ ಅನುಯಾಯಿಗಳಾದ ಯಾವ ಗಣಗಳಿರುವುವೋ, ಮಹಾಬಲಶಾಲಿಗಳಾಗಿಯೂ, ಮಹಾಕಾಯವುಳ್ಳವರಾಗಿಯೂ, ಸತ್ವಗುಣಾಧಿಕರಾಗಿಯೂ, ಮಹಾವ್ರತಶಾಲಿಗಳಾಗಿಯೂ ಇರುವ ಗಣಗಳಿರಾ, ಅಣಿಮಾ, ಮಹಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶಿತ್ವ, ವಶಿತ್ವ, ಪ್ರಾಪ್ತಿ ಮುಂತಾದ ನಾನಾ ವಿಧವಾದ ಮನೋರಥಗಳಿಗೂ ಪರಿಪೂರ್ಣತೆಯನ್ನುಂಟುಮಾಡುವ ಐಶ್ವರ್ಯವೂ ಯಾವ ನಿಮ್ಮಲ್ಲಿ ತುಂಬಿರುವುದೋ ಈ ರೀತಿ ಅಷ್ಟಗುಣಗಳಿಂದಲೂ, ಅಷ್ಟೈಶ್ವರ್ಯದಿಂದಲೂ

**ಏವಮಷ್ಟಗುಣೈಶ್ವರ್ಯಸಂಯುತಾ ಭೀಮವಿಕ್ರಮಾಃ ।**
**ನಾನಾಸತ್ವಶಿರೋಗ್ರೀವಾ ನಾನಾಪ್ರಹರಣಾಯುಧಾಃ** ॥ ೨೪ ॥

**ನಾನಾವಿರಾಗವಸನಾ ನಾನಾಸತ್ವವಪುರ್ಧರಾಃ ।**
**ತಥಾ ಸಾನಾವಿಧಾಹಾರಾ ಮಹಾಚೇಷ್ಟಾಮಹಾಬಲಾಃ** ॥ ೨೫ ॥

**ಭಕ್ತಾನುಕಂಪಿನೋ ವೀರಾಃ ವರದಾಃ ಕಾಮರೂಪಿಣಃ ।**
**ಪ್ರಮಥಾ ಪರಿಗೃಹ್ಣಂತು ಉಪಕಾರಂ ನಮೋಽಸ್ತು ವಃ** ॥ ೨೬ ॥

**ಸಪುತ್ರಾಮಾತ್ಯಭೃತ್ಯೋಽಹಂ ಸದಾರಃ ಶರಣಂ ಗತಃ ।**
**ರಕ್ಷಂತು ಮಾಂ ಮಹಾಭಾಗಾಃ ಗೃಹೇಯುದ್ಧೇ ತಥಾಧ್ವನಿ ।**
**ಚಮೂನಾಂ ಪೃಷ್ಠತೋ ಗತ್ವಾ ನಾಶಯಧ್ವಂ ತಥಾ ರಿಪೂನ್** ॥ ೨೭ ॥

**ಸ್ವಪ್ನೇ ಶುಭಾಶುಭಂ ವಾಪಿ ಕಥಯಧ್ವಂ ಸಮಾಹಿತಾಃ ।**
**ವಿನಿವೃತ್ತಶ್ಚ ದಾಸ್ಯಾಮಿ ಪತ್ತಾದಭ್ಯಧಿಕಂ ಬಲಿಂ** ॥ ೨೮ ॥

---

ಕೂಡಿರುವ ಬಹಳ ಪರಾಕ್ರಮಿಗಳಾಗಿಯೂ, ಅನೇಕ ವಿಧವಾದ ಪ್ರಾಣಿಗಳ ತಲೆ ಮತ್ತು ಕತ್ತುಗಳನ್ನು ಹೊಂದಿಯೂ, ನಾನಾ ವಿಧವಾದ ಆಯುಧಧಾರಿಗಳಾಗಿಯೂ, ನಾನಾ ವಿಧವಾದ ಬಣ್ಣವುಳ್ಳ ವಸ್ತ್ರಗಳಿಂದ ಕೂಡಿಯೂ, ಬಹು ವಿಧವಾದ ಪ್ರಾಣಿಗಳ ಶರೀರಗಳನ್ನು ಹೊಂದಿಯೂ, ಹಾಗೆಯೇ ನಾನಾ ವಿಧವಾದ ಆಹಾರವಿಹಾರ ಶಾಲಿಗಳಾಗಿಯೂ, ಬಲಶಾಲಿಗಳಾಗಿಯೂ, ಭಕ್ತರಲ್ಲಿ ದಯೆಯುಳ್ಳವರಾಗಿಯೂ, ಶೂರರಾಗಿಯೂ, ವರಪ್ರದರಾಗಿಯೂ, ಕಾಮರೂಪಿಗಳಾಗಿಯೂ ಇರುವಿರಿ. ಎಲೈ ಗಣಗಳಿರಾ ನನ್ನ ಈ ಉಪಚಾರವನ್ನು ಸ್ವೀಕರಿಸಿ, ನಿಮಗೆಅನಂತ ನಮಸ್ಕಾರಗಳು

೨೭–೨೮. ಪುತ್ರರು, ಮಂತ್ರಿಗಳು, ಭೃತ್ಯರು, ಪತ್ನೀ ಇವರೊಡಗೂಡಿರುವ ಈ ನಾನು ನಿಮ್ಮಲ್ಲಿ ಶರಣಾಗತನಾಗಿರುವೆನು. ಎಲೈ ಮಹಾತ್ಮರೇ, ನೀವು ಮನೆಯಲ್ಲಿಯೂ, ಯುದ್ಧದಲ್ಲಿಯೂ, ಮಾರ್ಗದಲ್ಲಿಯೂ, ನಹ ನನ್ನನ್ನು ರಕ್ಷಿಸಿರಿ. ಸೈನ್ಯದ ಹಿಂಭಾಗದಿಂದ ಬಂದು ಶತ್ರುಗಳನ್ನು ನಾಶಪಡಿಸಿರಿ. ಸ್ವಪ್ನದಲ್ಲಿ ನನಗೆ ಉಂಟಾಗುವ ಶುಭಾಶುಭಗಳನ್ನು ಜಾಗರೂಕತೆಯಿಂದ ನನಗೆ ಹೇಳಿರಿ ನಾನು ಹಿಂತಿರುಗಿ ಬಂದೊಡನೆಯೇ ಇದಕ್ಕಿಂತಲೂ ಹೆಚ್ಚಾದ ಪೂಜೆಯನ್ನು ನಿಮಗೆ

ವಿನಿವೃತ್ತೇನ ದಾತವ್ಯಃ ಸ ಚ ಯತ್ನೇನ ಭೂಭುಜಾ ।
ಪೂರ್ವವಚ್ಚ ತಥಾ ರಾತ್ರೌ ಸ್ವಪ್ನಪ್ರಾರ್ಥನಮಿಷ್ಯತೇ ॥ ೨೯ ॥

ಷಷ್ಠೇಽಹನಿ ಜಯಸ್ನಾನಂ ಕರ್ತವ್ಯಂ ಚ ತಥಾ ಭವೇತ್ ।
ವಿಧಿರಸ್ಯಾಭಿಷೇಕಾರ್ಥಃ ಸರ್ವ ಏವ ವಿಧೀಯತೇ ॥ ೩೦ ॥

ತತೋ ಯಾತ್ರಾದಿನೇ ಪ್ರಾಪ್ತೇ ಕ್ಷೌರಕರ್ಮ ವಿವರ್ಜಯೇತ್ ।
ಮುದ್ರಣಂ ಭೇದನಂ ಚೈವ ತಥಾ ಚ ನಖಕೃಂತನಂ ॥ ೩೧ ॥

ಅಭ್ಯಂಗಂ ಗೃಹಕಾರ್ಯಂ ಚ ಕ್ರೋಧಶೋಕೌ ಚ ಕಂಕತಂ ।
ಯಾತವ್ಯಂ ಯೇನ ತೇನಾಥ ತದುಕ್ತಂ ಸ್ನಾನಮಾಚರೇತ್ ॥ ೩೨ ॥

ಸ್ನಾತಃ ಶುಕ್ಲಾಂಬರಃ ಸ್ರಗ್ವೀ ತಥಾ ಶ್ವೇತಾನುಲೇಪನಃ ।
ಚಿತ್ರಾಭರಣವಾನ್ ರಾಜಾ ದೂರ್ವಾಪಲ್ಲವಲಾಂಛನಃ ॥ ೩೩ ॥

---

ಅರ್ಪಿಸುತ್ತೇನೆ. ಹೀಗೆ ಹೇಳಿ ತಾನು ಹಿಂತಿರುಗಿ ಬಂದೊಡನೆಯೇ ಧೊರೆಯು ಹೆಚ್ಚಾದ ಪೂಜೆಯನ್ನೂ ಕೊಡಬೇಕು. ಪೂಜೆಮಾಡಿ ಮೊದಲಿನಂತೆಯೇ ರಾತ್ರಿಯಲ್ಲಿ ಶುಭಸ್ವಪ್ನವನ್ನೂ ಪ್ರಾರ್ಥಿಸಬೇಕು.

೩೦–೩೨. ಆರನೆಯದಿನ ಜಯಸ್ನಾನವನ್ನು ಮಾಡಬೇಕು. ಇದರ ವಿಧಾನವೂ ಸಹ ಅಭಿಷೇಕವಿಧಿಯಂತೆಯೇ ವಿಹಿತವಾಗಿದೆ. ಅನಂತರ ಯಾತ್ರಾ ಕಾಲವಾದ ಏಳನೆಯ ದಿನವು ಬಂದಲ್ಲಿ ಆದಿನ ಕ್ಷೌರಕರ್ಮವನ್ನು ವರ್ಜಿಸಬೇಕು. ನಿರ್ಬಂಧದಲ್ಲಿಟ್ಟು ಮುದ್ರಿಸುವುದು, ಪದಾರ್ಥಗಳನ್ನು ಒಡೆದು ಭೇದಿಸುವುದು ಮತ್ತು ಉಗುರುಗಳನ್ನು ಕತ್ತರಿಸುವುದು ಈ ಕಾರ್ಯಗಳನ್ನು ಮಾಡಬಾರದು. ಮತ್ತು ತೈಲಾಭ್ಯಂಗ, ಮನೆಯ ಇತರ ಕಾರ್ಯಗಳು, ಕೋಪ, ದುಃಖ, ಬಾಚಣಿಗೆಯಿಂದ ಬಾಚಿಕೊಳ್ಳುವುದು, ಇವುಗಳನ್ನೂ ಮಾಡಬಾರದು ಯಾವ ಸೈನ್ಯ ಸನ್ನಾಹದಿಂದ ತಾನು ವಿಜಯ ಪ್ರಸ್ಥಾನ ಮಾಡಬೇಕೋ ಅದಕ್ಕೆ ತಕ್ಕ ಸ್ನಾನವನ್ನು ನೆರವೇರಿಸಬೇಕು.

೩೩–೩೪. ಸ್ನಾನಮಾಡಿ ಶುಭ್ರವಸ್ತ್ರವನ್ನು ಧರಿಸಿ ಮಾಲಿಕೆಯನ್ನು ಧರಿಸಿ ಶುಭ್ರವಾದ ಗಂಧದಿಂದ ಅಲಂಕೃತನಾಗಿ ನಾನಾವಿಧವಾದ ಆಭರಣಗಳನ್ನೂ ಧರಿಸಿ

ಪೂಜಯಿತ್ವಾ ಮಹಾಭಾಗಂ ದೇವದೇವಂ ತ್ರಿವಿಕ್ರಮಂ ।
ಜುಹುಯಾಚ್ಚ ತಥಾ ವಹ್ನೌ ಸುಸಮಿದ್ಧೇ ಪುರೋಹಿತಃ ॥ ೩೪ ॥

ಆಯುಷ್ಯಮಭಯಂ ಚೈವ ತಥಾ ಸ್ವಸ್ತ್ಯಯನಂ ಗಣಂ ।
ಶರ್ಮವರ್ಮಗಣಂ ಚೈವ ತಥಾ ಪ್ರತಿರಥಂ ಶುಭಂ ॥ ೩೫ ॥

ಶಕುನಂ ಚ ತಥಾ ಸೂಕ್ತಂ ಸೂಕ್ತಂ ವೈಷ್ಣವಮೇವ ಚ ।
ತಥಾಗ್ನಿಲಕ್ಷಣೋತ್ಪತ್ತೌ ಶುಭೇ ಯಾಯಾನ್ಮಹೀಪತಿಃ ॥ ೩೬ ॥

ನಕ್ಷತ್ರಸ್ಯ ದಿಶಶ್ಚೈವ ನೈವೇದ್ಯಂ ಯತ್ಪ್ರಕೀರ್ತಿತಂ ।
ತದೇವ ನೃಪತಿಃ ಪ್ರಾಶ್ಯ ಯಾತ್ರಾಂ ವಿಂದ್ಯಾದ್ಯಥಾವಿಧಿ ॥ ೩೭ ॥

ಅಹೃದ್ಯಂ ಮಕ್ಷಿಕಾಕೇಶಕೀಟಯುಕ್ತಂ ವಿವರ್ಜಯೇತ್ ।
ದಗ್ಧೇ ಚ ವರ್ಜಯೇದ್ಯಾತ್ರಾಂ ದೇಯಾ ಭವತಿ ಚಾನ್ಯಥಾ ॥ ೩೮ ॥

---

(ಹಸಿರು ಹುಲ್ಲಿನ ಎಳೆ ಗರಿಕೆಯ) ಚಿಗುರಿನಿಂದ ಅಲಂಕೃತನಾಗಿ ಸರ್ವಪ್ರಭುವಾದ ತ್ರಿವಿಕ್ರಮದೇವನನ್ನು ಪೂಜಿಸಬೇಕು. ಆಗ ಪುರೋಹಿತನು ಜ್ವಲಿಸುತ್ತಿರುವ ಅಗ್ನಿಯಲ್ಲಿ ಆಯುಷ್ಯಗಣವನ್ನೂ, ಅಭಯಗಣವನ್ನೂ, ಸ್ವಸ್ತ್ಯಯನಗಣವನ್ನೂ ಶರ್ಮವರ್ಮಗಣ ಮತ್ತು ಪ್ರತಿರಥಗಣವನ್ನೂ ಉದ್ದೇಶಿಸಿ ಹೋಮಮಾಡಬೇಕು.

೩೬–೩೭. ಶಕುನಸೂಕ್ತವನ್ನೂ ವೈಷ್ಣವಸೂಕ್ತವನ್ನೂ ಜಪಿಸಬೇಕು. ಆ ಹೋಮಮಾಡಿದನಂತರ ಶುಭಲಕ್ಷಣದಿಂದ ಅಗ್ನಿಯು ಅಭಿವೃದ್ಧಿ ಹೊಂದಿದಲ್ಲಿ ಶುಭಮುಹೂರ್ತದಲ್ಲಿ ಧೊರೆಯು ವಿಜಯಯಾತ್ರೆ ಹೊರಡಬೇಕು. ನಕ್ಷತ್ರಕ್ಕೂ ದಿಕ್ಕಿಗೂ ಪೂಜಾಕಾಲದಲ್ಲಿ ಯಾವ ನೈವೇದ್ಯವು ಹೇಳಲ್ಪಟ್ಟಿದೆಯೊ ಆ ನೈವೇದ್ಯವನ್ನೇ ಸೇವಿಸಿ ಧೊರೆಯು ಯಥಾವಿಧಿಯಾಗಿ ಯಾತ್ರೆಯನ್ನು ಕೈಗೊಳ್ಳಬೇಕು.

೩೮–೪೦. ಚೆನ್ನಾಗಿಲ್ಲದೆಯೂ ಮತ್ತು ನೊಣ, ಕೂದಲು ಹುಳುಗಳು ಇವುಗಳಿಂದ ಕೂಡಿದ್ದಲ್ಲಿಯೂ ನಹ ಆಹಾರವನ್ನು ತ್ಯಜಿಸಬೇಕು. ದಗ್ಧಯೋಗದಲ್ಲಿ ಯಾತ್ರೆಯನ್ನು ಕೈಗೊಳ್ಳಬಾರದು. ಅದಿಲ್ಲದಿರುವ ಶುಭದಿನದಲ್ಲಿಯೇ ಸ್ವೀಕರಿಸಬೇಕು. ಹಾಗೆ ಹೊರಡುವ ಕಾಲದಲ್ಲಿ ರಾಜನ ಛತ್ರಚಾಮರಾದಿ ಚಿಹ್ನೆಗಳಿಗೂ,

ತತಸ್ತು ರಾಜಲಿಂಗಾನಾಂ ಚಾಯುಧಾನಾಂ ತಥೈವ ಚ ।
ನೀರಾಜನೋಕ್ತಮಂತ್ರೈಸ್ತು ಸರ್ವಾಂಸ್ತಾನಭಿಮಂತ್ರಯೇತ್ ॥ ೩೯ ॥

ದೈವವಿತ್ಸ್ಥಾಯತೋ ಭೂತ್ವಾ ರಾಜಾವಾಥ ಪುರೋಹಿತಃ ।
ತೇಷಾಂ ಸಂಪೂಜನಂ ಕೃತ್ವಾ ದೈವಜ್ಞಂ ಸಪುರೋಹಿತಂ ॥ ೪೦ ॥

ಧನೇನ ಪೂಜಯೇದ್ರಾಜಾ ದಕ್ಷಿಣಾಭಿರ್ದ್ವಿಜೋತ್ತಮಾನ್ ।
ತತಃ ಪುಣ್ಯಾಹಘೋಷೇಣ ದ್ವಿಜಾನಾಂ ಹತಕಲ್ಮಷಃ ॥ ೪೧ ॥

ಮಂಗಲಾಲಂಭನಂ ಕೃತ್ವಾ ಮಂತ್ರಮೇತಂ ನಿಶಾಮಯನ್ ।
ಆದಿತ್ಯಾ ವಸವೋ ರುದ್ರಾ ವಿಶ್ವೇದೇವಾ ಮರುದ್ಗಣಾಃ ॥ ೪೨ ॥

ಲೋಕಪಾಲಾಃ ಸಗಂಧರ್ವಾ ನದ್ಯಃ ಶೈಲಾ ಮಹೀ ದ್ವಿಜಾಃ ।
ಅಗ್ನಿಃ ಸ್ವಾಹಾ ಸ್ವಧಾ ಹೋಮಃ ಸ್ಕಂದೋ ಬ್ರಹ್ಮಾ ಪ್ರಜಾಪತಿಃ ॥ ೪೩ ॥

---

ಆಯುಧಗಳಿಗೂ ನೀರಾಜನವಿಧಿಯಲ್ಲಿ ಹೇಳಿರುವ ಮಂತ್ರಗಳಿಂದ ಅಭಿಮಂತ್ರಣವನ್ನು ನೆರವೇರಿಸಬೇಕು. ಪರಿಶುದ್ಧನಾಗಿರುವ ಆಸ್ಥಾನದ ಜ್ಯೋತಿಷಿಕನೇ ಆಗಲಿ, ರಾಜನೇ ಆಗಲಿ, ರಾಜಪುರೋಹಿತನೇ ಆಗಲಿ ಇವುಗಳ ಪೂಜೆಯನ್ನು ನೆರವೇರಿಸಬೇಕು. ಅನಂತರ ರಾಜನು ಜ್ಯೋತಿಷಿಕನನ್ನು ಪುರೋಹಿತನೊಡನೆ ಇಷ್ಟವಾದ ಧನಾದಿಗಳಿಂದ ಪೂಜಿಸಬೇಕು. ದಕ್ಷಿಣೆಗಳಿಂದ ಬ್ರಾಹ್ಮಣೋತ್ತಮರನ್ನೂ ತೃಪ್ತಿಗೊಳಿಸಬೇಕು.

೪೧-೪೪. ಅನಂತರ ಬ್ರಾಹ್ಮಣೋತ್ತಮರ ಪುಣ್ಯಾಹಘೋಷದಿಂದ ಪಾಪಕ್ಷಯಹೊಂದಿ ಮಂಗಲಕರವಾದ ಪೂರ್ಣಕುಂಭವೇ ಮೊದಲಾದ ಪದಾರ್ಥಗಳನ್ನು ಸ್ಪರ್ಶಮಾಡಿ ಆ ಬ್ರಾಹ್ಮಣೋತ್ತಮರಿಂದ ಹೇಳಲ್ಪಟ್ಟ ಈ ಮಂತ್ರಗಳನ್ನು ಕೇಳಬೇಕು. ದ್ವಾದಶಾದಿತ್ಯರೂ, ಅಷ್ಟವಸುಗಳೂ, ಏಕಾದಶ ರುದ್ರರೂ, ವಿಶ್ವೇದೇವತೆಗಳೂ, ಮರುದ್ಗಣಗಳೂ, ಲೋಕಪಾಲಕರೂ, ಗಂಧರ್ವರೂ, ನದಿಗಳೂ, ಪರ್ವತಗಳೂ, ಭೂಮಿಯೂ, ಬ್ರಾಹ್ಮಣರೂ, ಅಗ್ನಿಯೂ, ಸ್ವಾಹಾಕಾರ, ಸ್ವಧಾಕಾರ, ಹೋಮ ಇವುಗಳೂ, ಷಣ್ಮುಖನೂ, ಬ್ರಹ್ಮನೂ, ಜಗತ್ಪತಿಯಾದ ಪರಮಾತ್ಮನೂ,

ಮುಹೂರ್ತಾಸ್ತಿಥಯೋ ಭಾನಿ ವೇದಾಃ ಸಾಯನವತ್ಸರಾಃ ।
ಗಾವಃ ಸರಸ್ವತೀ ದೇವೀ ದೀರ್ಘಮಾಯುರ್ದಿಶಂತು ತೇ ॥ ೪೪ ॥

ಜಗತ್ಸೃಜೋऽಥ ಯಾ ಸಿದ್ಧಿಃ ಬಭೂವ ಬ್ರಹ್ಮಣಃ ಪುರಾ ।
ಜಗಜ್ಜಿಷ್ಣೋಶ್ಚ ಯಾ ವಿಷ್ಣೋಃ ಸಿದ್ಧಿರ್ಯಾಸೀತ್ತ್ರಿವಿಕ್ರಮೇ ॥ ೪೫ ॥

ಅಸುರೈಶ್ವರ್ಯನಾಶೇ ಚ ಬಭೂವ ತ್ರ್ಯಂಬಕಸ್ಯ ಯಾ ।
ಸಿದ್ಧಿಃ ತ್ರಿದಶವೃದ್ಧ್ಯರ್ಥಂ ತ್ರಿಪುರಾಂತಕೃತಃ ಪುರಾ ॥ ೪೬ ॥

ಶಕ್ರೇ ವೃತ್ರವಧೇ ಯಾವತ್ಸ್ಕಂದೇ ದೇವಾರಿಸಂಕ್ಷಯೇ ।
ತಾಂ ಪ್ರಾಪ್ನುಹಿ ಸದಾ ಸಿದ್ಧಿಂ ಸಾ ಚ ಯಾತ್ರಾಸ್ತು ತೇ ಸದಾ ॥ ೪೭ ॥

---

ಮುಹೂರ್ತ ತಿಥಿ ಎಂಬ ಕಾಲ ವಿಶೇಷಗಳೂ, ನಕ್ಷತ್ರಗಳೂ, ವೇದಗಳೂ, ಅಯನದಿಂದ ಕೂಡಿದ ವತ್ಸರಗಳೂ, ಗೋವುಗಳೂ, ಸರಸ್ವತೀದೇವಿ ಇವರೆಲ್ಲರೂ ನಿನಗೆ ದೀರ್ಘವಾದ ಆಯುಸ್ಸನ್ನು ಕೊಡಲಿ.

೪೫-೪೭. ಜಗತ್ತನ್ನು ಸೃಷ್ಟಿಮಾಡಿದ ಚತುರ್ಮುಖನಿಗೆ ಪೂರ್ವಕಾಲದಲ್ಲಿ ಯಾವ ವಿಧವಾದ ಸಿದ್ಧಿಯುಂಟಾಯಿತೋ, ಮತ್ತು ಜಗದ್ವಿಜಯಿಯಾದ ಮಹಾ ವಿಷ್ಣುವಿಗೆ ತ್ರಿವಿಕ್ರಮಾವತಾರ ಕಾಲದಲ್ಲಿ ಯಾವ ಸಿದ್ಧಿಯುಂಟಾಯಿತೋ, ತ್ರ್ಯಂಬಕಮೂರ್ತಿಯಾದ ರುದ್ರನಿಗೆ ತ್ರಿಪುರಾಸುರರ ಐಶ್ವರ್ಯವನ್ನು ನಾಶಪಡಿಸುವ ಕಾಲದಲ್ಲಿ ಯಾವ ಸಿದ್ಧಿಯುಂಟಾಯಿತೋ, ತ್ರಿಪುರಾಂತಕನಾದ ಆ ರುದ್ರನಿಗೆ ದೇವತೆಗಳ ಐಶ್ವರ್ಯಾಭಿವೃದ್ಧಿಮಾಡುವ ಕಾಲದಲ್ಲಿಯೂ ಸಹ ಯಾವ ಸಿದ್ಧಿಯುಂಟಾಯಿತೋ, ವೃತ್ರಾಸುರನನ್ನು ವಧಿಸುವ ಕಾಲದಲ್ಲಿ ಇಂದ್ರನಿಗೆ ಯಾವ ಸಿದ್ಧಿಯುಂಟಾಯಿತೋ, ದೇವಶತ್ರುಗಳನ್ನು ನಾಶಪಡಿಸುವಾಗ ಷಣ್ಮುಖನಿಗೂ ಸಹ ಯಾವ ಸಿದ್ಧಿಯುಂಟಾಯಿತೋ ಅಂತಹ ಸಿದ್ಧಿಯನ್ನೂ ಸಹ ನೀನು ಯಾವಾಗಲೂ ಹೊಂದಿರು. ಅಂತಹ ವಿಜಯಯಾತ್ರೆಯೇ ನಿನಗೂ ಉಂಟಾಗಲಿ.

ರಕ್ಷಂತು ಸರ್ವತಃ ಸರ್ವೇ ದೇವಾಃ ಶಕ್ರಪುರೋಗಮಾಃ ।
ಇತಿ ಚೋಕ್ತ್ವಾ ಶುಭಾಂ ವಾಚಂ ಗೃಹೀತ್ವಾ ಸಶರಂ ಧನುಃ ॥ ೪೮ ॥

ಧನ್ವನಾಗೇತಿಮಂತ್ರೇಣ ದೈವಜ್ಞಸ್ಯ ಕರಾತ್ಸ್ವಯಂ ।
ತದ್ವಿಷ್ಣೋಃ ಪರಮಿತ್ಯೇವ ಶೃಣ್ವನ್ ಮಂತ್ರಮನುತ್ತಮಂ ॥ ೪೯ ॥

ಪೈಷ್ಟೇ ರಿಪುಮುಖೇ ದದ್ಯಾತ್ಪ್ರಥಮಂ ದಕ್ಷಿಣಂ ಪದಂ ।
ಪದದ್ವಾತ್ರಿಂಶಕಂ ಗತ್ವಾ ವಿಷ್ಣುಪ್ರಾಚ್ಯಾದಿಷು ತ್ವಥ ॥ ೫೦ ॥

ನಾಗಂ ರಥಂ ಹಯಂ ಚೈವ ಯುಂಜಾನೇ ಚಾರುಹೇತ್ಕ್ರಮಾತ್ ।
ಆರುಹ್ಯ ಸುಮನಾ ಗಚ್ಛೇದ್ವಾದ್ಯಘೋಷೇಣ ಭೂರಿಣಾ ॥ ೫೧ ॥

ಸ ನಿಷ್ಕ್ರಮ್ಯ ಮಹಾಸೀಶೋ ನ ಪೃಷ್ಠಮವಲೋಕಯೇತ್ ।
ಮಂಗಲಾನಿ ತತಃ ಪಶ್ಯನ್ ಸ್ಪೃಶನ್ ಶೃಣ್ವನ್ ಶನೈರ್ವ್ರಜೇತ್ ॥ ೫೨ ॥

---

೪೮–೫೦. ಇಂದ್ರನೇ ಮೊದಲಾದ ಸಮಸ್ತ ದೇವತೆಗಳೂ ಎಲ್ಲಾ ಕಡೆಯಲ್ಲಿಯೂ ನನ್ನನ್ನು ರಕ್ಷಿಸಲಿ ಎಂದು ತಾನೂ ಶುಭಕರವಾದ ವಾಣಿಯನ್ನು ಹೇಳಿ ಧನ್ವನಾಗ ಎಂಬ ಮಂತ್ರದಿಂದ ಜ್ಯೋತಿಷಿಕನ ಹಸ್ತದಿಂದ ಬಾಣದೊಡನೆ ಕೂಡಿರುವ ಧನುಸ್ಸನ್ನು ತಾನೇ ತೆಗೆದುಕೊಂಡು ತದ್ವಿಷ್ಣೋಃಪರಂ ಎಂಬ ಮಂತ್ರರತ್ನ ಶ್ರವಣಮಾಡುತ್ತಾ ಹಿಟ್ಟಿನಿಂದ ಮಾಡಲ್ಪಟ್ಟಿರುವ ಶತ್ರುವಿನ ಮುಖಭಾಗದಲ್ಲಿ ಮೊಟ್ಟಮೊದಲು ತಾನೇ ಬಲದ ಕಾಲಿನಿಂದ ತುಳಿಯಬೇಕು. ಅನಂತರ ಆ ವಿಷ್ಣು ಮಂತ್ರದಿಂದಲೇ ಪೂರ್ವಾದಿ ದಿಕ್ಕುಗಳಲ್ಲಿ ಮೂವತ್ತೆರಡು ಹೆಜ್ಜೆಗಳನ್ನು ನಡೆದು ಸಜ್ಜುಗೊಳಿಸಿರುವ ಗಜ, ರಥ, ಅಶ್ವಾದಿಗಳನ್ನು ಕ್ರಮವಾಗಿ ಆರೋಹಣ ಮಾಡಬೇಕು

೫೧–೫೨. ಆ ರೀತಿ ಗಜಾದಿಗಳನ್ನು ಆರೋಹಣಮಾಡಿ ಸಂತುಷ್ಟವಾದ ಮನಸ್ಸಿನಿಂದ ಹೆಚ್ಚಾದ ಮಂಗಳವಾದ್ಯ ಘೋಷದೊಡನೆ ಹೊರಡಬೇಕು. ಹಾಗೆ ಹೊರಟ ಆ ಮಹಾರಾಜನು ಹಿಂದೆ ತಿರುಗಿ ನೋಡಬಾರದು. ಮಂಗಲಕರವಾದ ವಸ್ತುಗಳನ್ನು ನೋಡುತ್ತಲೂ ಸ್ಪರ್ಶಮಾಡುತ್ತಲೂ, ಮಂಗಲ ವಾದ್ಯಧ್ವನಿಯನ್ನು ಕೇಳುತ್ತಲೂ ಮೆಲ್ಲಮೆಲ್ಲಗೆ ಪ್ರಯಾಣ ಮಾಡಬೇಕು. ಹಾಗೆ ಹೊರಟ ದೊರೆಯು ಒಂದು ಹರದಾರಿಯಷ್ಟು ಮಾರ್ಗವನ್ನು ಮಾತ್ರ ಅಲ್ಲಿಂದ ಪ್ರಯಾಣಮಾಡಬೇಕು.

ಕ್ರೋಶಮಾತ್ರಂ ತತೋ ಗಚ್ಛೇನ್ನಾಧಿಕಂ ತು ಕದಾಚನ ।
ಗತ್ವಾ ದೇಶೇ ಶುಭೇ ತಿಷ್ಠೇತ್ಪೂಜಯಿತ್ವಾ ಸುರದ್ವಿಜಾನ್ ॥ ೫೩ ॥

ತತಃ ಕ್ರಮೇಣ ಗಚ್ಛೇಚ್ಚ ಪರದೇಶಂ ಮಹೀಪತಿಃ ।
ಆತ್ಮಸೈನ್ಯಾನುರೂಪೇಣ ಕೃತರಕ್ಷಃ ಪಥಾ ದ್ವಿಜ ॥ ೫೪ ॥

ತ್ರಿರಾತ್ರಮುಷಿತೋ ಗಚ್ಛೇದ್ಭೂಯೋ ನಕ್ಷತ್ರಸಂಪದಾ ।
ಯವಸೈಂಧವತೋಯಾನಾಂ ರಕ್ಷಕೋ ವಿಷದೂಷಣಾತ್ ॥ ೫೫ ॥

ಪರಾನನಭಿಮುಖೋ ಗಚ್ಛೇತ್ಪ್ರಭೂತಯವಸೈಂಧವಃ ।
ಸ್ವೈರಚಂಕ್ರಮಣಂ ಶಯ್ಯಾಂ ಭಾಂಡಪ್ರಕ್ಷೇಪಣಂ ತಥಾ ॥ ೫೬ ॥

ಭೋಜನಂ ತಂ ಸುಖಂ ಕುರ್ಯಾತ್ಪ್ರತಿಲೋಮಂ ನ ಚಾಚರೇತ್ ।
ರಾಜಾಪ್ಯಮಿತ್ರದೇಶೇ ತು ದೇಶಾಚಾರಂ ನ ಲಂಘಯೇತ್ ॥ ೫೭ ॥

---

ಅದಕ್ಕಿಂತ ಹೆಚ್ಚಾದ ದೂರವನ್ನು ಆ ದಿನ ಪ್ರಯಾಣ ಮಾಡಬಾರದು. ಹೊರಟು ಶುಭವಾದ ಪ್ರದೇಶದಲ್ಲಿ ಇಳಿದು ಅಲ್ಲಿ ನಿಂತು ದೇವತೆಗಳನ್ನೂ ಬ್ರಾಹ್ಮಣರನ್ನೂ ಪೂಜಿಸಬೇಕು.

೫೪–೫೭. ಅನಂತರ ಹಾಗೆ ಪ್ರಸ್ಥಾನಹೊಂದಿದ ದೊರೆಯು ಕ್ರಮವಾಗಿ ಪರರಾಷ್ಟ್ರಕ್ಕೆ ಪ್ರವೇಶಿಸಬೇಕು. ಮಾರ್ಗದಲ್ಲಿಯೂ ತನ್ನ ಸೈನ್ಯದ ಸ್ವರೂಪ ಪರಿಮಾಣಗಳಿಗೆ ತಕ್ಕಂತೆ ರಕ್ಷಣೆಯನ್ನೂ ಹೊಂದಿರಬೇಕು. ಮೂರುದಿವಸ ಅಲ್ಲಿ ತಂಗಿದ್ದು ಸರಿಯಾದ ನಕ್ಷತ್ರದಲ್ಲಿ ಮೇಲೆ ಹೇಳಿರುವಂತೆ ಮುಂದೆ ಹೊರಡಬೇಕು. ದಾರಿಯಲ್ಲಿ ಹುಲ್ಲು, ಸೌದೆ, ನೀರು ಮೊದಲಾದುವುಗಳಿಗೆ ಶತ್ರುಗಳಿಂದ ವಿಷ ಪ್ರಯೋಗ ಉಂಟಾಗದಂತೆ ರಕ್ಷಣ ಕಾರ್ಯವನ್ನೂ ಕೈಗೊಳ್ಳಬೇಕು. ತನ್ನ ಸೈನ್ಯಕ್ಕೆ ಬೇಕಾಗುವಷ್ಟು ತೃಣಕಾಷ್ಠಾದಿಗಳನ್ನು ಸಂಗ್ರಹಿಸಿಕೊಂಡು ಅದಕ್ಕಾಗಿ ಪರಾಪೇಕ್ಷೆಯಿಲ್ಲದಂತೆ ಹೊರಡಬೇಕು. ರಾಜಾರ್ಹವಾದ ಸುಖಸಂಚಾರ, ಶಯನ ಸಾಧನ, ಅನುಪಯುಕ್ತವಾದ ಭಾಂಡಾದಿಗಳನ್ನು ಹೊರಗೆ ಹಾಕುವಿಕೆ ಸುಖವಾದ ಭೋಜನ ಇವುಗಳನ್ನು ಯಥಾ ಸಂಪ್ರದಾಯ ನಡೆಸಬೇಕು. ವ್ಯತ್ಯಾಸವಾಗಿ ನಡೆಯಬಾರದು. ರಾಜನಾದವನು ಶತ್ರು ದೇಶದಲ್ಲಿದ್ದರೂ ತನ್ನ ದೇಶಾಚಾರವನ್ನು ಉಲ್ಲಂಘಿಸಿ ನಡೆಯಬಾರದು.

**ದೇವತಾಪೂಜನಂ ಕುರ್ಯಾನ್ನೋಚ್ಛಿಂದ್ಯಾದ್ದಾವಮತ್ರ ತು ।**
**ಕುಲಸ್ತ್ರಿಯಂ ಚ ತನ್ವೀಂ ಚ ವೃದ್ಧಾಂ ನೈವಾಪಮಾನಯೇತ್ || ೫೮ ||**

**ಕುಲೀನಮಭಿನಿಂದೇತ್ತು ನ ವೈ ನೃಪತಿವಂಶಜಂ ।**
**ನ ಕರ್ಣನಾಸಾಚ್ಛೇದಾಂಶ್ಚ ನ ತಥಾ ನೇತ್ರಭೇದನಂ ।**
**ಕಾಲವಿನ್ಮಂತ್ರಿಭಿಷಜೋರ್ವಾಕ್ಯಂ ಕುರ್ಯಾನ್ಮಹೀಪತಿಃ || ೫೯ ||**

**ತತಃ ಕ್ರಮಾತ್ಪ್ರಾಪ್ಯ ಪುರೀಂ ಸ್ವಕೀಯಾಂ**
**ಬಲಿಂ ತು ದದ್ಯಾದಧಿಕಾಂ ಪುರೋಕ್ತಾಂ ।**
**ಕುರ್ಯಾನ್ಮಹೀಂ ಯೂಪಸುರಾಲಯಾಂಕಾಂ**
**ಸ್ವರ್ಲೋಕಮಿಚ್ಛನ್ ಪೃಥಿವೀಂ ಸಮಗ್ರಾಂ || ೬೦ ||**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರ ಸಂವಾದೇ ರಾಮಂಪ್ರತಿ ಪುಷ್ಕರೋಪಾಖ್ಯಾನೇ ಯಾತ್ರಾವಿಧಿರ್ನಾಮ ಷಟ್‌ಸಪ್ತತ್ಯುತ್ತರಶತತಮೋಽಧ್ಯಾಯಃ**

---

೫೮–೬೦. ಇಷ್ಟದೇವತಾ ಪೂಜೆಯನ್ನು ತಪ್ಪದೆ ಮಾಡುತ್ತಿರಬೇಕು. ಅರಣ್ಯಗಳನ್ನು ಛೇದಿಸಬಾರದು. ಕುಲಸ್ತ್ರೀಯನ್ನೂ, ಯುವತಿಯನ್ನೂ, ವೃದ್ಧ ಸ್ತ್ರೀಯನ್ನೂ ಸಹ ಅಪಮಾನ ಪಡಿಸಬಾರದು ಕುಲೀನನಾಗಿಯೂ ರಾಜವಂಶೀಯನಾಗಿಯೂ ಇರುವ ಯಾವನನ್ನೂ ನಿಂದಿಸಬಾರದು. ಯಾವ ಶತ್ರುವಿಗಾದರೂ ಕಿವಿ, ಮೂಗು ಮೊದಲಾದುವನ್ನು ಛೇದಿಸುವುದೂ ಕಣ್ಣು ಕೀಳಿಸುವುದು. ಇಂತಹ ಪ್ರಸಂಗಗಳನ್ನು ನಡೆಸಬಾರದು ಧೊರೆಯಾದವನು ಜ್ಯೋತಿಷಿಕನ ಮತ್ತು ಮಂತ್ರಿಯ ಹಾಗೂ ವೈದ್ಯನ ಮಾತುಗಳನ್ನು ನಡೆಸಬೇಕು. ತಿರಸ್ಕರಿಸಬಾರದೆಂದು ತಾತ್ಪರ್ಯ. ಈ ರೀತಿ ವಿಜಯಯಾತ್ರೆಯನ್ನು ನೆರವೇರಿಸಿ ತನ್ನ ನಗರಕ್ಕೆ ಹಿಂದೆ ತಿರುಗಿ ಬಂದು ಮೇಲೆ ಹೇಳಿರುವಂತೆ ದೇವತೆಗಳಿಗೆ ಹೆಚ್ಚಾಗಿ ಬಲಿದಾನವನ್ನು ಮಾಡಬೇಕು. ಭೂಮಿ ಎಲ್ಲವೂ ಯಜ್ಞದ ಯೂಪಸ್ಥಂಭಗಳಿಂದಲೂ ದೇವಾಲಯಗಳಿಂದಲೂ ತುಂಬಿರುವಂತೆ ಮಾಡಬೇಕು. ಸ್ವರ್ಗಲೋಕವನ್ನು ಅಪೇಕ್ಷಿಸುವ ಧೊರೆಗೆ ಇದು ಮುಖ್ಯವಾದ ಕರ್ತವ್ಯ.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ ಯಾತ್ರಾವಿಧಿಯೆಂಬ ನೂರ ಎಪ್ಪತ್ತಾರನೆಯ ಅಧ್ಯಾಯವು ಮುಗಿದಿದೆ.

|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಸಪ್ತಸಪ್ತತ್ಯುತ್ತರಶತತಮೋಽಧ್ಯಾಯಃ

|| ರಾಮ ಉವಾಚ ||

**ಸಾಂಗ್ರಾಮಿಕಮಹಂ ತ್ವತ್ತಃ ಶ್ರೋತುಮಿಚ್ಛಾಮಿ ಭೂಭುಜಃ ।**
**ಸರ್ವಂ ವೇತ್ಸಿ ಮಹಾಭಾಗ ತ್ವಂ ದೇವ ಪರಮೇಷ್ಠಿವತ್ || ೧ ||**

|| ಪುಷ್ಕರ ಉವಾಚ ||

**ದ್ವಿತೀಯೇಽಹನಿ ಸಂಗ್ರಾಮೋ ಭವಿಷ್ಯತಿ ಯದಾ ತದಾ ।**
**ಗಜಾಶ್ವಾನ್ ಸ್ನಾಪಯೇದ್ರಾಜಾ ಸರ್ವೌಷಧಿಜಲೈಃ ಶುಭೈಃ || ೨ ||**

---

### ನೂರ ಎಪ್ಪತ್ತೇಳನೇ ಅಧ್ಯಾಯ.

೧. ಭಾರ್ಗವನು ಪುನಃ ಪ್ರಶ್ನೆ ಮಾಡುತ್ತಾನೆ, ಎಲೈ ಮಹಾತ್ಮನೇ, ದೇವತಾ ಪ್ರಕೃತಿಯಾದ ನೀನು ಚತುರ್ಮುಖನಂತೆ ಎಲ್ಲವನ್ನೂ ತಿಳಿದು ಸರ್ವಜ್ಞನಾಗಿರುತ್ತೀಯೆ. ಆದುದರಿಂದ ರಾಜರುಗಳ ಯುದ್ಧವ್ಯಾಪಾರದ ನೀತಿಯನ್ನೂ ಸಹ ನಿನ್ನಿಂದ ಕೇಳಿ ತಿಳಿಯಲು ಅಪೇಕ್ಷೆಯುಂಟಾಗುತ್ತಿದೆ. ದಯವಿಟ್ಟು ಹೇಳಬೇಕು. ಇದಕ್ಕೆ ಉತ್ತರವಾಗಿ ಪುಷ್ಕರನು ಹೇಳುತ್ತಾನೆ.

೨–೪. ಯುದ್ಧವು ನಾಳೆ ಉಂಟಾಗುತ್ತದೆ ಎಂದು ತಿಳಿದೊಡನೆಯೇ ಮೊದಲನೆಯ ದಿನ ರಾಜನಾದವನು ಆನೆ ಕುದುರೆಗಳನ್ನು ಸರ್ವೌಷಧಗಳಿಂದ

**ಗಂಧಮಾಲ್ಯೈರಲಂಕುರ್ಯಾತ್ಪೂಜಯೇಚ್ಚ ಯಥಾವಿಧಿ ।**
**ನೃಸಿಹ್ಮಂ ಪೂಜಯೇದ್ವಿಷ್ಣುಂ ರಾಜಲಿಂಗಾನ್ಯಶೇಷತಃ　　॥ ३ ॥**

**ಛತ್ರಂ ಧ್ವಜಂ ಪತಾಕಾಶ್ಚ ಧರ್ಮಾಂಶ್ಚೈವ ಮಹಾಭುಜ ।**
**ಆಯುಧಾನಿ ಚ ಸರ್ವಾಣಿ ತಥಾ ಪೂಜ್ಯಾನಿ ಭೂಭುಜಾ　　॥ ೪ ॥**

**ತೇಷಾಂ ಸಂಪೂಜನಂ ಕೃತ್ವಾ ರಾತ್ರೌ ಪ್ರಮಥಪೂಜನಂ ।**
**ಕೃತ್ವಾ ತು ಪ್ರಾರ್ಥಯೇದ್ರಾಜಾ ವಿಜಯಾಯೇತರೋ ಯಥಾ　　॥ ೫ ॥**

**ಪ್ರಮಥಾಂಶ್ಚ ಸಹಾಯಾರ್ಥೇ ಧರಣಿಂ ಚ ಮಹಾಭುಜ ।**
**ಭಿಷಕ್ಪುರೋಹಿತಾಮಾತ್ಯಮಂತ್ರಿಮಧ್ಯೇ ತಥಾ ಸ್ವಪೇತ್　　॥ ೬ ॥**

**ಸಂಯತೋ ಬ್ರಹ್ಮಚಾರೀ ಚ ನೃಸಿಹ್ಮಂ ಸಂಸ್ಮರನ್ ಹರಿಂ ।**
**ರಾತ್ರೌ ದೃಷ್ಟೇ ಶುಭೇ ಸ್ವಪ್ನೇ ಸಮರಾರಂಭಮಾಚರೇತ್　　॥ ೭ ॥**

---

ಕೂಡಿದ ಶುಭಕರವಾದ ಜಲದಿಂದ ಸ್ನಾನಮಾಡಿಸಬೇಕು. ಗಂಧ ಪುಷ್ಪಾದಿಗಳಿಂದ ಅವುಗಳಿಗೆ ಅಲಂಕಾರಮಾಡಿ ಯಥಾವಿಧಿಯಾಗಿ ಪೂಜಿಸಬೇಕು. ಮಹಾವಿಷ್ಣುವಿನ ನೃಸಿಂಹ ಮೂರ್ತಿಯನ್ನೂ ಛತ್ರಧ್ವಜ ಪತಾಕೆ ಮುಂತಾದ ರಾಜ ಚಿಹ್ನೆಗಳನ್ನೂ ಮತ್ತು ಇತರ ರಾಜರ ಧರ್ಮಕ್ಕೆ ಶೇಖರಿಸಿದ ವಸ್ತುಗಳನ್ನೂ ಸಹ ಪೂಜಿಸಬೇಕು. ಎಲ್ಲಾ ಆಯುಧಗಳನ್ನೂ ಸಹ ವಿಶೇಷವಾಗಿ ಪೂಜಿಸಬೇಕು.

೫-೬. ಈ ರೀತಿ ಆಯುಧಾದಿಗಳ ಪೂಜೆಯನ್ನು ನೆರವೇರಿಸಿ ರಾತ್ರಿಯಲ್ಲಿ ಪ್ರಮಥ ಗಣಗಳನ್ನು ಪೂಜಿಸಬೇಕು ಪೂಜಿಸಿದ ನಂತರ ವಿಜಯಾರ್ಥಿಯಾದ ರಾಜನು ಸಾಮಾನ್ಯ ಜನರಂತೆ ಪ್ರಮಥರನ್ನೂ ಭೂಮಿಯನ್ನೂ ಸಹ ತನ್ನ ಸಹಾಕ್ಕಾಗಿ ಪ್ರಾರ್ಥಿಸಬೇಕು. ಹಾಗೆ ಪ್ರಾರ್ಥಿಸಿ ಆ ರಾತ್ರಿಯಲ್ಲಿ ವೈದ್ಯರು ಪುರೋಹಿತರು ಅಮಾತ್ಯರು ಮಂತ್ರಿಗಳು ಇವರ ಮಧ್ಯದಲ್ಲಿ ಜಿತೇಂದ್ರಿಯನಾಗಿಯೂ ಬ್ರಹ್ಮಚರ್ಯದಿಂದ ಕೂಡಿಯೂ ಇದ್ದು ನೃಸಿಂಹನನ್ನು ಸ್ಮರಿಸುತ್ತಾ ಮಲಗಬೇಕು.

೭-೯. ರಾತ್ರಿಯಲ್ಲಿ ಶುಭಕರವಾದ ಸ್ವಪ್ನವನ್ನು ನೋಡಿದಲ್ಲಿ ತಾನು ಯುದ್ಧೋದ್ಯೋಗವನ್ನು ನಡೆಸಬೇಕು. ಹಾಗೆ ಯುದ್ಧಕ್ಕಾಗಿ ಸಿದ್ಧನಾದ ರಾಜನು ರಾತ್ರಿಯ ಕೊನೆಯ ಭಾಗದಲ್ಲೇ ಎದ್ದು ಸರ್ವೌಷಧಿಗಳಿಂದ ಕೂಡಿದ ಜಲದಲ್ಲಿ ಸ್ನಾನ

ರಾತ್ರಿಶೇಷೇ ಸಮುತ್ಥಾಯ ಸ್ನಾತಃ ಸರ್ವೌಷಧೀಜಲೈಃ ।
ಪೂಜಯಿತ್ವಾ ನೃಸಿಹ್ಮಂ ತು ವಾಹನಾಢ್ಯಮಶೇಷತಃ ॥ ೮ ॥

ಪುರೋಧಸಾ ಹುತಂ ಪಶ್ಯೇಜ್ಜ್ವಲಿತಂ ಜಾತವೇದಸಂ ।
ಪುರೋಧಾಃ ಪೂರ್ವವತ್ತತ್ರ ಮಂತ್ರಾಂಸ್ತು ಜುಹುಯಾತ್ತತಃ ॥ ೯ ॥

ದಕ್ಷಿಣಾಭಿಃ ಶುಚಿರ್ವಿಪ್ರಾನ್ ಪೂಜಯೇತ್ಪೃಥಿವೀಪತಿಃ ।
ತತೋಽನುಲಿಂಪೇದ್ಗಾತ್ರಾಣಿ ಗಂಧದ್ವಾರೇತಿ ಪಾರ್ಥಿವಃ ॥ ೧೦ ॥

ಚಂದನಾಗುರುಕರ್ಪೂರಕಾಂತಾಕಾಲೀಯಕೈಃ ಶುಭೈಃ ।
ಮೂರ್ತಿಂ ಕಂಠೇ ಸಮಾಲಭ್ಯ ರೋಚನಾಂ ಚ ತಥಾ ಶುಭಾಂ ॥ ೧೧ ॥

ಆಯುಷ್ಯಂ ವರ್ಚಸಂ ಚೈವ ಮಂತ್ರೇಣಾನೇನ ಮಂತ್ರಿತಂ ।
ಅಲಂಕರಣಮಾಬಧ್ಯಾಚ್ಛ್ರಿಯಂ ಧಾತುರಿತಿಸ್ರಜಂ ॥ ೧೨ ॥

---

ಮಾಡಿ ಎಲ್ಲಾ ವಾಹನಗಳೊಡನೆ ನೃಸಿಂಹನನ್ನು ಪೂಜಿಸಿ ಪುರೋಹಿತನಿಂದಹೋಮ ಮಾಡಲ್ಪಟ್ಟು ಜ್ವಲಿಸುತ್ತಿರುವ ಅಗ್ನಿಯನ್ನು ನೋಡಬೇಕು. ಪುರೋಹಿತನೂ ಸಹ ನೊದಲು ಹೇಳಿರುವ ಮಂತ್ರಗಳಿಂದ ಎಲ್ಲಾ ಹೋಮಗಳನ್ನೂ ಮಾಡಬೇಕು. ಇದಾದ ನಂತರ ರಾಜನು ಶುಚಿಯಾಗಿದ್ದು ಬ್ರಾಹ್ಮಣೋತ್ತಮರನ್ನು ದಕ್ಷಿಣಾದಿಗಳಿಂದ ತೃಪ್ತಿಪಡಿಸಿ ಪೂಜಿಸಬೇಕು.

೧೦-೧೨. ಅನಂತರ ಧೊರೆಯು ಗಂಧದ್ವಾರಾಂ ಎಂಬ ಮಂತ್ರದಿಂದ ಅಗುರು ಚಂದನ ಪಚ್ಚೆ ಕರ್ಪೂರ ರಮ್ಯವಾದ ಕರಿಯ ಅಗಿಲು ಇತ್ಯಾದಿ ಸುಗಂಧಿ ದ್ರವ್ಯಗಳನ್ನು ಅವಯವಗಳಿಗೆ ಲೇಪಿಸಿಕೊಳ್ಳಬೇಕು. ಆಯುಷ್ಯಂ ವರ್ಚಸಂ ಎಂಬ ಮಂತ್ರಗಳಿಂದ ಅಭಿಮಂತ್ರಿಸಿ ತನ್ನ ಕಂಠಸ್ಥಲದಲ್ಲಿ ಶುಚಿಕರವಾದ ಗೋರೋಚನವನ್ನೂ ಹಚ್ಚಿಕೊಳ್ಳಬೇಕು. ಶ್ರಿಯಂ ಧಾತುಃ ಎಂಬ ಮಂತ್ರದಿಂದ ಅಲಂಕಾರಕ್ಕಾಗಿ ಮಾಲಿಕೆಯನ್ನೂ ಧರಿಸಬೇಕು. ಯಾ ಓಷಧಯಃ ಎಂಬ ಮಂತ್ರದಿಂದ ಶುಭಕರವಾದ ಓಷಧಿಗಳನ್ನೂ ಧರಿಸಬೇಕು.

ಯಾ ಓಷಧಯ ಇತ್ಯೇವಂ ಧಾರಯೇದೋಷಧೀಃ ಶುಭಾಃ ।
ನವೋ ನವೇತಿ ವಸ್ತ್ರಂ ಚ ಕಾರ್ಪಾಸಂ ಬಿಭೃಯಾಚ್ಛುಭಂ ॥ ೧೩ ॥

ಐಂದ್ರಾಗ್ನೇತಿ ತತಃ ಚರ್ಮ ಧನ್ವನಾಗೇತಿ ಸ್ವೈ ಧನುಃ ।
ತತೋ ರಾಜ್ಞಃ ಸಮಾದದ್ಯಾತ್ಸಶರಂತ್ವಭಿಮಂತ್ರಿತಂ ॥ ೧೪ ॥

ಕುಂಜರಂ ವಾ ರಥಂ ಚಾಶ್ವಮಾರುಹೇದಭಿಮಂತ್ರಿತಂ ।
ಆರುಹ್ಯ ಶಿಬಿರಾದ್ರಾಜಾ ನಿಷ್ಕ್ರಮ್ಯ ಸಮಯೇ ಶುಭೇ ॥ ೧೫ ॥

ದೇಶೇತ್ವದೃಶ್ಯಃ ಶತ್ರೂಣಾಂ ಕುರ್ಯಾತ್ಪ್ರಕೃತಿಕಲ್ಪನಾಂ ।
ಸಂಹತಾನ್ ಯೋಧಯೇದಲ್ಪಾನ್ ಕಾಮಂ ವಿಸ್ತಾರಯೇದ್ಬಹೂನ್ ॥೧೬॥

ಸೂಚೀಮುಖಮನೀಕಂ ಸ್ಯಾದಲ್ಪಾನಾಂ ಬಹುಭಿಸ್ಸಹ ।
ವ್ಯೂಹಾಃ ಪ್ರಾಣ್ಯಂಗರೂಪಾಶ್ಚ ದ್ರವ್ಯರೂಪಾಶ್ಚ ಕಲ್ಪಿತಾಃ ॥ ೧೭ ॥

---

೧೩–೧೫. ನವೋನವೋ ಎಂಬ ಮಂತ್ರದಿಂದ ಮಂಗಳಕರವಾದ ಹತ್ತಿಯ ಬಟ್ಟೆಯನ್ನು ಧರಿಸಬೇಕು. ಐಂದ್ರಾಗ್ನ ಎಂಬ ಮಂತ್ರದಿಂದ ಗುರಾಣಿಯನ್ನೂ ಧನ್ವನಾಗ ಎಂಬ ಮಂತ್ರದಿಂದ ಧನುಸ್ಸನ್ನೂ ಸಹ ಅಭಿಮಂತ್ರಿಸಿ ಬಾಣಗಳೊಡನೆ ರಾಜನಿಗೆಕೊಡಬೇಕು. ಅನಂತರ ಅಭಿಮಂತ್ರಿತವಾದ ಆನೆಯನ್ನಾಗಲಿ ರಥವನ್ನಾಗಲಿ ಅರೋಹಣ ಮಾಡಬೇಕು. ಈ ರೀತಿ ವಾಹನಾ ರೂಢನಾಗಿ ಶುಭಲಗ್ನದಲ್ಲಿ ತನ್ನ ಸೇನಾ ಶಿಬಿರದಿಂದ ಹೊರಗೆ ಹೊರಟು ಶತ್ರುಗಳಿಗೆ ಅದೃಶ್ಯವಾಗಿರುವ ಸ್ಥಲದಲ್ಲಿ ಯುದ್ಧಸಾಮಗ್ರಿಗಳ ಕಲ್ಪನೆಯನ್ನು ಸಜ್ಜುಗೊಳಿಸಬೇಕು.

೧೬–೧೮ ತನ್ನ ಸೈನ್ಯವು ಸ್ವಲ್ಪವಾಗಿ ಇದ್ದಲ್ಲಿ ಆ ಸೈನ್ಯವನ್ನು ಒಟ್ಟುಗೂಡಿಸಿಯೇ ಯುದ್ಧಕ್ಕೆ ಕಳುಹಿಸಬೇಕು. ಸೈನ್ಯಸಂಖ್ಯೆಯು ಹೆಚ್ಚಾಗಿದ್ದಲ್ಲಿ ಬಹುಮಟ್ಟಿಗೂ ವಿಸ್ತರಿಸಿಯೇ ಯುದ್ಧಹೂಡಬೇಕು. ಅಲ್ಪಸಂಖ್ಯೆಯುಳ್ಳ ಸೈನ್ಯಕ್ಕೆ ಬಹುಸಂಖ್ಯೆಯುಳ್ಳ ಶತ್ರುಗಳೊಡನೆ ಯುದ್ಧ ಒದಗಿದಲ್ಲಿ ಆಗ ಸೂಚೀಮುಖವೆಂಬ ಸೇನಾಸನ್ನಿವೇಶವನ್ನು ರಚಿಸಬೇಕು. ವ್ಯೂಹಗಳೆಂದರೆ ಪ್ರಾಣ್ಯಂಗರೂಪದಲ್ಲಿಯಾಗಲಿ ಯಾವುದಾದರೊಂದು ಪದಾರ್ಥದ ರೂಪದಲ್ಲಿ ಯಾಗಲಿ ಕಲ್ಪಿಸಲ್ಪಡುವ ಸೇನಾ

**ಗಾರುಡೋ ಮಕರವ್ಯೂಹಃ ಚಕ್ರಂ ಶ್ಯೇನಸ್ತಥೈವ ಚ ।**
**ಅರ್ಧಚಂದ್ರಶ್ಚ ಚಂದ್ರಶ್ಚ ಶಕಟವ್ಯೂಹ ಏವ ಚ ॥ ೧೮ ॥**

**ವ್ಯೂಹಶ್ಚ ಸರ್ವತೋಭದ್ರಃ ಸೂಚೀವ್ಯೂಹಸ್ತಥೈವ ಚ ।**
**ಪದ್ಮಶ್ಚ ಮಂಡಲವ್ಯೂಹಃ ಪ್ರಾಧಾನ್ಯೇನ ಪ್ರಕೀರ್ತಿತಾಃ ॥ ೧೯ ॥**

**ವ್ಯೂಹಾನಾಮಥ ಸರ್ವೇಷಾಂ ಪಂಚಧಾ ಸೈನ್ಯಕಲ್ಪನಾ ।**
**ದ್ವೌ ಪಕ್ಷೌ ಬಂಧಪಕ್ಷೌ ದ್ವಾ ವೌರಸ್ಯಃ ಪಂಚಮೋ ಭವೇತ್ ॥ ೨೦ ॥**

**ಅನೇನ ಯದಿ ವಾ ದ್ವಾಭ್ಯಾಂ ಭಾಗಾಭ್ಯಾಂ ಯುದ್ಧಮಾಚರೇತ್ ।**
**ಭಾಗತ್ರಯಂ ಸ್ಥಾಪಯೇತ್ತು ತೇಷಾಂ ರಕ್ಷಾರ್ಥಮೇವ ಚ ॥ ೨೧ ॥**

**ನ ವ್ಯೂಹೇ ಕಲ್ಪನಾ ಕಾರ್ಯಾ ರಾಜ್ಞೋ ಭವತಿ ಕರ್ಹಿಚಿತ್ ।**
**ಪತ್ರಚ್ಛೇದೇ ಫಲಚ್ಛೇದೇ ವೃಕ್ಷಚ್ಛೇದಾವಕಲ್ಪನೇ ॥ ೨೨ ॥**

---

ಸನ್ನಿವೇಶ. ಅವುಗಳಲ್ಲಿ ಗಾರುಡವ್ಯೂಹ, ಮಕರವ್ಯೂಹ, ಚಕ್ರವ್ಯೂಹ, ಶ್ಯೇನವ್ಯೂಹ, ಅರ್ಧಚಂದ್ರವ್ಯೂಹ, ಶಕಟವ್ಯೂಹ, ಸರ್ವತೋಭದ್ರವ್ಯೂಹ, ಸೂಚೀವ್ಯೂಹ, ಮತ್ತು

೧೯–೨೧. ಪದ್ಮವ್ಯೂಹ, ಮಂಡಲವ್ಯೂಹ, ಇವುಗಳು ಮುಖ್ಯವ್ಯೂಹಗಳೆಂದು ಹೇಳಲ್ಪಟ್ಟಿವೆ. ಈ ವಿಧವಾದ ವ್ಯೂಹಗಳಿಗೂ ಐದು ವಿಧವಾದ ಸೈನಗಳನ್ನು ಕಲ್ಪಿಸಬೇಕು. ರೆಕ್ಕೆಗಳಂತಿರುವ ಭಾಗಗಳೆರಡು ರೆಕ್ಕೆಗಳ ಬುಡಕ್ಕೆ ಸೇರಿದ ಭಾಗಗಳೆರಡು ವಕ್ಷಃಪ್ರದೇಶವು (ಮಧ್ಯಭಾಗ) ಐದನೆಯದು. ಈ ರೀತಿ ಐದುಭಾಗವಾಗಿ ವಿಭಾಗಿಸಿ ಕಲ್ಪಿಸಲ್ಪಟ್ಟ ಸೈನ್ಯಗಳಲ್ಲಿ ಒಂದು ಭಾಗವನ್ನು ಅಥವಾ ಎರಡು ಭಾಗವನ್ನು ಮಾತ್ರ ಯುದ್ಧಕ್ಕೆ ಉಪಯೋಗಿಸಬೇಕು. ಉಳಿದ ಮೂರುಭಾಗಗಳನ್ನು ರಕ್ಷಣೆಗಾಗಿ ಸಜ್ಜುಗೊಳಿಸಿಯೇ ಇರಬೇಕು.

೨೨–೨೩. ರಾಜನು ಯಾವಸಂದರ್ಭದಲ್ಲಿಯೂ ವ್ಯೂಹಕಲ್ಪನೆಯಲ್ಲಿ ಸೇರಿರಬಾರದು. ಏತಕ್ಕೆಂದರೆ ರಾಜನು ಬೇರಿನಂತೆ ಮೂಲಸ್ಥಾನಕ್ಕೆ ಸೇರಿದವನು. ಮರದಲ್ಲಿ ಎಲೆಗಳನ್ನು ಕಡಿದುಹಾಕಿದರೂ ಫಲಗಳನ್ನು ಕಡಿದುಹಾಕಿದರೂ ಮರವನ್ನೇ ಕಡಿದುಹಾಕಿದರೂ ಅದು ಪುನಃ ಚಿಗುರುತ್ತದೆ. ಬೇರನ್ನು ತೆಗೆದುಹಾಕಿದಲ್ಲಿ ಮಾತ್ರ

**ಪುನಃ ಪ್ರರೋಹಮಾಯಾತಿ ಮೂಲಚ್ಛೇದೇ ವಿನಶ್ಯತಿ ।**
**ಸ್ವಯಂ ರಾಜ್ಞಾ ನ ಯೋದ್ಧವ್ಯಮಪಿ ಸರ್ವಾಸ್ತ್ರಶಾಲಿನಾ ॥ ೨೩ ॥**

**ನಿತ್ಯಂ ಲೋಕೇ ಹಿ ದೃಶ್ಯಂತೇ ಶಕ್ತೇಭ್ಯಃ ಶಕ್ತಿಮತ್ತರಾಃ ।**
**ಸೈನ್ಯಸ್ಯ ಪಶ್ಚಾತ್ತಿಷ್ಠೇತ್ತು ಕ್ರೋಶಮಾತ್ರೇ ಮಹೀಪತಿಃ ॥ ೨೪ ॥**

**ಭಗ್ನಸಂಧಾರಣಂ ತತ್ರ ಯೋಧಾನಾಂ ಪರಿಕೀರ್ತಿತಂ ।**
**ಪ್ರಧಾನಭಂಗೇ ಸೈನ್ಯಸ್ಯ ನಾವಸ್ಥಾನಂ ವಿಧೀಯತೇ ॥ ೨೫ ॥**

**ನ ಭಗ್ನಾನ್ ಪೀಡಯೇಚ್ಛತ್ರೂನ್ ಏಕಾಯನಗತಾಹಿ ತೇ ।**
**ಮರಣೇ ನಿಶ್ಚಿತಾಸ್ಸರ್ವೇ ಹನ್ಯುಃ ಶತ್ರೂಂಶ್ಚ ಮೂರಪಿ ॥ ೨೬ ॥**

**ಶಠಾ ಭಂಗಚ್ಛಲೇನಾಪಿ ನಯಂತಿ ಸ್ವಭುವಂ ಪರಾನ್ ।**
**ತೇಷಾಂ ಸ್ವಭೂಮಿಸಂಸ್ಥಾನಾಂ ವಧಃ ಸ್ಯಾತ್ಸುಕರಸ್ತದಾ ॥ ೨೭ ॥**

---

ನಾಶವನ್ನೇ ಹೊಂದುತ್ತದೆ. ರಾಜನು ಸರ್ವಶಸ್ತ್ರಾಸ್ತ್ರಶಾಲಿಯಾಗಿದ್ದರೂ ನಹ ತಾನಾಗಿ ಯಾವಾಗಲೂ ಯುದ್ಧಮಾಡಬಾರದ ಲೋಕದಲ್ಲಿ ಸಮರ್ಥರಾಗಿರುವವರಿಗಿಂತಲೂ ಹೆಚ್ಚು ಸಾಮರ್ಥ್ಯಉಳ್ಳವರು ಯಾವಾಗಲೂ ಇದ್ದೇ ಇರುತ್ತಾರೆಂಬುದನ್ನು ನಾವು ನಿತ್ಯವೂ ನೋಡುತ್ತಿದ್ದೇವೆ.

೨೪–೨೬. ಯುದ್ಧಕಾಲದಲ್ಲಿ ರಾಜನು ಸೈನ್ಯದ ಹಿಂಭಾಗದಲ್ಲಿ ಒಂದು ಹರದಾರಿಯ ದೂರದಲ್ಲಿ ಇರಬೇಕು. ಆಸ್ಥಳದಲ್ಲಿಯೇ ಯುದ್ಧದಲ್ಲಿ ಅಂಗಭಂಗ ಹೊಂದಿದ ಯೋಧರಿಗೆ ಚಿಕಿತ್ಸೆಯೇ ಮೊದಲಾದವುಗಳನ್ನು ನಡೆಸಲು ಸ್ಥಳವನ್ನು ಏರ್ಪಡಿಸಿರಬೇಕು. ಪ್ರಧಾನಪುರುಷನಿಗೆ ಅಪಘಾತ ಉಂಟಾದಲ್ಲಿ ಆ ಸೈನ್ಯವು ಅಲ್ಲಿ ಇರಕೂಡದು ಯುದ್ಧದಲ್ಲಿ ಅಪಘಾತಕ್ಕೀಡಾದ ಶತ್ರುಗಳನ್ನು ಬಹಳವಾಗಿ ಪೀಡಿಸಬಾರದು, ಅವರು ತನ್ನ ಸ್ವಾಮಿಯುಪಕ್ಷದಲ್ಲಿ ವಿಶ್ವಾಸಿಗಳಾಗಿರುವುದರಿಂದ ತನ್ನ ಸ್ವಾಮಿಯ ಸೇವೆಗಾಗಿ ಮರಣಹೊಂದುವುದಕ್ಕೂ ಸಿದ್ಧರಾಗಿರುವುದರಿಂದ ಸ್ವಶರೀರರಕ್ಷಣೆಯನ್ನು ಅನಾದರಿಸಿ ತಿರುಗಿಬಿದ್ದು ಶತ್ರುಗಳನ್ನೂ ಅವರ ಸೈನ್ಯವನ್ನೂ ನಾಶವಡಿಸಿಯಾರು.

೨೭–೨೮. ಧೂರ್ತರಾದ ಕೆಲವು ಶತ್ರುಗಳು ತಾವು ಸೋತಿರುವೆವೆಂಬ ಕಪಟವನ್ನು ಹೂಡಿ ಪ್ರತಿಪಕ್ಷಸೈನ್ಯವನ್ನು ತಮ್ಮ ದೇಶಕ್ಕೆ ಬರುವಂತೆ ಮಾಡಿಕೊಳ್ಳುತ್ತಾರೆ.

**ನ ಸಂಹತಾರ್ತ್ತವಿರಲಾನ್ ಯೋಧಾನ್ ವ್ಯೂಹೇ ಪ್ರಕಲ್ಪಯೇತ್ ।**
**ಆಯುಧಾನಾಂ ತು ಸಂಮರ್ದೋ ಯಥಾ ನ ಸ್ಯಾತ್ಪರಸ್ಪರಂ ॥ ೨೮ ॥**

**ತಥಾ ತು ಕಲ್ಪನಾ ಕಾರ್ಯಾ ಯೋಧಾನಾಂ ಭೃಗುನಂದನ ।**
**ಭೇತ್ತುಕಾಮಃ ಪರಾನೀಕಂ ಸಂಹತ್ಯೈರೇವ ಭೇದಯೇತ್ ॥ ೨೯ ॥**

**ಭೇದರಕ್ಷಾಪರೇಣಾಪಿ ಕರ್ತವ್ಯಾ ಸಂಹತಿಸ್ತಥಾ ।**
**ಸ್ವೇಚ್ಛಯಾ ಕಲ್ಪಯೇದ್ವ್ಯೂಹಂ ಜ್ಞಾತ್ವಾ ವಾ ರಿಪುಕಲ್ಪಿತಂ ॥ ೩೦ ॥**

**ವ್ಯೂಹೇ ಭೇದಾವಹಂ ಕುರ್ಯಾದ್ರಿಪುವ್ಯೂಹಸ್ಯ ಪಾರ್ಥಿವಃ ।**
**ಗಜಸ್ಯ ದೇಯಾ ರಕ್ಷಾರ್ಥಂ ಚತ್ವಾರಸ್ತು ರಥಾ ದ್ವಿಜ ॥ ೩೧ ॥**

**ರಥಸ್ಯ ಚಾಶ್ವಾಶ್ಚತ್ವಾರೋಽಶ್ವಸ್ಯ ತಸ್ಯ ಚ ವರ್ಮಿಣಃ ।**
**ವರ್ಮಿಭಿಶ್ಚ ಸಮಾಸ್ತತ್ರ ಧನ್ವಿನಃ ಪರಿಕೀರ್ತಿತಾಃ ॥ ೩೨ ॥**

---

ಏತಕ್ಕೆಂದರ ತಮ್ಮ ದೇಶಕ್ಕೆ ಒಯ್ಯಲ್ಪಟ್ಟ ಅವರ ವಧವು ತಮಗೆ ಅನಾಯಾಸಸಾಧ್ಯವೆಂಬ ಭಾವನೆಯಿಂದ ಶತ್ರುಗಳಿಂದ ಏಟುತಿಂದವರನ್ನೂ ಭಯದಿಂದ ದೀನರಾಗಿರುವವರನ್ನೂ ಚಲಾಪಿಲ್ಲಿಯಾಗಿ ಪಲಾಯನಮಾಡುವ ಸ್ವಭಾವದವರನ್ನೂ ಸಹ ಯೋಧರ ಗುಂಪಿನಲ್ಲಿ ವ್ಯೂಹಕ್ಕೆ ಸೇರಿಸಬಾರದು. ವ್ಯೂಹಗಳನ್ನು ರಚಿಸುವಾಗ ಯೋಧರ ಆಯುಧಗಳಿಗೆ ಪರಸ್ಪರ ಸಂಘರ್ಷ ಉಂಟಾಗದಂತೆ ವ್ಯೂಹಗಳನ್ನು ರಚಿಸಬೇಕು.

೨೯-೩೨. ಶತ್ರುಸೈನ್ಯವನ್ನು ಭೇದಿಸಲು ಇಚ್ಛಿಪಡುವ ರಾಜನು ಗುಂಪುಗುಂಪಾಗಿರುವ ಸೈನ್ಯದೊಡನೆ ನುಗ್ಗಿಯೇ ಭೇದಿಸಬೇಕು. ಶತ್ರುಗಳಿಂದ ಸಂಭವಿಸಬಹುದಾದ ತನ್ನ ಸೈನ್ಯಭೇದನವನ್ನೂ ನಹ ಒಟ್ಟುಗೂಡಿನಿಂತೇ ತಪ್ಪಿಸಕೊಳ್ಳಬೇಕು. ವ್ಯೂಹರಚನೆ ಮಾಡುವಾಗ ಪರರ ಅಭಿಪ್ರಾಯವನ್ನು ನಿರೀಕ್ಷಿಸದೆ ತನ್ನ ಇಚ್ಛೆ ಬಂದಂತೆ ಕಲ್ಪಿಸಬೇಕು. ಅಥವಾ ಶತ್ರುವಿನಿಂದ ಕಲ್ಪಿತವಾದ ವ್ಯೂಹವನ್ನು ತಿಳಿದು ಅದಕ್ಕೆ ತಕ್ಕಂತೆ ಕಲ್ಪಿಸಬೇಕು. ಒಟ್ಟಿನಲ್ಲಿ ಶತ್ರುವ್ಯೂಹಕ್ಕಿಂತಲೂ ವಿಲಕ್ಷಣವಾಗಿಯೇ ತನ್ನ ಸೈನ್ಯವ್ಯೂಹವಿರಬೇಕು. ಗಜಗಳ ರಕ್ಷಣೆಗಾಗಿ ನಾಲ್ಕು ರಥಗಳನ್ನೂ ಏರ್ಪಡಿಸಿರಬೇಕು. ರಥಗಳ ರಕ್ಷಣೆಗಾಗಿ ನಾಲ್ಕು ಕುದುರೆಗಳನ್ನೂ ಆ ಕುದುರೆಗಳ ರಕ್ಷಣೆಗಾಗಿ ಕವಚಧಾರಿಗಳನ್ನೂ ಆ ಕವಚಿಗಳ ರಕ್ಷಣಕ್ಕಾಗಿ ಅವರ ಸಮಸಂಖ್ಯೆಯುಳ್ಳ ಧನುರ್ಧಾರಿಗಳನ್ನೂ ಏರ್ಪಡಿಸಬೇಕು.

**ಪುರಸ್ತಾಚ್ಚ ನಿರ್ಗಣೋ ದೇಯಾ ದೇಯಾಸ್ತದನು ಧನ್ವಿನಃ ।**
**ಧನ್ವಿನಾಮನು ಚಾಶ್ವೀಯಂ ರಥಾಂಸ್ತದನು ಯೋಜಯೇತ್ ॥ ೩೩ ॥**

**ರಥಾನಾಂ ಕುಂಜರಾಶ್ಚಾನು ದಾತವ್ಯಾಃ ಪೃಥಿವೀಕ್ಷಿತಾ ।**
**ಪದಾತಿಕುಂಜರಾಶ್ವಾನಾಂ ವರ್ಮಕಾರ್ಯಂ ಪ್ರಯತ್ನತಃ ॥ ೩೪ ॥**

**ಅವರ್ಮಯಿತ್ವಾ ಯೋ ವಾಹಂ ಚಾತ್ಮಾನಂ ವರ್ಮಯೇನ್ನರಃ ।**
**ಸ ರಾಮ ನರಕಂ ಯಾತಿ ಸ್ವಕೃತೇನಾಪಿ ಕರ್ಮಣಾ ॥ ೩೫ ॥**

**ಶೂರಾಃ ಪ್ರಮುಖತೋ ದೇಯಾಃ ನ ದೇಯಾ ಭೀರವಃ ಕ್ವಚಿತ್ ।**
**ಶೂರಾನ್ಪ್ರಮುಖತೋ ದತ್ವಾ ಸ್ಕಂದಮಾತ್ರಪ್ರದರ್ಶನಂ ॥ ೩೬ ॥**

**ಕರ್ತವ್ಯಂ ಭೀರುಸಂಘೇನ ಶತ್ರುವಿದ್ರಾವಕಾರಕಂ ।**
**ದಾರಯಂತಿ ಪುರಸ್ತಾತ್ತು ವಿದ್ರುತಾ ಭೀರವಃ ಪುರಃ ॥ ೩೭ ॥**

---

೩೩–೩೫ ಮುಂಭಾಗದಲ್ಲಿ ಗುರಾಣಿಯುಳ್ಳ ಯೋಧರನ್ನು ನಿಲ್ಲಿಸಬೇಕು. ಅವರ ಹಿಂಭಾಗದಲ್ಲಿ ಧನುರ್ಧಾರಿಗಳನ್ನೂ ಅವರ ಹಿಂಭಾಗದಲ್ಲಿ ಅಶ್ವದಲವನ್ನೂ, ಅದರ ಹಿಂಭಾಗದಲ್ಲಿ-ರಥಗಳನ್ನೂ ಯೋಜಿಸಬೇಕು. ರಥಗಳ ಹಿಂಭಾಗದಲ್ಲಿ ಗಜ ಬಲವನ್ನೂ ಧೊರೆಯಾದವನು ಜಾಗರೂಕತೆಯಿಂದ ಸ್ಥಾಪಿಸಬೇಕು. ಕಾಲಾಳು ಗಳಿಗೂ, ಆನೆಗಳಿಗೂ, ಕುದುರೆಗಳಿಗೂ ರಕ್ಷಣೆಗೆ ತಕ್ಕಂತೆ ಕವಚವನ್ನೂ ಏರ್ಪಡಿಸಲೇ ಬೇಕು. ಯೋಧನಾಗಲಿ, ರಾಜನಾಗಲಿ ಯಾವನೊಬ್ಬನು ತನ್ನ ಕುದುರೆಗೆ ರಕ್ಷಕ ವಾದ ಕವಚವನ್ನು ಏರ್ಪಡಿಸದೆ ತಾನು ಮಾತ್ರ ಅಂತಹ ಕವಚವನ್ನು ಹೊಂದು ತ್ತಾನೆಯೋ ಅವನು ತನ್ನ ದುಷ್ಕರ್ಮದಿಂದ ಹೊಂದುವಂತೆ ಈ ವಿಧವಾದ ದುಷ್ಕರ್ಮ ದಿಂದಲೂ ನರಕವನ್ನು ಹೊಂದುತ್ತಾನೆ.

೩೬–೩೭. ಶೂರರಾದ ಯೋಧರನ್ನೇ ಮುಂಭಾಗದಲ್ಲಿ ನಿಲ್ಲಿಸಬೇಕು. ಭಯಪಡುವವರನ್ನು ಯಾವಾಗಲೂ ಮುಂಭಾಗದಲ್ಲಿ ನಿಲ್ಲಿಸಬಾರದು. ಭಯಪಡು ವವರೂ ಹೆಚ್ಚಾಗಿ ಇದ್ದಲ್ಲಿ ಮುಂಭಾಗದಲ್ಲಿ ಶೂರರನ್ನು ತೋರಿಸುತ್ತಾ ಭೀರುಗಳನ್ನು ಹಿಂದೆ ಇಟ್ಟುಕೊಂಡು ಶತ್ರುಗಳ ಆಕ್ರಮಣ ಪ್ರಕಾರವನ್ನು ತೋರ್ಪಡಿಸಿಕೊಳ್ಳ ಬೇಕು. ಹಿಂಭಾಗದಲ್ಲಿರುವ ಭೀರುಗಳೂ ಸಹ ಶತ್ರುಗಳನ್ನು ಓಡಿಸುವ ಕಾರ್ಯ ಕ್ಕಾಗಿ ಸಿಂಹನಾದವನ್ನೇ ಮೊದಮೊದಲು ಪ್ರಕಾಶಪಡಿಸಬೇಕು. ಮುಂಭಾಗದಲ್ಲಿ ಭೀರುಗಳು ನಿಂತು ಭಯದಿಂದ ಓಡಿಹೋದಲ್ಲಿ ಶೂರರ ಹೃದಯವನ್ನೂ ಅವರು ಭೇದಿಸಿದಂತಾಗುತ್ತದೆ.

ಪ್ರೋತ್ಸಾರಯಂತೇ ವರುಣೇ ಭೀರೂನ್ ಶೂರಾಃ ಪುರಃ ಸ್ಥಿತಾಃ ।
ಪ್ರಾಂಶವಃ ಶುಕನಾಸಾಶ್ಚ ಯೇ ಚ ಜಿಹ್ವೇಕ್ಷಣಾ ನರಾಃ ॥ ೩೮ ॥

ಸಂಹತಭ್ರೂಯುಗಾಶ್ಚೈವ ಕ್ರೋಧನಾಃ ಕಲಹಪ್ರಿಯಾಃ ।
ನಿತ್ಯಂ ಹೃಷ್ಟಾಶ್ಚ ಹ್ರಸ್ವಾಶ್ಚ ಶೂರಾಃ ಜ್ಞೇಯಾಶ್ಚ ಕಾಮಿನಃ ॥ ೩೯ ॥

ದಾಕ್ಷಿಣಾತ್ಯಾಶ್ಚ ವಿಜ್ಞೇಯಾಃ ಕುಶಲಾಃ ಖಡ್ಗವರ್ಮಿಣಃ ।
ವಂಗಜಾ ಧನ್ವಿನೋ ಜ್ಞೇಯಾ ಪಾರ್ವತೀಯಾಸ್ತಥೈವ ಚ ॥ ೪೦ ॥

ಪಾಷಾಣಯುದ್ಧಕುಶಲಾಸ್ತಥಾ ಪರ್ವತವಾಸಿನಃ ।
ಪಾಂಚಾಲಾಃ ಶೂರಸೇನಾಶ್ಚ ರಥೇಷು ಕುಶಲಾ ನರಾಃ ॥ ೪೧ ॥

ಕಾಂಭೋಜಾ ಯೇ ಚ ಗಾಂಧಾರಾಃ ಕುಶಲಾಸ್ತೇ ಹಯೇಷು ಚ ।
ಪ್ರಾಯಶಶ್ಚ ತಥಾ ಮ್ಲೇಚ್ಛಾ ವಿಜ್ಞೇಯಾಃ ಪಾಶಯೋಧಿನಃ ॥ ೪೨ ॥

---

೩೮--೪೦. ಯುದ್ಧದಲ್ಲಿ ಮುಂಭಾಗದಲ್ಲಿ ಇರುವ ಶೂರರು ಮದ್ಯಾದಿಗಳಿಂದ ಭೀರುಗಳನ್ನೂ ಪ್ರೋತ್ಸಾಹಿಸುತ್ತಾರೆ. ಎತ್ತರವಾಗಿರುವವರು ಗಿಣಿಯ ಕೊಕ್ಕಿನಂತಹ ಮೂಗಿರುವವರೂ, ನಾಲಗೆಯನ್ನೇ ನೋಡುವ ವಕ್ರದೃಷ್ಟಿಯುಳ್ಳವರು, ಕೂಡಿ ಕೊಂಡಿರುವ ಹುಬ್ಬುಳ್ಳ ಪುರುಷರು, ಕೋಪಿಗಳು, ಜಗಳಗಂಟಿಗಳು, ಯಾವಾಗಲೂ ಸಂತೋಷದಿಂದಿರುವವರು, ಕುಳ್ಳರು, ಕಾಮಿಗಳು, ಇವರು ಸಾಮಾನ್ಯವಾಗಿ ಶೂರರಾಗಿರುತ್ತಾರೆಂದು ತಿಳಿಯಬೇಕು. ದಾಕ್ಷಿಣಾತ್ಯರು ಕತ್ತಿ ಮತ್ತು ಗುರಾಣಿಯ ಯುದ್ಧದಲ್ಲಿ ಸಮರ್ಥರಾಗಿರುವರು. ವಂಗದೇಶದ ಯೋಧರು ಧನುರ್ಯುದ್ಧದಲ್ಲಿ ನಿಪುಣ ರಾಗಿರುವರು. ಪರ್ವತದೇಶದವರೂ ಹಾಗೆಯೇ.

೪೧--೪೨. ಪರ್ವತ ದೇಶವಾಸಿಗಳು ಕಲ್ಲುಗಳಿಂದ ಯುದ್ಧಮಾಡುವ ಸಾಮರ್ಥ್ಯವುಳ್ಳವರು. ಪಾಂಚಾಲರೂ, ಶೂರಸೇನರೂ, ರಥಗಳಿಂದ ಯುದ್ಧ ಮಾಡಲು ಸಮರ್ಥರಾಗಿರುತ್ತಾರೆ. ಕಾಂಭೋಜರೂ, ಗಾಂಧಾರದೇಶದವರೂ ಸಹ ಅಶ್ವಯುದ್ಧಗಳಲ್ಲಿ ಸಮರ್ಥರಾಗಿರುತ್ತಾರೆ. ಮ್ಲೇಚ್ಛದೇಶದ ಯೋಧರು ಪ್ರಾಯಿಕ ವಾಗಿ ಪಾಶಯುದ್ಧದಲ್ಲಿ ಸಮರ್ಥರಾಗುತ್ತಾರೆ. ಅಂಗ, ವಂಗ, ಕಲಿಂಗ ದೇಶಗಳ ಯೋಧರು ಗಜಯುದ್ಧದಲ್ಲಿ ಸಮರ್ಥರಾಗಿರುವರೆಂದೂ ತಿಳಿಯಬೇಕು.

ಅಂಗಾ ವಂಗಾಃ ಕಲಿಂಗಾಶ್ಚ ಜ್ಞೇಯಾ ಮಾತಂಗಯೋಧಿನಃ ।
ಆಹತಾನಾಂ ಹತಾನಾಂ ಚ ರಣಾಪನಯನಕ್ರಿಯಾ ॥ ೪೩ ॥

ಪತ್ತಿಯೋಧಗಜಾನಾಂ ಚ ತೋಯದಾನಾದಿಕಂ ಚ ಯತ್ ।
ಆಯುಧಾನಯನಂ ಚೈವ ಪತ್ತಿಕರ್ಮ ವಿಧೀಯತೇ ॥ ೪೪ ॥

ರಿಪೂಣಾಂ ಭೇದಕಾಮಾನಾಂ ಸ್ವಸೈನ್ಯಸ್ಯ ತು ರಕ್ಷಣಂ ।
ಭೇದನಂ ಸಂಹತಾನಾಂ ಚ ಚರ್ಮಿಣಾಂ ಕರ್ಮ ಕೀರ್ತಿತಂ ॥ ೪೫ ॥

ವಿಮುಖೀಕರಣಂ ಯುದ್ಧೇ ಧನ್ವಿನಾಂ ಚ ತಥೋಚ್ಯತೇ ।
ಚರ್ಮಿಭಿಃ ಕ್ರಿಯತೇ ಶೂರೈಃ ಭಿನ್ನಾನಾಮಪಿ ಸಂಹತಿಃ ॥ ೪೬ ॥

ಶೂರಾಪಸರಣಂ ಯೋವತ್ಸಾಶ್ವೀಯಸ್ಯ ತಥೋಚ್ಯತೇ ।
ತ್ರಾಸನೇ ರಿಪುಸೈನ್ಯಾನಾಂ ರಥಕರ್ಮ ತಥೋಚ್ಯತೇ ॥ ೪೭ ॥

---

೪೩–೪೫. ಯುದ್ಧದಲ್ಲಿ ಪೆಟ್ಟು ತಿಂದವರನ್ನು ಮತ್ತು ಹತರಾದವರನ್ನು ಯುದ್ಧಭೂಮಿಯಿಂದ ಹೊರಕ್ಕೆ ಸಾಗಿಸುವುದು ಮತ್ತು ಕಾಲಾಳುಗಳಿಗೂ, ಯೋಧರಿಗೂ, ಆನೆ ಮುಂತಾದುವುಗಳಿಗೂ ನೀರನ್ನು ಒದಗಿಸುವುದೂ ಮತ್ತು ಯುದ್ಧಭೂಮಿಯಲ್ಲಿ ಆಯುಧಹೀನರಾದವರಿಗೆ ಪುನಃ ಆಯುಧಗಳನ್ನು ಒದಗಿಸುವುದೂ ಸಹ ಕಾಲಾಳುಗಳ ಕೆಲಸ. ತಮ್ಮ ಸೈನ್ಯವನ್ನು ಭೇದಿಸಲು ಆಶಿಪಡುವ ಶತ್ರುಗಳಿಂದ ತಮ್ಮ ಸೈನ್ಯಗಳನ್ನು ರಕ್ಷಿಸಿಕೊಳ್ಳುವುದು ಮತ್ತು ಒಟ್ಟಾಗಿರುವ ಶತ್ರುಸೈನ್ಯವನ್ನು ನುಗ್ಗಿ ಭೇದಿಸುವುದು, ಇವು ಗುರಾಣಿಯಾಳುಗಳ ಕಾರ್ಯ.

೪೬–೪೮. ಯುದ್ಧದಲ್ಲಿ ಶತ್ರುಗಳನ್ನು ವಿಮುಖರನ್ನಾಗಿ ಮಾಡುವ ಕಾರ್ಯವು ಧನುರ್ಧಾರಿಗಳಿಗೆ ಸೇರಿದುದು. ಶೂರರಾದ ಗುರಾಣಿಯಾಳುಗಳು ಬೇರೆ ಬೇರೆಯಾಗಿ ಚದುರಿರುವ ಸ್ವಸೈನ್ಯವನ್ನು ಒಟ್ಟುಗೂಡಿಸಲು ಸಮರ್ಥರಾಗುತ್ತಾರೆ ಶೂರರೆಲ್ಲರನ್ನೂ ಯುದ್ಧಭೂಮಿಯಿಂದ ಓಡಿಸುವ ಕಾರ್ಯವು ಅಶ್ವಬಲದ ಕೆಲಸ, ಶತ್ರುಸೈನ್ಯಕ್ಕೆ ಭಯವನ್ನುಂಟುಮಾಡುವ ಕಾರ್ಯವು ರಥಗಳಿಗೆ ಸೇರಿದುದು. ಪೌಳಿ, ನಗರದ್ವಾರ,

ಪ್ರಾಕಾರಗೋಪುರಾಟ್ಟಾಲ ದ್ರುಮಭಂಗಾಶ್ಚ ಭಾರ್ಗವ ।
ಗಜಾನಾಂ ಕರ್ಮನಿರ್ದಿಷ್ಟಂ ಯದಸಹ್ಯಂ ತಥಾ ಪರೈಃ ॥ ೪೮ ॥

ಪತ್ತಿಭಿರ್ವಿಷಮಾ ಜ್ಞೇಯಾ ರಥಾಶ್ವಸ್ಯ ತಥಾ ಸಮಾ ।
ಶರ್ಮಾದ್ರುಮಾ ಚ ನಾಗಾನಾಂ ಯುದ್ಧಭೂಮಿರುದಾಹೃತಾ ॥ ೪೯ ॥

ಏವಂ ವಿರಚಿತವ್ಯೂಹಃ ಕೃತಸ್ಪೃಷ್ಟದಿವಾಕರಃ ।
ತಥಾನುಲೋಮಶುಕ್ರೋ ವಾ ದಿಕ್ಪಾಲಬುಧಮಾರುತಾಃ ॥ ೫೦ ॥

ಯೋಧಾನುತ್ತೇಜಯೇತ್ಸರ್ವಾನ್ ನಾಮಗೋತ್ರಾಪದಾನತಃ ।
ಭೋಗಪ್ರಾಪ್ತಿಶ್ಚ ವಿಜಯೇ ಸ್ವರ್ಗಪ್ರಾಪ್ತಿರ್ಮೃತಸ್ಯ ಚ ॥ ೫೧ ॥

---

ಮಹಡಿಗಳು, ಆಶ್ರಯವಾದ ವೃಕ್ಷಗಳು ಇವನ್ನು ನಾಶಮಾಡುವ ಕಾರ್ಯವು ಆನೆಗಳಿಗೆ ಸೇರಿದುದು. ಆನೆಗಳ ಈ ವ್ಯಾಪಾರವು ಶತ್ರುಗಳಿಗೆ ಸಹಿಸಲು ಸಾಧ್ಯವೇ ಆಗುವುದಿಲ್ಲ

೪೯–೫೧ ಮಟ್ಟವಾಗಿರದೆ ಹಳ್ಳತಿಟ್ಟಾಗಿರುವ ಯುದ್ಧಭೂಮಿಯು ಕಾಲಾಳುಗಳಿಂದ ಜಯಿಸಲು ಅರ್ಹವಾಗುತ್ತದೆ. ಸಮವಾಗಿರುವ ಯುದ್ಧಭೂಮಿಯಲ್ಲಿ ರಥಗಳ ಮತ್ತು ಅಶ್ವಗಳ ವ್ಯಾಪಾರವು ಜಯಪ್ರದವಾಗುತ್ತದೆ. ಮರಗಳಿಲ್ಲದಿರುವ ಶೈಲು ಪ್ರದೇಶದ ಯುದ್ಧಭೂಮಿಯಲ್ಲಿ ಗಜಯುದ್ಧವು ಪ್ರಶಸ್ತವಾಗುತ್ತದೆ ಈ ರೀತಿ ವ್ಯೂಹಗಳನ್ನು ರಚಿಸಿ, ಸೂರ್ಯನ ಕಡೆಗೆ ಅಭಿಮುಖನಾಗದೆ ಮತ್ತು ಶುಕ್ರನಿಗೆ ಎದುರಾಗಿರದೆ, ಮತ್ತು ದಿಕ್ಪತಿ, ಬುಧ, ಇವರೂ ಅಭಿಮುಖರಾಗದೆ ಇರುವಂತೆಯೂ, ಎದುರು ಗಾಳಿಯಿಲ್ಲದಿರುವಂತೆಯೂ ಸಹ ರಾಜನಾದವನು ಯುದ್ಧವ್ಯಾಪಾರವನ್ನು ಕೈಗೊಳ್ಳಬೇಕು. ಎಲ್ಲಾ ಯೋಧರನ್ನೂ ಯುದ್ಧಭೂಮಿಯಲ್ಲಿ ಅವರವರ ನಾಮಗೋತ್ರಾದಿಗಳ ಪ್ರಶಂಸೆಯಿಂದಲೂ, ಅವರು ಮಾಡಿರುವ ಅಸಾಧಾರಣ ಕಾರ್ಯಗಳನ್ನು ಉದ್ಘೋಷಿಸುವುದರಿಂದಲೂ ಅವರನ್ನು ಪ್ರೋತ್ಸಾಹಗೊಳಿಸಬೇಕು. ವಿಜಯ ಉಂಟಾದಲ್ಲಿ ಯಥೇಷ್ಟವಾದ ಭೋಗಕ್ಕೆ ಕಡಿಮೆ ಇಲ್ಲ. ಮೃತಿಹೊಂದಿದಲ್ಲಿ ಸ್ವರ್ಗಸುಖಕ್ಕೆ ಕಡಿಮೆಯಿಲ್ಲ ಇವೆರಡರಲ್ಲಿ ಯಾವುದಾದರೊಂದನ್ನು ಗುರಿಯಿಟ್ಟು ಹೊಂದಲೇಬೇಕು ಎಂದೂ ಪ್ರೋತ್ಸಾಹಿಸಬೇಕು

**ಧನ್ಯಾನಿ ತು ನಿಮಿತ್ತಾನಿ ವದಂತಿ ವಿಜಯಂ ದ್ವಿಜಾಃ ।**
**ಸ್ಪಂದನಂ ಶುಭಗಾತ್ರಾಣಾಂ ಶುಭಸ್ವಪ್ನನಿದರ್ಶನಂ ॥ ೫೨ ॥**

**ನಿಮಿತ್ತಂ ಚ ಗಜಾಶ್ವಸ್ಯ ಸರ್ವತೋ ದೃಶ್ಯತೇ ಶುಭಂ ।**
**ಶಕುನಾ ಮಂಗಲಾಶ್ಚೈವ ದೃಶ್ಯಂತೇ ಹಿ ಮನೋಽನುಗಾಃ ॥ ೫೩ ॥**

**ವಿಪರೀತಸರೀಸರ್ಪಾನ್ ಮೃತ್ಯುಃ ಸ್ಪೃಶತಿ ನಾನ್ಯಥಾ ।**
**ಭವಂತೋಽಪಿ ಕುಲೇ ಜಾತಾಃ ಸರ್ವಶಸ್ತ್ರಾಸ್ತ್ರಪಾರಗಾಃ ॥ ೫೪ ॥**

**ಗಾಂಧರ್ವೇ ಚ ಪರಾ ನಿತ್ಯಂ ನಿತ್ಯಂ ಸನ್ಮಾರ್ಗಮಾಶ್ರಿತಾಃ ।**
**ಅನಾಹಾರ್ಯಾಃ ಪರೈರ್ನಿತ್ಯಂ ಕಥಂ ನ ಸ್ಯಾಜ್ಜಯೋ ಮಮ ॥ ೫೫ ॥**

**ರಾಜಶ್ರೀಃ ಭವತಾಮೇವ ಭವದ್ಭಿಃ ಕೇವಲಂ ಮಮ ।**
**ದ್ವೇ ಚಾಮರೇಽಧಿಕೇ ಶೂರಾಃ ಛತ್ರಂ ಚರ್ಮಾಭಮೇವ ಚ ॥ ೫೬ ॥**

---

೫೨-೫೬. (ಯೋಧರುಗಳನ್ನು ಪ್ರೋತ್ಸಾಹಿಸುವ ವಿಧಾನವನ್ನೇ ಮುಂದು ವರಿಸುತ್ತಾರೆ) ಒಳ್ಳೊಳ್ಳೆಯ ಶುಭನಿಮಿತ್ತಗಳೇ ಉಂಟಾಗುತ್ತಿವೆ. ಬ್ರಾಹ್ಮಣೋತ್ತಮರೂ ಸಹ ವಿಜಯವು ಸಿದ್ಧವೆಂದೂ ಆಶೀರ್ವದಿಸಿರುತ್ತಾರೆ. ಶುಭಕರವಾದ ಅವಯವಗಳು ವಿಜಯಕ್ಕೆ ಸೂಚಕವಾಗಿ ಅದುರುತ್ತಿವೆ ಶುಭವಾದ ಸ್ವಪ್ನವೂ ಕಂಡುಬರುತ್ತಿದೆ. ಆನೆ, ಕುದುರೆಗಳಲ್ಲಿಯೂ ಸರ್ವತೋಮುಖವಾದ ಶುಭವೇ ಕಂಡು ಬರುತ್ತಿದೆ. ಮಂಗಲಕರವಾದ ಶುಭ ಶಕುನಗಳು ಮನೋರಥಕ್ಕೆ ತಕ್ಕಂತೆ ತೋರಿಬರುತ್ತಿದೆ. ಹೀಗಿದ್ದರೂ ಯುದ್ಧದಲ್ಲಿ ಹಿಂತಿರುಗಿದ್ದೇ ಆದರೆ ಅವರು ಮೃತ್ಯುವಿಗೇ ತುತ್ತಾಗುತ್ತಾರೆ. ನೀವೂ ಕೂಡ ಸದ್ವಂಶದಲ್ಲಿ ಹುಟ್ಟಿದವರು ಸರ್ವ ಶಸ್ತ್ರಾಸ್ತ್ರಗಳಲ್ಲಿಯೂ ಪಾರಂಗತರಾಗಿರುವಿರಿ, ಅಸ್ತ್ರಶಾಸ್ತ್ರದಲ್ಲಿಯೂ ನಿರತರಾಗಿರುವಿರಿ ಯಾವಾಗಲೂ ಸನ್ಮಾರ್ಗಗಾಮಿಗಳಾಗಿಯೂ ಇರುವಿರಿ, (ಶತ್ರುಗಳಿಂದ ಒಲಿಸಿ ಕೊಳ್ಳಲು ಸಾಧ್ಯವಿಲ್ಲದ) ದೃಢವಾದ ಸ್ವಾಮಿ ಭಕ್ತಿಯುಳ್ಳವರಾಗಿಯೂ ಇರುವಿರಿ ನಿಮ್ಮ ಸಹಾಯದಿಂದ ನನಗೆ ವಿಜಯವು ತಾನೇ ಹೇಗೆ ಲಭಿಸದೇ ಹೋದೀತು. ರಾಜ್ಯ ಲಕ್ಷ್ಮಿ ಎಲ್ಲವೂ ನಿಮ್ಮದೇ ಆಗಿದೆ. ನಿಮ್ಮ ಸಂಬಂಧದಿಂದ ಕೇವಲ ನನ್ನಲ್ಲಿ ತೋರುತ್ತಿದೆ. ಎಲೈ ಶೂರಾಗ್ರೇಸರರೇ ನಾನು ಧರಿಸಿರುವ ಛತ್ರವೂ ಸಹ ನಿಮ್ಮ ಗುರಾಣಿಯಂತೆಯೇ ಇದೆ. ಎರಡು ಚಾಮರಗಳು ಮಾತ್ರ ನನಗೆ ಹೆಚ್ಚಾಗಿವೆ.

ಜಿತ್ವಾರೀನ್ ಭೋಗಸಂಪ್ರಾಪ್ತಿಃ ಮೃತಸ್ಯ ಚ ಪರಾಗತಿಃ ।
ನಿಷ್ಕೃತಿಃ ಸ್ವಾಮಿಪಿಂಡಸ್ಯ ನಾಸ್ತಿ ಯುದ್ಧಸಮಾ ಗತಿಃ ೫೭ ॥

ಶೂರಾಣಾಂ ಯದ್ವಿನಿರ್ಯಾತಿ ರಕ್ತಮಾಬಾಧತಃ ಕ್ವಚಿತ್ ।
ತೇನೈವ ಸಹ ಪಾಪ್ಮಾನಂ ಸರ್ವಂ ತ್ಯಜತಿ ಧಾರ್ಮಿಕಃ. ॥ ೫೮ ॥

ತಥಾ ಬಾಧಚಿಕಿತ್ಸಾಯಾಂ ವೇದನಾಸಹತಾ ತಥಾ ।
ತತೋ ನಾಸ್ತ್ಯಧಿಕಂ ಲೋಕೇ ಕಿಂಚಿತ್ಪರಮದಾರುಣಂ ॥ ೫೯ ॥

ಮೃತಸ್ಯ ನಾಗ್ನಿಸಂಸ್ಕಾರೋ ನಾಶೌಚಂ ನೋದಕಕ್ರಿಯಾ ।
ಕರ್ತುಮಿಚ್ಛಂತಿ ಯಸ್ಯೇಹ ಸಂಗ್ರಾಮಾದಧಿಕಂ ನು ಕಿಂ ॥ ೬೦ ॥

ತಪಸ್ವಿನೋ ದಾನಪರಾ ಯಜ್ವಾನೋ ಬಹುದಕ್ಷಿಣಾಃ ।
ಶೂರಾಣಾಂ ಗತಿಮಿಚ್ಛಂತಿ ದೃಷ್ಟ್ವಾ ಭೋಗಾನನುತ್ತಮಾನ್ ॥ ೬೧ ॥

---

೫೭-೫೯. ಶತ್ರುಗಳನ್ನು ಜಯಿಸಿದ್ದೇ ಆದರೆ ನಾನಾ ವಿಧವಾದ ಭೋಗಗಳನ್ನು ಅನುಭವಿಸುತ್ತೀರಿ. ಮೃತರಾದಲ್ಲಿ ಉತ್ತಮ ಗತಿಯನ್ನು ಹೊಂದುವಿರಿ. ಸ್ವಾಮಿಯ ಉಪ್ಪನ್ನು ತಿಂದುದಕ್ಕೆ ತಕ್ಕ ಪ್ರತ್ಯುಪಕಾರವೂ ಆದೀತು. ಆದುದರಿಂದ ಧೀರರಿಗೆ ಯುದ್ಧ ಹೊರತು ಇದಕ್ಕೆ ಸಮನಾದ ಬೇರೆ ಯಾವ ಮಾರ್ಗವೂ ಇರುವುದಿಲ್ಲ. ಯೋಧನಾದವನಿಗೆ ಶತ್ರುಗಳ ಬಾಧನದಿಂದ ಶರೀರದಲ್ಲಿ ಸ್ವಲ್ಪ ರಕ್ತವು ಹರಿದದ್ದೇ ಆದರೆ ಅಂತಹ ಧಾರ್ಮಿಕನಿಗೆ ಆ ರಕ್ತದೊಡನೆ ಎಲ್ಲಾ ಪಾಪವೂ ಹೊರಗೆ ಹೋಗುತ್ತದೆ. ಹಾಗೆಯೇ ಅಂತಹ ವ್ರಣ ಬಾಧೆಗೆ ಚಿಕಿತ್ಸೆ ನಡೆಸಿದ್ದೇ ಆದರೆ ವೇದನೆಯನ್ನು ಸಹಿಸಿಕೊಳ್ಳಬೇಕು. ಆ ವೇದನದ ವಿಷಯದಲ್ಲಿ ಅ ಸಹಿಷ್ಣುತೆಯನ್ನು ತೋರಿಸಿದ್ದೇ ಆದರೆ ಅದಕ್ಕಿಂತಲೂ ದಾರುಣವಾದ ನರಕವು ಲೋಕದಲ್ಲಿ ಮತ್ತೊಂದಿಲ್ಲ. (ವೇದನೆಯ ಸಹಿಷ್ಣುತೆಯೂ ಸಹ ಧಾರ್ಮಿಕನಾದ ಯೋಧನ ಧರ್ಮವೆಂದು ತಾತ್ಪರ್ಯ).

೬೦-೬೩. ಯುದ್ಧದಲ್ಲಿ ಮೃತನಾದವನಿಗೆ ಅಗ್ನಿ ಸಂಸ್ಕಾರದ ಅವಶ್ಯಕತೆಯೂ ಇಲ್ಲ ಆಶೌಚವೂ ಇಲ್ಲ. ಉದಕದಾನಾದಿಗಳ ಅಪೇಕ್ಷೆಯೂ ಇಲ್ಲ. ಆದುದರಿಂದ ಮೃತನ ಇಷ್ಟಗತಿಗಾಗಿ ನಿರಪೇಕ್ಷೆಯಾದ ಯುದ್ಧ ವ್ಯಾಪಾರ ಹೊರತು

ವರಾಪ್ಸರಃಸಹಸ್ರಾಣಿ ಶೂರಮಾಯೋಧನೇ ಹತಂ ।
ಅಭಿದ್ರವಂತಿ ಕಾಮಾರ್ತಾಃ ಮಮ ಭರ್ತಾ ಭವಿಷ್ಯತಿ ॥ ೬೨ ॥

ಸ್ವಾಮೀ ಸುಕೃತಮಾದತ್ತೇ ಭಗ್ನಾನಾಂ ವಿನಿವರ್ತತಾಂ ।
ಬ್ರಹ್ಮಹತ್ಯಾಫಲ ತೇಷಾಂ ತಥಾ ಪ್ರೋಕ್ತಂ ಪದೇಪದೇ ॥ ೬೩ ॥

ಯಃ ಸಹಾಯಾನ್ ಪರಿತ್ಯಜ್ಯ ಸ್ವಸ್ತಿಮಾನ್ ಗಂತುಮಿಚ್ಛತಿ ।
ಅಸ್ವಸ್ತಿ ತಸ್ಯ ಕುರ್ವಂತಿ ದೇವಾಃ ಶಕ್ರಪುರೋಗಮಾಃ ॥ ೬೪ ॥

ಅಶ್ವಮೇಧಫಲಂ ಪ್ರೋಕ್ತಂ ಭಗ್ನಾನಾಮನಿವರ್ತತಾಂ ।
ಪದೇಪದೇ ಮಹಾಭಾಗಾಃ ಸಂಮುಖಾನಾಂ ಮಹಾತ್ಮನಾಂ ॥ ೬೫ ॥

---

ಮತ್ತಾವುದನ್ನೂ ಮಾಡುವ ಅವಶ್ಯಕತೆಯೇ ಇಲ್ಲ. ಇವೆಲ್ಲಕ್ಕಿಂತಲೂ ಯುದ್ಧವೇ ಅವನ ಸ್ವರ್ಗ ಗತಿಗೆ ಸಾಧಕವೆಂದು ತಾತ್ಪರ್ಯ. ಯುದ್ಧದಲ್ಲಿ ಮರಣಹೊಂದಿದ ಶೂರರಿಗೆ ಲಭಿಸುವ ಉತ್ತಮೋತ್ತಮ ಭೋಗಗಳನ್ನು ನೋಡಿ ತಪಸ್ವಿಗಳೂ, ದಾನಶೀಲರೂ, ಬಹು ದಕ್ಷಿಣೆಯಿಂದ ಯಜ್ಞ ಮಾಡಿದ ಯಾಜಕರೂ ಸಹ ಶೂರರ ಗತಿಯನ್ನೇ ತಾವೂ ಅಪೇಕ್ಷಿಸುತ್ತಾರೆ. ಯುದ್ಧದಲ್ಲಿ ಹತನಾದ ಯೋಧನನ್ನು ವರಿಸಲು ಸಾವಿರಾರು ಅಪ್ಸರೆಯರು ಕಾಮೋದ್ರಿಕ್ತರಾಗಿ ನನಗೆ ಪತಿಯಾಗಲಿ ನನಗೆ ಪತಿಯಾಗಲಿ ಎಂದು ತ್ವರೆಯಿಂದ ಓಡಿ ಬಂದು ವರಿಸುತ್ತಾರೆ. ಯಾರು ಯುದ್ಧದಲ್ಲಿ ಪರಾಙ್ಮುಖರಾಗಿ ಸೋಲುತ್ತಾರೆಯೋ ಅವರ ಪುಣ್ಯಗಳನ್ನೆಲ್ಲಾ ಪ್ರಭುವೇ ಸ್ವೀಕರಿಸುತ್ತಾನೆ. ಆ ರೀತಿ ಭಗ್ನರಾದವರಿಗೆ ಹೆಜ್ಜೆ ಹೆಜ್ಜೆಗೂ ಬ್ರಹ್ಮ ಹತ್ಯೆಗೆ ಸಮನಾದ ಪಾಪವು ತಪ್ಪಿದ್ದೇ ಅಲ್ಲ.

೬೪-೬೬. ಯಾರು ತನಗಿರುವ ಸಹಾಯಗಳನ್ನೂ ಬಿಟ್ಟು ಯುದ್ಧಭೂಮಿಯಿಂದ ಯಾವ ಅಪಾಯವನ್ನೂ ಹೊಂದಲಿಚ್ಛಿಸದೆ ಹಿಂತಿರುಗಿ ಸುಖಿಯಾಗಿ ಹೊರಡಲು ಆಶಿಸುತ್ತಾನೆಯೋ ಅಂತಹ ಯುದ್ಧಪಾತಕನಿಗೆ ಇಂದ್ರಾದಿದೇವತೆಗಳು ಅಮಂಗಲವನ್ನೇ ಉಂಟುಮಾಡುತ್ತಾರೆ. ಯುದ್ಧದಲ್ಲಿ ಹಿಂದೆ ತಿರುಗದೆ ಎದಿರಾಗಿಯೇ ನಿಂತು ಯುದ್ಧಮಾಡಿ ಹತರಾದವರಿಗೆ ಹೆಜ್ಜೆಹೆಜ್ಜೆಗೂ ಅಶ್ವಮೇಧದ ಫಲವೇ ಉಂಟಾಗುತ್ತದೆ. ಯುದ್ಧವು ಪ್ರಾರಂಭವಾದೊಡನೆಯೇ ದೇವತಾಸ್ತ್ರೀಯರೂ,

ದೇವಸ್ತ್ರಿಯಃ ತಥಾ ಲಕ್ಷ್ಮೀಃ ಪಾಪ್ಮಾನಮಯಶಸ್ತಥಾ ।
ಪ್ರತೀಕ್ಷಂತೇ ಮಹಾಭಾಗ ಸಂಗ್ರಾಮೇ ಸಮುಪಸ್ಥಿತೇ ॥ ೬೬ ॥

ಪರಾಙ್ಮುಖಾ ಮಯಾ ಗ್ರಾಹ್ಯಾ ಜೀವಂತೋಽಪ್ಯಥವಾ ಮೃತಾಃ ।
ಇತ್ಯೇವಮಯಶಸ್ತಸ್ಯ ಪಾಪ್ಮನಾ ಸಹ ತಿಷ್ಠತಿ ॥ ೬೭ ॥

ಲಕ್ಷ್ಮೀಃ ಸಂತಿಷ್ಠತೇ ತಸ್ಯ ಜೀವತಃ ಕೃತಕರ್ಮಣಃ ॥ ೬೮ ॥

ಮೃತಸ್ಯ ಚಾಪಿ ತಿಷ್ಠಂತಿ ವಿಮಾನಸ್ಥಾಃ ಸುರಸ್ತ್ರಿಯಃ ।
ಏವಮುದ್ಘೋಷಣಂ ಕೃತ್ವಾ ಧರ್ಮೇಣೇಚ್ಛೇಜ್ಜಯಂ ರಣೇ ॥ ೬೯ ॥

ಅಧರ್ಮವಿಜಯೋ ರಾಜ್ಞಃ ನೃಪಲೋಕೇ ಭಯಾವಹಃ ।
ಅಧರ್ಮವಿಜಯಾದರ್ಥೈರ್ಯಚ್ಛಿದ್ರಮುಪಧೀಯತೇ ॥ ೭೦ ॥

---

ಜಯಲಕ್ಷ್ಮಿಯೂ ಸಹ ಯುದ್ಧಭೂಮಿಯಲ್ಲಿ ಯೋಧರಿಗೆ ಉಂಟಾಗುವ ಪಾಪ ಸಂಘಟನೆಯನ್ನೂ, ಅಪಯಶಸ್ಸನ್ನೂ ಸಹ ನಿರೀಕ್ಷಿಸುತ್ತಲೇ ಇರುತ್ತಾರೆ.

೬೭–೭೦. ಯುದ್ಧದಲ್ಲಿ ಪರಾಙ್ಮುಖರಾಗಿ ಯಾರು ಪಾಪಿಗಳಾಗುತ್ತಾರೆಯೋ ಅವರನ್ನೇ ನಾನು ಆಶ್ರಯಿಸಬೇಕಾಗಿದೆ. ಅಂತಹವರು ಬದುಕಿ ಭೂಮಿಯ ಮೇಲೆ ಇದ್ದರೂ ಸಹ ಮೃತರಾದಂತೆಯೇ ಹೀಗೆಂದು ಹೇಳುತ್ತಾ ಅವನ ಅಪಯಶಸ್ಸು ಪಾಪದೊಡನೆ ಅವನನ್ನೇ ಆಶ್ರಯಿಸುತ್ತದೆ ಯಾರು ಜಯಹೊಂದಿ ಬದುಕಿರುತ್ತಾರೆಯೋ ಅವರಲ್ಲಿ ಜಯಲಕ್ಷ್ಮಿಯು ಆವಾಸಹೊಂದುತ್ತಾಳೆ. ಮೃತನಾದದ್ದೇ ಆದರೆ ವಿಮಾನದಲ್ಲಿ ನಿಂತು ನಿರೀಕ್ಷಿಸುತ್ತಿರುವ ದೇವವನಿತೆಯರು ಇವನ ಸುಖಕ್ಕಾಗಿ ಸಿದ್ಧರಾಗಿಯೇ ಇದ್ದಾರೆ. ಹೀಗೆ ಉದ್ಘೋಷಣೆ ಮಾಡಿ ರಾಜನಾದವನು ಧರ್ಮ ಮಾರ್ಗದಿಂದಲೇ ಯುದ್ಧದಲ್ಲಿ ಜಯವನ್ನು ಅಪೇಕ್ಷಿಸಬೇಕು. ಅಧರ್ಮದಿಂದ ವಿಜಯಹೊಂದಿದ ರಾಜನಿಗೆ ರಾಜಲೋಕದಲ್ಲಿ ಆ ವಿಜಯವು ಭಯಂಕರ ಪರಿಣಾಮಕ್ಕೆ ಕಾರಣವಾಗುತ್ತದೆ. ರಾಜನು ಅಧರ್ಮದಿಂದ ವಿಜಯಹೊಂದಿ ಸಂಪಾದಿಸಿದ ಅರ್ಥದಿಂದ ಯಾವ ಯಾವ ಅಸೌಕರ್ಯಗಳನ್ನು ಹೋಗಲಾಡಿಸಿ ಕೊಳ್ಳುತ್ತಾನೆಯೋ ಅವನಿಗೆ ಆಯಾಯ ಅಸೌಕರ್ಯಗಳು ನಾಶಹೊಂದದೆ ನೂರಾರು ಛಿದ್ರಗಳು ಪುನಃ ಪುನಃ ತಲೆದೋರುತ್ತವೆ. ಇದರಲ್ಲಿ ಯಾವ ಸಂದೇಹವೂ ಇಲ್ಲ.

ಛಿದ್ರಾದೇವಪರಂ ಛಿದ್ರಂ ತಸ್ಯ ಸ್ಯಾನ್ನಾತ್ರ ಸಂಶಯಃ ।
ನ ಕರ್ಣೀ ನ ತಥಾ ದಿಗ್ಧಃ ಶರಃ ಸ್ಯಾದ್ಧರ್ಮಯೋಧಿನಾಂ ॥ ೭೧ ॥

ನಾಸ್ಥಿಶಲ್ಯಃ ಶರಃಕಾರ್ಯಃ ದಾರುಶಲ್ಯಶ್ಚ ಭಾರ್ಗವ ।
ಸಮಃ ಸಮೇನ ಯೋದ್ಧವ್ಯೋ ನಾಪಚಾರೋ ರಣೇ ದ್ವಿಜ ॥ ೭೨ ॥

ಸನ್ನದ್ಧೇನ ಚ ಸನ್ನದ್ಧಃ ಸಾಶ್ವಶ್ಚಾಶ್ವಗತೇನ ತು ।
ರಥೀ ಚ ರಥಿನಾ ರಾಮ ಪದಾತಿಶ್ಚ ಪದಾತಿನಾ ॥ ೭೩ ॥

ಕುಂಜರಸ್ಥೋ ಗಜಸ್ಥೇನ ಯೋದ್ಧವ್ಯೋ ಭೃಗುನಂದನ ।
ವಿಮುಖೋ ಭಗ್ನಶಸ್ತ್ರಶ್ಚ ಸ್ತ್ರೀಬಾಲಪರಿರಕ್ಷಿತಾ ॥ ೭೪ ॥

ವ್ಯಾಯುಧೋ ಭಗ್ನಗಾತ್ರಶ್ಚ ತಥೈವ ಶರಣಾಗತಃ ।
ಪರೇಣ ಯುದ್ಧ್ಯಮಾನಶ್ಚ ಯುದ್ಧಪ್ರೇಕ್ಷಕ ಏವ ಚ ॥ ೭೫ ॥

ಆರ್ತಃ ತೋಯಪ್ರದಾತಾ ಚ ದಂಡಪಾಣಿಸ್ತಥೈವ ಚ ।
ಏತೇ ರಣೇ ನ ಹಂತವ್ಯಾಃ ಕ್ಷತ್ರಧರ್ಮಮಭೀಪ್ಸತಾ ॥ ೭೬ ॥

---

೭೧–೭೩. ಧರ್ಮಯುದ್ಧ ಮಾಡತಕ್ಕವರು ಕೊಕ್ಕೆಯ ಬಾಣವನ್ನೂ, ವಿಷದಿಂದ ಲೇಪಿಸಿದ ಬಾಣವನ್ನೂ, ಮೂಳೆಯಿಂದ ಅಲಗನ್ನು ಮಾಡಿರುವ ಬಾಣವನ್ನೂ, ಮರದ ಅಲಗಿನ ಬಾಣವನ್ನೂ, ಯುದ್ಧದಲ್ಲಿ ಉಪಯೋಗಿಸಬಾರದು ಸಮಬಲವುಳ್ಳವನೊಡನೆ ಸಮಬಲವುಳ್ಳವನೇ ಯುದ್ಧಮಾಡಬೇಕು. ಯುದ್ಧದಲ್ಲಿ ಪೂಜ್ಯಾತಿಲಂಘನಪ್ರಯುಕ್ತವಾದ ದೋಷಕ್ಕೆ ಅವಕಾಶವೇ ಇಲ್ಲ.

೭೪–೭೬. ಕ್ಷತ್ರಿಯ ಧರ್ಮಕ್ಕೆ ಅನುಗುಣವಾಗಿ ಯುದ್ಧಮಾಡುವವನು ಯುದ್ಧದಲ್ಲಿ ವಿಮುಖನಾದವನನ್ನೂ, ಆಯುಧಭಂಗವನ್ನು ಹೊಂದಿರುವವನನ್ನೂ, ಸ್ತ್ರೀಬಾಲಕರಿಗೆ ರಕ್ಷಕನಾಗಿರುವವನನ್ನೂ, ನಿರಾಯುಧನನ್ನೂ, ಭಗ್ನದೇಹವುಳ್ಳವನನ್ನೂ, ಶರಣಾಗತನನ್ನೂ, ಮತ್ತೊಬ್ಬನೊಡನೆ ಯುದ್ಧಮಾಡುತ್ತಿರುವವನನ್ನೂ ಕೇವಲ ಪ್ರೇಕ್ಷಕನಾಗಿ ಯುದ್ಧಭೂಮಿಗೆ ಬಂದಿರುವವನನ್ನೂ, ಆಘಾತದಿಂದ ದುಃಖಿಯಾಗಿರುವವನನ್ನೂ, ಶಸ್ತ್ರವಿಲ್ಲದೆ ಆತ್ಮರಕ್ಷಣಕ್ಕಾಗಿ ದಂಡಧಾರಿಯಾಗಿರುವವನನ್ನೂ ಸಹ ಯುದ್ಧದಲ್ಲಿ ಕೊಲ್ಲಬಾರದು.

ಪಾಪಿಷ್ಠೇ ಕೂಟಯುದ್ಧಂ ಚ ಕರ್ತವ್ಯಮಪಿ ಚಾಹವೇ ।
ಶ್ರಾಂತೇನ ವಾಭಿಭೂತೇನ ಅರ್ಥೋತ್ತೀರ್ಣಬಲೇನ ಚ ॥ ೭೭ ॥

ದುರ್ದಿನೇ ನ ಚ ಯುದ್ಧಾನಿ ಕರ್ತವ್ಯಾನಿ ಮಹಾಬಲ ॥ ೭೮ ॥

ಪ್ರವೃತ್ತೇ ಸಮರೇ ರಾಮ ಪರೇಷಾಂ ನಾಮಕಾರಣಾತ್ ।
ಬಾಹೂ ಪ್ರಗೃಹ್ಯ ವಿಕ್ರೋಶೇದ್ಭಗ್ನಾಃ ಭಗ್ನಾಃ ಪರೇತ್ವಿತಿ ।
ಪ್ರಾಪ್ತಂ ಮಿತ್ರಬಲಂ ಭೂರಿ ನಾಯಕೋಽತ್ರ ನಿಪಾತಿತಃ ॥ ೭೯ ॥

ಸೇನಾನೀರ್ನಿಹತಶ್ಚಾಯಂ ಸರ್ವಾಸೇನಾಪಿ ವಿದ್ರುತಾ ।
ಏವಂ ವಿತ್ರಾಸನಂ ಕುರ್ಯಾತ್ಪರೇಷಾಂ ಭೃಗುನಂದನ ॥ ೮೦ ॥

ವಿದ್ರುತಾನಾಂ ತು ಯೋಧಾನಾಂ ಸುವಿಘಾತೋ ವಿಧೀಯತೇ ।
ಧನುರ್ವೇದವಿಧಾನೇನ ಕಲ್ಪನಾ ಚ ತಥಾ ಭವೇತ್ ॥ ೮೧ ॥

---

೭೭-೮೦. ಪಾಪಿಷ್ಠನಾದ ಶತ್ರುವಿನ ವಿಷಯದಲ್ಲಿ ಮೋಸದ ಯುದ್ಧವನ್ನೂ ಸಹ ಮಾಡಬಹುದು. ಯುದ್ಧಮಾಡಿ ಬಳಲಿರುವವನೊಡನೆಯೂ ಅರ್ಥಮಟ್ಟಿಗೂ ಸೈನ್ಯಗಳನ್ನು ನಾಶಮಾಡಿಕೊಂಡಿರುವವನೊಡನೆಯೂ, ಮೇಘದಿಂದ ಆವೃತವಾಗಿರುವ ದಿನದಲ್ಲಿಯೂ ಸಹ ಯುದ್ಧಮಾಡಕೂಡದು. ಯುದ್ಧವು ಪ್ರಾರಂಭವಾದೊಡನೆಯೇ ಶತ್ರುಗಳನ್ನು ಜಯಿಸುವುದಕ್ಕಾಗಿ ತೋಳುಗಳನ್ನು ಎತ್ತಿಕೊಂಡು ಶತ್ರುಗಳು ಭಗ್ನರಾದರು ಭಗ್ನರಾದರು ಎಂದು ಘಟ್ಟಿಯಾಗಿ ಕೂಗಬೇಕು. ನಮ್ಮ ಸಹಾಯಕ್ಕಾಗಿ ಹೆಚ್ಚಾಗಿ ಮಿತ್ರಬಲವು ಬಂದೊದಗಿದೆ ಶತ್ರುಪಕ್ಷದ ನಾಯಕನ್ನು ನೆಲಕ್ಕೆ ಕೆಡಹಿದ್ದೇವೆ.. ಅವರ ಈ ಸೇನಾಪತಿಯು ನಮ್ಮಿಂದ ಕೊಲ್ಲಲ್ಪಟ್ಟಿದ್ದಾನೆ. ಅವರ ಸೈನ್ಯವೆಲ್ಲವೂ ಭಯದಿಂದ ಓಡುತ್ತಿದೆ ಎಂದು ಶತ್ರುಗಳಿಗೆ ಭಯವುಂಟಾಗುವಂತೆಯೂ ತಮ್ಮ ಸೈನ್ಯಕ್ಕೆ ಪ್ರೋತ್ಸಾಹ ಉಂಟಾಗುವಂತೆಯೂ ವ್ಯವಹರಿಸಬೇಕು.

೮೧-೮೩. ಯೋಧರು ಭಯಪಟ್ಟು ಯುದ್ಧಭೂಮಿಯಿಂದ ಓಡಿದಲ್ಲಿ ಅಂತಹವರಿಗೆ ಕಠಿನವಾದ ದಂಡವನ್ನೇ ಮಾಡಬೇಕು. ಅದರಲ್ಲಿ ಕಲ್ಪನಾಕ್ರಮವೆಲ್ಲಾ ಧನುರ್ವೇದದಲ್ಲಿ ವಿಹಿತವಾಗಿರುತ್ತದೆ. ಪಾಪಾಚಾರಿಗಳನ್ನೂ, ವಂಚಕರನ್ನೂ, ಸಹ ಹಾಗೆಯೇ ಸೀಳಬೇಕು ಯುದ್ಧದಲ್ಲಿ ಶುಭಕರವಾದ ಸನ್ನಿವೇಶ ಉಂಟಾದಾಗ

ಪಾಶಾಶ್ಚ ದೇಯಾ ಧರ್ಮಜ್ಞ ತಥೈವ ಪರಮೋಹನಾಃ ।
ಪತಾಕಾಭ್ಯುಚ್ಛ್ರಯಃ ಕಾರ್ಯಃ ಸ್ವಬಲೇ ಚ ತಥಾ ಶುಭಃ ॥ ೮೨ ॥

ಸಂಸ್ಕಾರಶ್ಚೈವ ಕರ್ತವ್ಯೋ ವಾದಿತ್ರಾಣಾಂ ಭಯಾವಹಃ ।
ಏತಸ್ಯ ವರ್ಷಂ ವಕ್ಷ್ಯಾಮಿ ತವೋಪನಿಷದಿ ದ್ವಿಜ ॥ ೮೩ ॥

ಸಂಪ್ರಾಪ್ಯ ವಿಜಯಂ ಯುದ್ಧೇ ಕಾರ್ಯಂ ದೈವತಪೂಜನಂ ।
ಪೂಜಯೇದ್ಬ್ರಾಹ್ಮಣಾಂಶ್ಚಾತ್ರ ಗುರೂನಪಿ ಚ ಪೂಜಯೇತ್ ॥ ೮೪ ॥

ರತ್ನಾನಿ ರಾಜಗಾಮೀನಿ ಚರ್ಮ ವಾಹನಮಾಯುಧಂ ।
ಸರ್ವಮನ್ಯದ್ಭವೇತ್ತಸ್ಯ ಯದ್ಯೇನೈವ ರಣೇ ಹೃತಂ ॥ ೮೫ ॥

ಕುಲಸ್ತ್ರಿಯಸ್ತು ವಿಜ್ಞೇಯಾಸ್ತಥಾ ರಾಮ ನ ಕಸ್ಯಚಿತ್ ।
ಸ್ವದೇಶೇ ಪರದೇಶೇ ವಾ ಸಾಧ್ವೀಂ ಯತ್ನಾನ್ನ ದೂಷಯೇತ್ ॥ ೮೬ ॥

---

ಧ್ವಜವನ್ನು ಎತ್ತಿ ಹಿಡಿಯಬೇಕು. ವಾದ್ಯಗಳಿಗೆ ಶತ್ರುಗಳಿಗೆ ಭಯವನ್ನುಂಟು ಮಾಡುವ ಸಂಸ್ಕಾರಗಳನ್ನೂ ಮಾಡಬೇಕು. ಇದರ ವಿಸ್ತಾರವನ್ನೆಲ್ಲಾ ನಿನಗೆ ಉಪನಿಷತ್ತಿನಲ್ಲಿ ಹೇಳುತ್ತೇನೆ.

೮೫-೮೬. ಯುದ್ಧದಲ್ಲಿ ವಿಜಯಹೊಂದಿದವನು ದೇವತಾಪೂಜೆಯನ್ನೂ ಮತ್ತು ಗುರುಗಳ ಪೂಜೆಯನ್ನೂ ನಹ ವಿಶೇಷರೀತಿಯಿಂದ ನಡೆಸಬೇಕು. ಯುದ್ಧದಲ್ಲಿ ಸಿಕ್ಕಿದ ರತ್ನಗಳು ಅಥವಾ ಉತ್ಕೃಷ್ಟವಸ್ತುಗಳು ರಾಜನಿಗೇ ಸೇರತಕ್ಕವುಗಳು, ಗುರಾಣಿಗಳು, ವಾಹನಗಳು, ಆಯುಧಗಳು ಉಳಿದಪದಾರ್ಥಗಳೂ ಸಹ ಯಾವನು ಯುದ್ಧದಲ್ಲಿ ಯಾವ ವಸ್ತುಗಳನ್ನು ಅಪಹರಿಸುವನೋ ಆವಸ್ತುಗಳೆಲ್ಲವೂ ಅವನವನಿಗೆ ಸೇರತಕ್ಕುವು. ಕುಲಸ್ತ್ರೀಯರು ಮಾತ್ರ ಯಾರಿಗೂ ಸೇರಿದವರಲ್ಲ. ಸ್ವದೇಶದಲ್ಲಾಗಲಿ ಪರದೇಶದಲ್ಲಿಯಾಗಲಿ ಪತಿವ್ರತೆಯರಾದ ಕುಲವಧುಗಳನ್ನು ಯಾರೂ ಪ್ರಯತ್ನಪೂರ್ವಕವಾಗಿ ದೂಷಿಸಬಾರದು, ಹಾಗೆ ಮಾಡಿದಲ್ಲಿ ಬಹಳ ಭಯಂಕರವಾದ ಸಂಕರದೋಷವು ಉಂಟಾಗಿ ಲೋಕಕ್ಕೆ ಕ್ಷಯಕರವಾದೀತು.

ಅನ್ಯಥಾ ಸಂಕರೋ ಘೋರೋ ಭವತೀಹ ಕ್ಷಯಾವಹಃ ।
ಶಕ್ತಃ ಪ್ರಾಪ್ಯ ರಣೇ ಮುಕ್ತಃ ಪುತ್ರಸ್ತಸ್ಯ ಪ್ರಕೀರ್ತಿತಃ ॥ ೮೭ ॥

ಪುನಸ್ತೇನಾಥ ಯೋದ್ಧವ್ಯಂ ತಸ್ಯ ಧರ್ಮಂ ವಿಜಾನತಾ ।
ದೇಶೇ ದೇಶೇ ಯ ಆಚಾರಃ ಪಾರಂಪರ್ಯಕ್ರಮಾಗತಃ ॥ ೮೮ ॥

ಸ ಏವ ಪರಿಪಾಲ್ಯಃ ಸ್ಯಾತ್ಪ್ರಾಪ್ಯ ದೇಶಂ ಮಹೀಕ್ಷಿತಾ ।
ನೃಣಾಂ ಪ್ರದರ್ಶಯೇದ್ರಾಜಾ ಸಮರೇಪಿ ಹತೇ ರಿಪೌ ॥ ೮೯ ॥

ನಮೇ ಪ್ರಿಯಂ ಕೃತಂ ತೇನ ಯೇನಾಯಂ ಸಮರೇ ಹತಃ ।
ಕಿಂತು ಪೂಜಾಂ ಕರೋಮ್ಯಸ್ಯ ಸ್ವಚ್ಛಂದಮವಿಜಾನತಃ ॥ ೯೦ ॥

ಹತೋಯಂ ಮದ್ಧಿತಾರ್ಥಾಯ ಪ್ರಿಯಂ ಯದ್ಯಪಿ ನೋ ಮಮ ।
ಅಪುತ್ರಾಶ್ಚ ಸ್ತ್ರಿಯಶ್ಚೈವ ನೃಪತಿಃ ಪರಿಪಾಲಯೇತ್ ॥ ೯೧ ॥

---

೮೭-೮೯. ಸಮರ್ಥನಾದವನು ಯುದ್ಧಕ್ಕೆ ಹೋಗಿ ಶತ್ರುವಿನಿಂದ ಬಿಡುಗಡೆ ಹೊಂದಿದ್ದೇ ಆದರೆ ಅವನು ಶತ್ರುವಿಗೆ ಪುತ್ರನಂತೆಯೇ ಆಗುತ್ತಾನೆ ಹಾಗೆ ಬಿಡುಗಡೆ ಹೊಂದಿದವನು ಧರ್ಮದೃಷ್ಟಿಯಿಂದ ಪುನಃ ಯುದ್ಧಮಾಡಲೇಬೇಕು. ಧೊರೆಯಾದವನು ಯುದ್ಧದಲ್ಲಿ ರಾಜ್ಯವನ್ನು ಜಯಿಸಿದರೂ ಆದೇಶದಲ್ಲಿ ಪರಂಪರೆಯಿಂದ ಬಂದಿರುವ ಆಚಾರವನ್ನೇ ರಕ್ಷಿಸಬೇಕು. ರಾಜ್ಯಪಾಲನ ವಿಷಯದಲ್ಲಿ ಹೊಸದಾದ ತನ್ನ ಆಚಾರವನ್ನು ಅಲ್ಲಿ ಪ್ರಚಾರಕ್ಕೆ ತರಬಾರದು. ಯುದ್ಧದಲ್ಲಿ ಶತ್ರುವು ಹತನಾದಮೇಲೆಯೂ ಅಲ್ಲಿಯ ಜನಗಳಿಗೆ ಈವಿಧವಾದ ತನ್ನ ಆಶಯವನ್ನು ತಿಳಿಯಪಡಿಸಬೇಕು.

೯೦-೯೧. ಈ ಶತ್ರುವು ನನಗೆ ಪ್ರಿಯವಾದ ರೀತಿಯನ್ನು ಅನುಸರಿಸಲಿಲ್ಲವಾದುದರಿಂದಲೇ ಇವನು ಯುದ್ಧದಲ್ಲಿ ಮೃತನಾಗಿರುವನು. ತನ್ನ ಹಿತವನ್ನು ತಿಳಿಯದೆ ಮನಬಂದಂತೆ ವರ್ತಿಸಿದ ಇವನ ವಿಷಯದಲ್ಲಿ ನನಗೆ ದ್ವೇಷಬುದ್ಧಿಯಿಲ್ಲ ಇವನನ್ನು ನಾನು ಈಗಲೂ ಸತ್ಕರಿಸುತ್ತೇನೆ. ಇವನು ನನ್ನ ಹಿತಕ್ಕಾಗಿಯೇ ಪ್ರಾಣ ಬಿಟ್ಟಿರುವನು. ಇವನ ಮರಣವೇನೋ ನನಗೆ ಪ್ರಿಯವಲ್ಲ ಎಂದು ಘೋಷಿಸಬೇಕು. ರಾಜ್ಯದಲ್ಲಿರುವ ಅಪುತ್ರವಂತರನ್ನೂ ಅನಾಥೆಯರಾದ ಸ್ತ್ರೀಯರನ್ನೂ ಧೊರೆಯು ರಕ್ಷಿಸಬೇಕು. ಹೀಗೆ ವಿಜಯವನ್ನು ಹೊಂದಿದನಂತರ ಧೊರೆಯು ತನ್ನ ರಾಜಧಾನಿಗೆ

ತತಸ್ತು ಸ್ವಪುರಂ ಪ್ರಾಪ್ಯ ನೃಪತಿಃ ಪ್ರವಿಶೇದ್ಗೃಹಂ ।
ಯಾತ್ರಾವಿಧಾನವಿಹಿತಂ ಭೂಯೋ ದೈವತಪೂಜನಂ　　॥ ೯೨ ॥

ಪಿತೄಣಾಂ ಪೂಜನಂ ಚೈವ ತಥಾ ಕುರ್ಯಾದ್ವಿಶೇಷವತ್ ।
ಸಂವಿಭಾಗಂ ಪರಾವಾಪ್ತೇಃ ಕುರ್ಯಾದ್ಭೃತ್ಯಜನಸ್ಯ ತು　　॥ ೯೩ ॥

ಅವಾಪ್ಯ ಧರ್ಮೇಣ ನೃಪಸ್ತು ಪೃಥ್ವೀ-
ಮಾರಾಮಯೂಪಾದಿಸುರಾಲಯಾಂಕಾಂ ।
ಕೃತ್ವಾ ತಥಾನ್ಯಾಂ ದ್ವಿಜಸಾಚ್ಚ ಶಕ್ತ್ಯಾ
ಲೋಕಂ ಜಯತ್ಯನ್ಯ ನರಾಧಿಪಸ್ಯ　　॥ ೯೪ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ಶತ್ರುಪ್ರತ್ಯಭಿಗಮನೋ ನಾಮ ಸಪ್ತಸಪ್ತತ್ಯುತ್ತರಶತತಮೋಽಧ್ಯಾಯಃ

---

ಹಿಂತಿರುಗಿ ತನ್ನ ಮನೆಯನ್ನು ಪ್ರವೇಶಿಸಬೇಕು. ಯಾತ್ರಾವಿಧಾನಪ್ರಕರಣದಲ್ಲಿ ಹೇಳಿರುವ ದೇವತಾಪೂಜೆಯನ್ನು ವಿಶೇಷರೀತಿಯಿಂದ ಆಚರಿಸಬೇಕು.

೯೩-೯೪. ಪಿತೃದೇವತೆಗಳ ಪೂಜೆಯನ್ನೂ ಸಹ ಅದೇಕ್ರಮದಿಂದ ವಿಶೇಷ ರೀತಿಯಲ್ಲಿ ಆಚರಿಸಬೇಕು ಶತ್ರುಗಳಿಂದ ತನಗೆ ಪ್ರಾಪ್ತವಾದ ಭೂಮಿಯೇ ಮೊದಲಾದ ಸಮೃದ್ಧಿಗಳಲ್ಲಿ ಪರೋಪಕಾರದೃಷ್ಟಿಯಿಂದ ವಿಭಾಗಮಾಡಿ ಭೃತ್ಯರಿಗೆ ದಾನಾದಿಗಳನ್ನೂ ಮಾಡಬೇಕು. ಈರೀತಿ ಧೊರೆಯಾದವನು ತನ್ನ ಧರ್ಮಯುದ್ಧ ವೆಂಬ ವ್ಯಾಪಾರದಿಂದ ಉದ್ಯಾನ ಯೂಪಸ್ತಂಭ ದೇವಾಲಯ ಮೊದಲಾದುವು ಗಳಿಂದ ಭೂಷಿತವಾದ ಭೂಮಿಯನ್ನು ಹೊಂದಿ ಅಂತಹ ಭೂಮಿಯಲ್ಲಿ ಕೆಲವು ಭಾಗವನ್ನು ಬ್ರಾಹ್ಮಣರಿಗೆ ದಾನವಾಗಿ ಕೊಟ್ಟು ತನ್ನ ಶಕ್ತ್ಯಧೀನವಾದ ಈ ದಾನಾದಿ ಗಳಿಂದ ರಾಜಲೋಕವನ್ನು ಜಯಿಸುತ್ತಾನೆ. ರಾಜರಿಗೆ ಅರ್ಹವಾದ ದಿವ್ಯಲೋಕ ವನ್ನು ಹೊಂದುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ ಶತ್ರುವಿಗೆ ಅಭಿಮುಖವಾಗಿ ನಡೆಯುವ ಯುದ್ಧವ್ಯಾಪಾರವೆಂಬ ನೂರ ಎಪ್ಪತ್ತೇಳನೆಯ ಅಧ್ಯಾಯವು ಮುಗಿದಿದೆ.

|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಅಷ್ಟಸಪ್ತತ್ಯುತ್ತರಶತತಮೋಽಧ್ಯಾಯಃ

|| ರಾಮ ಉವಾಚ ||

**ಧನುರ್ವೇದಂ ಸಮಾಚಕ್ಷ್ವ ಸಂಕ್ಷೇಪಾತ್ಪುರನಂದನ ।**
**ಸರ್ವಂ ತ್ವಮೇವ ಜಾನಾಸಿ ಯಥಾ ದೇವಃ ಪಿತಾಮಹಃ** || ೧ ||

|| ಪುಷ್ಕರ ಉವಾಚ ||

**ಚತುಷ್ಪಾದೋ ಧನುರ್ವೇದಃ ತಥಾ ಪಂಚವಿಧೋ ದ್ವಿಜ ।**
**ರಥನಾಗಾಶ್ವಪತ್ತೀನಾಂ ಪಾದಾನಾಶ್ರಿತ್ಯ ಕೀರ್ತಿತಃ** || ೨ ||

**ಯಂತ್ರಮುಕ್ತಂ ಪಾಣಿಮುಕ್ತಂ ಮುಕ್ತಸಂಧಾರಿತಂ ತಥಾ ।**
**ಅಮುಕ್ತಂ ಬಾಹುಯುದ್ಧಂ ಚ ಪಂಚಧಾ ತತ್ಪ್ರಕೀರ್ತಿತಂ** || ೩ ||

---

### ನೂರ ಎಪ್ಪತ್ತೆಂಟನೇ ಅಧ್ಯಾಯ.

೧. ಭಾರ್ಗವನು ಪುನಃ ಪ್ರಶ್ನೆ ಮಾಡುತ್ತಾನೆ ದೇವತಾಂಶ ಸಂಭೂತನಾದ ಎಲೈ ಮಹಾತ್ಮನೇ, ಧನುರ್ವೇದವನ್ನು ಸಂಕ್ಷೇಪವಾಗಿ ಹೇಳಬೇಕು. ಸರ್ವಜ್ಞನಾದ ಚತುರ್ಮುಖನಂತೆ ನೀನು ಎಲ್ಲವನ್ನೂ ತಿಳಿದಿರುವೆ. ಇದಕ್ಕೆ ಉತ್ತರವಾಗಿ ಪುಷ್ಕರನು ಹೇಳುತ್ತಾನೆ.

೨-೩. ನಾಲ್ಕು ಪಾದಗಳುಳ್ಳ ಧನುರ್ವೇದವು ಐದು ವಿಧವಾಗಿದೆ. ರಥ, ಗಜ, ಕುದುರೆ, ಕಾಲಾಳುಗಳು ಇವುಗಳೆಂಬ ಪಾದಗಳ ಭೇದದಿಂದ ಚತುಷ್ಪಾದವಾಗಿ ವಿಭಾಗಿಸಲ್ಪಟ್ಟಿದೆ. ಈ ಐದು ಭೇದಗಳೂ ಸಹ, ಯಂತ್ರಮುಕ್ತ, ಪಾಣಿಮುಕ್ತ, ಮುಕ್ತಸಂಧಾರಿತ, ಅಮುಕ್ತ, ಬಾಹುಯುದ್ಧ ಎಂಬ ನಾಮಗಳಿಂದ ಪ್ರಸಿದ್ಧಿ ಹೊಂದಿವೆ.

ತಚ್ಚ ಶಸ್ತ್ರಾಸ್ತ್ರಸಂಪತ್ತ್ಯಾ ದ್ವಿವಿಧಂ ಪರಿಕೀರ್ತಿತಂ ।
ದಂಡಮಾಯಾವಿಭೇದೇನ ಭೂಯೋ ದ್ವಿವಿಧಮುಚ್ಯತೇ ॥ ೪ ॥

ಋಜುಮಾಯಾವಿಭೇದೇನ ಭೂಯೋ ದ್ವಿವಿಧಮುಚ್ಯತೇ ।
ಕ್ಷೇಪಣೀ ಚಾಪಯಂತ್ರಾದ್ಯಂ ಯಂತ್ರಮುಕ್ತಂ ಪ್ರಕೀರ್ತಿತಂ ॥ ೫ ॥

ಶಿಲಾ ತೋಮರ ಚಕ್ರಾದ್ಯಂ ಪಾಣಿಮುಕ್ತಂ ತಥೈವ ಚ ।
ಮುಕ್ತಸಂಧಾರಿತಂ ಜ್ಞೇಯಂ ಪಾಶಾದ್ಯಮಪಿ ಯದ್ಭವೇತ್ ॥ ೬ ॥

ಖಡ್ಗಾದಿಕಮನುಕ್ತಂ ಚ ತಥಾಜ್ಞೇಯಂ ಮಹಾಭುಜ ।
ನಿಯುದ್ಧಂ ವ್ಯಾಯುಧಂ ಜ್ಞೇಯಂ ಪಾಣಿಪ್ರಹರಣಾದಿಕಂ ॥ ೭ ॥

ತತ್ರಾದಾವೇವ ಯೋಗ್ಯತ್ವಂ ಗಾತ್ರಾಣಾಂ ತು ವಿಧೀಯತೇ ।
ತಥಾ ವ್ಯಾಯಾಮಚಾರಿತ್ವಂ ಭಾರಕರ್ಷಣಮೇವ ಚ ॥ ೮ ॥

---

೪–೬. ಆ ಯುದ್ಧವೂ ಕೂಡ ಶಸ್ತ್ರಾಸ್ತ್ರಗಳ ಬಲದಿಂದ ಎರಡು ವಿಧವಾಗಿದೆ. ದಂಡ, ಮಾಯಾ ಎಂಬ ಭೇದದಿಂದ ಅದೂ ಎರಡು ವಿಧವಾಗುತ್ತದೆ ಋಜು ಮಾಯಾವಿ ಎಂಬ ಭೇದದಿಂದ ಮತ್ತೂ ಎರಡು ವಿಧಗಳಾಗುತ್ತದೆ. ಇವುಗಳಲ್ಲಿ ಕವಣೆ, ಧನುಸ್ಸು ಇವುಗಳಿಂದ ಮಾಡುವ ಯುದ್ಧವು ಯಂತ್ರಮುಕ್ತವೆಂದು ಹೇಳಲ್ಪಡುತ್ತದೆ. ಕಲ್ಲು, ಒನಕೆ. ಚಕ್ರಾಯುಧ ಇವುಗಳ ಪ್ರಯೋಗದಿಂದ ಮಾಡುವ ಯುದ್ಧವು ಪಾಣಿಮುಕ್ತವೆಂದು ಹೇಳಲ್ಪಡುತ್ತದೆ. ಪಾಶಾಯುಧ ಪ್ರಯೋಗದಿಂದ ನಡೆಸುವ ಯುದ್ಧವು ಮುಕ್ತಸಂಧಾರಿತವೆಂದು ತಿಳಿಯಬೇಕು. ಹಿಂದೆ ಹೇಳದೆ ಇರುವ ಖಡ್ಗಾದಿಯುದ್ಧವೂ ಈ ಮುಕ್ತಸಂಧಾರಿತದಲ್ಲಿಯೇ ಸೇರುತ್ತದೆ ಎಂದೂ ತಿಳಿಯಬೇಕು.

೭–೯. ಆಯುಧವಿಲ್ಲದೆ ಕೈಗಳಿಂದಲೇ ಪ್ರಹರಿಸಿ ಮಾಡುವ ಯುದ್ಧವು ನಿಯುದ್ಧವೆನಿಸುತ್ತದೆ. ಇದಕ್ಕೆ ಅರ್ಹನಾಗುವವನು ಮೊದಲೇ ಅವಯವಗಳ ದಾರ್ಢ್ಯವನ್ನು ಸರಿಯಾಗಿ ಹೊಂದಿರಬೇಕು. ಹಾಗೆಯೇ ಬಹುಮಟ್ಟಿಗೆ ವ್ಯಾಯಾಮಾಭ್ಯಾಸವೂ ಭಾರವಾದ ವಸ್ತುಗಳನ್ನು ಸೆಳೆಯುವ ಸಾಮರ್ಥ್ಯವೂ ಇರಬೇಕು. ಯುದ್ಧಕ್ಕೆ ಅರ್ಹನಾಗಬೇಕಾದರೆ ಅಥವಾ ಯುದ್ಧದಲ್ಲಿ ಕೃತಕೃತ್ಯನಾಗಬೇಕಾದರೆ

ಜಿತಶ್ರಮೋ ಹಿ ಯುದ್ಧೇಷು ಕರ್ಮಯೋಗ್ಯತ್ವಮಾಪ್ನುಯಾತ್ ।
ರಥಾಶ್ವಗಜಪೃಷ್ಠೇಷು ತಾನಿ ಶಸ್ತ್ರಾಣಿ ಚಾಭ್ಯಸೇತ್ ॥ ೯ ॥

ತಾನಿ ವೈ ಖಡ್ಗಮುಖ್ಯಾನಿ ಬಾಹುಪ್ರತ್ಯವರಾಣಿ ಚ ।
ಧನುರ್ವೇದೇ ಗುರುರ್ವಿಪ್ರಃ ಪ್ರೋಕ್ತೋ ವರ್ಣದ್ವಯಸ್ಯ ಚ ॥ ೧೦ ॥

ವೈಶ್ಯಸ್ಯ ಗುರುತಾಂ ಕುರ್ಯಾನ್ನ ವಾ ಕುರ್ಯಾತ್ತಥಾ ದ್ವಿಜಃ ।
ಧನುರ್ವೇದೇ ನ ಗುರುತಾಂ ಶೂದ್ರಃ ಕುರ್ಯಾತ್ಕದಾಚನ ॥ ೧೧ ॥

ಸ್ವಯಮೇವ ತು ಶೂದ್ರಂ ಚ ಕರ್ತವ್ಯಾ ಕರ್ಮಯೋಗ್ಯತಾ ।
ತಸ್ಮಾದ್ಯುದ್ಧಾಧಿಕಾರೋಽಸ್ತಿ ಶೂದ್ರಸ್ಯಾಪಿ ವಿಶಾಂಪತೇ ॥ ೧೨ ॥

ಸಂಗರಾಣಾಮಪಿ ತಥಾ ಹಿತಃ ಸ್ಯಾತ್ಸ್ವಯಂ ಪ್ರಭೋಃ ।
ಸರ್ವರತ್ನೈರ್ಮಹಾರಾಜ ರಾಜಾ ರಕ್ಷ್ಯಃ ಪ್ರಯತ್ನತಃ ॥ ೧೩ ॥

---

ಅವನು ಬಹು ಮಟ್ಟಿಗೂ ಶ್ರಮ ಸಹಿಷ್ಣುವಾಗಿರಬೇಕು. ರಥ, ಕುದುರೆ, ಆನೆ ಇವುಗಳ ಮೇಲೆ ಕುಳಿತು ಶಸ್ತ್ರಪ್ರಹಾರ ಕ್ರಮವನ್ನು ಅಭ್ಯಾಸ ಮಾಡಿರಬೇಕು. ಅಂತಹ ಆಯುಧಗಳೆಂದರೆ ಖಡ್ಗ ಮೊದಲುಗೊಂಡು (ನಿಯುದ್ಧಕ್ಕೆ ಅರ್ಹವಾದ) ಬಾಹು ಪರ್ಯಂತವೂ ಅವೇ ಆಗಿವೆ.

೧೦-೧೨. ಧನುರ್ವೇದದಲ್ಲಿ ಬ್ರಾಹ್ಮಣ ಕ್ಷತ್ರಿಯ ಈ ಎರಡು ವರ್ಣಗಳಿಗೂ ಬ್ರಾಹ್ಮಣನೇ ಗುರುವಾಗಿರಬೇಕೆಂದು ಹೇಳಲ್ಪಟ್ಟಿವೆ. ವೈಶ್ಯನಿಗೆ ಬ್ರಾಹ್ಮಣನೇ ಗುರುವಾಗಿರುವ ವಿಷಯದಲ್ಲಿ ಕಾಮಾಚಾರ, (ನಿರ್ಬಂಧವಿಲ್ಲ) ಧನುರ್ವೇದದಲ್ಲಿ ಶೂದ್ರನು ಯಾವಾಗಲೂ ಗುರುವಾಗಿರಕೂಡದು ಆದರೆ ಅಂತಹ ಧನುರ್ವೇದದ ಶಿಕ್ಷಣದಿಂದ ತಾನೇ ತಾನಾಗಿ ಯುದ್ಧಕ್ಕೆ ಅರ್ಹತೆಯನ್ನು ಹೊಂದಬಹುದು. ಆದುದ ರಿಂದ ಶೂದ್ರನಿಗೂ ಯುದ್ಧದಲ್ಲಿ ಅಧಿಕಾರವಿದ್ದೇ ಇದೆ.

೧೩-೧೪. ಆದುದರಿಂದ ಯುದ್ಧದಲ್ಲಿ ಭಾಗವಹಿಸುವುದರಿಂದ ತನ್ನ ಸ್ವಾಮಿ ಗೂ ಹಿತವನ್ನುಂಟುಮಾಡುವ ಅವಕಾಶವು ಶೂದ್ರನಿಗೂ ಇರುತ್ತದೆ. ಯುದ್ಧದಲ್ಲಿ ಉತ್ಕೃಷ್ಟವಾದ ಸಕಲ ವಸ್ತುಗಳ ವ್ಯಯದಿಂದಲಾದರೂ ರಾಜನನ್ನು ಪ್ರಯತ್ನದಿಂದ ರಕ್ಷಿಸಲೇ ಬೇಕು ಇಂತಹ ಯುದ್ಧ ವ್ಯಾಪಾರಕ್ಕಾಗಿ ಆಸಕ್ತಿ, ಭಕ್ತಿ, ಸೌಶೀಲ್ಯ,

ಶ್ರದ್ಧಾವತೋ ಭಕ್ತಿಮತಃ ಸುಶೀಲಾನ್
ನಮ್ರಾನ್ ವಿನೀತಾನ್ ಕ್ಷಮಯೋಪಪನ್ನಾನ್ ।
ಸ್ನಿಗ್ಧಾನ್ನರೇಶಾನ್ ಸುದೃಢಾನ್ಮನೋ ಜ್ಞಾ
ನಧ್ಯಾಪನೀಯಾಂಸ್ತು ವದಂತಿ ಸಂತಃ ॥ ೧೪ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ಧನುರ್ವೇದವರ್ಣನೋ ನಾಮ
ಅಷ್ಟಸಪ್ತತ್ಯುತ್ತರಶತತಮೋಽಧ್ಯಾಯಃ

---

ನಮ್ರತೆ, ಕಾಂತಿ ಇತ್ಯಾದಿ ಗುಣಗಳಿಂದ ಕೂಡಿರುವ ಮತ್ತು ಸ್ನೇಹಶಾಲಿಗಳಾಗಿಯೂ ದೃಢಾಂಗರಾಗಿಯೂ ಸುರೂಪರಾಗಿಯೂ ಇರುವ ರಾಜರುಗಳನ್ನು ಧನುರ್ವಿದ್ಯೆಯಲ್ಲಿ ಪಾರಂಗತರಾಗುವಂತೆ ಶಿಕ್ಷಿಸಿ ಸಮರ್ಥರನ್ನಾಗಿ ಮಾಡಬೇಕೆಂದು ವಿದ್ಯಾನಿಪುಣರಾದ ಸತ್ಪುರುಷರು ಹೇಳುತ್ತಾರೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದ ಮಾರ್ಕಂಡೇಯ ಸಂವಾದದಲ್ಲಿ
ಧನುರ್ವೇದ ವರ್ಣನವೆಂಬ ನೂರ ಎಪ್ಪತ್ತೆಂಟನೆಯ
ಅಧ್ಯಾಯ ಮುಗಿದಿದೆ.



|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಏಕೋನಾಶೀತ್ಯುತ್ತರಶತತಮೋಽಧ್ಯಾಯಃ

|| ಪುಷ್ಕರ ಉವಾಚ ||

**ಪಾಣಿಪಾದತಲೇ ಪೃಷ್ಠಂ ಸರ್ವೇಸ್ಯುಃ ಸಂಹತಾ ಯ್ಯದಿ ।**
**ದೃಷ್ಟಂ ಸಾಮಪದಂ ಸ್ಥಾನಮೇತಲ್ಲಕ್ಷಣತಸ್ತಥಾ || ೧ ||**

**ಬಾಹ್ಯಾಂಗುಲಿಃ ಸ್ಫಿಜೌ ಪಾದೌ ಸ್ತಬ್ಧಜಾನುಬಲಾವುಭೌ ।**
**ತ್ರಿವಿತಸ್ತ್ಯಂತರಾಯಾಮಮೇವಂ ವೈಶಾಖಮುಚ್ಯತೇ || ೨ ||**

**ಮಂಡಲಾಕಾರಪಾದಾಭ್ಯಾ ಮುಚ್ಯತೇ ಯತ್ರ ಜಾನುನೀ ।**
**ಚತುರ್ವಿಧಂ ತ್ರಿವಿಚ್ಛಿನ್ನಂ ತದೇವಂ ಮಂಡಲಂ ಸ್ಮೃತಂ || ೩ ||**

---

### ನೂರ ಎಪ್ಪತ್ತೊಂಭತ್ತನೆಯ ಅಧ್ಯಾಯ.

೧–೪. ಪುಷ್ಕರನು ಹೇಳುತ್ತಾನೆ. ಕೈಕಾಲುಗಳು ಬೆನ್ನಿನ ಭಾಗ ಮೊದಲಾದ ಎಲ್ಲಾ ಅವಯವಗಳೂ ಸೇರಿಕೊಂಡಲ್ಲಿ ಇಂತಹ ಸ್ಥಾನಕ್ಕೆ ಲಕ್ಷಣ ದೃಷ್ಟಿಯಿಂದ ಸಾಮ ಪದವೆಂದು ಹೆಸರು. ಬೆರಳುಗಳು ಹೊರಗೆ ಕಾಣುತ್ತಾ ಪಾದಗಳು ಕುಂಡೆಯ ಮೇಲ್ಭಾಗದಲ್ಲಿ ಸೇರಿ ಮಂಡಿಗಳೆರಡೂ ಸ್ತಬ್ಧವಾಗಿ ನಿಂತಲ್ಲಿ ಎರಡು ಮಂಡಿಗಳಿಗೂ ಮೂರು ಜೋಟು ಅಂತರ ವಿದ್ದಲ್ಲಿ ಈ ಸ್ಥಾನವು ವೈಶಾಖವೆಂದು ಹೇಳಲ್ಪಡುತ್ತದೆ. ಮಂಡಿಗಳು ಮೇಲ್ಮುಖವಾಗಿದ್ದು ಪಾದಗಳು ಮಂಡಲಾಕಾರವಾಗಿದ್ದಲ್ಲಿ ಪಾದಗಳ ಮತ್ತು ಮಂಡಿಗಳ ಆಕಾರದಿಂದ ನಾಲ್ಕು ವಿಧವಾದ ಮೂರು

ಫಲಾಕೃತಿಸಮಂ ಯಚ್ಚ ಸ್ತಬ್ಧಜಾನೂರುದಕ್ಷಿಣಂ ।
ವಿತಸ್ತಿಪಂಚವಿಸ್ತಾರಂ ತದಾಲೀಢಂ ಪ್ರಕೀರ್ತಿತಂ ॥ ೪ ॥

ನಮಿತಾ ಪೂರ್ವಜಂಘಾ ಚ ಸದಾಲೀಢೇ ವಿಧೀಯತೇ ।
ತಿರ್ಯಗ್ಗತೋ ಭವೇದ್ವಾಮೋ ದಕ್ಷಿಣೋತಿ ಭವೇದೃಜುಃ ॥ ೫ ॥

ಗುಲ್ಫೌ ಪಾರ್ಷ್ಣಿಸ್ಥಿತಾವೇವ ಸ್ಥಿರೌ ಪಂಚಾಂಗುಲಾನ್ತರೌ ।
ಸ್ಥಾನಂ ಜಾತಂ ಭವೇದೇತತ್ ದ್ವಾದಶಾಂಗುಲಮಾಯತಂ ॥ ೬ ॥

ಏತದೇವ ವಿಪರ್ಯಸ್ತಂ ಪ್ರತ್ಯಾ[1]ಖ್ಯಾತಂ ಪ್ರಕೀರ್ತಿತಂ ।
ಕುಬ್ಜಜಾನುರ್ಭವೇದ್ವಾಮೋ ದಕ್ಷಿಣಸ್ತು ಪ್ರಸಾರಿತಃ ॥ ೭ ॥

ಅಥವಾ ದಕ್ಷಿಣಂ ಜಾನು ಕುಬ್ಜಂ ಭವತಿ ನಿಶ್ಚಲಂ ।
ಭವೇದ್ದಂಡಾಯತೋ ವಾಮಶ್ಚರಣಃ ಸಹ ಜಾನುನಾ ॥ ೮ ॥

---

ಗೇಣಿನ ಅಂತರವುಳ್ಳ ಈ ಸ್ಥಾನವು ಮಂಡಲಸ್ಥಾನವೆನಿಸುವುದು. ಬಲಭಾಗದ ಮಂಡಿ ಮತ್ತು ತೋಳುಗಳು ಸ್ಥಬ್ಧವಾಗಿದ್ದು ಫಲದ ಆಕೃತಿಯಂತೆ ಐದು ಗೇಣು ವಿಸ್ತಾರವುಳ್ಳ ಸ್ಥಾನವು ಆಲೀಢವೆನಿಸುತ್ತದೆ.

೫–೮. ಆಲೀಢವೆಂಬ ಸ್ಥಾನದಲ್ಲಿ ಮುಂಭಾಗದ ಮೊಣಕಾಲು ಯಾವಾಗಲೂ ಬಗ್ಗಿಯೇ ಇರಬೇಕು. ಎಡಗಾಲು ಅಡ್ಡಲಾಗಿದ್ದು ಬಲಗಾಲು ಋಜುವಾಗಿದ್ದು ಕಾಲಿನ ಹಡರುಗಳು ಪಕ್ಕದಲ್ಲಿ ಸ್ಥಿರವಾಗಿ ನಿಂತಲ್ಲಿ ಐದು ಅಂಗುಲ ಅಂತರದಿಂದ ಈ ಸ್ಥಾನವು ಉಂಟಾಗುತ್ತದೆ. ಈ ಸ್ಥಾನವೇ ಹನ್ನೆರಡು ಅಂಗುಲ ಅಡ್ಡಗಲದಲ್ಲಿ ಉಂಟಾದಲ್ಲಿ ಜಾತಸ್ಥಾನವೆನಿಸುತ್ತದೆ ಈ ಸ್ಥಾನವೇ ವ್ಯತ್ಯಸ್ತನ್ಯಾಸದಿಂದ ಕೂಡಿದಲ್ಲಿ ಪ್ರತ್ಯಾಖ್ಯಾತವೆನಿಸುತ್ತದೆ. ಎಡಗಾಲಿನ ಮಂಡಿಯು ಕುಳ್ಳಾಗಿದ್ದು ಬಲಗಾಲು ಮಾತ್ರ ನೀಡಿದ್ದಲ್ಲಿ ಅಥವಾ ಬಲದ ಮಂಡಿಯು ಕುಳ್ಳಾಗಿದ್ದು ನಿಶ್ಚಲವಾಗಿದ್ದು ಎಡಗಾಲು ನೀಡಿದ್ದಲ್ಲಿ ದಂಡಾಯತವೆಂಬ ಸ್ಥಾನವುಂಟಾಗುತ್ತದೆ.

---

1 ಇಲ್ಲಿ ಪ್ರತ್ಯಾಲೀಢಂ ಎಂದು ಪಾಠವಿರಬೇಕು.

ಏವಂ ವಿಕಚ್ಛಮುದ್ದಿಷ್ಟಂ ದ್ವಿಹಸ್ತಾನ್ತರಮಾಯತಂ ।
ಜಾನುನೀ ದ್ವಿಗುಣಾ ಸ್ಯಾತಾಂ ಹ್ಯತ್ತಾನೌ ಚರಣಾವಪಿ ॥ ೯ ॥

ಅನೇನ ವಿನಿಯೋಗೇನ ಸಮ್ಪುಟಂ ಪರಿಕೀರ್ತಿತಂ ।
ಕಿಂಚಿದ್ವಿವರ್ತಿತೌ ಪಾದೌ ಸಮದಂಡಾಯತೌ ಸ್ಥಿರೌ ॥ ೧೦ ॥

ದೃಷ್ಟಮೇವ ಯಥಾನ್ಯಾಯಂ ಷೋಡಶಾಂಗುಲಮಾಯತಂ ।
ಸ್ವಸ್ತಿಕೇನಾತ್ರ ಕುರ್ವೀತ ಪ್ರಣಾಮಂ ಪ್ರಥಮಂ ದ್ವಿಜಃ ॥ ೧೧ ॥

ಕಾರ್ಮುಕಂ ಭೃಗುವಾಮೇನ ವಾಮಂ ದಕ್ಷಿಣಕೇನ ವಾ ।
ವೈಶಾಖೇಪ್ಯಥವಾ ಜಾತೇ ಸ್ಥಿತೋವಾಪ್ಯಥವಾಯತೇ ॥ ೧೨ ॥

ಗುಣಾಗ್ರಂತು ತತಃ ಕೃತ್ವಾ ಕಾರ್ಮುಕೇ ಪ್ರಿಯಕಾರ್ಮುಕಃ ।
ಅಧಃಕೋಟಿಂ ತು ಧನುಷಃ ಫಲದೇಶೇ ಚ ಪತ್ರಿಣಃ ॥ ೧೩ ॥

---

೯–೧೨. ಹೀಗೆಯೇ ಎರಡು ಮೊಳದಷ್ಟು ವಿಸ್ತಾರವುಳ್ಳ ಈ ಸ್ಥಾನವು ವಿಕಚ್ಛವೆನಿಸುತ್ತದೆ. ಕಾಲುಗಳೆರಡೂ ಮೇಲ್ಮುಖವಾಗಿದ್ದು ಮಂಡಿಗಳು ದ್ವಿಗುಣವಾಗಿ ನಿಂತಲ್ಲಿ ಇದು ಸಂಪುಟ ಸ್ಥಾನವೆನಿಸುತ್ತದೆ. ಪಾದಗಳು ಸ್ವಲ್ಪ ತಿರಿಗಿದ್ದು ದಂಡದಂತೆ ಒಂದೇ ಸಮನಾಗಿ ನೀಡಿ ಸ್ಥಿರವಾಗಿದ್ದಲ್ಲಿ ದೃಷ್ಟವೆಂಬ ಸ್ಥಾನ ಉಂಟಾಗುತ್ತದೆ. ದ್ವಿಜನಾದವನು ಮೊದಲು ಪ್ರಣಾಮವನ್ನು ಸ್ವಸ್ತಿಕ ಸ್ಥಾನದಿಂದ ನಿಂತು ಮಾಡಬೇಕು ಧನುಸ್ಸನ್ನು ಆಯಾಯ ಸ್ವಸ್ತಿಕಕ್ಕೆ ತಕ್ಕಂತೆ ಎಡಭಾಗದಲ್ಲಿಯೋ ಬಲಭಾಗದಲ್ಲಿಯೋ ಇಟ್ಟುಕೊಂಡಿರಬಹುದು. ಅಥವಾ ವೈಶಾಖ, ಜಾತ, ಆಯತ, ಈ ಸ್ಥಾನಗಳಲ್ಲಿಯೂ ಮಾಡಬಹುದು.

೧೩–೧೭. ಅನಂತರ ಮೌರ್ವಿಯನ್ನು ಅಗ್ರಭಾಗದಿಂದ ಧನುಸ್ಸಿನಲ್ಲಿ ಕಟ್ಟಿ ಧನುಸ್ಸಿನ ಕೆಳಗಿನ ತುದಿಯನ್ನೂ, ಬಾಣದ ಅಲುಗಿನ ತುದಿಯನ್ನೂ ಭೂಮಿಯಲ್ಲಿಟ್ಟು ಪ್ರೀತಿಯಿಂದ ಮುದ್ದಿಸಿ, ಕೊಕ್ಕರಿಸಲ್ಪಟ್ಟ ಹಸ್ತಗಳಿಂದ ಕೂಡಿದ ಭುಜಗಳಿಂದ ಧನುಸ್ಸನ್ನೂ, ಬಾಣವನ್ನೂ ತೆಗೆದುಕೊಂಡು ಆ ಧನುಸ್ಸಿನಲ್ಲಿ ಬಾಣದ ಅಗ್ರಭಾಗದಿಂದ ಹನ್ನೆರಡಂಗುಲ ಅಂತರವಿರುವಂತೆ ವಿನ್ಯಾಸಮಾಡಬೇಕು.

ಧರಣ್ಯಾಂ ಸ್ಥಾಪಯಿತ್ವಾ ತು ಲಾಲಯಿತ್ವಾ ತಥೈವ ಚ ।
ಭುಜಾಭ್ಯಾಮತ್ರ ಕುಬ್ಜಾಭ್ಯಾಂ ಪ್ರಕೋಷ್ಠಾಭ್ಯಾಮರಿಂದಮ ॥ ೧೪ ॥

ನ್ಯಸ್ಯ ಬಾಣಂ ಧನುಃ ಶ್ರೇಷ್ಠೇ ಪುಂಖದೇಶೇತು ಪತ್ರಿಣಃ ।
ವಿನ್ಯಾಸೋ ಧನುಷಶ್ಚೈವ ದ್ವಾದಶಾಂಗುಲಮಂತರಃ ॥ ೧೫ ॥

ತಯೋರ್ಭಾರ್ಗವ ಕರ್ತವ್ಯೋ ನಾತೋ ಹೀನೋ ನಚಾಧಿಕಃ ।
ನಿವೇಶ್ಯ ಕಾರ್ಮುಕಂ ಕಂಠೇ ನಿತಂಬೇ ಶರಸಂಕರಂ ॥ ೧೬ ॥

ಉತ್ಕ್ಷಿಪೇದಸ್ಥಿರಂ ಹಸ್ತಮನ್ತರೇಣಾಕ್ಷಿ ಕರ್ಣಯೋಃ ।
ಪೂರ್ವೇಣ ಮುಷ್ಟಿನಾ ಗ್ರಾಹ್ಯಃ ಸ್ತನಾಗ್ರಂ ದಕ್ಷಿಣಃ ಶರಃ ॥ ೧೭ ॥

ಹರಣಂ ತು ತತಃ ಕೃತ್ವಾ ಶೀಘ್ರಂ ಪೂರ್ವಂ ಪ್ರಸಾರಯೇತ್ ।
ನಾತ್ಯಂತರಾ ನೈವ ಬಾಹ್ಯಾ ನೋರ್ಧ್ವಗಾ ನಾಧರಾಸ್ತಥಾ ॥ ೧೮ ॥

ನ ಚ ಕುಬ್ಜಾ ನ ಚೋತ್ತಾನಾ ನ ಚಲಾ ನಾತಿ ವೇಷ್ಟಿತಾಃ ।
ಸಮಾಃ ಸ್ಥೈರ್ಯಗುಣೋಪೇತಾಃ ಪೂರ್ವೇ ದಂಡಮಿವ ಸ್ಥಿತಾಃ ॥ ೧೯ ॥

---

ಈ ಅಂತರಕ್ಕಿಂತ ಹೆಚ್ಚಾಗಿಯಾಗಲಿ, ಕಡಿಮೆಯಾಗಿಯಾಗಲಿ ವಿನ್ಯಾಸಮಾಡ ಬಾರದು. ಯಾವಾಗಲೂ ಧನುಸ್ಸನ್ನು ಕಂಠಭಾಗದಲ್ಲಿಯೂ, ಬಾಣಗಳಿರುವ ಬತ್ತಳಿಕೆಯನ್ನು ಹಿಂಭಾಗದ ಬೆನ್ನಿನಲ್ಲಿಯೂ ಇಟ್ಟುಕೊಂಡಿರಬೇಕು. ಬಾಣವನ್ನು ಬಿಡುವಾಗ ವೇಗದಿಂದ ಕೂಡಿದ ಬಲಗೈಯನ್ನು ಕಣ್ಣು ಮತ್ತು ಕಿವಿಗಳ ಮಧ್ಯ ದಲ್ಲಿರುವಂತೆ ಇಟ್ಟುಕೊಂಡು ಬಾಣವನ್ನು ಬಿಡಬೇಕು. ಮೊದಲು ಬಲಗೈಯ್ಯಿನಿಂದ ಬಾಣವನ್ನು ಸ್ತನದ ಸ್ಥಾನದಲ್ಲಿಟ್ಟು ಗ್ರಹಿಸಬೇಕು.

೧೮–೨೧. ಬಾಣವನ್ನು ನೇರಿಸಿದೊಡನೆಯೇ ಎಡಗೈಯ್ಯನ್ನು ನೀಡಬೇಕು. ಇಂತಹ ಬಾಣಗಳನ್ನು ಬಹಳ ಒಳಕ್ಕೂ, ಬಹಳ ಹೊರಕ್ಕೂ, ಬಹಳ ಮೇಲಕ್ಕೂ, ಬಹಳ ಕೆಳಕ್ಕೂ, ಕುಳ್ಳಾಗಿಯೂ, ಮೇಲ್ಮುಖವಾಗಿಯೂ, ಅಸ್ಥಿರವಾಗಿಯೂ, ಬಹಳ ಸುತ್ತಿನೊಡನೆಯೂ ಬಿಡಬಾರದು. ಸಮವಾಗಿಯೂ, ಸ್ಥಿರವಾಗಿಯೂ, ಮುಂಭಾಗದ ದಂಡದಂತೆಯೂ ಈ ಬಾಣಗಳು ಇರಬೇಕು. ಈ ರೀತಿ ಮೊದಲನೆಯ ಮುಷ್ಟಿಯಿಂದ ಲಕ್ಷ್ಯವನ್ನು ಗುರಿಯಿಟ್ಟು ಹೊಡೆದು ಅನಂತರ ಒಡನೆಯೇ ಮೇಲಕ್ಕೆ

ಛಾದಯಿತ್ವಾ ತತೋ ಲಕ್ಷ್ಯಂ ಪೂರ್ವೇಣಾನೇನ ಮುಷ್ಟಿನಾ ।
ತರಸಾ ತೂತ್ಥಿತೋ ಯತ್ನಾತ್ತ್ರಿಕೋಣವಿನತಿಸ್ಥಿತಃ ॥ ೨೦ ॥

ಸ್ರಸ್ತಾಂಸೋ ನಿಶ್ಚಲಗ್ರೀವೋ ಮಯೂರಾಂಚಿತಮಸ್ತಕಃ ।
ಲಲಾಟನಾಸಾವಕ್ತ್ರಾಂಸಃ ಕೂರ್ಪರಶ್ಚ ಸಮಂ ಭವೇತ್ ॥ ೨೧ ॥

ಅಂತರಂ ತ್ವಂಗುಲಂ ಜ್ಞೇಯಂ ಚಿಬುಕಸ್ಯಾಂಸಕಸ್ಯ ಚ ।
ಪ್ರಥಮೇ ತ್ರ್ಯಂಗುಲೇ ವಿಂಧ್ಯಾದ್ವಿತೀಯೇ ದ್ವ್ಯಂಗುಲಂ ಸ್ಮೃತಂ ॥ ೨೨ ॥

ತೃತೀಯೇಂಗುಲಮುದ್ದಿಷ್ಟಂ ಚಾಯತಂ ಚಿಬುಕಾಂಸಯೋಃ ।
ಗೃಹೀತ್ವಾ ಸಾಯಕಂ ತತ್ರ ತರ್ಜನ್ಯಂಗುಷ್ಠಮೇವ ಚ ॥ ೨೩ ॥

ಅನಾಮಯಾ ತತೋ ಗೃಹ್ಯ ಪುನರ್ಮಧ್ಯಮಯಾಪಿ ಚ ।
ತಾವದಾಕರ್ಷಯೇದ್ಯೋಗಾದ್ಯಾವದ್ಬಾಣಃ ಸುಪೂರಿತಃ ॥ ೨೪ ॥

---

ಎದ್ದು ತ್ರಿಕೋಣವಿನತಿ ಎಂಬ ಸ್ಥಾನಾನುಗುಣವಾಗಿ ನಿಂತು, ಸ್ಥಿರವಾದ ಕುತ್ತಿಗೆಯಿಂದಲೂ, ಜೋಲುಬಿಟ್ಟ ಭುಜಗಳಿಂದಲೂ ನಿಂತು, ನವಿಲಿನಂತೆ ತಲೆಯನ್ನಿಟ್ಟುಕೊಂಡು ನೋಡಬೇಕು. ಅಂತಹ ಸ್ಥಿತಿಯಲ್ಲಿ ಮುಖ, ಮೂಗು, ಹೆಗಲು, ಮೊಣಕೈ ಎಲ್ಲವೂ ಸಮವಾಗಿರಬೇಕು.

೨೨–೨೫ ಇಂತಹ ಸ್ಥಿತಿಯಲ್ಲಿ ಭುಜಕ್ಕೂ, ಗಡ್ಡದ ತುದಿಗೂ, ಒಂದು ಅಂಗುಲ ಮಾತ್ರ ಅಂತರವಿರಬೇಕು. ಬಾಣದಿಂದ ಹೊಡೆಯುವಾಗ ಮೊದಲು ಮೂರು ಅಂಗುಲವೂ, ಅನಂತರ ಎರಡು ಅಂಗುಲವೂ, ಮೂರನೇ ಸಲ ಒಂದು ಅಂಗಲವೂ ಭುಜ ಮತ್ತು ಗಡ್ಡದ ತುದಿಗೆ ಅಂತರವಿರಬೇಕು. ಅನಂತರ ಬಾಣವನ್ನು ತರ್ಜನೀ ಅಂಗುಷ್ಠಗಳಿಂದಲೂ, ಆಮೇಲಾಮೇಲೆ ಅನಾಮಿಕಾ ಮಧ್ಯಮಾಂಗಲುಗಳಿಂದಲೂ ತೆಗೆದು ಧನುಸ್ಸಿನಲ್ಲಿಟ್ಟು ಎಷ್ಟು ಎಳೆದಲ್ಲಿ ಬಾಣವು ಪೂರ್ಣವಾಗುವುದೋ ಅಷ್ಟೂ ಎಳೆಯಬೇಕು. ಈ ರೀತಿ ಪ್ರಾರಂಭಿಸಿ ಯಥಾ ವಿಧಿಯಾಗಿ ಬಾಣವನ್ನು ಬಿಡಬೇಕು. ಯಾವ ಲಕ್ಷ್ಯವನ್ನಾದರೂ ಮೊದಲು

ಏವಂ ವಿಧಮುಪಕ್ರಮ್ಯ ಮೋಕ್ತವ್ಯೋ ವಿಧಿವತ್ಖಗಃ ।
ದೃಷ್ಟಿಮುಷ್ಟಿಹತಂ ಲಕ್ಷ್ಯಂ ಭಿಂದ್ಯಾದ್ಬಾಣೇನ ಭಾರ್ಗವ ॥ ೨೫ ॥

ಮುಕ್ತ್ವಾ ಚಾಪಂ ವಾಮಹಸ್ತಂ ಕ್ಷಿಪೇದ್ವೇಗೇನ ಪೃಚ್ಛತಃ ।
ಏತದುಚ್ಛೇದಮಿಚ್ಛಂತಿ ಜ್ಞಾತವ್ಯಂ ಹಿ ತ್ವಯಾ ದ್ವಿಜ ॥ ೨೬ ॥

ಕೂರ್ಪರಂ ತ್ರಿವಿಧಂ ಕಾರ್ಯಂ ಆಕೃಷ್ಟಂ ತು ಧನುಷ್ಮತಾ ।
ತತ್ರಾಪಿ ಮುಕ್ತಕೇ ಕಾರ್ಯಮುಕ್ತಶ್ಲಿಷ್ಟಸ್ತು ಮಧ್ಯಮಂ ॥ ೨೭ ॥

ಜ್ಯೇಷ್ಠಂ ಪ್ರಕೃಷ್ಟಂ ವಿಜ್ಞೇಯಂ ಧನುಃಶಾಸ್ತ್ರವಿಶಾರದೈಃ ।
ಜ್ಯೇಷ್ಠಸ್ತು ಪಾವಕೋ ಜ್ಞೇಯಃ ಭವೇದ್ದ್ವಾದಶಮುಷ್ಟಯಃ ॥ ೨೮ ॥

ಏಕಾದಶ ತಥಾ ಸಾಧ್ಯಃ ಕನೀಯಾನ್ ದಶಮುಷ್ಟಯಃ ।
ಚತುರ್ಹಸ್ತಂ ಧನುಃ ಶ್ರೇಷ್ಠಂ ಪ್ರಯೋಗಂ ಚಾಸ್ಯ ಮಧ್ಯಮಂ ॥ ೨೯ ॥

---

ದೃಷ್ಟಿಯಿಂದ ಗುರಿಯಿಟ್ಟು ಅನಂತರ ಧನುಸ್ಸಿನಲ್ಲಿ ಹಿಡಿದಿರುವ ಮುಷ್ಟಿಯಿಂದಲೂ ಗುರಿಯಿಟ್ಟು ಹೊಡೆಯಬೇಕು.

೨೬–೨೮. ಬಾಣವನ್ನು ಬಿಟ್ಟ ಮೇಲೆ ಎಡಗೈಯನ್ನು ಸಡಲಿಸಬೇಕು ಈ ಮುಷ್ಟಿಗೆ ಉಚ್ಛೇದವೆಂದು ಹೆಸರು. ಮೌರ್ವಿಯನ್ನು ಸೆಳೆಯುವ ಕಾಲದಲ್ಲಿ ಮೊಣ ಕೈ ಭಾಗವು ಮೂರು ವಿಧವಾಗುತ್ತವೆ. ಬಾಣವನ್ನು ಬಿಡುವಾಗ ಅಕ್ಷಶ್ಲಿಷ್ಟವೆಂಬ ಮಧ್ಯಮ ಮುಷ್ಟಿಯೇ ಇವುಗಳಲ್ಲಿ ಉತ್ಕೃಷ್ಟವೆಂದು ಧನುಶ್ಶಾಸ್ತ್ರಾಭಿಜ್ಞರು ತಿಳಿಯಬೇಕು. ಇದಕ್ಕೆ ಪಾವಕವೆಂಬ ಸಂಜ್ಞೆಯುಂಟು. ಕೊನೆಯ ಮುಷ್ಟಿಯು ಹತ್ತು ವಿಧವಾಗುತ್ತದೆ. ಹನ್ನೊಂದನೆಯದು ಮಧ್ಯಮುಷ್ಟಿ ಜ್ಯೇಷ್ಠವೂ ಸೇರಿ ಇಂತಹಮುಷ್ಟಿಗಳು ಹನ್ನೆರಡಾಗುತ್ತವೆ.

೨೯–೩೧. ನಾಲ್ಕು ಮೊಳವುಳ್ಳ ಧನುಸ್ಸು ಶ್ರೇಷ್ಠವಾದುದು. ಇದರ ಪ್ರಯೋಗವು ಜ್ಯೇಷ್ಠ, ಮಧ್ಯಮ, ಕನೀಯಸಗಳೆಂದು ಮೂರು ವಿಧವಾಗುತ್ತವೆ. ಮೂರನೆಯದು ಕಾಲಾಳುಗಳಿಗೆ ಅನ್ವಯಿಸುತ್ತದೆ ಅಶ್ವ, ರಥ, ಗಜಗಳಲ್ಲಿ ಕುಳಿತು

ಕನೀಯಸಂ ತ್ರಯಃ ಪ್ರೋಕ್ತಂ ನಿತ್ಯಮೇವ ಪದಾತಿನಾ ।
ಅಶ್ವೇ ರಥೇ ಗಜೇ ಶ್ರೇಷ್ಠಂ ತದೇವ ಪರಿಕೀರ್ತಿತಂ ॥ ೩೦ ॥

ತದೇವ ಹೀನಂ ಖಲು ಮಧ್ಯಮಂ ಸ್ಯಾತ್ತ-
ದೇವ ಹೀನಂ ಚ ತಥಾ ಕನೀಯಃ ।
ಪೂರ್ಣಾಯುಧಸ್ಯೈಷ ವಿಧಿಃ ಮಯಾ ತೇ
ಪ್ರೋಕ್ತಃ ಸಮಾಸಾದ್ಭೃಗುವಂಶಮುಖ್ಯ ॥ ೩೧ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ಧನುರ್ವೇದೋನಾಮೈಕೋನಾಶೀತ್ಯುತ್ತರಶತತಮೋಽಧ್ಯಾಯಃ

---

ಯುದ್ಧ ಮಾಡುವವನಿಗೆ ಜ್ಯೇಷ್ಠವೇ ಪ್ರಶಸ್ತ. ಆದಕ್ಕಿಂತ ನಿಕೃಷ್ಟವಾದುದು ಮಧ್ಯಮವಾಗುತ್ತವೆ. ಅದಕ್ಕಿಂತಲೂ ಹೀನವಾದುದು ಕನೀಯಸವೆಂಬ ಮೂರನೆ ಭೇದವಾಗುತ್ತದೆ. ಪ್ರಮಾಣದಿಂದ ಪೂರ್ಣವಾದ ಆಯುಧದ ವಿಷಯದಲ್ಲಿ ಈ ರೀತಿಯಾದ ವಿಧಾನವನ್ನು ಸಂಗ್ರಹವಾಗಿ ನಿನಗೆ ಹೇಳಿದ್ದೇನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ದ್ವಿತೀಯ ಖಂಡದಲ್ಲಿ ಮಾರ್ಕಂ
ಡೇಯ ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನ
ದಲ್ಲಿ ಧನುರ್ವೇದವೆಂಬ ನೂರ ಎಪ್ಪತ್ತೊಂಭತ್ತನೆಯ
ಅಧ್ಯಾಯವು ಮುಗಿದಿದೆ.



|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಅಶೀತ್ಯುತ್ತರಶತತಮೋಽಧ್ಯಾಯಃ

|| ಪುಷ್ಕರ ಉವಾಚ ||

**ಪೂರ್ಣಾಯುಧೋ ಭೃತಿಂ ಕೃತ್ವಾ ತತೋ ಮಾಂಸೈರ್ಗತಾಯುಷಾಂ |**
**ವರಾಹಮೃಗಮೇಷಾಣಾಂ ಮಾಹಿಷಾದ್ಯೈಸ್ತಥಾ ದ್ವಿಜ || ೧ ||**

**ಮುನಿಧೌತಂ ತತಃ ಕುರ್ಯಾದ್ಯುಗ್ಯಂ ಭೂಪೈರ್ವಿಧಾನವಿತ್ |**
**ಮೃದುಸಂಸ್ತರಣೋಪೇತಂ ಮೃದುವಲ್ಗು ಚ ಯೋಜಯೇತ್ || ೨ ||**

**ತತೋ ವಾಹಂ ಸಮಾರುಹ್ಯ ದಂಶಿತಃ ಸುಸಮಾಹಿತಃ |**
**ತೂರ್ಣಮಾರುಹ್ಯ ಬಧ್ನೀಯಾದ್ದೃಢಾಂ ಕಕ್ಷಾಂ ಚ ದಕ್ಷಿಣಾಂ || ೩ ||**

---

### ನೂರ ಎಂಭತ್ತನೆಯ ಅಧ್ಯಾಯ.

೧–೪. ಪುಷ್ಕರನು ಹೇಳುತ್ತಾನೆ. ಹಿಂದೆ ಹೇಳಿದಂತೆ ಪೂರ್ಣಾಯುಧನಾದ ಧೊರೆಯು ಹಂದಿ, ಜಿಂಕೆ, ಕುರಿ, ಎಮ್ಮೆ, ಮೊದಲಾದ ಪ್ರಾಣಿಗಳನ್ನು ಕೊಂದು ಭೃತ್ಯರಿಗೆಲ್ಲರಿಗೂ ಮುನಿಗಳಿಗೆ ಮಾಡುವ ಆತಿಥ್ಯದಂತೆ ಸಂಸ್ಕರಿಸಿದ ಆ ಮಾಂಸಗಳಿಂದ ತೃಪ್ತಿಯುಂಟು ಮಾಡಬೇಕು. ಅನಂತರ ಇತರ ಧೊರೆಗಳಿಂದ ಮೃದುವಾದ ಆಸನಾದಿಗಳಿಂದ ಕೂಡಿದ ರಥಾದಿವಾಹನವನ್ನು ಸಜ್ಜುಗೊಳಿಸಿ ಅದರಲ್ಲಿ ಉಪಾಯದಿಂದ ಕುದುರೆಯನ್ನು ಕಟ್ಟಬೇಕು. ಅನಂತರ ತಾನು ಕವಚವನ್ನು ಧರಿಸಿ ಸಾವಧಾನದಿಂದ ಆ ಕುದುರೆಯನ್ನು ಹತ್ತಿ ಜಾಗ್ರತೆಯಿಂದ ಬಲಭಾಗದಲ್ಲಿ

ನೈಕಕ್ಷ್ಯಮಪಿ ತಚ್ಚಾಪಂ ಧಾರಯೇದ್ಯಂತ್ರಸಂಸ್ಥಿತಂ ।
ತತಃ ಸಮುದ್ಧರೇದ್ಬಾಣಂ ಖುಣಾದ್ದಕ್ಷಿಣಪಾಣಿನಾ ॥ ೪ ॥

ತಜ್ಜವಃ ಸಹಿತಂ ಸರ್ವಂ ಮಧ್ಯೇ ಸಂಗೃಹ್ಯ ಧಾರಯೇತ್ ।
ವಾಮಹಸ್ತೇನ ವೈಕಕ್ಷ್ಯಾದ್ಧನುಸ್ತಸ್ಮಾತ್ಸಮುದ್ಧರೇತ್ ॥ ೫ ॥

ಸುನಿಷಣ್ಣಮಣಿರ್ಭೂತ್ವಾ ಗುಣೇ ಪುಂಖಂ ನಿವೇಶಯೇತ್ ।
ಸಂಪೀಡ್ಯ ಸಿಂಹಕರ್ಣೇನ ಪುಂಖೇನಾಪಿ ಸಮೋ ದೃಢಂ ॥ ೬ ॥

ವಾಮಕರ್ಣೋಪರಿಸ್ಥಂ ಚ ಫಲಂ ವ್ಯಾಮಸ್ಯಧಾರಣಾತ್ ।
ಬಲಾನ್ಮಧ್ಯಮಯಾ ತತ್ರ ವಾಮಾಂಗುಲ್ಯಾ ಚ ಧಾರಯೇತ್ ॥ ೭ ॥

ಮನೋಲಕ್ಷ್ಯಗತಂ ಕೃತ್ವಾ ದೃಷ್ಟಿಂ ಚ ಸುವಿಧಾನವಿತ್ ।
ದಕ್ಷಿಣೇ ಗಾತ್ರಭಾಗೇ ತು ಬಲಾದಾಶು ವಿಮೋಕ್ಷಯೇತ್ ॥ ೮ ॥

---

ಧನುಸ್ಸನ್ನೂ ಅಡ್ಡವಾದ ಮಾಲೆಯನ್ನೂ ದೃಢವಾಗಿ ಕಟ್ಟಿ ಧರಿಸಬೇಕು. ಅನಂತರ ಬಾಣವನ್ನು ಬಲಗೈಯಿಸಿಂದ ಬತ್ತಳಿಗೆಯಿಂದ ತೆಗೆಯಬೇಕು

೫–೮. ಆ ಕುದುರೆಯು ವೇಗದಿಂದ ನಡೆಯುತ್ತಿರುವಾಗಲೇ ಬಾಣವೇ ಮೊದಲಾದುವನ್ನು ತೆಗೆದು ಧರಿಸಬೇಕು. ಅಡ್ಡಲಾಗಿ ಬಿಗಿದಿರುವ ಮಾಲಿಕೆಯಿಂದ ಧನುಸ್ಸನ್ನೂ ಎಳೆದು ಎಡಗೈಯಿಸಿಂದ ತೆಗೆಯಬೇಕು. ತನಗೆ ಯುದ್ಧಕಾಲದಲ್ಲಿ ವಿಹಿತವಾಗಿರುವ ಮಣಿಯನ್ನು ಚೆನ್ನಾಗಿ ಭದ್ರಪಡಿಸಿಕೊಂಡು ಧನುಸ್ಸಿನ ಮೌರ್ವಿಯಲ್ಲಿ ಬಾಣದ ಬುಡವನ್ನಿಡಬೇಕು. ಸಿಹ್ಮಕರ್ಣವೆಂಬ ಮುಷ್ಟಿಯಿಂದಲೂ ಬಾಣದ ಪುಂಖಭಾಗದಿಂದಲೂ ಚೆನ್ನಾಗಿ ಮರ್ದಿಸಿ ಕಿವಿಯಮೇಲೆ ಇಡಲಾಗಿರುವ ಆ ಬಾಣವನ್ನು ಮಧ್ಯಮಾಂಗುಲಿಯಿಂದ ಧರಿಸಬೇಕು. ಮನಸ್ಸನ್ನು ಲಕ್ಷ್ಯದಲ್ಲಿ ಗುರಿಯಾಗಿಟ್ಟು ದೃಷ್ಟಿಯಿಂದಲೂ ಗುರಿಯನ್ನು ಸರಿಪಡಿಸಿಕೊಂಡು ಬಲಭಾಗದಿಂದ ವೇಗದಿಂದ ಬಿಡಬೇಕು.

ಲಲಾಟಪುಟಸಂಸ್ಥಾನಂ ದಾಣೀಂ ಲಕ್ಷ್ಯೇ ನಿವೇಶಯೇತ್ ।          ॥ ೯ ॥

ಆಕೃಷ್ಯ ತಾಡಯೇತ್ತತ್ರ ದಂಡಕಂ ಷೋಡಶಾಂಗುಲಂ ।
ಮುಕ್ತ್ವಾ ಬಾಣಂ ತತಃಪಶ್ಚಾದ್ಬಲಂ ಶಿಕ್ಷೇತ್ತದಾತದಾ          ॥ ೧೦ ॥

ವಿಗೃಹ್ಣೀಯಾನ್ಮಧ್ಯಮಯಾ ತತೋಂಗುಲ್ಯಾ ಪುನಃಪುನಃ ।
ಅಭಿಲಕ್ಷ್ಯಾಕ್ಷಿಪೇತ್ತೂಣಾಂಶ್ಚತುರಸ್ರಂ ಚ ದಕ್ಷಿಣಂ          ॥ ೧೧ ॥

ಚತುರಸ್ರಗತಂ ವೇಧ್ಯಮಭ್ಯಸೇದಾದಿತಃ ಸ್ಥಿತಃ ।
ತಸ್ಮಾದನಂತರಂ ತೀಕ್ಷ್ಣಂ ಪರಾವೃತ್ತಗತಂ ಚ ಯತ್          ॥ ೧೨ ॥

ನಿಶ್ರಮುನ್ನತವೇಧ್ಯಂತಮಭ್ಯಸೇತ್ತುಷ್ಯಕಂ ತತಃ ।
ವೇಧ್ಯಸ್ಥಾನೇಷ್ವಥೈತೇಷು ಸನ್ಯಸ್ತಪುಟಕಂ ಧನುಃ          ॥ ೧೩ ॥

---

೯-೧೩. ನನ್ನ ನೆತ್ತಿಯ ಎದುರಿಗಿರುವಂತೆ ಗುರಿಯನ್ನು ನಿರೀಕ್ಷಿಸಿ ಹದಿನಾರು ಅಂಗುಲವುಳ್ಳ ದಂಡಕವೆಂಬ ಬಾಣವನ್ನು ಮೌರ್ವಿಯಲ್ಲಿ ಸೇರಿಸಿ ಚೆನ್ನಾಗಿ ಸೆಳೆದುಬಿಡಬೇಕು. ಬಾಣವನ್ನು ಬಿಟ್ಟೊಡನೆಯೇ ಪುನಃಪುನಃ ಬಿಡುತ್ತಾ ಹೀಗೆಯೇ ಮಧ್ಯಮಾಂಗುಲಿಯಿಂದ ಬಾಣವನ್ನು ಸಂಗ್ರಹಿಸಿ ಬಿಡುತ್ತಿರಬೇಕು ಬಲಭಾಗದಲ್ಲಿರುವ ಬತ್ತಳಿಕೆಯನ್ನು ಚಲಿಸದಂತೆ ನೋಡಿ ಸರಿಪಡಿಸಿಕೊಳ್ಳುತ್ತಿರಬೇಕು. ಸಮಸ್ಥಲದಲ್ಲಿ ಚಲಿಸದಿರುವ ಲಕ್ಷ್ಯದಲ್ಲಿಯೇ ಮೊದಲು ಗುರಿಯನ್ನು ಅಭ್ಯಾಸಮಾಡಬೇಕು. ಅನಂತರ ಸೂಕ್ಷ್ಮವಾದ ಮತ್ತು ಚಲಿಸುವ ಮತ್ತು ಹಿಂತಿರುಗುವ ಲಕ್ಷ್ಯಗಳಲ್ಲಿ ಗುರಿಯನ್ನು ಅಭ್ಯಾಸಮಾಡಬೇಕು. ಅನಂತರ ನಿಶ್ರವೆಂಬ ಉನ್ನತ ಗುರಿಯನ್ನೂ ತುಷ್ಯಕವೆಂಬ ಮತ್ತೊಂದು ಗುರಿಯನ್ನೂ ಸಹ ಅಭ್ಯಾಸ ಮಾಡಬೇಕು. ಇಂತಹ ವೇಧ್ಯಸ್ಥಾನಗಳಲ್ಲಿ ಮೊದಲು ಧನುಸ್ಸನ್ನು ಕೆಳಗಿಟ್ಟು ಕೈಯಿನ ಚೀಲ ಮೊದಲಾದುವನ್ನೂ ಸಡಿಲಿಸಿ ಜಪಿಸಬೇಕು.

ಹಸ್ತಾಪಾಪಗತ್ಯೈಃಸ್ತ್ರೈರ್ಜಪೇದ್ಧಸ್ತಕರ್ಕೈರಪಿ ।
ತಸ್ಮಿನ್ವೇಧ್ಯಗತೇ ರಾಮ ದ್ವೇ ವೇಧ್ಯೇ ದೃಢಂಸಜ್ಞಿತೇ ॥ ೧೪ ॥

ದ್ವೇ ವೇಧ್ಯೇ ಪುಷ್ಕರೇ ವಿದ್ಧಿ ದ್ವೇ ತಥಾ ಚಿತ್ರಪುಷ್ಕರೇ ।
ಚತುರಸ್ರಂ ಚ ತೀಕ್ಷ್ಣಂ ಚ ದೃಢವೇಧ್ಯೇಪ್ರಕೀರ್ತಿತೇ ॥ ೧೫ ॥

ಚತುರಸ್ರಂಸ್ಥೂಲತೀಕ್ಷ್ಣಂ ..... . ... .... ......... ।
ನಿಮ್ನಂ ಪುಷ್ಕರಮುದ್ದಿಷ್ಟಂ ವೇಧ್ಯಮೂರ್ಧ್ವಗತಂ ಚ ಯತ್ ॥ ೧೬ ॥

ಪುಷ್ಕರೇಽಧಮವೇಧ್ಯೇತು ಚಿತ್ರಪುಷ್ಕರಸಂಜ್ಞಕೇ ।
ಏವಂ ವೇಧ್ಯಗಣಂ ಕೃತ್ವಾ ದಕ್ಷಿಣೇನೇತರೇಣ ಚ ॥ ೧೭ ॥

ಆರೋಹೇತ್ಪ್ರಥಮಂ ಧೀರೋ ಜಿತಲಕ್ಷ್ಯಸ್ತತೋ ನರಃ ।
ಏಷ ಏವ ವಿಧಿಃ ಪ್ರೋಕ್ತಃ ತತ್ರ ದೃಷ್ಟಃ ಪ್ರಯೋಕ್ತೃಭಿಃ ॥ ೧೮ ॥

---

೧೪-೧೭. ಇಂತಹ ಲಕ್ಷ್ಯಗಳಲ್ಲಿ ಎರಡಕ್ಕೆ ದೃಢವೆಂಬ ಸಂಜ್ಞೆ, ಎರಡಕ್ಕೆ ಪುಷ್ಕರವೆಂಬ ಸಂಜ್ಞೆ, ಎರಡಕ್ಕೆ ಚಿತ್ರಪುಷ್ಕರವೆಂಬ ಸಂಜ್ಞೆ, ಸಮಸ್ಥಲದಲ್ಲಿ ತೀಕ್ಷ್ಣವಾಗಿರುವ ಲಕ್ಷ್ಯಗಳಿಗೆ ದೃಢವೇಧ್ಯವೆಂದುಸಂಜ್ಞೆ, ಹಾಗೆಯೇ ಕೆಳಭಾಗದಲ್ಲಿಯೂ, ಮೇಲುಭಾಗದಲ್ಲಿಯೂ ಇರುವ ಲಕ್ಷ್ಯಗಳು ಪುಷ್ಕರಗಳಾಗುತ್ತವೆ. ಪುಷ್ಕರಗಳಲ್ಲಿ ಅಧಮವಾದುದೇ ಚಿತ್ರಪುಷ್ಕರವೆನಿಸುತ್ತದೆ. ಈ ರೀತಿ ಲಕ್ಷ್ಯಗಳನ್ನು ನಿರ್ಧರಿಸಿಕೊಂಡು, ಎಡಭಾಗದಲ್ಲಿಯಾಗಲಿ ಬಲಭಾಗದಲ್ಲಿಯಾಗಲಿ ಅದನ್ನು ಜಯಿಸಲು ವಾಹನಾದಿಗಳನ್ನು ಆರೋಹಣಮಾಡಬೇಕು.

೧೮-೨೧. ಪ್ರಾಚೀನರಾದ ಧನುರ್ವಿದ್ಯಾಪ್ರಯೋಕ್ತೃಗಳು ಇದೇ ವಿಧಿಯನ್ನು ಹೇಳಿದ್ದಾರೆ. ಭ್ರಮಣವೆಂದು ಪ್ರಸಿದ್ಧವಾಗಿರುವ(ಸುತ್ತುತ್ತಿರುವ) ಲಕ್ಷ್ಯವೇ ಮೊದಲನೆಯದು. ಎದುರಾಗಿ ಯಂತ್ರದಲ್ಲಿ ಕಟ್ಟಿ ಸುತ್ತುತ್ತಿರುವ ಚಕ್ರಾಕಾರವಾದ ಆ ಭ್ರಮಣದಲ್ಲಿ ಗುರಿಯಿಡಬೇಕಾದ ಸಣ್ಣಸಣ್ಣ ಲಕ್ಷ್ಯಗಳನ್ನು ಅದರಲ್ಲಿ ಯೋಜಿಸಬೇಕು. ಇಂತಹ ಲಕ್ಷ್ಯಗಳನ್ನೂ ಮತ್ತು ಚಲಿಸುತ್ತಿರುವ ಮತ್ತು ಸ್ಥಿರವಾಗಿರುವ ಲಕ್ಷ್ಯಗಳನ್ನೂ ಬಾಣಗಳಿಂದ ಆಚ್ಛಾದಿಸುವಿಕೆ ಮತ್ತು ಭೇದಿಸುವಿಕೆ, ಮತ್ತು ಸಡಿಲವಾಗಿ ಮಾಡುವಿಕೆ, ಇವೆಲ್ಲವನ್ನೂ ಆಯಾಯ ಕ್ರಿಯೆಗಳಿಗೆ ತಕ್ಕಂತೆ ಮಾಡ

ಆದಿಕಂ ಭ್ರಮಣಂ ತಸ್ಯ ತಸ್ಮಾದ್ವಿದ್ವನ್ ಪ್ರಕೀರ್ತಿತಂ |
ಲಕ್ಷ್ಯಂ ಸಂಯೋಜಯೇತ್ತತ್ರ ಪ್ರತಿಯಂತ್ರಗತಂ ದೃಢಂ || ೧೯ ||

ಭ್ರಾಂತಂ ಪ್ರಚಲಿತಂ ಚೈವ ಸ್ಥಿತಂ ಯಚ್ಚ ಭವೇದಿತಿ |
ಸಮನ್ತಾಚ್ಛಾದಯೇತ್ಪಶ್ಚಾಚ್ಛೇದಯೇಚ್ಛ್ಲಥಯೇದಪಿ || ೨೦ ||

ಕರ್ಮಯೋಗವಿಧಾನಜ್ಞೋ ಜ್ಞಾತ್ವೈವಂ ವಿಧಿಮಾಚರೇತ್ |
ಮನಸಾ ಚಕ್ಷುಷಾ·ದೃಷ್ಟ್ವಾ ಯೋಗಂ ಶಿಕ್ಷನ್ಯಸಂಜಯೇತ್ || ೨೦ ||

ದತ್ವಾ ಪ್ರಯುಕ್ತಂ ಸುಕೃತಂ ಪ್ರಮಾಣಾ
ನ್ಯಸೇತ್ಸಮಂತಾತ್ಪುಟಕಾನ್ವಿಚಿತ್ರಾನ್ |
ಅಪ್ಯಂಗುಲೀಯಪ್ರತಿಮಾನ್ ಜಯೇಚ್ಚ
ವಾಲಂಗತಾಃ ಕಾಷ್ಠಗತಂ ಪ್ರಲಂಬಂ || ೨೨ ||

ಸಿದ್ಧಾರ್ಥಕಾನ್ ಗುಂಜಯವಾಂಚತಸ್ಮಿ
ನ್ಯಸೇದ್ವಿಧಿಜ್ಞೋಭ್ರಮರೀರಿಕಾಶ್ಚ |
ಮೃತ್ಪಿಂಡಸಂಸ್ಥಾನ್ಫಲಕಾಂಚಿತಾಂಶ್ಚ
ಕಬಂಧನಿಷ್ಪಾವಕಪೇಲವಾಂಶ್ಚ || ೨೩ ||

---

ಬೇಕಾದ ವಿಧಾನಕ್ರಮವನ್ನು ತಿಳಿದು ಅಭಿಜ್ಞನು ವರ್ತಿಸಬೇಕು. ಮುಂಚೆ ಮನಸ್ಸಿನಿಂದಲೂ, ಅನಂತರ ಕಣ್ಣಿನಿಂದಲೂ ಈ ವಿಧವಾದ ಸನ್ನಾಹಗಳನ್ನು ನಿಶ್ಚಯಿಸಿ ಶಿಕ್ಷಾಬಲದಿಂದ ಲಕ್ಷ್ಯವನ್ನು ಜಯಿಸಬೇಕು.

೨೨–೨೩. ಸರಿಯಾದ ಪ್ರಮಾಣದಿಂದ ಸುತ್ತಲೂ ವಿಚಿತ್ರವಾದ ಬೊಟ್ಟುಗಳನ್ನಿಟ್ಟೋ, ಬೆರಳಿನಷ್ಟು ಸ್ಥೂಲವಾಗಿರುವ, ಮತ್ತು ಲಂಬಿಸುತ್ತಿರುವ ದಾರವೇ ಮೊದಲಾದುವುಗಳಲ್ಲಿ ಜೋಲಾಡುವಂತಿರುವ, ಮತ್ತು ಉದ್ದವಾದ ಕಾಷ್ಠದಲ್ಲಿ ಸೇರಿರುವ ಲಕ್ಷ್ಯಗಳನ್ನೂ ಜಯಿಸಬೇಕು. ಮತ್ತು ಲಕ್ಷ್ಯಗಳಲ್ಲಿ ಬಿಳಿಯಸಾಸವೆ, ಗುಲಗಂಜಿ, ಯವೆ ಮೊದಲಾದುವನ್ನು ಮಣ್ಣಿನ ಮುದ್ದೆಯಲ್ಲಿ ಇಟ್ಟೋ, ಹಲಗೆಯ ಮೇಲೆ, ಅವರೆಕಾಳು ಮೊದಲಾದ ಸಣ್ಣಸಣ್ಣ ವಸ್ತುಗಳನ್ನಿಟ್ಟೋ ಗುರಿಯನ್ನು ಸಾಧಿಸಲು ಪ್ರಯತ್ನಿಸಬೇಕು.

ಹಂಸಾನ್ಮಯೂರಾನ್ಕುರರಾಂಸ್ತಥಾ ಚ
ಕಾರಂಡವಾಂಶ್ಚೈವ ಶಿಲೀಮುಖಾಶ್ಚ ।
ಗೃಧ್ರಾನುಲೂಕಾನಥ ವಾಪಿ ಚಾಷಾ
ನ್ಕಪೋತ ಗೋಧಾಶುಕಸಾರಿಕಾಂಶ್ಚ ॥ ೨೪ ॥

ಪಲಾಶಮೂಲೋರ್ಣವಪೂರ್ಣ ದೇಹಾಂ
ಶ್ಚರ್ಮಾವಬದ್ಧಾಂ ಮೃದುಚಿತ್ರಗಾತ್ರಾಂ ।
ಪರತ್ರಯಂತ್ರೈರ್ವಿವಿಧೈಃ ಸುಯುಕ್ತಾಂ
ಕಾಷ್ಠಾವಸಕ್ತೈರ್ಬಹುಭಿಃ ಪ್ರಕಾರೈಃ ॥ ೨೫ ॥

ಚಲಾನ್ ಸ್ಥಿರಾಂಶ್ಚಾಪ್ರಗತಾಂಶ್ಚ ವಿದ್ಧಾ-
ನ್ನ್ಯಸೇದ್ಯಥಾನ್ಯಾಯಮಥೋರ್ಧ್ವಸಂಸ್ಥಾನ್ ।
ವ್ಯಾಘ್ರಾನ್ಮೃಗೇಂದ್ರಾನ್ ಪೃಷತಾನ್‌ರುರೂಂಶ್ಚ
ಮೃಗಾನ್ಸಗೋಕರ್ಣವರಾಹವಕ್ತ್ರಾನ್ ॥ ೨೬ ॥

---

೨೪–೨೫. ಹಂಸ, ನವಿಲು, ಕುರರ, ನೀರುಕಾಗೆ, ಹದ್ದು, ಗೂಬೆ, ಚಾಷ ಪಕ್ಷಿ, ಕಪೋತ, ಉಡು, ಗಿಣಿ, ಸಾರಿಕಾ ಇಂತಹ ಪ್ರಾಣಿಗಳನ್ನೂ, ಎಲೆ, ಬೇರು, ಹತ್ತಿ ಇವುಗಳಿಂದ ಮಾಡಿ ಚರ್ಮವನ್ನೂ ಹೊದ್ದಿಸಿ, ಮೃದುವಾಗಿಯೂ ಚಿತ್ರ ವಿಚಿತ್ರವಾಗಿಯೂ ದೇಹವುಳ್ಳ ಕೃತ್ರಿಮ ಪ್ರಾಣಿಗಳನ್ನೂ, ಏತದಂತೆ ಎತ್ತರವಾಗಿ ರುವ ಮರಗಳಲ್ಲಿಯೂ, ಉದ್ದವಾದ ಮರದ ಕಾಷ್ಠದಲ್ಲಿಯೂ ಯೋಜಿಸಿ, ಇಂತಹ ನಾನಾಪ್ರಾಕಾರಗಳಿಂದಲೂ ಚರವಾಗಿಯೂ, ಸ್ಥಿರವಾಗಿಯೂ. ನಿಂತೂ, ಮತ್ತು ಮೇಲ್ಭಾಗದಲ್ಲಿ ಇದ್ದೂ ಇರುವ ವಸ್ತುಗಳನ್ನು ಗುರಿಯಿಂದ ಹೊಡೆಯುವುದನ್ನು ಅಭ್ಯಾಸ ಮಾಡಬೇಕು.

೨೬–೨೮. ಹೀಗೆಯೇ ಹುಲಿ, ಸಿಂಹ, ಜಿಂಕೆಗಳು, ಜಿಂಕೆಗಳಮುಖ ದಂತೆಯೂ, ಹಂದಿಯ ಮುಖದಂತೆಯೂ ಇರುವ ಮೃಗಗಳು, ನರಿ, ಬೆಕ್ಕು, ಮೊಲ, ಕರಡಿ, ಮತ್ತು ಚಂದ್ರನಂತೆ ಶುಭ್ರವಾಗಿರುವ ಮೃಗಜಾತಿಗಳು ಇವನ್ನೆಲ್ಲಾ ಹತ್ತಿರಕ್ಕೆ ಬಂದಂತೆ ಪ್ರತಿಯಂತ್ರದಲ್ಲಿ (ಎದುರಾಗಿ ನಿಲ್ಲಿಸಿರುವ ಗುರಿಯಲ್ಲಿ

ಗೋಮಾಯುಮಾರ್ಜಾರ ಶಶಾಂಸ್ತಥಾನ್ಯಾ-
ನೃಕ್ಷಾನ್ಮೃಗಾಂಶ್ಚ ದ್ರುಮಯೆಂದು ಪೂರ್ಣಾನ್ ।
ಅನ್ಯಾನ್ಸಮೀಪೋಪಗತಾನ್ಮೃಗಾಂಶ್ಚ
ವಿಧಾನವಿತ್ತಾನ್ಪ್ರತಿಯಂತ್ರಸಂಸ್ಥಾನ್ ॥ ೨೭ ॥

ಜಾತಾಂಸ್ತಥಾನ್ಯಾಂಶ್ಚ ಬಹುಪ್ರಕಾ-ರಾ
ನನೇಕಸಂಸ್ಥಾನವಿಬದ್ಧದೇಹಾನ್ ।
ನಾನಾವಿಧೈಸ್ತೈರ್ವಿಶಿಖಭ್ರಮಸ್ಥಃ
ಸಂಧಾನಯೋಗ್ಯೈಃ ತ್ರಿವಿಧೈಶ್ಚ ಹನ್ಯಾತ್ ॥ ೨೮ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ಧನುರ್ವೇದೋನಾಮಾಽಶೀತ್ಯುತ್ತರಶತತಮೋಽಧ್ಯಾಯಃ

---

ತೋರಿಸಿಯೂ, ಇನ್ನೂ ಅನೇಕ ಪ್ರಾಣಿಗಳನ್ನೂ ಬಂಧನವಿಲ್ಲದೆ ಓಡಾಡುವಂತೆ ಏರ್ಪಡಿಸಿಯೂ, ಸಹ, ಅಭಿಜ್ಞನಾದ ಧಾನುಷ್ಕನು ಹಿಂದೆ ಹೇಳಿರುವ ಮೂರು ವಿಧವಾದ ಬಾಣಸಂಧಾನಗಳಿಂದ ಅವನ್ನು ಹೊಡೆಯಲು ಅಭ್ಯಾಸಮಾಡಬೇಕು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ
ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನ ಉಪಾಖ್ಯಾನದಲ್ಲಿ
ಧನುರ್ವೇದವೆಂಬ ನೂರ ಎಂಭತ್ತನೆಯ ಅಧ್ಯಾಯ ಮುಗಿದಿದೆ.



|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ಏಕಾಶೀತ್ಯುತ್ತರಶತತಮೋಽಧ್ಯಾಯಃ

**|| ಪುಷ್ಕರ ಉವಾಚ ||**

**ಜಿತಹಸ್ತೋ ಜಿತಮತಿಃ ಜಿತದೃಗ್ಲಕ್ಷ್ಯಸಾಧಕಃ |**
**ನಿಯತಾಂ ಸಿದ್ಧಿಮಾಸಾದ್ಯ ತತೋ ವಾಹನಮಾರುಹೇತ್ || ೧ ||**

**ಏಷ ತತ್ರೈವ ಚ ವಿಧಿಃ ಕಾರ್ತ್ಸ್ನ್ಯೇನ ಪರಿಕೀರ್ತಿತಃ |**
**ಅಧಿಕಂ ಭ್ರಮತಸ್ತಸ್ಯ ಭಾಗೇ ಗ್ರಹಣಮೇವ ಚ || ೨ ||**

---

### ನೂರ ಎಂಭತ್ತೊಂದನೇ ಅಧ್ಯಾಯ.

೧—೨. ಪುಷ್ಕರನು ಪುನಃ ಹೇಳುತ್ತಾನೆ:— ಈ ರೀತಿ ಧನುರ್ವಿದ್ಯೆಯನ್ನು ಅಭ್ಯಾಸಮಾಡಿ ಕೈಯ್ಯಿನ ಗುರಿಯನ್ನೂ, ಲಕ್ಷ್ಯದಲ್ಲಿ ಮನಃಸ್ಥೈರ್ಯವನ್ನೂ, ಎದುರಿಗಿರುವ ಲಕ್ಷ್ಯವನ್ನು ಭೇದಿಸುವ ಸಾಮರ್ಥ್ಯವನ್ನೂ, ಹೊಂದಿ ಸ್ಥಿರವಾದ ಈ ಸಿದ್ಧಿಯು ಅಧೀನವಾದನಂತರ ವಾಹನವನ್ನೇರಿ ಈ ವಿದ್ಯೆಯನ್ನು ಅಭ್ಯಾಸ ಮಾಡಬೇಕು. ಬಾಣಪ್ರಯೋಗದಲ್ಲಿ ಚತುರನಾದ ಯೋಧನಿಗೆ ಇಂತಹ ವಾಹನ ಸಂಬಂಧದಿಂದ ಹೊಂದಬಹುದಾದ ತ್ರೈಷುಕವೆಂಬ ಅಭ್ಯಾಸಗಳಲ್ಲಿ ಹೆಚ್ಚಾದ ಭ್ರಮಣ ಮತ್ತು ಪಾರ್ಶ್ವದಲ್ಲಿ ಆಯುಧ ಗ್ರಹಣ ವಿಧಿಗಳನ್ನೆಲ್ಲಾ ಯುದ್ಧಕ್ರಮ ದಲ್ಲಿಯೇ ವಿಸ್ತಾರವಾಗಿ ಹೇಳಿರುವೆವು.

ಏತೇಷಾಂ ಚೈವ ಯೋಗಾನಾಂ ವಿಧಿರ್ಯಸ್ತ್ರೈಷುಕಸ್ಯ ಚ ।
ವಾಹಮಾಶ್ರಿತ್ಯ ವಕ್ಷ್ಯಾಮಿ ಸಂವಿಶೇಷೇಣ ಲಕ್ಷಣಂ ॥ ೩ ॥

ಪಾಶಾಸಿಯಷ್ಟಿದಂಡಾನಾಂ ವಿಧಿರ್ಯಃ ಪರಿನಿಷ್ಠಿತಃ ।
ಕ್ಷೇಪ ಏವ ಯಥಾ ನ್ಯಾಯಂ ತಸ್ಯ ವಕ್ಷ್ಯಾಮಿ ಯಾ ಕ್ರಿಯಾ ॥ ೪ ॥

ದಶಹಸ್ತೋ ಭವೇತ್ಪಾಶೋ ವೃತಃ ಕರಮುಖಸ್ತಥಾ ।
ಶಣಕಾರ್ಪಾಸಪುಂಜಾನಾಂ ಭಗ್ನಸ್ನಾಯ್ವಸ್ಥಿಚರ್ಮಣಾಂ ॥ ೫ ॥

ಅನ್ಯೇಷಾಂ ಸುದೃಢಾನಾಂ ಚ ಸುಕೃತಂ ಪರಿವೇಷ್ಟಿತಂ ।
ತ್ರಯಸ್ತ್ರಿಂಶತ್ಸಮಂ ಚಾಪಂ ಬುಧಃ ಕುರ್ಯಾತ್ಸುವರ್ತಿತಂ ॥ ೬ ॥

ಕರ್ತವ್ಯಾ ಶಿಬಿಕೈಸ್ತಸ್ಯ ಸ್ಥಾನಂ ಕಕ್ಷ್ಯಾಸು ವೈ ತದಾ ।
ವಾಮಹಸ್ತೇನ ಸಂಗೃಹ್ಯ ದಕ್ಷಿಣೇನೋದ್ಧರೇತ್ತು ಸಃ ॥ ೭ ॥

---

೩-೫. ಕುದುರೆಯ ಮೇಲೆ ಕುಳಿತು ಪ್ರಯೋಗಿಸುವ ಆಯುಧಗಳ ಲಕ್ಷಣಗಳನ್ನೂ ವಿಶೇಷ ರೂಪದಿಂದ ಹೇಳುತ್ತೇನೆ. ಪಾಶಾಯುಧ, ಕತ್ತಿ, ದೊಣ್ಣೆ, ಉದ್ದವಾದ ದಂಡ ಇವುಗಳ ಪ್ರಯೋಗ ವಿಧಾನವು ಇದನ್ನು ಸರಿಯಾದ ರೀತಿಯಲ್ಲಿ ಹಾಕುವುದೇ ಆಗಿದೆ. ಇವುಗಳ ವ್ಯಾಪಾರವನ್ನು ಶಾಸ್ತ್ರದೃಷ್ಟಿಯಿಂದ ಹೇಳುತ್ತೇನೆ. ಪಾಶಾಯುಧವು ಹತ್ತುಮೊಳ ಉದ್ದವಿರಬೇಕು ಎರಡು ಕೊನೆಗಳಲ್ಲಿಯೂ ಕೈಯ್ಯಿನಿಂದ ಹಿಡಿಯಲು ಅನುಕೂಲವಾದ ಮುಖಭಾಗವಿರಬೇಕು. ಅದನ್ನು ಸಣಬು, ಹತ್ತಿಯ ನೂಲಿನ ಎಳೆಗಳು, ಕಿತ್ತುಹೋಗಿರುವ ನರಗಳು, ಮೂಳೆ, ಚರ್ಮ, ಇವೇ ಮೊದಲಾದ ದೃಢವಾದ ವಸ್ತುಗಳಿಂದ ನಿರ್ಮಿಸಿರಬೇಕು. ಅದು ಲಕ್ಷ್ಯವನ್ನು ಸುತ್ತುವರಿಯಲು ಆಗುವಂತಿರಬೇಕು.

೬-೮. ಧನುಸ್ಸನ್ನು ಮೂವತ್ತುಮೂರು ಮುಷ್ಟಿಯ ಉದ್ದಕ್ಕೆ ತಕ್ಕಂತೆ ದೃಢವಾಗಿ ನಿರ್ಮಿಸಬೇಕು. ಅದರ ಸ್ಥಾನವನ್ನು ಪಲ್ಲಕ್ಕಿ ಮೊದಲಾದ ವಾಹನಗಳ ಪಕ್ಕಗಳಲ್ಲಿ ನಿರ್ಮಿಸಬೇಕು. ಅದನ್ನು ಎಡದ ಕೈಯ್ಯಿನಿಂದ ಗ್ರಹಿಸಿ ಬಲಗೈಯ್ಯಿನಿಂದ ಮೇಲಕ್ಕೆತ್ತಿ ಆ ಮೌರ್ವಿಯನ್ನು ಎಳೆದು ದುಂಡಾಗಿ ಮಾಡಿ ಮೊದಲು ಒಂದುಸಲ

ಕುಂಡಲಸ್ಯಾಕೃತಿಂ ಕೃತ್ವಾ ಗ್ರಾಮ್ಯೈಕಂ ಮಸ್ತಕೋಪರಿ ।
ಕ್ಷಿಪೇತ್ತೃಣಮಯೀ ತೂರ್ಣಂ ಪುರುಷೇ ಚರ್ಮವೇಷ್ಟಿತೇ ॥ ೮ ॥

ಚಲಿತೇ ಚ ಪ್ಲುತೇ ಚೈವ ತಥಾ ಪ್ರಜವಿತೇಷು ಚ ।
ಸಮಾಯೋಗವಿಧಿಂ ಜ್ಞಾತ್ವಾ ಪ್ರಯುಂಜೀತ ಸುಶಿಕ್ಷಿತಃ ॥ ೯ ॥

ವಿಜಿತ್ಯ ತು ಯಥಾ ನ್ಯಾಯಂ ತತೋ ಬಂಧಂ ಸಮಾಚರೇತ್ ।
ಕಟ್ಯಾಂ ಬಧ್ವಾ ತತಃ ಖಡ್ಗಂ ವಾಮಪಾರ್ಶ್ವಾವಲಂಬಿನಂ ॥ ೧೦ ॥

ದೃಢಂ ವಿಗೃಹ್ಯ ವಾಮೇನ ವಿಕರ್ಮೇ ದಕ್ಷಿಣೇ ನ ತು ।
ಷಡಂಗುಲಪರೀಣಾಹಂ ಸಪ್ತಹಸ್ತಂ ಸಮುಚ್ಛ್ರಿತಂ ॥ ೧೧ ॥

ಅಯೋಮಯಶಲಾಕಾಶ್ಚ ಚರ್ಮಾಣಿ ವಿವಿಧಾನಿ ಚ ।
ಅಪಹಸ್ತಂ ಸಮಂ ಚೈವ ತಿರ್ಯಗೂರ್ಧ್ವಹತಂ ತಥಾ ॥ ೧೨ ॥

---

ಒಂದು ಕೃತ್ರಿಮ ಪುರುಷನ ತಲೆಯ ಮೇಲೆ ಪ್ರಯೋಗಿಸಬೇಕು. ಆ ಪುರುಷನನ್ನು ಮೇಲ್ಭಾಗದಲ್ಲಿ ಚರ್ಮದಿಂದ ಮುಚ್ಚಿ ಹುಲ್ಲಿನಿಂದ ಮಾಡಿರಬೇಕು

೯-೧೧ ಆ ತೃಣಪುರುಷನು ತಾಡನದಿಂದ ಚಲಿಸಿದರೂ ಅಥವಾ ಮೇಲಕ್ಕೆ ಚಿಗಿದರೂ, ವೇಗದಿಂದ ಅಲ್ಲಾಡಿದರೂ ಸಹ ಪುನಃ ಆ ಪುರುಷನ ವೇಧನಕ್ಕೆ ತಕ್ಕ ವಿಧಾನವನ್ನು ಶಿಕ್ಷೆಯಿಂದ ಕಲಿಯಬೇಕು ಈ ಅಭ್ಯಾಸಕ್ರಮದಿಂದ ಗುರಿಯನ್ನು ಸಾಧಿಸಿ ಅನಂತರ ಶತ್ರುವಿನ ಹೆಸರನ್ನು ಇಟ್ಟು ಹುಲ್ಲಿನಿಂದ ಮಾಡಿ ಮೇಲೆ ಚರ್ಮವನ್ನು ಹೊದ್ದಿಸಿರುವ ಮನುಷ್ಯರೂಪವನ್ನು ಎದುರಿಗೆ ಕಟ್ಟಬೇಕು. ಅದರ ಸೊಂಟದಲ್ಲಿ ಎಡಭಾಗದಲ್ಲಿ ಜೋಲಾಡುವಂತೆ ಕತ್ತಿಯನ್ನು ಕಟ್ಟಬೇಕು. ಅದರ ಎಡಭಾಗವನ್ನೂ, ಬಲಭಾಗವನ್ನೂ ವಿಕರ್ಮವೆಂಬ ವಿಧಾನವನ್ನಾಶ್ರಯಿಸಿ ದೃಢವಾಗಿ ಯುದ್ಧಮಾಡಬೇಕು ಆರು ಅಂಗುಲ ಅಗಲವೂ ಏಳು ಮೊಳ ಉದ್ದವೂ ಉಳ್ಳ ಸಲಾಕಿಗಳನ್ನು ಅದರ ಸುತ್ತಲೂ ಬಿಗಿಯಬೇಕು.

೧೨-೧೩ ಕಬ್ಬಿಣದ ಸಲಾಕಿಗಳಿಂದಲೂ, ನಾನಾ ವಿಧವಾದ ಚರ್ಮದಿಂದಲೂ, ಸಹ ಕೈಗಳ ಮೇಲ್ಭಾಗದಲ್ಲಿಯೂ, ಸುತ್ತಲೂ ಅಡ್ಡವಾಗಿಯೂ, ಎತ್ತರವಾಗಿಯೂ, ಕಟ್ಟಿ ದೃಢಪಡಿಸಬೇಕು. ಅಂತಹ ಚರ್ಮದ ಹೊದಿಕೆಯುಳ್ಳ ಹುಲ್ಲಿನ

ಶೋಧಯೇದ್ವಿಧಿನಾ ಯೇನ ತಥಾ ಮೇಗದತಃ ಶೃಣು ।
ತೂರ್ಣಂ ಚರ್ಮಾವನದ್ಧಾಂಗಂ ಸ್ಥಾಪಯಿತ್ವಾ ನರಂ ದೃಢಂ　|| ೧೩ ||

ಕರೇಣಾದಾಯ ಲಗುಡಂ ದಕ್ಷಿಣಾಂಗುಷ್ಠಕಾನ್ನರಃ ।
ಉದ್ಯಮ್ಯ ಪಾತಯೇದ್ಯಸ್ಯ ನಾಮ್ನಸ್ತಂ ಶಿರಸೋ ದೃಢಂ ।
ಉಭಾಭ್ಯಾಮಪಿ ಹಸ್ತಾಭ್ಯಾಂ ಕುರ್ಯಾತ್ತಸ್ಯ ನಿಪಾತನಂ　|| ೧೪ ||

ಬಿಂಬೋಯಂ ವಿಧಿಸಹಿತೋ ಹಿತಃ ಸುಮುಕ್ತಿಃ
ಶಿಷ್ಯಾಣಾಂ ಹಿತಮತಿಕುರ್ವತಾ ಮಯಾ ತೇ ।
ವಾಹಾನಾಂ ಶ್ರಮಹರಣಪ್ರಧಾರಣಾರ್ಥಂ
ಯೋಗ್ಯಾರ್ಥಂ ಪ್ರಥಮತರಂ ಬುಧೇನ ಬಧ್ಯಂ　|| ೧೫ ||

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ಧನುರ್ವೇದವಿದ್ಯಾಕಥನೋ ನಾಮೈಕಾಶೀ
ತ್ಯುತ್ತರಶತತಮೋಽಧ್ಯಾಯಃ

---

ಮನುಷ್ಯಾಕಾರದ ಬೊಂಬೆಯನ್ನು ದೃಢವಾಗಿ ನಿಲ್ಲಿಸಿ ಕೈಯ್ಯಿನಿಂದ ಅಂಗುಷ್ಠ ಪ್ರಾಂತದಿಂದ ದೊಣ್ಣೆಯನ್ನು ತೆಗೆದುಕೊಂಡು ಮೇಲಕ್ಕೆ ಎತ್ತಿ ಶತ್ರುವಿನ ನಾಮಧೇಯವುಳ್ಳ ಆ ಬೊಂಬೆಯ ತಲೆಯ ಮೇಲೆ ದೃಢವಾಗಿ ಪ್ರಹರಿಸಬೇಕು.

೧೪-೧೫. ಎರಡು ಕೈಗಳಿಂದಲೂ ಪ್ರಹರಿಸಿ ಅದನ್ನು ಕೆಡವಬೇಕು. ಶಿಷ್ಯರ ಹಿತಕ್ಕಾಗಿ ಬಿಂಬವೆಂಬ ಈ ಧನುರ್ವಿಧಿಯನ್ನು ಯಥಾವಿಧಿಯಾಗಿ ನಿನಗೆ ಹೇಳಿದ್ದೇನೆ. ಕುದುರೆಗಳಿಗೆ ಶ್ರಮಪರಿಹಾರಕ್ಕಾಗಿಯೂ, ಯುದ್ಧದಲ್ಲಿ ಸರಿಯಾಗಿ ಓಡುವ ಅಭ್ಯಾಸಕ್ಕಾಗಿಯೂ ಸಹ ಬಿಂಬವಿಧಿಯನ್ನು ಬುದ್ಧಿಶಾಲಿಯಾದವನು ಮೊದಲು ಅಭ್ಯಾಸಮಾಡಬೇಕು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ
ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ
ಧನುರ್ವೇದವಿದ್ಯಾಕಥನವೆಂಬ ನೂರ ಎಂಭತ್ತೊಂದನೆಯ
ಅಧ್ಯಾಯ ಮುಗಿದಿದೆ.

|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

### ದ್ವ್ಯಶೀತ್ಯುತ್ತರಶತತಮೋಽಧ್ಯಾಯಃ

|| ಪುಷ್ಕರ ಉವಾಚ ||

ಭ್ರಾಂತಮುದ್ಭ್ರಾಂತಮಾವಿದ್ಧಂ ಆಪ್ಲುತಂ ನಿಸ್ಸೃತಂ ಸೃತಂ ।
ಸಂಪಾತಂ ಸಮುದೀರ್ಣಂ ಚ ಸೇನಾಪಾತಮನಾಕುಲಂ || ೧ ||

ಉದ್ಘಾತಮವಧೂತಂ ಚ ಸವ್ಯದಕ್ಷಿಣಮೇವ ಚ ।
ಅನಾಲಕ್ಷಿರವಿಸ್ಫೋಟೌ ಕರಾಲೇಂದ್ರಮಹಾಮುಖೌ || ೨ ||

ವಿಕರಾಲವಿಪಾತೌ ಚ ವಿಭೀಷಣಭಯಂಕರೌ ।
1ಸಮಗ್ರಾಂವಾ ತೃತೀಯಾಂವಾ ಪಾದಪಾದವಜಾರಿಜಾಃ || ೩ ||

---

### ನೂರ ಎಂಭತ್ತೆರಡನೆಯ ಅಧ್ಯಾಯ

೧-೩. ಪುಷ್ಕರನು ಹೇಳುತ್ತಾನೆ. ಚರ್ಮವನ್ನೂ ಭೇದಿಸುವ ಖಡ್ಗದಗತಿ ಭೇದಗಳು, ಭ್ರಾಂತ ಉದ್ಭ್ರಾಂತು ಆವಿದ್ಧ, ಆಪ್ಲುತ, ನಿಃಸೃತ, ಸೃತ, ಸಂಪಾತ, ಸಮುದೀರ್ಣ, ಸೇನಾ, ಪಾತ, ಅನಾಕುಲ, ಉದ್ಘಾತ, ಅವಧೂತ, ದಕ್ಷಿಣ, ಅನಾಲಕ್ಷಿ, ರವಿಸ್ಫೋಟ, ಕರಾಲೇಂದ್ರ, ಮಹಾಮುಖ, ವಿಕರಾಲ, ವಿಪಾತ, ಭೀಷಣ, ಭಯಂಕರ, ಸಮಗ್ರಾಂಗ, ತೃತೀಯಾಂಗ, ಪಾದಪ, ದಾವಜ, ಅರಿಜ, ಪ್ರತ್ಯಾಲೀಢ, ಅನಾಲೀಢ, ವರಾಹ, ಲುಲಿತ, ಎಂದು ಮೂವತ್ತೆರಡು ಇರುತ್ತದೆ.

---

1. ಇಲ್ಲಿ ಪಾಠವು ಅಶುದ್ಧವಿರಬೇಕೆಂದು ತೋರುತ್ತದೆ.

ಪ್ರತ್ಯಾಲೀಢಮನಾಲೀಢಂ ವರಾಹಲುಲಿತೌ ತಥಾ ।
ಇತಿದ್ವಾತ್ರಿಂಶಧಾ ಜ್ಞೇಯಾ ಖಡ್ಗಾಶ್ಚರ್ಮವಿದಾರಣಾಃ ॥ ೪ ॥

ಋಜ್ವಾಯತವಿಶಾಲಂ ಚ ತಿರ್ಯಙ್ನಮಿತಮೇವ ಚ ।
ಪಂಚಕರ್ಮವಿನಿರ್ದಿಷ್ಟಂಹ್ಯ ಸ್ಮಿನ್ಪ್ರಾಸಂ ಮಹಾತ್ಮಭಿಃ ॥ ೫ ॥

ಛೇದನಂ ತರ್ಜನಂ ಪಾತೋ ಭ್ರಮಣಂ ಭ್ರಾಮಣಂ ತಥಾ ।
ವಿಕರ್ತನಂ ಕರ್ತನಂ ಚ ಚಕ್ರಭ್ರಮಣಮೇವ ಚ ॥ ೬ ॥

ಆಸ್ಫೋಟಕ್ಷ್ವೇಡನಂ ಭೇದಃ ತ್ರಾಸೋಲ್ಲಾಸಿತಕೌ ತಥಾ ।
ಶೂಲಕರ್ಮಾಣಿ ಜಾನೀಹಿ ಷಷ್ಠಮಾಘ್ರಾತಸಂಜ್ಞಕಂ ॥ ೭ ॥

ದೃಷ್ಟಿಘಾತಂ ಭುಜಾಘಾತಂ ಪಾರ್ಶ್ವಘಾತಂ ಚ ಭಾರ್ಗವ ।
ಋಜ್ವಾವಕ್ಷೇಪಮಾಘ್ರಾತಂ ತೋಮರಸ್ಯ ಪ್ರಕೀರ್ತಿತಂ ॥ ೮ ॥

ಸಂಹತಾವಿತತಂ ವಾಮಂ ಗೋಮೂತ್ರಂ ಕಮಲಾವಿಲಂ ।
ತತೋಽರ್ಧಭಾಗನಮಿತಂ ವಾಮದಕ್ಷಿಣಮೇವ ಚ ॥ ೯ ॥

---

೫–೭. ಪ್ರಾಸವೆಂಬ ಆಯುಧಕ್ಕೆ ಋಜು, ಆಯತ, ವಿಶಾಲ, ತಿರ್ಯಕ್. ನಮಿತ ಎಂಬ ಐದುವಿಧವಾದ ಗತಿಭೇದಗಳಿವೆ ಎಂದು ಮಹಾತ್ಮರು ಹೇಳಿರುವರು ಚಕ್ರಾಯುಧಕ್ಕೆ, ಛೇದನ, ತರ್ಜನ, ಪಾತ, ಭ್ರಮಣ, ಭ್ರಾಮಣ, ವಿಕರ್ತನ, ಎಂಬ ಗತಿಭೇದಗಳಿರುವುವು ಶೂಲಾಯುಧಕ್ಕೆ, ಆಸ್ಫೋಟ, ಕ್ಷ್ವೇಡನ, ಭೇದ, ತ್ರಾಸ, ಉಲ್ಲಾಸಪೀಡಿತ ಎಂಬ ಐದು ಗತಿಭೇದಗಳುಂಟು. ಆಘ್ರಾತವೆಂಬ ಆರನೆಯಗತಿಯೂ, ಶೂಲಾಯುಧಕ್ಕೆ ಉಂಟು.

೮–೧೦. ದೃಷ್ಟಿಘಾತ, ಭುಜಾಘಾತ, ಪಾರ್ಶ್ವಘಾತ ಋಜು, ಅವಕ್ಷೇಪ, ಆಘ್ರಾತ, ಇವು ತೋಮರವೆಂಬ ಆಯುಧದ ಗತಿವಿಶೇಷಗಳು, ಸಂಹತ, ಅವಿತತ, ವಾಮ, ಗೋಮೂತ್ರ, ಕಮಲಾವಿಲ, ಅರ್ಧಭಾಗನಮಿತ, ವಾಮದಕ್ಷಿಣ, ವ್ಯಾವೃತ್ತ

ವ್ಯಾವೃತ್ತಂ ಚ ಪರಾವೃತ್ತಂ ಪಾದೋದ್ಧೂತಮವಿಪ್ಲುತಂ ।
ಹಂಸಮಾರ್ಗವಿಮಾರ್ಗ ಚ ಗದಾಕರ್ಮಪ್ರಕೀರ್ತಿತಂ ॥ ೧೦ ॥

ಕರಾಲಮತಪಾತಂ ಚ ದಶೋಪಪ್ಲವಮೇವ ಚ ।
ಕ್ಷಿಪ್ತಂ ಹಸ್ತಸ್ಥಿತಂ ಶೂನ್ಯಂ ಪರಶೋಸ್ತು ವಿನಿರ್ದಿಶೇತ್ ॥ ೧೧ ॥

ತಾಂಡನಂ ಛೇದನಂ ರಾಮ ತಥಾ ಚೂರ್ಣನಮೇವ ಚ ।
ಮುದ್ಗರಸ್ಯ ಚ ಕರ್ಮಾಣಿ ಲಗುಡಸ್ಯ ಚ ತಾನ್ಯಪಿ ॥ ೧೨ ॥

ಅಂತ್ಯಮಧ್ಯಂ ಪರಾವೃತ್ತಂ ನಿದೇಶಾರ್ಧಂ ತಥೈವ ಚ ।
ವಜ್ರಸ್ಯೈತಾನಿ ಕರ್ಮಾಣಿ ಪಟ್ಟಿಶಸ್ಯ ತಥೈವ ಚ ॥ ೧೩ ॥

ಹರಣಂ ಛೇದನಂ ಘಾತೋ ಭೇದನಂ ರಕ್ಷಣಂ ತಥಾ ।
ಕೃಪಾಣೀ ಕರ್ಮ ನಿರ್ದಿಷ್ಟಂ ಪಾತನಂ ಸ್ಫೋಟನಂ ತಥಾ ॥ ೧೪ ॥

ತ್ರಾಸನಂ ರಕ್ಷಣಂ ಘಾತಂ ತಲೋದ್ಧರಣಮಾಯತಂ ।
ಕ್ಷೇಪಣೀಕರ್ಮ ನಿರ್ದಿಷ್ಟಂ ಯಂತ್ರಕರ್ಮ್ಯ ತದೇವ ತು ॥ ೧೫ ॥

ಸಂತ್ಯಾಗಮಂಗಮರ್ದಂ ಚ ವರಾಹೋದ್ಧೂತಕಂ ತಥಾ ।
ಹಸ್ತಾರ್ಧಹಸ್ತಪಾಲೀನಮೇಕ ಹಸ್ತಾರ್ಧಹಸ್ತಕಂ ॥ ೧೬ ॥

---

ಪರಾವೃತ್ತ, ಪಾದೋದ್ಧೂತ, ಅವಿಪ್ಲುತ, ಹಂಸಮಾರ್ಗ, ವಿಮಾರ್ಗ ಇವುಗಳು ಗದಾಯುಧದ ವ್ಯಾಪಾರಗಳು.

೧೧–೧೩. ಕರಾಲ, ಮತಪಾತ, ದಶೋಪಪ್ಲವ, ಕ್ಷಿಪ್ತ, ಹಸ್ತಸ್ಥಿತ, ಶೂನ್ಯ ಇವು ಕೊಡಲಿಯವ್ಯಾಪಾರಗಳು, ತಾಡನ, ಛೇದನ, ಚೂರ್ಣನ, ಇವು ಒನಕೆಯ ಮತ್ತು ದೊಣ್ಣೆಯ ವ್ಯಾಪಾರಗಳು ಅಂತ್ಯಮಧ್ಯ, ಪರಾವೃತ್ತ, ನಿದೇಶಾರ್ಧ ಇವು ವಜ್ರವೆಂಬ ಆಯುಧ ಮತ್ತು ಪಟ್ಟಿಶವೆಂಬ ಆಯುಧದ ಗತಿಭೇದಗಳು.

೧೪–೧೭ ಹರಣ, ಛೇದನ. ಘಾತ, ಭೇದನ, ರಕ್ಷಣ, ಪಾತನ, ಸ್ಫೋಟನ ಇವುಗಳೆಲ್ಲವೂ ಕೃಪಾಣೀ(ಕತ್ತರಿ) ಎಂಬ ಆಯುಧ ಕರ್ಮಗಳು. ತ್ರಾಸನ, ರಕ್ಷಣ, ಘಾತ, ತಲೋದ್ಧರಣ, ಆಯತ, ಇವುಗಳ ಕ್ಷೇಪಣೀ (ಕವಣೆ) ಎಂಬ ಆಯುಧದ

ದ್ವಿಹಸ್ತಂ ಬಾಹುಪಾಶೇ ಚ ಕೋಟಿರೇಚಿತಕೋದ್ಧತೇ ।
ಉರೋಲಲಾಟಘಾತೇ ಚ ಭುಜಾದಿವಸನಂ ತಥಾ　　॥ ೧೭ ॥

ಕರೋದ್ಧೂತವಿಮಾರ್ಗಂ ಚ ಪಾದಾಹತಿ ವಿಪಾದಕಂ ।
ಗಾತ್ರಸಂಶ್ಲೇಷಣಂ ಕಾಂತಂ ತಥಾ ಗೋವಿಧಿಪರ್ಯಯಂ　　॥ ೧೮ ॥

ಊರ್ಧ್ವಪ್ರಹಾರಂ ಘಾತಂ ಚ ಗೋಮೂತ್ರಂ ಸವ್ಯದಕ್ಷಿಣಂ ।
ಪಾದಸಂಚಾರಕಂ ಗಂಡಂ ಕಬರೀಬಂಧಮಾಕುಲಂ　　॥ ೧೯ ॥

ತಿರ್ಯಗ್ಗತಮಪಾಮಾರ್ಗಂ ಭೀಮವೇಗಂ ಸುದರ್ಶನಂ ।
ಸಿಹ್ಮಕ್ರಾಂತಂ ಗಜಕ್ರಾನ್ತಂ ವೃಷಭಾಕ್ರಾಂತಮೇವ ಚ　　॥ ೨೦ ॥

ಗದಾಕರ್ಮ ವಿಜಾನೀಯಾದ್ಧನುರ್ವೇದವಿಶಾರದಃ ।
ಆಕರ್ಷಣಂ ವಿಕರ್ಷಂ ಚ ಬಾಹುನಾಮನಮೇವ ಚ　　॥ ೨೧ ॥

---

ಮತ್ತು ಯಂತ್ರದ ಕರ್ಮಗಳಾಗುತ್ತವೆ　ಸಂತ್ಯಾಗ ಅಂಗಮರ್ದ, ವರಾಹೋದ್ಧೂತಕ, ಉದ್ಧತ, ಹಸ್ತಪಾಲೀನ, ಏಕಹಸ್ತ, ಅರ್ಧ ಹಸ್ತಕ, ದ್ವಿಹಸ್ತ, ಬಾಹುಪಾಶ, ಕೋಟಿರೇಚಿತಕ, ಉದ್ಧತ, ಉರೋಘಾತ. ಲಲಾಟಘಾತ, ಭುಜಾದಿವಸನ ಮತ್ತು

೧೭-೨೦. ಕರೋದ್ಧೂತ, ವಿಮಾರ್ಗ, ಪಾದಾಹತಿ, ವಿಪಾದಕ, ಗಾತ್ರ ಸಂಶ್ಲೇಷಣ, ಕಾಂತ, ಗೋವಿಧಿಪರ್ಯಯ, ಊರ್ಧ್ವಪ್ರಹಾರ, ಘಾತ ಗೋಮೂತ್ರ ಸವ್ಯದಕ್ಷಿಣ, ಪಾದಸಂಚಾರಕ, ಗಂಡ, ಕಬರೀಬಂಧ, ಆಕುಲ, ತಿರ್ಯಗ್ಗತ, ಅಪಾಮಾರ್ಗ, ಭೀಮವೇಗ, ಸುದರ್ಶನ, ಸಿಂಹಕ್ರಾಂತ, ಗಜಕ್ರಾಂತ, ವೃಷಭಾಕ್ರಾಂತ ಇವೆಲ್ಲವೂ ಗದಾಯುಧದಗತಿಗಳೆಂದು ಧನುರ್ವಿದ್ಯಾ ವಿಶಾರದನಾದವನು ತಿಳಿಯಬೇಕು.

೨೧-೨೮. ಆಕರ್ಷಣ, ವಿಕರ್ಷ, ಬಾಹುನಾಮನ, ಗ್ರೀವಾವಿಪರಿವರ್ತನ, ಪೃಷ್ಠಭಂಗ, ಪರ್ಣಾಸನ, ವಿಪರ್ಯಾಸ, ಪಶುಪಾಶ, ಅಜಾವಿಕ, ಪಾದಪ್ರಹಾರ,

ಗ್ರೀವಾವಿಪರಿವರ್ತಂ ಚ ಪೃಷ್ಠಭಂಗಂ ಸುದಾರುಣಂ ।
ಪರ್ಯಾಸನಂ ವಿಪರ್ಯಾಸಃ ಪಶುಪಾರಮಜಾವಿಕಂ ॥ ೨೨ ॥

ಪಾದಪ್ರಹಾರಮಾಸ್ಫೋಟಂ ಕಟಿರೇಚಿತಕಂ ತಥಾ ।
ಗಾತ್ರಶ್ಲೇಷಂ ಕಂಠಗತಂ ಮಹೀತ್ಯಾಜನಮೇವ ಚ ॥ ೨೩ ॥

ಉರೋಲಲಾಟಘಾತಂ ಚ ವಿಸ್ಪಷ್ಟಕರಣಂ ತಥಾ ।
ಉದ್ಧೂತಮವಧೂತಂ ಚ ತಿರ್ಯಙ್ಮಾರ್ಗಗತಂ ತಥಾ ॥ ೨೪ ॥

ಗಜಸ್ಕಂಧಮವಕ್ಷೇಪಮಪಾಙ್ಮುಖಕಮೇವ ಚ ।
ದೇವಮಾರ್ಗಮಧೋಮಾರ್ಗಮಮಾರ್ಗ ಸಮನಾಕುಲಂ ॥ ೨೫ ॥

ಮುಷ್ಟಿಘಾತಮವಕ್ಷೇಪೋ ವಸುಧಾದಾರಣಂ ತಥಾ ।
ಜಾನುಬಂಧಂ ಭುಜಾಬಂಧಂ ಊರುಬಂಧಂ ಸುದಾರುಣಂ ॥ ೨೬ ॥

ಸಂಸೃಷ್ಟಸೋದರಂ ಶುಭ್ರಂ ಭುಜಾವೇಲ್ಲಿತಮೇವ ಚ ।
ನಿಯುದ್ಧಕರ್ಮ ಜಾನೀಯಾನ್ನಿಯುದ್ಧ ಕುಶಲೋ ಜನಃ ॥ ೨೭ ॥

ಪ್ರಧಾನಕರ್ಮಾಣಿ ತವೇದಿತಾನಿ
ನ್ಯಸ್ತಪ್ರಧಾನೇ ಪುರುಷಪ್ರವೀರ ।

---

ಆಸ್ಫೋಟ, ಕಟಿರೇಚಿತಕ, ಗಾತ್ರಶ್ಲೇಷ, ಕಂಠಗತ, ಮಹೀತ್ಯಾಜನ, ಉರೋಘಾತ, ಲಲಾಟಘಾತ, ವಿಸ್ಪಷ್ಟಕರಣ, ಉದ್ಧೂತ, ಅವಧೂತ, ತಿರ್ಯಙ್ಮಾರ್ಗಗತ, ಗಜ ಸ್ಕಂಧ, ಅವಕ್ಷೇಪ, ಅಪಾಙ್ಮುಖಕ, ದೇವಮಾರ್ಗ, ಅಧೋಮಾರ್ಗ, ಅಮಾರ್ಗ, ಸಮನಾಕುಲ, ಮುಷ್ಟಿಘಾತ, ಅವಕ್ಷೇಪ, ವಸುಧಾದಾರಣ, ಜಾನುಬಂಧ, ಭುಜಾ ಬಂಧ, ಊರುಬಂಧ, ಸಂಸೃಷ್ಟ ಸೋದರ, ಶುಭ್ರ, ಭುಜಾವೇಲ್ಲಿತ ಈ ಭೇದಗಳೆಲ್ಲವೂ ಬಾಹು ಯುದ್ಧದ ಪ್ರಭೇದಗಳೆಂದು ಅಭಿಜ್ಞರು ತಿಳಿಯಬೇಕು. ಶಸ್ತ್ರನ್ಯಾಸ ಹೊಂದಿ ಬಾಹು ಯುದ್ಧವನ್ನೇ ಮುಖ್ಯವನ್ನಾಗಿ ಆಚರಿಸುವವರಿಗೆ ಮುಖ್ಯ ಮುಖ್ಯವಾದ ಕೆಲವು ಪ್ರಭೇದಗಳನ್ನು ಇಲ್ಲಿ ನಿನಗೆ ಹೇಳಿರುತ್ತೇನೆ. ಇವುಗಳ ಸ್ವರೂಪಗಳು ಅವುಗಳಿಗೆ ಹೇಳಿರುವ ಆಯಾಯ ನಾಮಗಳಿಗೆ ಅನ್ವರ್ಥವಾಗಿವೆ ಎಂದು ತಿಳಿಯ

**ನಾಮಾನಿ ರೂಪಾಣಿ ಭವಂತಿ ತಾನಿ**
**ಜ್ಞೇಯಾಣಿ ಸರ್ವಾಣಿ ಯಥಾನುರೂಪಂ** || ೨೮ ||

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ**
**ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ**
**ಧನುರ್ವೇದವಿದ್ಯಾವರ್ಣನೋ ನಾಮ**
**ದ್ವ್ಯಶೀತ್ಯುತ್ತರಶತತಮೋಽಧ್ಯಾಯಃ**

---

ಬೇಕು. ಆಯಾಯ ಹೆಸರಿನ ಅವಯವಾರ್ಥಗಳೇ ಇವುಗಳ ಸ್ವರೂಪಕ್ಕೆ ಬೋಧಕ ಗಳಾಗಿರುತ್ತವೆ ಎಂದು ತಾತ್ಪರ್ಯ.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರದ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ ಸಂವಾದದಲ್ಲಿ
ಧನುರ್ವೇದವಿದ್ಯಾ ವರ್ಣನವೆಂಬ ನೂರ ಎಂಭತ್ತೆರಡನೆಯ
ಅಧ್ಯಾಯವು ಮುಗಿದಿದೆ.



|| ಓಂ ||

—: ಶ್ರೀ ಹಯಗ್ರೀವಾಯ ನಮಃ :—

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ದ್ವಿತೀಯಖಂಡೇ

---

### ತ್ರ್ಯಶೀತ್ಯುತ್ತರಶತತಮೋಽಧ್ಯಾಯಃ

**|| ಪುಷ್ಕರ ಉವಾಚ ||**

**ಸನ್ನದ್ಧೈಶ್ಚರ್ಮಿಭಿರ್ಭಾವ್ಯಂ ತಥಾ ಬದ್ಧಕೃಪಾಣಿಭಿಃ |**
**ಚರ್ಮಾಣಿ ತತ್ರ ವೈಯಾಘ್ರಮಾಹಿಷಾಣ್ಯೃಷಭಾಣಿ ಚ || ೧ ||**

**ಖೇಟಕಾದ್ಯಥವಾ ರಾಮ ಚರ್ಮಾಣಿ ಪ್ರಭವಂತಿ ತು |**
**ತಥಾ ವರಣಮುಖ್ಯಾನಿ ಖಡ್ಗಾಣಿ ವಿವಿಧಾನಿ ಚ || ೨ ||**

**ಬದ್ಧಾದಿಭಿಃ ಸತೂಣೀರೈಃ ತಥಾ ರಾಮ ಸತೋಮರೈಃ |**
**ಬದ್ಧಗೋಧಾಂಗುಲಿತ್ರಾಣೈಃ ಬದ್ಧಾದರ್ಶೈರ್ವಿಭೀಷಣೈಃ || ೩ ||**

**ತಥಾಪರಶ್ಚಧೋಪೇತೈಃ ರಾಮ ಸ್ವಾಸನಯೋಧಿಭಿಃ || ೪ ||**

---

### ಎಂಭತ್ತಮೂರನೆಯ ಅಧ್ಯಾಯ.

೧–೫. ಯುದ್ಧಕ್ಕಾಗಿ ಹೊರಡುವ ಭಟರೆಲ್ಲರೂ, ಯಾವಾಗಲೂ ಸಿದ್ಧವಾಗಿರಬೇಕು. ಅಂದರೆ ಚರ್ಮಾಯುಧ (ಗುರಾಣಿ) ಗಳಿಂದಲೂ, ಸಿದ್ಧವಾದ ಕತ್ತಿಗಳಿಂದಲೂ ಕೂಡಿರಬೇಕು. ಚರ್ಮಾಯುಧವೆಂದರೆ ಕೇವಲ ಚರ್ಮಗಳೇ ಆಗಲಿ ಅಥವಾ ಹುಲಿ. ಎಮ್ಮೆ, ಎತ್ತು ಇವುಗಳ ಚರ್ಮದಿಂದ ಮಾಡಿದ ಗುರಾಣಿಯಾಗಲಿ ಇರಬಹುದು. ಹಾಗೆಯೇ ಒರೆಗಳಿಂದ ಕೂಡಿದ ನಾನಾ ವಿಧವಾದ ಖಡ್ಗಗಳು, ಬಾಣಗಳಿಂದ ಕೂಡಿರುವ ಬತ್ತಳಿಕೆಗಳು, ತೋಮರಗಳು (ಒನಕೆ) ಬಾಣಗಳನ್ನು ಬಿಡುವ ಸೌಕರ್ಯಕ್ಕಾಗಿ ಕೈಗೆ ಹಾಕಿಕೊಳ್ಳುವ ಚರ್ಮದ ಚೀಲ, ಕನ್ನಡಿಯಂತೆ ಹೊಳೆಯುವ ಭಯಂಕರವಾದ ಆಭರಣಗಳು, ಕೊಡಲಿ, ಇತ್ಯಾದಿ ಆಯುಧಗಳಿಂದ ಸಿದ್ಧರಾಗಿ ತಮತಮಗೆ ವಿಹಿತವಾಗಿರುವ ಆಸನ ಬಂಧದಿಂದ ಕೂಡಿ ಯುದ್ಧಮಾಡ

**ಗದಾಧರಾಸ್ತಥೈವಾತ್ರ ಸಕೃಪಾಣಿಪರಿಚ್ಛದಾಃ ।**
**ಸುಸಂನದ್ಧಾಃ ಸುಮನಸೋ ಭವೇಯುರ್ವಿಪುಲೌಜಸಃ ॥ ೫ ॥**

**ಯಸ್ಯ ಯತ್ರ ವಿಶೇಷೇಣ ಶಸ್ತ್ರಾಸ್ತ್ರೈಃ ಘಾತಕೌಶಲಂ ।**
**ತದೇವ ತಸ್ಯ ನಿರ್ದಿಷ್ಟಂ ಯಥಾವನ್ಮನುಜೋತ್ತಮ ॥ ೬ ॥**

**ಸಖಲೀನಾಃ ಸಪರ್ಯಾಣಾಸ್ತಥಾ ಸಾಸ್ತರಣಾ ಹಯಾಃ ।**
**ಕಾರ್ಯಾಃ ಸಕವಚಾ ಯುದ್ಧೇ ಚಾಮರಾಪೀಡಧಾರಿಣಃ ॥ ೭ ॥**

**ಅಶ್ವೀಭವೇತ್ಸುಸನ್ನದ್ಧೋ ರಶ್ಮಿಪ್ರಗ್ರಹಕೋವಿದಃ ।**
**ತಥಾ ಸಾವರಣೋ ರಾಮ ಸಕೃಪಾಣೀಪರಿಚ್ಛದಃ ॥ ೮ ॥**

**ಬದ್ಧಾಸಿರ್ಬದ್ಧಜೀವಶ್ಚ ತುರಗಾರೂಢಪಿಂಡಕಃ ।**
**ಸಸುಪ್ರಾಸೋ ಭವೇದ್ರಾಮ ನಾನಾಯುಧಧರಸ್ತಥಾ ॥ ೯ ॥**

---

ತಕ್ಕವರಾಗಿರಬೇಕು. ಗದೆ ಮತ್ತು ಕತ್ತಿ ಮೊದಲಾದ ಆಯುಧಗಳನ್ನು ಧರಿಸಿ ಉತ್ಸಾಹದಿಂದಲೂ, ಒಳ್ಳೆಯ ಮನಸ್ಸಿನಿಂದಲೂ ಕೂಡಿ ಸುಸಜ್ಜಿತರಾಗಿಯೂ, ತೇಜಸ್ವಿಗಳಾಗಿಯೂ ಇರಬೇಕು.

೬-೯. ಯಾವ ಭಟನಿಗೆ ಯಾವ ಆಯುಧ ಪ್ರಯೋಗದಲ್ಲಿ ಹೆಚ್ಚಾದ ಕೌಶಲವೂ, ಉತ್ಸಾಹವೂ ಕಂಡುಬರುತ್ತದೆಯೋ ಅಂತಹ ಭಟನಿಗೆ ಅಂತಹ ಆಯುಧದಿಂದಲೇ ಯುದ್ಧವು ಪ್ರಶಸ್ತ. ಯುದ್ಧಕ್ಕಾಗಿ ಸಜ್ಜುಗೊಳಿಸಲ್ಪಡುವ ಕುದುರೆಗಳೆಲ್ಲವೂ ಕಡಿವಾಣದಿಂದಲೂ, ಬೆನ್ನಿನಮೇಲೆ ಹಾಕುವ ಜೀನು ಮತ್ತು ಆಸ್ತರಗಣಳಿಂದಲೂ ಕೂಡಿರಬೇಕು. ಆ ಕುದುರೆಗಳಿಗೆ ಸರಿಯಾದ ಕವಚಗಳನ್ನೂ ಹಾಕಿ ಕಿವಿಯಮೇಲೆ ಚಾಮರವನ್ನೂ ಕಟ್ಟಬೇಕು. ಕುದುರೆಯ ಸವಾರನೂ ಸಹ ಪರಿಕರ ಬಂಧದಿಂದ ಕೂಡಿಯೂ, ಲಗಾಮನ್ನು ಹಿಡಿದು ಕುದುರೆಯನ್ನು ನಡೆಸುವ ವಿಷಯದಲ್ಲಿ ಚತುರನಾಗಿಯೂ ಇರಬೇಕು. ಮತ್ತು ಕವಚಧಾರಿಯಾಗಿಯೂ, ಕತ್ತಿಯೇ ಮೊದಲಾದ ನಾನಾಪರಿಕರಗಳಿಂದ ಕೂಡಿಯೂ ಇರಬೇಕು. ನೊಂಟದಲ್ಲಿ ಕತ್ತಿಯನ್ನು ಕಟ್ಟಿಕೊಂಡು ಹುರಿಗಳಿಂದಲೂ ನೊಂಟವನ್ನು ಬಿಗಿದು ನಿಂತು ಕುದುರೆಯ ಸವಾರಿಯಲ್ಲಿ ಸಮರ್ಥನಾಗಿಯೂ ಇರಬೇಕು. ಪ್ರಾಸವೇ ಮೊದಲಾದ ನಾನಾ ವಿಧವಾದ ಆಯುಧಗಳನ್ನು ಧರಿಸಿಯೇ ಇರಬೇಕು.

ರಥಃ ಕಾರ್ಯಃ ತಥಾಯುಕ್ತೈಃ ಈಷಾದಂಡಕಬಂಧುರೈಃ ।
ಸುಚಕ್ರೋಪಸ್ಕರ ಯುತಃ ಸರ್ವರೂಪಃ ಪತಾಕರಾಟ್ ॥ ೧೦ ॥

ತ್ರಿವೇಣುಸಂತತಶ್ಚೈವ ವೈಯಾಘ್ರಪರಿವಾರಣಃ ।
ಕಿಂಕಿಣೀಜಾಲನಿರ್ಘೋಷಃ ತಥಾ ವೈ ಸುಪ್ರತಿಷ್ಠಿತಃ ॥ ೧೧ ॥

[1] ಉಪಾಸಂಗೈರ್ನಿಷಂಗೈಶ್ಚ ತೂಣೀರೈರ್ವರಕಾರ್ಮುಕೈಃ ।
ಸರ್ವಾಯುಧೈರುಪೇತಶ್ಚ ತಥಾ ವೃಕ್ಷಾದನೀಯುತಃ ॥ ೧೨ ॥

ತೋಯಜೀರಕಪಿಂಡೀಭಿರ್ಯುಕ್ತಃ ಶೃಂಗೈಸ್ತಥೈವ ಚ ।
ಸನ್ನದ್ಧಃ ಸಾರಥಿಸ್ತತ್ರಭವೇದ್ರಾಮ ಪ್ರತೋದವಾನ್ ॥ ೧೩ ॥

ರಶ್ಮಿಗ್ರಹಣವಿಚ್ಚಾಪಿ ತಥಾ ಮಂಡಲಕೋವಿದಃ ।
ತಥಾಶ್ವಹೃದಯಜ್ಞಶ್ಚ ದೂರದೃಷ್ಟಿಃ ಸುಯಂತ್ರಿತಃ ॥ ೧೪ ॥

---

೧೦-೧೨. ರಥವನ್ನೂ ಸಹ ಸರಿಯಾದ ರೀತಿಯಲ್ಲಿ ಸಜ್ಜುಗೊಳಿಸಬೇಕು. ಸರಿಯಾದ ಮೂಕಿ, ಅಚ್ಚು ಮೊದಲಾದುವುಗಳಿಂದಲೂ ಸರಿಯಾದ ಚಕ್ರ ಕಡಾಣಿ ಮೊದಲಾದವುಗಳಿಂದಲೂ, ಕೂಡಿರಬೇಕು. ನಾನಾವರ್ಣಗಳಿಂದ ಕೂಡಿಯೂ, ಪತಾಕೆಗಳಿಂದ ಶೋಭಿತವಾಗಿಯೂ ಇರಬೇಕು ಮೂರು ಬಿದುರಿನ ದಂಡಗಳಿಂದ ಕೂಡಿ ಹುಲಿಯ ಚರ್ಮದಿಂದ ಹೊದ್ದಿಸಿರಬೇಕು ಸಣ್ಣ ಸಣ್ಣ ಘಂಟೆಗಳಿಂದ ಉಚ್ಚ ಧ್ವನಿಯುಳ್ಳದ್ದಾಗಿಯೂ ವ್ಯವಸ್ಥಿತ ರೀತಿಯಲ್ಲಿ ಸಂಚರಿಸುವ ಸಾಮರ್ಥ್ಯ ಉಳ್ಳದ್ದಾಗಿಯೂ ಇರಬೇಕು. ಎಲ್ಲಾ ಆಯುಧಗಳನ್ನೂ ಕೊಡಲಿಯನ್ನೂ ಅದರಲ್ಲಿ ಸಿದ್ಧಪಡಿಸಿರಬೇಕು.

೧೩-೧೭. ಆ ರಥದಲ್ಲಿ ಸಾರಥಿಯಾದವನು ಚಾವಟಿಯನ್ನು ಹಿಡಿದು ಸಿದ್ಧವಾಗಿ ಕುಳಿತಿರಬೇಕು. ಅವನು ಕುದುರೆಗಳ ಲಗಾಮನ್ನು ಸೂಚನೆಗೆ ತಕ್ಕಂತೆ ನಡಿಸಲು ಸಮರ್ಥನಾಗಿರಬೇಕು. ಅಶ್ವಹೃದಯವನ್ನು ತಿಳಿದವನಾಗಿಯೂ ದೂರದೃಷ್ಟಿಯುಳ್ಳವನಾಗಿಯೂ, ಕಟ್ಟುಮಸ್ತನಾಗಿಯೂ ಇರಬೇಕು. ಕತ್ತಿ,

---

1 ಇಲ್ಲಿ ಉಪಾಸಂಗ, ನಿಷಂಗ, ತೂಣೀರ ಇವು ಪರ್ಯಾಯ ಶಬ್ದಗಳೇ ಆಗಿವೆ. ತೂಣೋಪಾಸಂಗ ತೂಣೀರ ಎಂಬ ಕೋಶದಿಂದ) ಆದರೂ ಪರಿಮಾಣ ಭೇದದಿಂದ ಕಥಂಚಿತ್ ಪೌನರುಕ್ತ್ಯವನ್ನು ಪರಿಹರಿಸಬೇಕಾಗಿದೆ

ಸ್ವಾಸನಃ ಕಾಲವಿಚ್ಛೈವ ಬದ್ಧಾಸಿಃ ಪಾಶಸಂಯುತಃ ।
ಪಾರ್ಷ್ಣಿಃ ಸ್ಯಾದಾಯುಧಜ್ಞಸ್ಯ ತಥೈವಾಯುಧಕೋವಿದಃ ॥ ೧೫ ॥

ಚಿರೇಣ ಮೂಲೇ ಯಸ್ಯ ಸ್ಯಾದವಸ್ಥಾನಂ ಮಹಾಭುಜಃ ।
ಪತಾಕಾವರಣಂ ಯಸ್ಯ ಆಯುಧಾನಾಂ ಸಮರ್ಪಣಂ ॥ ೧೬ ॥

ಸಮಾಯಾಂತಂ ಮಹಾಭಾಗಂ ತಥಾ ಸಾರಥಿರಕ್ಷಣಂ ।
ಸ್ಯಾತಾಂ ಧನುರ್ಧರೌ ತತ್ರ ತಥಾಚತಿಥಿನಾವುಭೌ ॥ ೧೭ ॥

ಯೋಧೌ ಧನುರ್ಭೃತಾಂ ಶ್ರೇಷ್ಠ ಸರ್ವಾಯುಧವಿಶಾರದೌ ।
ತುರಗಾಶ್ಚ ಸುಸಂನದ್ಧಾ ದಾಂತಾಃ ಕಾರ್ಯಾಸ್ತಥಾ ರಥೇ ॥ ೧೮ ॥

ತುಲ್ಯವೇಗಬಲಾಶ್ಚೈವ ತಥಾ ಲಘುಪರಿಚ್ಛದಾಃ ।
ಅತಃ ಪರಂ ಪ್ರವಕ್ಷ್ಯಾಮಿ ತವ ನಾಗೇಂದ್ರಕಲ್ಪನಂ ॥ ೧೯ ॥

---

ಪಾಶಾಯುಧ ಇವನ್ನೂ ಧರಿಸಿ ಆಸನ ಬಂಧದಿಂದ ಕೂಡಿಯೂ, ಆಯಾ ಕಾಲಕ್ಕೆ ತಕ್ಕಂತೆ ಚಾತುರ್ಯವುಳ್ಳವನಾಗಿಯೂ ಇರಬೇಕು. ಆಯುಧ ಧ್ವಜನಾದ ರಥಿಯ ಪಕ್ಕದಲ್ಲಿ ಆಯುಧ ಚತುರನಾದ ಮತ್ತೊಬ್ಬನೂ ಇರಬೇಕು ಅವನು ಬಹುಕಾಲ ದಿಂದಲೂ ರಥಿಯ ಆಶ್ರಯ ಹೊಂದಿದವನಾಗಿರಬೇಕು ರಥದಲ್ಲಿ ಪತಾಕೆಗಳನ್ನು ಏರ್ಪಡಿಸುವುದು ಆಯುಧವನ್ನು ರಥಿಯಾದವನಿಗೆ ಕೊಡುವುದು. ಎದುರಿಗೆ ಬಂದ ಯೋಧನ ಸ್ವಭಾವವನ್ನು ನೋಡುವುದು ಮತ್ತು ಸಾರಥಿಯನ್ನು ರಕ್ಷಿಸುವುದು ಅವನ ಕೆಲಸ. ಅವರಿಬ್ಬರೂ (ರಥಿ ಮತ್ತು ಅವನ ಸಮೀಪದಲ್ಲಿರುವವನು) ಧನುರ್ಧಾರಿಯಾಗಿಯೇ ಇರಬೇಕು.

೧೮-೧೯. ಎಲ್ಲೈ ಯೋಧಾಗ್ರೇಸರನೇ ಯುದ್ಧದಲ್ಲಿ ಭಾಗವಹಿಸುವ ಅವರಿಬ್ಬರೂ ಸರ್ವಾಯುಧ ವಿಶಾರದರಾದ ಯೋಧರೇ ಆಗಿರಬೇಕು ರಥದ ಕುದುರೆಗಳನ್ನೂ ಸರಿಯಾಗಿ ತರಬೇತು ಮಾಡಿ ಅವು ಶ್ರಮ ಸಹಿಷ್ಣುಗಳಾಗಿರುವಂತೆ ಮಾಡಿರಬೇಕು. ಎಲ್ಲಾ ಕುದುರೆಗಳೂ ಸಮ ಬಲವುಳ್ಳವುಗಳಾಗಿಯೂ, ಸಮವಾದ ವೇಗವುಳ್ಳವಾಗಿಯೂ ಇರಬೇಕು, ಅವಕ್ಕೆ ವಸ್ತ್ರ ಮುಂತಾದ ಪರಿಕರಗಳೂ ಲಘುವಾಗಿಯೂ ಇರಬೇಕು. ಇನ್ನು ಮುಂದೆ ಆನೆಗಳ ಕಲ್ಪನಾಕ್ರಮಗಳನ್ನು ಹೇಳುತ್ತೇನೆ ಕೇಳು.

ಕುಂಜರಃ ಸ್ಯಾತ್ಸಮುನ್ನದ್ಧಃ ಸಪರ್ಯಾಣಃ ಕುಥಾವೃತಃ ।
ಸರ್ವಾಯುಧಧರಶ್ಚೈವ ತಥಾ ಯೋಧಾವರಾಯುಧಾ ॥ ೨೦ ॥

ಪರಶ್ವಧಕರಾಶ್ಚೈವ ತೋಯಜೀರಕಸಂಯುತಾಃ
ಸಮ್ಯಗ್ವಿಭಾಜ್ಯಾಶ್ಚ ತಥಾ ಶೃಂಖಲಾವತತಾಸ್ತಥಾ ॥ ೨೧ ॥

ಪತಾಕಾ ಚ ತಥಾ ಕಾರ್ಯಾ ಕುಂಜರಸ್ಯ ಸುಶೋಭನಾ ।
ವರಾಙ್ಕುಶಧರೌ ತತ್ರ ಸ್ಯಾತಾಂ ಮನುಜಪುಂಗವೌ ॥ ೨೨ ॥

ಏಕಃ ಪೃಷ್ಠಸ್ಥಿತಸ್ತತ್ರ ದ್ವಿತೀಯಃ ಸ್ಕಂದಗೋ ಭವೇತ್ ।
ಯೋಧೌ ದ್ವೌ ವರಧಾನುಷ್ಕೌ ದ್ವೌ ಚ ಖಡ್ಗಧರೌ ತದಾ । ೨೩ ॥

ತಯೋರನುಭವೇತಾಂ ನ್ವೈತಥಾ ರಕ್ಷಾಪರಾಯಣೌ ।
ಏಕಃ ಪಾರ್ಷ್ಣಿಸ್ಥಿತಸ್ತತ್ರ ವರಶಕ್ತಿ ಪತಾಕಧೃತ್ ॥ ೨೪ ॥

---

೨೦–೨೩. ಯುದ್ಧದ ಉಪಯೋಗಕ್ಕಾಗಿ ಉಪಯೋಗಿಸುವ ಆನೆಯು ಎತ್ತರವಾಗಿಯೂ, ಸಬರ ಮತ್ತು ಬೆನ್ನಿನ ಮೇಲೆ ಹಾಕುವ ಕಂಬಳಿ ಇವುಗಳಿಂದ ಸುಸಜ್ಜಿತವಾಗಿಯೂ ಇರಬೇಕು. ಎಲ್ಲಾ ಆಯುಧಗಳನ್ನು ಆ ಆನೆಯು ಮೇಲೆ ಸಿದ್ಧಪಡಿಸಿರಬೇಕು. ಅವನ್ನು ಹಿಂಬಾಲಿಸುವ ಯೋಧರೂ ಸಹ ಶ್ರೇಷ್ಠವಾದ ಆಯುಧಗಳನ್ನು ಧರಿಸಿ ಗಂಡುಗೊಡಲಿಯನ್ನು ಕೈಯಲ್ಲಿ ಧರಿಸಿರಬೇಕು. ಆನೆಗಳೂ ಸೈನ್ಯದಲ್ಲಿ ಅವುಗಳನ್ನು ಬೇರೆಬೇರೆ ಗುಂಪಾಗಿ ಭಾಗಿಸಿರಬೇಕು ಎಲ್ಲಾ ಆನೆಗಳೂ ಸರಪಣಿಯಿಂದ ಕೂಡಿರಬೇಕು. ಆನೆಗೆ ರಮಣೀಯವಾದ ಬಾವುಟ ವನ್ನು ಕಟ್ಟಿರಬೇಕು. ಅಂತಹ ಆನೆಯ ಮೇಲೆ ಇಬ್ಬರು ರಕ್ಷಕರು ನಿಶಿತವಾದ ಅಂಕುಶವನ್ನು ಹಿಡಿದು ಕುಳಿತಿರಬೇಕು. ಅವರಲ್ಲಿ ಒಬ್ಬನು ಬೆನ್ನಿನ ಮೇಲೆಯೂ ಮತ್ತೊಬ್ಬನು ಕತ್ತಿನ ಮೇಲೆಯೂ ಕುಳಿತಿರಬೇಕು. ಧನುರ್ಧಾರಿಗಳಾದ ಇಬ್ಬರು ಯೋಧರು ಖಡ್ಗಧಾರಿಗಳಿಬ್ಬರು ನಿರ್ಭಯರಾಗಿ ಕುಳಿತಿರಬೇಕು. ಅವರ ಹಿಂದೆ ಇಬ್ಬರು ರಕ್ಷಕರೂ ಕುಳಿತಿರಬೇಕು.

೨೪–೨೮. ಅವರಲ್ಲೊಬ್ಬನು ಶಕ್ತ್ಯಾಯುಧವನ್ನೂ ಪತಾಕೆಯನ್ನೂ ಧರಿಸಿ ಪಕ್ಕದಲ್ಲಿ ಕುಳಿತಿರಬೇಕು. ಅವನೇ ಆ ಆನೆಯ ಜಘನ ಭಾಗಕ್ಕೆ ಆಯುಧಪ್ರಹಾ

ಪಾಲಯೇಜ್ಞ ಘನಂ ಯುದ್ಧೇ ತ್ಕುಂಜರಸ್ಯ ಮಹಾಮತೇ ।
ಏವಂ ಪರಸ್ಪರಾಯತ್ತಾ ರಕ್ಷಾ ತೇಷಾಂ ಯಥಾ ಭವೇತ್ ॥ ೨೫ ॥

ಮಹಾಮಾತ್ರಸ್ಯ ಧರ್ಮಜ್ಞ ತಥಾಚ ಗಜಯೋಧಿನಃ ।
ಏವಮೇವ ತಥಾ ರಕ್ಷ್ಯೋ ರಥಿನಃ ಸ ರಥೀ ಭವೇತ್ ॥ ೨೬ ॥

ಕುಂಜರಸ್ಯ ತು ರಕ್ಷಾರ್ಥಂ ಭವೇದ್ರಥಚತುಷ್ಟಯಂ ।
ರಥೇ ರಥೇ ಗಜೇವಾಪಿ ತುರಗಾಣಾಂ ತ್ರಯಂ ಭವೇತ್ ॥ ೨೮ ॥

ಕಾರ್ಯಂ ಸರ್ವಂ ಸುಸಂಬಾಧಂ ತಥಾ ತೋರಣರಕ್ಷಣಂ ।
ಯೋಜನಾ ಚ ತಥಾ ಕಾರ್ಯಾ ಯಥಾ ತು ಸ್ಯಾದ್ವ್ಯತಿಕ್ರಮಃ ॥ ೨೯ ॥

ಸಂಬಾಧಶ್ಚ ತಥಾರಾಮ ನ ಭವೇಚ್ಚ ಪರಸ್ಪರಂ ॥ ೩೦ ॥

---

ರಾದಿಗಳು ಉಂಟಾಗದಂತೆ ರಕ್ಷಿಸಬೇಕು ಈ ರಕ್ಷಕನಿಗೂ ಆನೆಗೂ ಇತರರಿಗೂ ಸಹ ರಕ್ಷಣೆಯು ಪರಸ್ಪರ ಸಾಪೇಕ್ಷವಾಗಿಯೇ ಇರುತ್ತದೆ. ಮಹಾಪ್ರಧಾನಿಯಾದವನು ಗಜದಮೇಲೆ ಕುಳಿತು ಯುದ್ಧಕ್ಕೆ ನಿಂತಲ್ಲಿ ರಥಾರೂಢನಾದ ಯೋಧನು ಅವನನ್ನು ರಕ್ಷಿಸಬೇಕು. ಈ ರೀತಿ ಮಾಡಿದಲ್ಲಿಯೇ ಅವನು ರಥಿ ಎನ್ನಿಸಿಕೊಳ್ಳುತ್ತಾನೆ. ಆನೆಯ ರಕ್ಷಣೆಗಾಗಿ ನಾಲ್ಕು ರಥಗಳು ಸಿದ್ಧವಾಗಿರಬೇಕು. ಪ್ರತಿಯೊಂದು ರಥಕ್ಕೂ ಸಹ ಮೂರುಮೂರು ಕುದುರೆಗಳಿರಬೇಕು. ಆ ಕುದುರೆಗಳ ರಕ್ಷಣೆಗಾಗಿ ಮೂರು ಜನ ಧನುರ್ಧಾರಿಗಳೂ ಸಿದ್ಧರಾಗಿರಬೇಕು. ಆ ಧನುರ್ಧಾರಿಗಳ ರಕ್ಷಣೆಗಾಗಿ ಕವಚಧಾರಿಗಳಾದ ಭಟರು ಸಿದ್ಧರಾಗಿರಬೇಕು.

೨೯–೩೧. ಈ ಎಲ್ಲಾ ಕಾರ್ಯಗಳೂ ಭಟರ ನಿಬಿಡತೆಯಿಂದ ತೊಂದರೆಯುಂಟಾಗದಂತೆ ನಡೆಯಬೇಕು. ತೋರಣಸ್ಥಾನದ ರಕ್ಷಣೆಯೂ ಅವಶ್ಯಕ. ಕಾರ್ಯಕ್ರಮದಲ್ಲಿ ಒಂದೂ ವ್ಯತ್ಯಾಸವಾಗದಂತೆಯೂ, ಸೈನ್ಯಗಳಿಗೇ ಪರಸ್ಪರ ಸಂಘರ್ಷ ಉಂಟಾಗದಂತೆಯೂ ಎಲ್ಲಾ ಯೋಜನೆಯನ್ನೂ ಕೈಗೊಳ್ಳಬೇಕು. ಎಲೈ ಭೃಗು

ನಾಗೇಂದ್ರಕಲ್ಪಃ ತವ ಸರ್ವಯುಕ್ತಂ
ಸಂಕ್ಷೇಪತೋ ಭಾರ್ಗವವಂಶಮುಖ್ಯ ।
ಏತತ್ತು ಕೃತ್ವಾಪಿ ನರಃ ಸಯುದ್ಧೇ
ಜಯತ್ಯವಶ್ಯಂ ಸಮುಪಾರ್ಜತೇ ಚ ॥ ೧೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ಧನುರ್ವೇದೆವಾಹನ ಸಜ್ಜೀಕರಣೋನಾಮ
ತ್ರ್ಯಶೀತ್ಯುತ್ತರಶತತಮೋಧ್ಯಾಯಃ

---

ವಂಶ ತಿಲಕನೇ ನಾಗೇಂದ್ರಕಲ್ಪವೆಂಬ ಈ ಗಜಯುದ್ಧವನ್ನೂ ನಿನಗೆ ಸಂಕ್ಷೇಪದಿಂದ ವಿವರಿಸಿರುತ್ತೇನೆ. ಈ ರೀತಿ ಯುದ್ಧಕ್ರಮುವನ್ನು ನಡೆಸಿದ ಶೂರನು ವಿಜಯ ಶಾಲಿಯೂ, ಅರ್ಥಾರ್ಜನಶೀಲನೂ ಆಗಿಯೇ ಆಗುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದದಲ್ಲಿ ರಾಮುನನ್ನು ಕುರಿತು ಪುಷ್ಕರನು ಹೇಳಿದ ಉಪಾಖ್ಯಾನದಲ್ಲಿ
ಧನುರ್ವೇದ ವಾಹನ ಸಜ್ಜೀಕರಣವೆಂಬ ನೂರ ಎಂಭತ್ತಮೂರನೆಯ
ಅಧ್ಯಾಯ ಮುಗಿದಿದೆ.

